॥ ಹರಿಃ ಓಮ್ ॥

ಶ್ರೀ ಜಗನ್ನಾಥದಾಸಾರ್ಯ ವಿರಚಿತ

# ಶ್ರೀ ಹರಿಕಥಾಮೃತಸಾರ ಟೀಕಾ

## ಪಂಚರತ್ನ ಪ್ರಕಾಶಿಕಾ

ಪ್ರಕಟನೆ: ೬೮ (ಭಾಗ ೨)






ಅವತಾರ ಶಕೆ ೧೬೪೯ ಕೀಲಕ ಸಂ॥ ಶ್ರಾವಣ ಶು॥ ೨
ಶೈ. ಯಾತ್ರೆ. ಶಕೆ ೧೬೩೧ ಶುಕ್ಲ ಸಂ॥ ಭಾದ್ರಪದ ಶು॥ ೯

ಹರಿಃ ಓಂ

ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ,
ಲಿಂಗಸೂಗೂರು. ಪ್ರಕಟನೆ (೬೮)

— ಶ್ರೀ ಅಪರೋಕ್ಷಜ್ಞಾನಿಗಳಾದ —

ಶ್ರೀಮಜ್ಜಗನ್ನಾಥ ದಾಸಾರ್ಯ ವಿರಚಿತ.

# ಶ್ರೀ ಹರಿಕಥಾಮೃತಸಾರ ಟೀಕಾ

## ಪಂಚರತ್ನ ಪ್ರಕಾಶಿಕಾ ಭಾಗ—೨.

ಸಂಧಿ ೫ರಿಂದ—ಸಂಧಿ ೮ ಪೂರ್ತಿ

೧. ಸಂಧಿಯಸಾರ ಪದ್ಯಾರ್ಥ
೨. ಗುರು ಶ್ರೀಶ ವಿ॥ ಟೀಕಾ. ಸಂಧಿ ೫—ಪದ್ಯ ೧೪
೩. ದ್ರೌಪದೀಶಪತಿ ವಿಠಲರ ಟೀಕಾ
೪. ಶ್ರೀ ಜಂಬುಖಂಡಿ ಆಚಾರ್ಯರ ಭಾವಸೂಚನ
೫. ,, ,, ವ್ಯಾಸದಾಸ ಸಿದ್ಧಾಂತ
ಕೌಮುದಿ ಸಂಸ್ಕೃತ ಟೀಕಾಮಾತ್ರಕ್ಕೆ




ಕನ್ನಡ ಅನುವಾದಕರು :

ಶ್ರೀ ಪಂಡಿತವರ್ಯ ಶ್ರೀ ಕೇಶವಾಚಾರ್ಯರು ಜಾಲಿಹಾಳ

ಶಕೆ ೧೮೮೧ ಮಾಘ ಶು॥ ೧೫



ಮೊದಲನೇ ಆವೃತ್ತಿ ೧೦೦೦ ಪ್ರತಿ

ಪುಟಗಳು ೫೦೦. ಬೆಲೆ ೬ ರೂ.

ಮುಂಗಡ ಚಂದಾದಾರರಿಗೆ ಮಾತ್ರ ೫ ಭಾಗ ಚಂದಾ ೨೫ ರೂ.
ಅಂಚೆ ವೆಚ್ಚ ಸಹ

ಸಂಪಾದಕ, ಪ್ರಕಾಶಕ :
**ಹನುಮಂತರಾವ ಕುಲಕರ್ಣಿ**
**ಗೋರಬಾಳ.**
**ಸಂಚಾಲಕ ಮಂಡಲ.**



## ಅ ರ್ಪ ಣೆ

ಶ್ರೀಮಜ್ಜಗನ್ನಾಥದಾಸವರ್ಯರ ವಿದ್ಯಾಗುರುಗಳಾದ
ಶ್ರೀ ವರದೇಂದ್ರ ತೀರ್ಥ ಶ್ರೀಪಾದಂಗಳವರ
ಹೃತ್ಕಮಲಮಧ್ಯನಿವಾಸಿ
ಶ್ರೀ ಮಧ್ವೇಶನ ಅಡಿದಾವರೆಗಳಲ್ಲಿ



ಮುದ್ರಕರು :
ಸುಬೋಧ ಮುದ್ರಣಾಲಯ,
ಚಾಮರಾಜಪೇಟೆ,
ಬೆಂಗಳೂರು ೧೮.

ಶ್ರೀ ಉಪೇಂದ್ರ ತೀರ್ಥ ಅನುಗೃಹೀತ ಶ್ರೀ ಜಗನ್ನಾಥವಿಠಲರ ಉಪಾಸ್ಯ
ಗರುಡವಾಹನ ಶ್ರೀ ಲಕ್ಷ್ಮೀನೃಸಿಂಹ ದೇವರು



ನರಸಿಂಹ ಪಾಹಿ ಲಕ್ಷ್ಮೀನರಸಿಂಹ
ಗರುಡವಾಹನ ಲಕ್ಷ್ಮೀನರಸಿಂಹ

(ಜ. ವಿ.)

# ವಿಷಯಾನುಕ್ರಮಣಿಕೆ

ಶ್ರೀ ಲಕ್ಷ್ಮೀನೃಸಿಂಹಾತ್ಮಕ ಶ್ರೀ ಲಕ್ಷ್ಮೀ ವೆಂಕಟೇಶ ಸುಪ್ರಸೀದ

ಶ್ರೀ ಗುರುರಾಜೋ ವಿಜಯತೇ

## ಭಕ್ತರಆಪತ್ತು ಕಳೆದು, ಸುಜ್ಞಾನ ಪಾಲಿಸಿ ಇಷ್ಟಾರ್ಥಪ್ರದ ಶ್ರೀ ಲಕ್ಷ್ಮೀನರಸಿಂಹದೇವರ ಸ್ತೋತ್ರ

ಪದ ರಾಗ ನಾಟಿ—ಝಂಪೆ ತಾಳ

ಶ್ರೀ ನಾರಸಿಂಹ ಚಿತ್ಸುಖ ಮುಖ ಶುಭಗ ಕಾಯಾ ।
ದಾನವಾರಣ್ಯ ಪಾವಕ ವೀತಶೋಕ ॥ ಪಲ್ಲ ॥

ಆನತೇಷ್ಟಪ್ರದಾಯಕ ನಮಿಸುವೆನೊ ಸದಾ ।
ಮೈನಾಕಿಧವಬಿಂಬ ಸುರಮುನಿ ಕದಂಬ ॥
ಜ್ಞಾನಗಮ್ಯನೆ ಭಕ್ತರಾಪತ್ತು ಕಳಿ ಶೋಕ ।
ನೀನೆ ಗತಿಯೆಂಬೆ ಮುನಿವನಜ ತುಂಬೆ ॥ ೧ ॥

ಶ್ರವಣ ಮಂಗಳ ನಾಮಧೇಯ ನಿರ್ಜಿತ ಕಾಮ ।
ಸವನ ದ್ವಿತಿಯ ರೂಪ ವಿಗತ ಕೋಪ ॥
ಸ್ವವಶ ಸ್ವಾತಂತ್ರ ವಿಖಾನಸ ಪೂಜ್ಯವಜ್ರನಖ ।
ಪವಿದಂಷ್ಟ್ರರಸನ ಭಾರ್ಗವಿ ರಮಣನಶನಾ ॥ ೨ ॥

ಆದಿದೇವಾನಂತ ಮಹಿಮನೇ ನಿಶ್ಚಿಂತ ।
ಕಾದುಕೋ ನಿನ್ನ ವರ ವಿಬುಧಪ್ರವರಾ ॥
ಮೋದಮಯ ಶ್ರೀ ಜಗನ್ನಾಥ ವಿಠ್ಠಲರೇಯ ।
ವೈದಿಕವೆ ತೊಡಿಸೊ ಲೌಕಿಕ ಮಾರ್ಗ ಬಿಡಿಸೊ ॥ ೩ ॥

## ಸಕಲಾಭೀಷ್ಟದ ಶ್ರೀ ಲಕ್ಷ್ಮೀವೆಂಕಟೇಶನ ಪ್ರಾರ್ಥನಾ

ಪದ ರಾಗ ವರಾಳಿ—ಏಕತಾಳ

ಶ್ರೀನಿಕೇತನಾ ಪಾಲಯಮಾಂ ಶ್ರೀನಿಕೇತನಾ ॥
ಜ್ಞಾನಗಮ್ಯ ಕರುಣಾನಿಧೆ ನಿನ್ನಡಿ ।
ಗಾ ನಮಿಸುವೆ ಪೊರೆ ದೀನ ದಯಾಳೊ । ಶ್ರೀನಿಕೇತನಾ ॥ ಪಲ್ಲ ॥

ಶ್ರೀಕರಾರ್ಚಿತಾ । ಪಾದಾಬ್ಜ ಪರಾಕುನಾಚ್ಯುತ ।
ಶೋಕನಾಶನ ವಿ । ಶೋಕ ಸುಲಭ ಹೃ ।
ದ್ವ್ಯಾಕುಲ ಕಳೆಯೊ ಕೃಪಾಕರ ವೊಲಿದೂ ॥ ೧ ॥

ಮಾನಿ ಮಾನದ ಶರಣು ಸುರ । ಧೇನು ಸರ್ವದಾ ॥
ನೀನೆಂದರಿದು ಸದಾನುರಾಗದಲಿ ।
ಧೇನಿಪೆ ಮನದನುಮಾನವ ಬಿಡಿಸೊ ॥ ೨ ॥

ಪನ್ನಗಾಚಲಾ ನಿವಾಸ ಪ್ರ । ಪನ್ನ ವತ್ಸಲಾ ।
ಬಿನ್ನಪ ಕೇಳೊ ಜಗನ್ನಾಥವಿಠಲ ।
ಧನ್ಯನ ಮಾಡೊ ಶರಣ್ಯ ಶರಣನಾ ॥ ೩ ॥

ಪದ ರಾಗ ವರಾಳಿ—ಅಟ್ಟತಾಳ

ತಾರಕವಿದು ಹರಿಕಥಾಮೃತಾ । ಸಾರ ಜನಕೆ ।
ತಾರಕವಿದು ಹರಿಕಥಾಮೃತಾ ॥
ಘೋರ ಅಸಾರ ಕುಸಂಸಾರವೆಂಬ ವನಧಿಗೆ ನವ ತಾರಕವಿದು ॥ ಪಲ್ಲ ॥

ಶ್ವಾನ ಸೂಕರಾದಿ ನೀಚಯೋನಿಗಳಲಿ ಬಂದು ನೊಂದೆ ।
ವೈನತೇಯ ವಹನ ಸನ್ನಿಧಾನ ಬೇಕು ಯೆಂಬುವನಿಗೆ ॥ ೧ ॥

ಪ್ರೇಯ ವಸ್ತುಗಳೊಳು ಪಾಂಡು । ವೇಯ ಸಖನೆ ಎನಗೆ ಬ್ರಹ್ಮ ।
ವಾಯುಉಚ್ಚಸುರರು ತಂದೆ । ತಾಯಿಗಳೆಂದರಿತವನಿಗೆ ॥ ೨ ॥

ಜ್ಞೇಯ ಜ್ಞಾನ ಜ್ಞಾತೃ ಬಾಧ । ರಾಯಣಾಖ್ಯ ಹರಿಯ ವಚನ ।
ಕಾಯ ಮನದಿ ಮಾಡ್ದ ಕರ್ಮ । ಶ್ರೀಯರಸನಿಗೀವೆನೆನಲು ॥ ೩ ॥

ಶ್ರೀ ಮುಕುಂದ ಸರ್ವಮಮಃ । ಸ್ವಾಮಿ ಅಂತರಾತ್ಮ ಪರಂ ।
ಧಾಮ ದೀನ ಬಂಧು ಪುಣ್ಯ । ನಾಮನೆಂದು ತುತಿಸುವವಗೆ ॥ ೪ ॥
ಭೂತ ಭವ್ಯ ಭವತ್ರ್ರಭುವ । ನಾಥ ಜನರ ಪಾಲ ಜಗ ।
ನ್ನಾಥವಿಠಲ ಪಾಹಿಯೆಂದು । ಮಾತುಮಾತಿಗೆಂಬುವರಿಗೆ ॥ ೫ ॥

ಪದ ರಾಗ ಪಂತುರಾವಳಿ—ಆದಿತಾಳ

ಬಯಸದಿರಹಿಕ ಸುಖಗಳನು ದಿನ-ನಿ ।
ರ್ಭಯದಿ ಭಜಿಸು ಹರಿಯಾ ॥
ವಯನಗಮ್ಯ ವಾಂಛಿತ ಫಲಗಳ-ಸ ।
ದ್ದಯದಿ ಕೊಡುವ ತ್ವರಿಯಾ ॥ ಪಲ್ಲ ॥
ಭೂರುಹ ಮೃಗಪಶು ವಾರಿಖೇಚರ ಶರೀರಗಳಲಿ ಬಂದೆ ।
ಮಾರಿ ಮಸಣಿ ಕರಿ ಸಿರಿ ಭವಾನಿಗಳಾರಾಧಿಸಿ ನೊಂದೆ ॥
ನಾರಾಯಣನ ಪದಾರವಿಂದ ಯುಗ ಆರಾಧನೆ ವಂದೇ ।
ತಾರಿಸುವದು ಸಂಸಾರ ಶರಧಿ-ಸುಖ ತೋರುವದು ಮುಂದೆ ॥ ೧ ॥
**ಅನಿರುದ್ಧನು** ನಿಜವನಿತೆ ಸಹಿತ ತಾ ಧನಧಾನ್ಯದೊಳಿಪ್ಪ ।
ಅನುಬಂಧಿಗಳೊಳು ಕೃಪತಿ **ಪ್ರದ್ಯುಮ್ನನು** ಸುಖಗಳ ತೋರ್ಪ ॥
ಗುಣವಂತರೊಳು ಜಯಾಪತಿ **ಸಂಕರುಷಣ** ಕರ್ಮವ ಮಾಳ್ಪ ।
ಕು ನರರು ಮಾಡುವ ಧರ್ಮ ಕರ್ಮಗಳು ಕೊನಿಗೀತನು ಒಪ್ಪ ॥ ೨ ॥
**ವಾಸುದೇವ** ವಿಜಯಪ್ರದನಾಗಿ ಈ ಶರೀರಗಳೊಳು ।
ವಾಸವಾಗಿ ಮಾಯಾಪತಿ ಮಾಡಿದ ಲೇಸು ಸುಪುಣ್ಯಗಳು ॥
ತಾ ಸಮನಿಸುವನು ಸಂದೇಹಿಸದಿರು ಆಶಪಾಶಗಳನು ।
ತಾ ಸಡಲಿಸುವನು ಶೀಘ್ರದಿಂದ ಕರುಣಾಸಮುದ್ರ ಕೇಳು ॥ ೩ ॥
**ನಾರಾಯಣ** ತನ್ನಾರಾಧಕರಿಗೆ ದೂರಗೈವ ದುರಿತಾ ।
ಕಾರುಣಿಕನು ಕೈವಲ್ಯಪ್ರದಾಯಕ ತೋರುವ ಸರ್ವಜಿತಾ ॥
ಹಾರೈಸದಿರಲ್ಪ ಸುಖಗಳು-ನರಕದ್ವಾರಗಳವು ನಿರುತಾ ।
ಸೂರಿಗಳನು ಸಂಸೇವಿಸು-ಮುಕ್ತಿಗೆ ದಾರಿಯಹದು ಸತತ ॥ ೪ ॥

ಪಂಚರೂಪಿ ಪರಮಾತ್ಮನು ತಾ ಷಟ್ಪಂಚ ರೂಪದಿ ಪೊರೆವ ।
ಪಂಚ ಜ್ಞಾನ ಕರ್ಮೇಂದ್ರಿಯ ಜನ್ಯ ದ್ವಿ । ಪಂಚಪಾತಕತರಿವಾ ॥
ಸಂಚಿತ ಆಗಾಮಿಗಳ ಅಪರಾಧವ । ಮುಂಚಿನವರಿಗೀವಾ ।
ವಾಂಛಿತಪ್ರದ ಜಗನ್ನಾಥವಿಠ್ಠಲನು ಮಿಂಚಿನಂದದಿ ಪೊಳೆವ ॥ ೫ ॥

ಇದೇ ಹರಿಕಥಾಮೃತಸಾರದ ಗೂಢಾರ್ಥ

॥ ಶ್ರೀ ಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು ॥

---

# ಮಂಡಲದ ಮಾತು

ನಮ್ಮ ಹರಿದಾಸ ಸಾಹಿತ್ಯ ಮಂಡಲದಿಂದ ಈಗಾಗಲೇ ೬೭ ಪ್ರಕಟನೆಗಳು ಪ್ರಕಟಿಸಲಾಗಿದೆ. ಈಗ ಶ್ರೀ ಹರಿಕಥಾಮೃತಸಾರಟೀಕಾ ಪಂಚರತ್ನ ಪ್ರಕಾಶಿಕಾ ೨ನೇ ಭಾಗದಲ್ಲಿ ೫ನೇ ವಿಭೂತಿ ಸಂಧಿಯಿಂದಾರಂಭಿಸಿ ೮ನೇ ಮಾತೃಕಾ ಸಂಧಿ ಸಂಪೂರ್ಣ (೪) ಸಂಧಿಗಳನ್ನು ಪ್ರಕಟಿಸಲಾಗಿದೆ. ಶ್ರೀ ಮ. ಶಾ. ಸ. ಪಂಡಿತವರ್ಯ ಜಾಲಹಾಳ ಕೇಶವಾಚಾರ್ಯರ ಆಜ್ಞೆಯಂತೆ ಈ ಭಾಗದಲ್ಲಿ ೧೨ ಸಂಧಿ ಪ್ರಕಟಿಸಬೇಕೆಂಬ ಹಿರಿದಾಶೆ. ಆದರೆ ೮ನೇ ಸಂಧಿಗೆ ೫೦೦ ಪುಟಗಳಾದವು. ಭಾದ್ರಪದದಿಂದ ೫ ತಿಂಗಳ ಕಾಲಾವಧಿಯು ಆಯಿತು. ಗ್ರಾಹಕ ಪೋಷಕರ ಆತುರತೆ ಪತ್ರಗಳು ಮೇಲಿಂದಮೇಲೆ ಬರಹತ್ತಿದ ಕಾರಣ, ಈ ೨ನೇ ಭಾಗದಲ್ಲಿ ೮ ಸಂಧಿವರೆಗೆ ಮುದ್ರಿಸಲಾಗಿದೆ. ಶ್ರೀ ತಾಮ್ರಪರ್ಣೀ ಆಚಾರ್ಯರ ವ್ಯಾಖ್ಯಾನ ೧ ಸಂಧಿ ೧೭ ಪದ್ಯದವರೆಗೆ ದೊರೆತ ಕಾರಣ ಹಿಂದೆ ಪ್ರಕಟಿಸಿದೆ. ಈ ಮಹನೀಯರು ಪ್ರತಿ ಪದ್ಯಕ್ಕೆ ಅರ್ಥ ಬರೆದು ಪ್ರತಿಪದಾರ್ಥಚಂದ್ರಿಕೆ ಎಂಬ ಹೆಸರಿಟ್ಟಿದ್ದಾರೆ.

ಎರಡನೇ ಸಂಧಿ ೧೮ನೇ ಪದ್ಯದಿಂದ ಪ್ರತಿ ಪದ್ಯಗಳಿಗೂ, ಪದ-ಪದಗಳ ಸರಳ ಅರ್ಥವನ್ನು ಅನೇಕ ಪ್ರಮೇಯ ಪ್ರಮಾಣಗಳ ಆಧಾರದೊಂದಿಗೆ, ಉಪನಿಷತ ರಹಸ್ಯವನ್ನೂ ಮತ್ತೂ ಪ್ರತಿಯೊಂದು ಸಂಧಿಯ ಸಾರ ಅಭಿಪ್ರಾಯವನ್ನೂ, ಉಪನಿಷತ್ ಸುಳಾದಿಗಳ ಸಹಾಯದೊಂದಿಗೆ ಶ್ರೀ ವಿಜಯದಾಸಾರ್ಯರ ಭಕ್ತರಾದ ಶ್ರೀ ಹನುಮಂತರಾಯರು ಬಹು ಸುಲಭವಾಗಿಯೂ, ವಿಸ್ತಾರವಾಗಿಯೂ ಇಂತಹ ಇಳಿವಯಸ್ಸಿನಲ್ಲಿ ಶ್ರಮಪಟ್ಟು ಬರೆದು ಲೋಕೋಪಕಾರ ಮಾಡಿರುವರು. ಈವರೆಗೆ ಯಾವ ಟೀಕಾ ವ್ಯಾಖ್ಯಾನಕಾರರೂ ಇಷ್ಟು ಕಷ್ಟತರವಾದ ಪ್ರಮೇಯ ಬಿಚ್ಚಿಕ್ಕಿದ್ದು ವಿರಳ. ಪ್ರಮೇಯ ರಹಸ್ಯ ತತ್ವವಿಚಾರ ಶಾಸ್ತ್ರ ಮರ್ಯಾದೆ ಬಲ್ಲವರಾಗಿರುವರಲ್ಲದೇ ಪೂರ್ವ ವಯಸ್ಸಿನಲ್ಲಿ ಮಧ್ವಶಾಸ್ತ್ರವನ್ನು ಉತ್ತಮರಾದ ಗುರುಗಳು ಶ್ರೀಮದಕ್ಷೋಭ್ಯ ತೀರ್ಥ ಮಠಾಧೀಶ ಶ್ರೀ ರಘುಕಾಂತತೀರ್ಥ ಶ್ರೀಪಾದಂಗಳವರು (ಕೊಡಂ

ಗಲ್ ಸ್ವಾಮಿಗಳು) ಇವರಲ್ಲಿ ಶ್ರೀ ಗುರುರಾಜರ ಆಜ್ಞೆಯಂತೆ ಶಾಸ್ತ್ರಾಭ್ಯಾಸವನ್ನು ಮಾಡಿದುದು ಮರೆತಿಲ್ಲ. ಇಂದಿಗೂ ಮನನ ಮಾಡುತ್ತಲಿರುವರು. ಹಿಂದೆ ಹರಿಕಥಾಮೃತಸಾರ ಪ್ರವಚನ ೧ ವರ್ಷ ಮೂರು ತಿಂಗಳವರೆಗೆ ಶ್ರೀ ವರದೇಂದ್ರರ ಸನ್ನಿಧಿಯಲ್ಲಿ ಮಾಡಿದರು. ಎಲ್ಲ ಡಾಕ್ಟರರಿಗೂ ವೈದ್ಯರಿಗೂ ಮೀರಿದ ರೋಗವನ್ನು ದಾಸರು ಪರಿಹಾರ ಮಾಡಿದರು.

ಈಗ ಪುನಃ ಅರ್ಧಾಂಗ ವಾತದಲ್ಲಿಯೂ ದಾಸರ ಸೇವೆಗೆ ಹಿಂಜರಿದಿಲ್ಲ. ಸಾಹಿತ್ಯ ಮಂಡಲ ಸಂಚಾಲಕರಾಗಿ ಮನಃಪೂರ್ವಕ ದಾಸರ ಸೇವೆ ಮಾಡುತ್ತಿರುವರಲ್ಲಿ, ಮಂಡಲಕ್ಕೆ ನೂರಾರು ಪತ್ರಗಳ ದ್ವಾರಾ ವಿನಂತಿ ಮಾಡಿದ ಭಕ್ತರು. ಸಂಚಾಲಕರಿಗೆ ಇನ್ನೂ ಹೆಚ್ಚಿನ ಆಯುರಾರೋಗ್ಯ ಭಾಗ್ಯ ದಯಪಾಲಿಸಲೆಂದು ದಾಸವರ್ಯ ಹೃತ್ಕಮಲ ನಿವಾಸಿ ಶ್ರೀ ಮಧ್ವೇಶನನ್ನು ಪ್ರಾರ್ಥಿಸುತ್ತೇವೆ.

ಶ್ರೀ ಜಂಬುಖಂಡಿ ವಾದಿರಾಜಾಚಾರ್ಯರ ಸಂಸ್ಕೃತ ವ್ಯಾಖ್ಯಾನ ವ್ಯಾಸದಾಸ ಸಿದ್ಧಾಂತ ಕೌಮುದಿ ಬಹು ಕಠಿಣ ಶಾಸ್ತ್ರ ಪ್ರಮೇಯ ಪ್ರಮಾಣ ಉಪನಿಷತ್ತು, ಪ್ರಭಂಜನಾದಿ ನೂರಾರು ಗ್ರಂಥಗಳ ವಿವೇಚನೆ ಇದೆ. ಇಂಥ ಪ್ರೌಢತಮವಾದ ಸಂಸ್ಕೃತ ವ್ಯಾಖ್ಯಾನವನ್ನು ಇತರ ಯಾವ ಪಂಡಿತರಿಂದಲೂ ಸಾಧ್ಯವಾಗದಿದ್ದ ಮಹತ್ಕಾರ್ಯವನ್ನು, ಬೃಹತೀ ಛಂದಸ್ಸು ಸತ್ತತ್ವ ರತ್ನಮಾಲಾ ಅನೇಕ ಉಪನಿಷತ್ತುಗಳು, ಶ್ರೀಮದಾಚಾರ್ಯರ ಅನುವ್ಯಾಖ್ಯಾ ಸುಧಾ ಪರಿಮಳಾದಿ ಗ್ರಂಥಗಳಲ್ಲಿ ಪಾರಂಗತರಾದ, ಶ್ರೀಮತ್ಪೂಜ್ಯ ಪರಮ ಭಾಗವತ ಶಿರೋಮಣಿ ಶ್ರೀ ಗುರುರಾಜರ ನಿಜಭಕ್ತರಾದ ಶ್ರೀ ಸಾತ್ವೀಕ ಗುರುರಾಜಾರ್ಯರು ಜಾಲಿಹಾಳ ಇವರ ಸತ್ಪುತ್ರರೂ ಶಮದಮಾದಿ ಗುಣಸಂಪನ್ನರೂ, ಶಾಸ್ತ್ರಜ್ಞರೂ ವೇದಾಂತ ನ್ಯಾಯ ವ್ಯಾಕರಣಾದಿಗಳಲ್ಲಿ ಪಂಡಿತವರ್ಯರಾದ ಶ್ರೀ ಪರಮಪೂಜ್ಯ ಪಂಡಿತವರ್ಯ **ಶ್ರೀ ಕೇಶವಾಚಾರ್ಯರು ಜಾಲಿಹಾಳ** ಗದಗ ಇವರು ದಾಸರ ಸೇವೆಯೆಂದು ಭಾವಿಸಿ, ಬಹು ಶ್ರಮದಿಂದ ಸಂಪೂರ್ಣ ವ್ಯಾಸದಾಸ ಸಿದ್ಧಾಂತ ಕೌಮುದಿ ಕನ್ನಡದಲ್ಲಿ ಅನುವಾದ ಮಾಡಲು ಆಶ್ವಾಸನವಿತ್ತು ಈಗ ೧೩ ಸಂಧಿಗಳವರೆಗೆ ಪೂರ್ತಿ ಬರೆದುಕೊಟ್ಟು ಮಹಾ ಲೋಕೋಪಕಾರ

ಮಾಡಿದ ಪೂಜ್ಯ ಆಚಾರ್ಯರ ಮಹದುಪಕಾರ ಸ್ಮರಿಸಿ ಅವರ ಅಡಿದಾವರೆಗಳಲ್ಲಿ ಅನೇಕ ದೀರ್ಘದಂಡವತು ಪ್ರಣಾಮವನ್ನು ಮಂಡಲವು ಅರ್ಪಿಸಿ, ನಿರಪೇಕ್ಷಿಗಳಾದ ಆಚಾರ್ಯರಿಗೆ ಮಂಡಲವು ಚಿರಋಣಿಯಾಗಿದೆ. ಇನ್ನು ಮುಂದೆ ಸಂಪೂರ್ಣ ಗ್ರಂಥಕ್ಕೂ ಇದರಂತೆ ಕನ್ನಡ ಅನುವಾದ ಒದಗಿಸಿ ಕೊಡಲು ಮಂಡಲವು ಪೂಜ್ಯ ಆಚಾರ್ಯರನ್ನು ಪ್ರಾರ್ಥಿಸುತ್ತದೆ. ಬೃಹತೀ ಸಹಸ್ರ ಶ್ರುತಿಗಳ ಅರ್ಥವು ಸಾಮಾನ್ಯರಿಂದ ಬರೆಯುವದು ಸಾಧ್ಯವೇ ಇಲ್ಲ.

ಹರಿಕಥಾಮೃತ ಕನ್ನಡ ಗ್ರಂಥವೆಂದು ಇತರ ಕೆಲ ಪಂಡಿತರಿಗೆ ಅವಜ್ಞತೆ. ಇದು ಸಾಧಕರ ಯೋಗ್ಯತೆ ಸಕಲ ಶ್ರುತಿ-ಸ್ಮೃತಿ ಪುರಾಣ ಉಪನಿಷತ್ ಸಂಹಿತಾ ಆಗಮಗಳೂ, ಮಧ್ವಶಾಸ್ತ್ರ ಮುದ್ದಿ ಮುದ್ದಿ ಮಾಡಿ, ತದ್ಧಿಮಿಧಿಮಿಕೆಂದು ಹರಿಯನ್ನು ಕುಣಿಸಿದ ಹರಿಕಥಾಮೃತ ಸಾರವಿದು. ಮುಂದಿನ ಭಾಗಗಳಲ್ಲಿ ಈ ಗ್ರಂಥ ಮಹಿಮಾ ವಿಚಾರ ಸಂಸ್ಕೃತ ಇಂಗಲೀಷು ಮುಂತಾದ ಭಾಷೆಗಳಲ್ಲಿ ಪಂಡಿತರ ಮುನ್ನುಡಿಗಳನ್ನು ಕೊಡುತ್ತದೆ.

ಪ್ರೂಫನ್ನು ಪರಿಶೋಧಿಸಿ ಮುದ್ದಾಗಿ ಅಚ್ಚು ಮಾಡಿಕೊಟ್ಟ ಶ್ರೀ ಸುಬೋಧ ರಾಮರಾಯರಿಗೂ, ಅವರ ಸತ್ಪುತ್ರರತ್ನ ಶ್ರೀ ಪ್ರಹ್ಲಾದರಾಯರಿಗೂ ಮಂಡಲವು ಕೃತಜ್ಞತೆಯನ್ನರ್ಪಿಸುತ್ತದೆ.

ಇದರಲ್ಲಿ ಕೆಲವು ತಪ್ಪುಗಳು ದೃಷ್ಟಿದೋಷದಿಂದ ಬಿದ್ದಿರುತ್ತವೆ; ಒಪ್ಪೋಲೆ ಕೊಟ್ಟಿದೆ. ಓದುಗರು ೧ ತಾಸು ಶ್ರಮಪಟ್ಟು ತಿದ್ದಿಕೊಂಡು ಓದುವದಾಗಿ ಪ್ರಾರ್ಥಿಸುತ್ತದೆ.

ಎಲ್ಲ ಪೋಷಕರಿಗೂ, ಮುಂಗಡ ಚಂದಾ ಕೊಟ್ಟ ಎಲ್ಲ ಚಂದಾದಾರರಿಗೂ ಮಹದುಪಕಾರ ಸ್ಮರಿಸುತ್ತದೆ.

ಮೂರನೇ ಭಾಗವು ಮುಂದಿನ ವರ್ಷ ಶ್ರಾವಣ ಶುದ್ಧ ೧೫ಕ್ಕೆ ಹೊರಡುವದು. ಇಷ್ಟು ತಡವ್ಯಾಕಂದರೆ ಪ್ರೆಸ್ಸಿನಿಂದ ಪ್ರಿಂಟಾಗಿಬರಲು ೫ ತಿಂಗಳು ಬೇಕು. ಚಂದಾದಾರರು ಪೂರ್ತಿ ಹಣ ತ್ವರೆ ಕಳಿಸುವದಿಲ್ಲ. ಕಾರಣ ಉಭಯರಲ್ಲಿ ವಿನಂತಿ ಏನಂದರೆ, ಚಂದಾದಾರರು ಬೇಗ

ಪೂರ್ತಿ ಹಣ ಕಳಿಸಬೇಕು. ಮುದ್ರಕರು ಕನಿಷ್ಟ ೪ ತಿಂಗಳಲ್ಲಾದರೂ ಮುದ್ರಿಸಿಕೊಡಲು ಪ್ರಾರ್ಥನೆ.

ಈವರೆಗೆ ೫೦೦ ಜನ ಚಂದಾದಾರರಾಗುವ ನಿರೀಕ್ಷಣೆಯಿತ್ತು. ೨೧೫ ಜನ ಮಾತ್ರ ಇದರಲ್ಲಿ ಪೂರ್ತಿ ಚಂದಾ ಕಳಿಸದೇ ಇದ್ದವರು ೧೪೦ ಜನರಿದ್ದಾರೆ. ೪೧ ಜನ V. P. P. ಪರತು ಮಾಡಿದ್ದಾರೆ. ಕಾರಣ ಬಾಕಿ ಇದ್ದ ಚಂದಾದಾರರು ಪೂರ್ತಿ ೨೫ ರೂ.ಕ್ಕೆ ಬೇಗ ಕಳಿಸುವದೆಂದು ಪ್ರಾರ್ಥಿಸುವೆವು.

ಶಕೆ ೧೮೮೧ ಮಾಘ ಶು|| ಅಧ್ಯಕ್ಷ: **ರಾಮಪ್ಪಯ್ಯ ದೇಸಾಯಿ,**

ಕಾಟಾಪುರ, ಮೂಗನೂರು.

ಉಪಾಧ್ಯಕ್ಷ ಮಂಡಲ: **ಭೋಗೇಂದ್ರರಾವ,**

B.Sc., LL.B., ಅಡ್ವೊಕೇಟ್.,

ಮಂಡಲ-ಲಿಂಗಸೂಗೂರು.

---

॥ ಶ್ರೀ ಗುರುರಾಜೋ ವಿಜಯತೇ ॥

## ಶ್ರೀಗುರು ಜಗನ್ನಾಥ ವಿಠಲರು

## ಶ್ರೀ ಕೋಸಿಗಿ ಸ್ವಾಮಿರಾಯಾಚಾರ್ಯರು ರಚಿಸಿದ

# ಶ್ರೀ ಹರಿಕಥಾಮೃತಸಾರ

| | ಈಗಲೇ ಉಪಲಬ್ಧ ಟೀಕಾಗಳು | ಪತ್ರ |
|---|---|---|
| ೧. | ಹರಿಕಥಾಮೃತಸಾರ ತಾತ್ಪರ್ಯ ಸಂಸ್ಕೃತ ೮ ಸಂಧಿ ಶ್ಲೋಕಗಳೂ ಪ್ರತಿ ಪದ್ಯದಂತೆ ಸಂಸ್ಕೃತ **ಪೂರ್ಣ ಶ್ಲೋಕಗಳು** ರಚಿಸಿರುವರು ೮ ಸಂಧಿ ಪೂರ್ತಿ ಅನುಷ್ಟುಪ್ ಶ್ಲೋಕಗಳು | ೩೯ |
| ೨. | ಶ್ರೀಮದ್ಧರಿಕಥಾಮೃತಸಾರ ತಾತ್ಪರ್ಯ ಸಂಸ್ಕೃತ ಶ್ಲೋಕಗಳು. ೧ನೇ ಸಂಧಿ ೪೨ ಶ್ಲೋಕ, ೨ನೇ ಸಂಧಿಗೆ ೬೪ ಶ್ಲೋಕ ೩ನೇ ಸಂಧಿ ೬೭ ಶ್ಲೋಕ | ೮ |
| ೩. | ಶ್ರೀ ಹರಿಕಥಾಮೃತಸಾರ ತಾತ್ಪರ್ಯ ಚಂದ್ರಿಕಾ, ವ್ಯಾಖ್ಯಾ ಸಂಸ್ಕೃತ ಶ್ಲೋಕಗಳು ಪದ್ಯದಂತೆ ಅದರ ಅರ್ಥ ಸಂಸ್ಕೃತ ೪ನೇ ಸಂಧಿಗೆ | ೧೫॥ |
| ೪. | ಶ್ರೀ ಹರಿಕಥಾಮೃತಸಾರ ಮಂದಪ್ರಬೋಧಿನಿ ಮೂಲ ಸನಾಭಿ ಸಂಸ್ಕೃತ ಟೀಕಾ ೧ನೇ ಸಂಧಿ ಪೂರ್ತಿ | ೯ |
| ೫. | ಶ್ರೀ ಹರಿಕಥಾಮೃತಸಾರ ಸಂಗ್ರಹ ಸ್ರಗ್ಧರಾ, ಸಂಸ್ಕೃತ ಶ್ಲೋಕ ದ್ವಿತೀಯಾಧ್ಯಾಯ ಪೂರ್ತಿ ೩ನೇ ಅಧ್ಯಾಯ (೯) ಶ್ಲೋಕಗಳು | ೬ ಪತ್ರ |
| ೬. | ಹರಿ. ಸಾರ, ತಾತ್ಪರ್ಯ ಪ್ರಕಾಶಿಕಾ ಸಂಧಿ ೨೦-೨೧-೨೨-೨೩-೨೭-೩೦-೩೧ ಪ್ರಮಾಣಗಳು | ೩ ಪತ್ರ |
| ೭. | ಹರಿಕಥಾಮೃತಸಾರ ಭಾವ ಪ್ರಕಾಶಿಕಾ ನಾಮ ಟಿಪ್ಪಣಿ ಪ್ರಾಕೃತ ಅರ್ಥ | ೧೧॥ |
| ೮. | ಹರಿಕಥಾಮೃತಸಾರ ಮಂದಬೋಧನಿ, ೧-೨-೩-೪ ಪತ್ರಗಳಲ್ಲಿ ೧ ಪತ್ರ ಇಲ್ಲಾ. ಪ್ರಾಕೃತಾರ್ಥ ಸಂಧಿ ೧ನೇ ದಲ್ಲಿ ೬ | ೪ ಪತ್ರದಲ್ಲಿ ೧ನೇ ಪತ್ರ ಇಲ್ಲಾ |

೯. ಹರಿಕಥಾಮೃತಸಾರ ಮಂದಬೋಧಿನಿ, ಸಂಸ್ಕೃತ. ೧-೨ ಪದ್ಯಗಳ ಅರ್ಥ ೬
೧೦. ಹರಿಕಥಾಮೃತಸಾರ ಚಂದ್ರಿಕಾ, ೩ ಪದ್ಯ ಮಾತ್ರ ಸಂಸ್ಕೃತ ವ್ಯಾಖ್ಯಾನ ೬
೧೧. ಹರಿಕಥಾಮೃತಸಾರ ಚಂದ್ರಿಕಾ, ೪॥ ಪತ್ರ ಸನಾಭಿ ೧-೨-೩ ಪದ್ಯ ೪॥
೧೨. ಹರಿಕಥಾಮೃತಸಾರ ಚಂದ್ರಿಕಾ ಸ್ವಾಮಿ ರಾಜೀಯ ಸಂಸ್ಕೃತ ಕನ್ನಡ ೮
೧೩. ಹರಿಕಥಾಮೃತಸಾರಾಮೋದ ೨
೧೪. ಹರಿಕಥಾಮೃತ ತಾತ್ಪರ್ಯ ಪ್ರಕಾಶಿಕಾ ೨
೧೫. ಹರಿಕಥಾಮೃತ ಪರಿಮಳಸನಾಭಿ ಮೂಲ ಪದ್ಯ ಕನ್ನಡಾರ್ಥ ೨
೧೬. ಹರಿಕಥಾಮೃತಸಾರ ಚಂದ್ರಿಕಾ, ತಾಮ್ರಪರಣೀ ಎಂತ ತೋರತ್ತೆ ಸಂಸ್ಕೃತ ೨॥
೧೭. ದತ್ತ ಸ್ವಾತಂತ್ರ್ಯ ವಿಚಾರ ೧೬-೧೭ ಸಂಧಿಗೆ ಅನುಕೂಲ

ಶ್ರೀ ತಾಮ್ರಪರ್ಣೀಯ ಆಚಾರ್ಯ ಟಿಪ್ಪಣಿ ಪೂರ್ತಿ ಇದೆಂದು ತಿಳಿದಿದೆ, ಪ್ರಯತ್ನ ನಡದಿದೆ. ದೊರಕಿಸುವ ಭಾರ ದಾಸರದು.

ಭಾರ ನಿನ್ನದೋ ಭಾರತೀಶ ಪೊರೆವುದೋ! ಇವೆಲ್ಲವನ್ನು ಸರಿಯಾಗಿ ಪಂಡಿತರ ಸಹಾಯದಿಂದ ಪರಿಶೋಧಿಸಿ ಪ್ರಕಟಿಸುವ ಸುವಿಚಾರ ದಾಸರೆ ಪೂರೈಸಿ ಮಹಾಗ್ರಂಥ ಪೂರ್ತಿ ಮಾಡಿಸಲು ಪ್ರಾರ್ಥಿಸುವೆವು.

ಶ್ರೀ ಸಂಕರುಷಣ ಒಡೆಯರ ವ್ಯಾಖ್ಯಾನ ಕೈಬರಹದ ವಿಷಯ ವಿಶ್ವ ಪ್ರಯತ್ನಮಾಡಿತು. ೮-೧೦ ಸಂಧಿ ಬಳ್ಳಾರಿಲಿ ಒಬ್ಬ ಸದ್ಗೃಹಸ್ಥರಲ್ಲಿ ಇದೆ. ಆದರೆ ಅವರು ಅಚ್ಚಿಗೆ ಕೊಡಲು ಆಜ್ಞೆಯಿಲ್ಲವೆಂದು ಹೇಳಿದರು. ಆಶಾಭಂಗ ವಾಯಿತು. ಶ್ರೀ ದಾಸರ ಚಿತ್ತ. ಕಾರಣ ಅಚ್ಚು ಸಾಧ್ಯವಾಗಲಿಲ್ಲ.

ಮತ್ತು ಸಂಸ್ಕೃತ ವ್ಯಾಖ್ಯಾನಗಳು ಸಂಸ್ಕೃತದಲ್ಲಿಯೇ ಅಚ್ಚುಮಾಡಿಸಲು ಕೆಲವರ ಸೂಚನೆ. ಆದರೆ, ಕನ್ನಡ ಲಿಪಿ ಒಂದರಲ್ಲಿಯೇ ಅಚ್ಚಾಗಲು ದುಸ್ತರ. ಸಂಸ್ಕೃತ ಲಿಪಿಗೆ ಈಗಿನ ಮೂರರಷ್ಟು ಕಾಲ, ಮೂರು ಪಾಲು ಹೆಚ್ಚು ಖರ್ಚ ಬೇಕಾಗುವದು. ಕಾರಣ ಈ ಕೆಲಸ ಅಸಾಧ್ಯವೆಂದು ಬಿನ್ನೈಸುತ್ತೇನೆ.

## ಚಿತ್ರಗಳು

॥ ಶ್ರೀ ಗುರುರಾಜೋ ವಿಜಯತೇ ॥

# ೫. ವಿಭೂತಿ ಸಂಧಿಯ ಸಾರ

ಕೃಪಾಳುಗಳಾದ ಶ್ರೀ ದಾಸವರ್ಯರು ೨ನೇ ಕರುಣಾ ಸಂಧಿಯಲ್ಲಿ ಜೀವಾಂತಃಪ್ರೇರಕನಾದ ಬಿಂಬರೂಪಿ ಹರಿಯ ಕಾರುಣ್ಯತೆ ಪೇಳಿ, ಈ ಬಿಂಬನೇ ಪುರುಷ ಶಬ್ದ ವಾಚ್ಯನಾಗಿ, ಕಾಲರೂಪದಿಂದ ಅಂತಃಬಹಿ ವ್ಯಾಪ್ತನಾಗಿ ತ್ರಿವಿಧ ಜೀವರ ಸ್ವರೂಪದಂತೆ-ಅವರವರ ಗುಣ ಧರ್ಮ ಕರ್ಮಗಳನ್ನು ವ್ಯಕ್ತಮಾಡುತ್ತ ತಾನೇ ವ್ಯಕ್ತತಯಾ ಸಕಲ ಕ್ರಿಯೆಗಳನ್ನು ಮಾಡಿಸುವನೆಂದು ೩ನೇ ವ್ಯಾಪ್ತ ಸಂಧಿಯಲ್ಲಿ ಪೇಳಿದರು. ಇಂತಹ ಅನಂತ ತ್ರಿವಿಧ ಜೀವರ ಸ್ವರೂಪಾಭಿವ್ಯಕ್ತಗೊಳಿಸಿ ಸೃಷ್ಟಿಗೆ ತರಲು ಲಿಂಗ ಉಪಚಯ ಮಾಡುವ ಕ್ರಮವನ್ನು ಸೂಕ್ಷ್ಮವಾದ ರಸವಿಭಾಗ ಸಾಧನ ಜೀವಿಗಳಿಗೆ ತಿಳಿಯದ ಕಾರಣ-ಸ್ಥೂಲ ರಸಗಳಲ್ಲಿ ಸಮನ್ವಯಿಸಿ ಲಿಂಗದೇಹೋಪಾದನಕ್ಕೆ ಕಾರಣಿಭೂತವಾದ ರಸಗಳಲ್ಲಿ ಚಿತ್ರಚತುರಾಖ್ಯ ರಸರೂಪ ತಾನಾಗಿ, ಲಿಂಗ ದೇಹದ ಸೃಷ್ಟಿ ಕ್ರಮವನ್ನು ಹೇಳಿದರು. ಇದು ಬ್ರಹ್ಮದೇವರ ೧೦ ವರ್ಷ ಪರಿಯಂತ-ಸೂಕ್ಷ್ಮ ಸೃಷ್ಟಿಯಾಯಿತು.

ಈ ೫ನೇ ವಿಭೂತಿ ಸಂಧಿಯಲ್ಲಿ ಶ್ರೀ ಬಿಂಬನೇ ಕಾಲರೂಪದಿಂದ ಯಾವ ಯಾವ ಜೀವರಲ್ಲಿ ಎಷ್ಟೆಷ್ಟು ತನ್ನ ವಿಭೂತಿಯನಿಟ್ಟು ಮುಂದೆ ಅನಿರುದ್ಧಾದಿ ಶರೀರ ಜೀವರಿಗೆ ಕೊಡುತ್ತಾನೆಂಬ ವಿಷಯವನ್ನು ಈ ವಿಭೂತಿ ಸಂಧಿಯಲ್ಲಿ ದಾಸಾರ್ಯರು ಪೇಳುತ್ತಾರೆ.

ಅದು ಲಿಂಗಪ್ರಕೃತಿ ಮೊನೆಮಾಡಿ, ಅನಿರುದ್ಧ ಶರೀರಕ್ಕೆ ಸ್ಥಾನಾಪನ್ನ ವಾಗಿ ಪ್ರದ್ಯುಮ್ನದೇವರು ಅರ್ಧನಾರಿ ವೇಷದಿಂದ ಗುಣಬಿಂದುಗಳ ವಿಭಾಗ ದೊಡನೆ ತನ್ನ ವಿಭೂತಿಗಳನ್ನು ಇಟ್ಟು ವ್ಯಕ್ತಪಡಿಸುತ್ತಾನೆ.

"ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮ ವಿಭಾಗಶಃ" ಎಂಬುವಂತೆ ಬ್ರಹ್ಮದೇವರು ಮೊದಲಾದವರಲ್ಲಿ ಶಾಂತತ್ವ ರೂಪದಿಂದ ನೆಲೆಸಿರುವನು. ಶ್ರೀಹರಿಯು ವಿಭೂತಿಯಿಂದಲೇ ಆಯಾ ಜೀವರ ಸಾಮರ್ಥ್ಯ ತತ್ಕಾರ್ಯ ಮಾಡಿಸುವನಾದುದರಿಂದಲೇ ಈ ಸಂಧಿಗೆ ವಿಭೂತಿ ಸಂಧಿಯೆಂದು ಪೆಸರಿಟ್ಟರು.

**ವಿಭೂತಿ**=ಎಂದರೆ, ವಿಶಿಷ್ಟಾಬೂತಿ ; ವಿ-ಭೂತಿ ; ವಿಶಿಷ್ಟ ಐಶ್ವರ್ಯ; ಭೂತಿ=ಭವತ್ಯನಯಾಭೂತಿ, ಯಾವನಿಂದ ಐಶ್ವರ್ಯಯುಕ್ತನಾಗುತ್ತಾನೆ. ಆಸತ್ತಾ ವಿಭೂತಿ ಎಂದು ಕರೆಸುತ್ತದೆ. ಸಕಲ ಜೀವ ಜಡರು, ಶ್ರೀಹರಿಯಾಧೀನರು-ಸಕಲರಿಗೆ ಐಶ್ವರ್ಯಾದಿ ಗುಣ ಉದ್ಬೋಧಕ್ತ ಶಕ್ತಿ ಹರಿ ತನ್ನ ವಿಶಿಷ್ಟ ಐಶ್ವರ್ಯವನ್ನು ಬ್ರಹ್ಮಾದಿ ದೇವತೆಗಳಲ್ಲಿ ತಾನಿಟ್ಟು ಮುಂದೆ ಬ್ರಹ್ಮದೇವರ ೪೫ ವರ್ಷ ಪರಿಯಂತ, ಸ್ಥೂಲ ಶರೀರ ನಿರ್ಮಾಣದವರಿಗೆ ಏನೇನು ಯಾವ ಪ್ರಕಾರ ತನ್ನ ವಿಭೂತಿಗಳನ್ನಿಟ್ಟು ಸೃಷ್ಟಿಕ್ರಮ ಮಾಡುತ್ತಾನೆಂಬುದು ಈ ಸಂಧಿಯಲ್ಲಿ ಪೇಳುತ್ತಾರೆ. ಶ್ರೀ ವಿಜಯ ದಾಸಾರಾಯರ ಸೃಷ್ಟಿ ಸುಳಾದಿ ೧೫ ರಿಂದ ೨೧ವರಿಗೆ ೭ ಸುಳಾದಿಗಳು ಸೃಷ್ಟಿಪ್ರಕರಣ ಸುಳಾದಿಗಳು ನೋಡಿದರೆ ಇದರ ವಿವರ ಗೊತ್ತಾಗುತ್ತದೆ.

ಶ್ರೀಕೃತಿಪತಿ ಶ್ರೀ ಪ್ರದುಮ್ನದೇವನು ಬ್ರಹ್ಮದೇವರ ಹನ್ನೊಂದನೆಯ ವರುಷ ತಾನು ಅರ್ಧನಾರೀ ರೂಪತಾಳಿ ("ಕೃತಿಕಾಂತ ಅರ್ಧನಾರಿ ರೂಪ ತಾಳಿ" ಎಂಬುವ ೨೧ನೇ ಸುಳಾದಿಲಿ, ವಿಷ್ಣುರಹಸ್ಯ ಅಧ್ಯಾಯ ೩೭ರಲ್ಲಿ ಉಕ್ತವಾದಂತೆ) ವರ್ಣಭೇದದಿಂದ ಸರ್ವರನ್ನು ಹುಟ್ಟಿಸಿದನು. ಬಲಭಾಗದಿಂದ ಪುರುಷರನ್ನು ಎಡಭಾಗದಿಂದ ಸ್ತ್ರೀಯರನ್ನು ಪುಟ್ಟಿಸಿದ.

ಮುಖದಿಂದ ಬ್ರಾಹ್ಮಣ ಜಾತಿ, ಬಾಹುವಿನಿಂದ ಕ್ಷತ್ರಿಯ, ಊರುವಿನಿಂದ ವೈಶ್ಯ, ಅಂಘ್ರಿಯಿಂದ ಶೂದ್ರರನ್ನು ಸೃಷ್ಟಿಸಿದನು.

**ಬ್ರಾಹ್ಮಣಜಾತಿ**=ಪ್ರದ್ಯುಮ್ನನ ಮುಖದ ಬಲಭಾಗದಿಂದ ಪರಮೇಷ್ಠಿ, ಅನಳ (ಅಗ್ನಿ), ವರುಣ, ಭೃಗು, ಮರೀಚಾದ್ಯರು ಬ್ರಾಹ್ಮಣರನ್ನು **ಎಡಭಾಗದಿಂದ** ಅವರವರ ಸ್ತ್ರೀಯರನ್ನು ಪುಟ್ಟಿಸಿದ-ಈ ಬ್ರಾಹ್ಮಣ ಜಾತಿಗೆ ವಾಸುದೇವಮೂರ್ತಿ.

**ಕ್ಷತ್ರಿಯಜಾತಿ**=ಪ್ರದ್ಯುಮ್ನದೇವನ ಬಾಹು ಬಲಭಾಗದಿಂದ ಮರುತ (ವಾಯು) ಖಗ, ಶೇಷ, ಶಿವ, ಇಂದ್ರ, ಕಾಮ, ವಿವಸ್ವಾನ್ನಾಮಕ ಸೂರ್ಯ-ಚಂದ್ರಾದಿಗಳು ಕ್ಷತ್ರಿಯರನ್ನು ಪುಟ್ಟಿಸಿದನು. ಇವರಿವರ ಸ್ತ್ರೀಯರನ್ನು ಬಾಹುವಿನ ಎಡಭಾಗದಿಂದ ಪುಟ್ಟಿಸಿದ. ಈ ಕ್ಷತ್ರಿಯ ಜಾತಿಯರೊಳಗೆ **ಸಂಕರ್ಷಣದೇವನನ್ನು** ಧ್ಯಾನಿಸುವುದು.

**ವೈಶ್ಯಜಾತಿ**=ಪ್ರದ್ಯುಮ್ನದೇವನ ಬಲ ಊರು ಭಾಗದಿಂದ ಕಾಮ

ಪುತ್ರ, ಅನಿರುದ್ಧ, ದಾಸಪ್ರಾಣಾದಿ ಪಂಚರು ಕೂಡಿ ೪೯ ಮರುತುಗಳು ಉಳಿದ ಸೂರ್ಯರು, ರುದ್ರಗಣ, ವಸುಗಣ, ಗಣೇಶ, ವಿಷ್ವಕ್ಸೇನ, ಕುಬೇರ ಬಲ ಊರು ಭಾಗದಿಂದ, ಎಡ ಊರು ಭಾಗದಿಂದ ಇವರಿವರ ಸ್ತ್ರೀಯರನ್ನು ಪುಟ್ಟಿಸಿದ. ವೈಶ್ಯರಲ್ಲಿ ಪ್ರದ್ಯುಮ್ನದೇವನನ್ನು ಚಿಂತಿಪುದು.

**ಶೂದ್ರಜಾತಿ**=ಶ್ರೀ ಪ್ರದ್ಯುಮ್ನದೇವನ ಅಂಘ್ರಿ (ಪಾದ)-ಬಲ ಪಾದ ದಿಂದ ಅಶ್ವಿನಿ ದೇವತೆಗಳು-ನಿರಋತಿ, ಯಮಧರ್ಮ, ಯಮಕಿಂಕರರು, ಮೇದಿನಿ ಕಾಲಮೃತ್ಯು ಶನೇಶ್ಚರಾದಿಗಳು, ಶೂದ್ರ ಜಾತೀಯ ಪುರುಷ ದೇವತೆಗಳನ್ನು ಪುಟ್ಟಿಸಿದನು. ಎಡಪಾದದ ಡೆಶೆಯಿಂದ ಇವರಿವರ ಸ್ತ್ರೀಯರನ್ನು ಪುಟ್ಟಿಸಿದನು. ಈ ಶೂದ್ರ ಜಾತಿಯಲ್ಲಿ ಅನಿರುದ್ಧ ದೇವನನ್ನು ಸ್ಮರಿಸುವದು. ಈ ಎಲ್ಲ ಮರ್ಮ ಬಲ್ಲವರಾದ ಅಪರೋಕ್ಷ ಜ್ಞಾನಿಗಳಾದ ಶ್ರೀ ಜಗನ್ನಾಥದಾಸವರ್ಯರು ವಿಭೂತಿ ವಿವರಗಳನ್ನು ವಿವರಿಸುತ್ತಾ ಈ ೫ನೇ ಸಂಧಿ ಪದ್ಯ ೨೯ "**ಭೂಸುರರೊಳಿಪ್ಪಬ್ಜ ಭವನೊಳು.** ಈ ಪದ್ಯ ಪ್ರಾರಂಭಿಸಿ ೨೯, ೩೦, ೩೧, ೩೨ ಈ ನಾಲ್ಕು ಪದ್ಯಗಳಲ್ಲಿ ಬ್ರಾಹ್ಮಣಾದಿ ಜಾತಿಗಳಲ್ಲಿಪ್ಪ ವಿಭೂತಿ ರೂಪಗಳನ್ನು ವರ್ಣಿಸಿದ್ದಾರೆ. ಈ ದೇವತೆಗಳಲ್ಲಿ ಜಾತಿಭೇದಗಳುಂಟೇನೆಂಬುದು ಒಂದು ಶಂಕ ಬರುವದು. ಆದರೆ, ವಿಷ್ಣುರಹಸ್ಯ ಪ್ರಕಾಶ ಸಂಹಿತೆ (ಸತ್ತತ್ವ ರತ್ನಮಾಲಾ) ಭಾಗವತದಲ್ಲಿ ಶ್ರೀ ವ್ಯಾಸರು ಅಪ್ಪಣೆ ಕೊಡಿಸಿರುವಂತೆ, ಶ್ರೀ ವಿಜಯದಾಸರು ದೇವತೆಗಳಲ್ಲಿ "ವರ್ಣಾಶ್ರಮಿಗಳುಂಟು, ವರ್ಣ ಬಾಹ್ಯರು ಉಂಟು, ಜಾತಿಭೇದಗಳುಂಟು, ವರಣಭೇದಗಳುಂಟು" ಎಂದು ಅಪ್ಪಣೆ ಕೊಡಿಸಿದಂತೆ ದಾಸಾರ್ಯರು ಈ ಎಲ್ಲ ದೇವತೆಗಳಲ್ಲಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ದೇವರ ವಿಭೂತಿರೂಪ ಉಂಟೆಂದು ಪೇಳಿದ್ದಾರೆ ಮತ್ತು ಈ ವಿಭೂತಿರೂಪ ಸ್ವರೂಪ ಸ್ವಾಂಶಕಲೆಗಳನ್ನಿಟ್ಟು ಆದಿಯಲ್ಲಿ ಜೀವರಿಗೆ ಸ್ವಾತಂತ್ರವಿಭಾಗ ಮಾಡಿಟ್ಟಿರು ವನು. ಇದನ್ನು ಮರೆಯಕೂಡದು. "ಯದ್ಯದ್ವಿಭೂತಿ ಮತ್ಸತ್ವಂ ಶ್ರೀಮದೂರ್ಜಿತ ಮೇವವಾ ॥ ತತ್ತದ್ದೇವಾವ ಗಚ್ಛತ್ವಂ ಮಮತೇಜೋಽಂಶ ಸಂಭವಮ್ ॥ ೪೧ ॥ ಎಂದು ಗೀತೋಕ್ತಿಯಂತೆ-ಎಲ್ಲವೂ ಭಗವಂತನ ವಿಭೂತಿಯು ಎಂದು ತಿಳಿದ ಜ್ಞಾನಿಗಳು. ಮೊದಲಿಗೆ ಸ್ಥೂಲಮತಿಗಳಿಗೆ

ತಿಳಿಸಲೋಸುಗ ಬಹಿರದಲ್ಲಿ ಶ್ರೀ ತರುಣಿವಲ್ಲಭ ಪರಮ ವಿಭೂತಿರೂಪವ ಕಂಡಕಂಡಲ್ಲೀತೆರದಿ ಚಿಂತಿಸು" ಎಂದು ಆಜ್ಞೆಯಿತ್ತವರು.

ಮೊದಲಿಗೆ ಶ್ರೀ ಲಕ್ಷ್ಮೀಪತಿಯ ನಾರಾಯಣನ-ವಾಸುದೇವಾದಿ ಮೂರ್ತಿಗಳ ವಿಶಿಷ್ಟ ಭೂತಿ-ವಿಭೂತಿಗಳೆಷ್ಟು ಪ್ರಕಾರವೆಂದು ಹೇಳುತ್ತಾರೆ. ಸಾಮಾನ್ಯವಾಗಿ ೧೦ ವಿಭೂತಿಗಳು ಚೇತನ ಜಡಗಳಲ್ಲಿರುವವು. ಅವು ಯಾವುವೆಂದರೆ ನೀತ, ಸಾಧಾರಣ, ವಿಶೇಷ, ಸಜಾತಿ, ನೈಜ, ಆಹಿತ, ಸಹಜ, ವಿಜಾತಿ, ಖಂಡ, ಅಖಂಡ ವಿಭೂತಿಗಳು. ಇದರ ವಿವರ ಎಲ್ಲ ಜ್ಞಾನಿಗಳು ತಮ್ಮ ವ್ಯಾಖ್ಯಾನದಲ್ಲಿ ವಿವರಿಸಿದಂತೆ ಅರಿವುದು. ಜಲ-ನೀರಲ್ಲಿ ಹುಟ್ಟುವ ಪ್ರಾಣಿಗಳು ಭೂಮಿಯಲ್ಲಿ-ಆಕಾಶದಲ್ಲಿ ಚರಿಸತಕ್ಕ ಪ್ರಾಣಿಗಳಲ್ಲಿ ಸಜಾತಿ= ಒಂದೇ ಬಗೆ ಯೋನಿಗಳಲ್ಲಿ ಪ್ರಾಣಿಗಳಲ್ಲಿ. ವಿಜಾತಿ=ಒಂದೇ ಜಲದಲ್ಲಿ ಉದ್ಭವಿಸಿದ ನಾನಾ ಯೋನಿ ಪ್ರಾಣಿಗಳು. ನೀರಿನಲ್ಲಿ, ಭೂದಲ್ಲಿ, ಆಕಾಶ ದಲ್ಲಿಪ್ಪ ಪ್ರಾಣಿಗಳಲ್ಲಿ ಒಂದಕ್ಕೊಂದು ವಿಜಾತಿ ವಿಭೂತಿ.

ಸಾಧಾರಣ ವಿಶೇಷ ವಿಭೂತಿ=ದೇವತೆಗಳಲ್ಲಿ ಈ ಪ್ರಕಾರ ಶ್ರೀಹರಿಯು ವಿಭೂತಿಗಳಿಟ್ಟಿದ್ದಾನೆ.

ಜಡರೂಪವಾದ-ಪ್ರತಿಮಾ. ಸಾಲಗ್ರಾಮ, ಪ್ರಥಿವಿ, ಅಪ್ಪು, ಅನಳ, ತಾರಾಪಥ=ಆಕಾಶ, ಗಾಳಿ (ಪವನ), ಯೋಗ, ಕರಣ, ನಕ್ಷತ್ರ, ತಿಥಿ, ಶುಕ್ಲ, ಕೃಷ್ಣಪಕ್ಷ ಹೀಗೆ ೧೩ ಜಡಗಳಲ್ಲಿ ಚೇತನರೂಪ, ಗೋ-ಅಭ್ಯಾಗತ, ಅತಿಥಿ, ಶ್ರೀತುಲಸಿ, (ಸ್ಥಾವರಜೀವ) ಅಶ್ವತ್ಥವೃಕ್ಷ (ಸ್ಥಾವರಜೀವ,) ಯತಿ, ವನಸ್ಥ, ಗ್ರಹಸ್ಥ, ಬ್ರಹ್ಮಚಾರಿ, ಯಜಮಾನ, ಸ್ವಜನ, ಪರಜನ, ನವಗ್ರಹಾದಿಗಳು ೧೩ ಚೇತನಾಧಿಷ್ಠಾನದಲ್ಲಿ ವಿಭೂತಿಗಳಿಟ್ಟಿಹನು. ಅದ ರಲ್ಲಿಯೂ ಸಾಲಿಗ್ರಾಮದಲ್ಲಿ ನೀತ ವಿಭೂತಿ, ಸಂತತ ಶ್ರೀಹರಿಯು ಕೆಂಪಗೆ ಕಾದ ಬಂಗಾರದಲ್ಲಿ ತೋರುವ ಅಗ್ನಿಯೋಪಾದಿಯಲ್ಲಿ ವ್ಯಕ್ತನಾಗಿ ಜ್ಞಾನಿ ಗಳಿಗೆ ಕಾಣುತ್ತಿರುವ ಜ್ಞಾನಿಗೆ ಅವ್ಯಕ್ತನಾದರೂ ಇಲ್ಲಿ-ನಿತ್ಯವಾಗಿ ಮಾಜದೇ ಇರುವ ವಿಭೂತ ಇರುವುದು. ಸಾಲಗ್ರಾಮ=೫೫೩೫ ರೂಪದಿಂದ ಗುರುವೃತ್ತ ನಿಯಮದಂತೆ. ಮತ್ತು ಇಲ್ಲಿಪ್ಪ ಪ್ರಕೃತಿ ಪರಮಾಣು ಸಂಖ್ಯೆಗಳೇ ಶ್ರೀಹರಿ ರೂಪಗಳು ಇವೆ. ಭೂಧರ ಪರ್ವತಾಭಿದೇವತೆಗಳಲ್ಲಿ ಇದೇ ರೂಪದಿಂದ ಇರುವನು.

ಇನ್ನು ಪ್ರತಿಮಾಗಳಲ್ಲಿ ಆಹಿತರೂಪ=೫೧೩ ರೂಪ. ಅಲ್ಲಿ ಪ್ರಕೃತಿ ಪರಮಾಣುಗಳಂತೆ ಜ್ಞಾನಿಗಳಿಂದ ತಿಳಿವುದು "ಪ್ರತಿಮಾಸು ಅಪ್ರಬುದ್ಧನಾಂ" ಎಂಬುವ ಪ್ರಮಾಣದಂತೆ ಕಾಷ್ಟದಲ್ಲಿ ಅಗ್ನಿಅವ್ಯಕ್ತನಾಗಿದ್ದು ಕಾಷ್ಟದಿಂದ ಕಾಷ್ಟ ಕಟಿಯಲು ಅಗ್ನಿ ವ್ಯಕ್ತನಾಗಿ ತೋರ್ಪಂತೆ ಸಾಧನ ಜೀವಿಗಳ ಉಪಾಸ್ಯಾನುಕೂಲವಾಗಿ ಪಕ್ವ ಕಾಲಾನುಸಾರವಾಗಿ ತೋರ್ವನು.

ಪ್ರತಿಮೆ ಪೂಜಿಸಲು ಸಾಧಕಗಳಾದ ಉಪಕರಣ=ಉಪಕಾರಿಣಿ ರೂಢಿಯಲ್ಲಿದ್ದ ಸಾಮುಗ್ರಿಗಳಲ್ಲಿ, ಕರಣ ಇಂದ್ರಿಯಗಳು-ಇಂದ್ರಿಯ ನಿಯಾಮಕನಾದ ಹರಿಯು ಉಪಕರಣ ೫೨,೧೧ಳ ರೂಪಗಳನ್ನು (ಪ್ರಕೃತಿ ಪರಿಮಾಣದಂತೆ ಇಷ್ಟು ರೂಪದಿಂದ ಪೂಜಾ ಮಾಡುವವರ ಪೂಜೆ ಕೊಳ್ಳುವವನು. ಭಕ್ತರಿಂದ ಪೂಜೆಗೊಳ್ಳುವ ಆತುರತೆ ಹೇಗಂದರೆ ನೀರಡಿಸಿದವನು, ನೀರು ಯಾವ ಪ್ರಕಾರ ಆದರದಿಂದ ಸ್ವೀಕರಿಸುವನೊ ಭಕ್ತರ ಪೂಜೆಗೊಳ್ಳಲು ಹರಿಗೆ ಅಷ್ಟು ಆತುರ.

ಈ ಪ್ರಕಾರ ಹೃತ್ಕಮಲಸ್ಥ ಬಿಂಬರೂಪನಾದ ಹರಿಯು, ಸಕಲ ಜೀವಾಂತರ್ಯಾಮಿಯಾಗಿ ಇದ್ದರೂ ಕಾಲ ನಾಮಕನಾಗಿ ಬ್ರಹ್ಮಾದಿ ದೇವತೆಗಳಲ್ಲಿ ಬಹಿರದಲ್ಲಿಪ್ಪ ಪೂಜಾಸಾಧನ ದ್ರವ್ಯದಲ್ಲಿ ಇಂಬುಗೊಂಡು ಇರುವನು. ಧರ್ಮಾರ್ಥ ಕಾಮಗಳನ್ನು ಬಯಸದೆ, ಸ್ವಸ್ಥ ಚಿತ್ತನಾಗಿ, ವಿಶ್ವ ಕುಟುಂಬಿ ಕೊಟ್ಟ ನುಚ್ಚೋ ನೀರೋ ಹರಕು ಕಂಬಳಿ ಹೊದಿಯಲು ಕೊಟ್ಟದ್ದೇ ಮಹಾ ಸೌಭಾಗ್ಯವೆಂದು ನಿರಂತರದಲ್ಲಿ ಹರಿಯ ಪಾದಕಮಲಗಳನ್ನೆ ಭಜಿಸಬೇಕು.

ಇನ್ನು ಉಪಕರಣಗಳಂತೆ ಶ್ರೀಹರಿಗೆ ಪೂಜಾಸಾಧನ ದ್ರವ್ಯಗಳು, ನೀರು, ತುಲಸಿ, ಗಂಧ, ಪುಷ್ಪ, ದೀಪಾದಿಗಳು ಬೇಕು. ಇವುಗಳಲ್ಲಿಯೂ ಸಹ ಶ್ರೀಹರಿಯ (ವಿಭೂತಿ) ರೂಪಗಳುಂಟು. ವಾರಿ=೨೪ ರೂಪ ಇದರಲ್ಲಿ, ಪ್ರಕೃತಿ ಪರಮಾಣು ವೈಜ್ಞಾನಿಕರು ನೀರಿನಲ್ಲಿ ೨೪ ಪಾಯಂಟು ಹೇಳುತ್ತಾರೆ (ಇದೇ ಮೂಲಾಧಾರ).

ಶ್ರೀ ತುಲಸಿದಳದಿ ೫೩೧೭ ರೂಪ ಪ್ರಕೃತಿ ಪರಮಾಣುಗಳಂತೆ; ಇನ್ನು ತುಲಸಿದೇವಿ ವಿಚಾರ ಅವಶ್ಯ ತಿಳಿಯುವದು. ತುಳಸಿದೇವಿ ಸ್ವರೂಪತಃ ಜಾಂಬವತಿಗೆ ಸಮಾನಳು. ಉಪೇಂದ್ರಾದಿ ದೇವ

ಪೂಜಿತಾ ತಥಾ ನಾರದಾದಿ ಮುನಿಗಳ ಪ್ರಣತಃ "ಇತ್ಯನೇನ ಪಾರ್ವತ್ಯಾಧಿಕಂ ಶ್ರೀ ತುಲಸ್ಯಾ ಸಿದ್ಧಂ" ಶ್ರೀ ಕಪಿಲನಾಮಕಹರಿ ಶ್ರೀ ಲಕ್ಷ್ಮೀ ಸನ್ನಿಧಾನಯುಕ್ತ ಶ್ರೀ ತುಲಸಿಯ ೧ ಮಧ್ಯದಲ್ಲಿ, ವಿಷ್ಣು ೨ ದಕ್ಷಿಣದಲ್ಲಿ, ರುದ್ರ ೩ ವಾಮದಲ್ಲಿ, ಬ್ರಹ್ಮ ೪ ಮೂಲದಲ್ಲಿ, ನಾರಾಯಣ ೫ ಶೀರ್ಷದಲ್ಲಿ, ಜನಾರ್ದನ ೬ ಶಾಖಾದಲ್ಲಿ, ಸರ್ವದೇವತಾ ೭ ಪತ್ರದಲ್ಲಿ, ಅಪ್ಸರಗಣ ೮ ಉಪಶಾಖಾದಲ್ಲಿ ಸಸೂತ್ರಕ ಸಾಂಗವೇದ, ೯ ಶಾಖೋಪಶಾಖಾ ಮಧ್ಯ ಮುನಿಗಳು, ೧೦ ಮಂಜರಿಯಲ್ಲಿ ಲಕ್ಷ್ಮೀ, ೧೧ ಪುಷ್ಪದಲ್ಲಿ ಪುರುಷೋತ್ತಮ, ೧೨ ಪತ್ರಾಗ್ರದಲ್ಲಿ ಸರ್ವತೀರ್ಥ, ೧೩ ದಳಗಳಲ್ಲಿ ಸಪ್ತಸಾಗರ, ೧೪ ಪತ್ರ ಶಾಖಾಂತರದಲ್ಲಿ ಗಂಗಾ, ೧೫ ಅಮೂಲಾಗ್ರ ಶ್ರೀಹರಿ, ಸರ್ವದೇವಮಯೀ ವೇದಮಯೀ ತೀರ್ಥಮಯೀ ತಪೋಮಯೀ ತುಲಸಿದೇವಿ, ದುಃಖನಾಶನೀ ಸುಖಪ್ರದಾ ಪರಮ ಮಂಗಲೀ ಹೀಗೆ ಶ್ರೀಹರಿಯ ವಿಶೇಷ ವಿಭೂತಿ ಶ್ರೀತುಲಸಿಯಲ್ಲಿರುವುದೆಂದು ಚಿಂತಿಸಿದರೆ ಸುಜ್ಞಾನ ಪುಟ್ಟಿಸುವ, ಪುಷ್ಪದಿ ೧೬೧ ರೂಪ-ದೀಪ ೧೩ ಗಂಧದಲ್ಲಿ ೪೦೩ ರೂಪಗಳು. ಈ ಪ್ರಕಾರ ಶ್ರೀಹರಿಯ ವಿಭೂತಿ ರೂಪಗಳನ್ನು ಚಿಂತಿಸಬೇಕು. ಈ ಕಾಲರೂಪಿ ಬಹಿರಂಗ ಪದಾರ್ಥ ಗತರೂಪ ಬೇರೆ ಅಲ್ಲ. ಅಷ್ಟದಳ ಹೃತ್ಕಮಲ ರೂಪದ ರೂಪನೆ ಕಾಲರೂಪಿಯು, ಹೃದಯಾಷ್ಟದಳ ಕಮಲಗತ ಹರಿಯೆ ಕಮಲ ಒಂದೊಂದು ದಳಗಳಲ್ಲಿ ಸಂಚಾರಮಾಡುತ್ತಾ ದುಷ್ಟರಾದ ತಮೋಜೀವಿಗಳಿಗೆ ದುರ್ಬುದ್ಧಿ ಕರ್ಮ ವಿಶಿಷ್ಟರಾದ ಜ್ಞಾನಿಗಳಿಗೆ ಸುಜ್ಞಾನಧರ್ಮ ವರ್ಧಿಸುತ್ತಾ ಇರುವನು. ತಾನು ದೋಷದೂರನು. ಜ್ಞಾನಾನಂದಾದಿ ಸುಖಪೂರ್ಣನು. ಶ್ರೀಹರಿಗೆ ಯಾವ ಲೇಪವಿಲ್ಲ. ಈ ಪ್ರಕಾರ ಶ್ರೀಹರಿಯ ವಿಭೂತಿರೂಪ ಪೂಜಾಸಾಧನಗಳಲ್ಲಿ ಪೇಳಿ.

ಮುಂದೆ ಈ ಪೂಜಾಸಾಧನಕ್ಕೆ ಅನುಕೂಲವಾದ ಜಡ, ಚೇತನ, ಕ್ರಿಯಾಗಳನ್ನು ಸಮರ್ಪಿಸಿ ಇವುಗಳಲ್ಲಿ ಶ್ರೀಹರಿ ತಾನೆ ನಿಂತು ಕಾರ್ಯ ಮಾಡಿಸುತ್ತಾನೆ. ಬೇರೊಬ್ಬರಲ್ಲಿ ಭಾವ, ದ್ರವ್ಯ, ಕ್ರಿಯಾದ್ವೈತಗಳನ್ನು **ಶ್ರೀಹರಿಯಲ್ಲಿ ಚಿಂತನಮಾಡಿ ಸಮರ್ಪಿಸುವ ಬಗೆಯನ್ನು ಹೇಳುತ್ತಾರೆ.**

**ಜಡ**:-ವಿತ್ತ ೧ ದ್ರವ್ಯ, ೨ ದೇಹ, ೩ ಆಗಾರ ಮನೆ. ಇವೆಲ್ಲ ಜಡ

ವಸ್ತುಗಳು. ಹೇಗಂದರೆ ಮೃತ್ತಿಕಾ=ಕಾರಣ ಘಟ=ಕೊಡ ಕಾರ್ಯ ಇವೆರಡೂ ಜಡ, ಘಟಮೃತ್ತಿಕಾಂತರ್ಗತ ರೂಪಗಳಿಗೆ ಐಕ್ಯ ಚಿಂತಿಸುವುದೇ **ಭಾವಾದ್ವೈತ.**

ಜೀವ=ದಾರಾ=ಹೆಂಡತಿ; ಅಪತ್ಯ=ಮಕ್ಕಳು, ಮಿತ್ರಾದಿಗಳು=ಸ್ನೇಹಿತರು ಮುಂತಾದ ಎಲ್ಲ ಜೀವರುಗಳಲ್ಲಿ ಅಂದರೆ ತಾನು, ತನ್ನ ಹೆಂಡತಿ, ಮಕ್ಕಳು, ಬಂಧುಗಳು, ಸರ್ವರಂತರ್ಗತ ರೂಪಕ್ಕೂ ತನ್ನ ಅಂತರ್ಗತ ಬಿಂಬ ರೂಪಕ್ಕೂ ಐಕ್ಯಚಿಂತನವೆ **ದ್ರವ್ಯಾದ್ವೈತ.**

**ಸರ್ವಕ್ರಿಯಾ**=ಗುಣ, ಚಿತ್ತ, ಬುದ್ಧ್ಯಾದಿ ಇಂದ್ರಿಯ, ಜ್ಞಾನ, ಕರ್ಮಡೊಳು=ಅಂದರೆ ಕಾಯಾ ವಾಚಾ ಮನಸಾ, ಕಾಯಿಕ, ವಾಚಿಕ, ಮಾನಸಿಕದಿಂದ ಮಾಡುವಂಥ ಸಕಲ ಕರ್ಮಗಳು ಬಿಂಬ ಮಾಡಿಸುತ್ತಾನೆ ಎಂಬ ಚಿಂತನವೇ **ಕ್ರಿಯಾದ್ವೈತ.**

ಇಂತು ಜಡ ಜೀವ ಕರ್ಮಗಳಲ್ಲಿ ಶ್ರೀಹರಿಯು ಬಿಂಬನಾಗಿ ತಾನಿದ್ದು ತನ್ನಾಮದಿಂದ ಕರೆಸುತ್ತ, ತನ್ನ ಸತ್ಯ ಸಂಕಲ್ಪದಂತೆ ಎಲ್ಲ ಕ್ರಿಯೆಗಳನ್ನು ತಾನೆ ನಿಂತು ಮಾಡಿಸುತ್ತಾನಾದ ಕಾರಣ ಕಾರಣಾಂತರ್ಗತ ಕಾರ್ಯಾಂತರ್ಗತ, ಜೀವರಂತರ್ಗತ ರೂಪಕ್ಕೂ ಗುಣ ಚಿತ್ತಬುದ್ಧ್ಯಾದಿ, ಇಂದ್ರಿಯಗತ ರೂಪಕ್ಕೂ, ತತ್ಕ್ರಿಯಾ ರೂಪಗಳಿಗೂ ಭೇದವಿಲ್ಲ. ಎಲ್ಲ ವಸ್ತುಗಳಲ್ಲಿ, ಎಲ್ಲ ಜೀವರಲ್ಲಿ, ಎಲ್ಲ ಕ್ರಿಯದಲ್ಲಿ ಇರುವ ಹರಿಯ ರೂಪಗಳು ಅದ್ವೈತ=ಒಂದೇ-ಬೇರೆ ಅಲ್ಲ ಹೀಗೆ ತಿಳಿಯುವದೇ ಭಾವಾದ್ವೈತ, ದ್ರವ್ಯಾದ್ವೈತ, ಕ್ರಿಯಾದ್ವೈತ, ಅದ್ವೈತತ್ರಯ, ಹರಿಯ ರೂಪಗಳಿಗೆ ಚಿಂತಿಸಬೇಕೆ ಹೊರ್ತಾಗಿ ಜೀವ-ಜಡ, ಕ್ರಿಯಾಗಳೇ ಹರಿಯಲ್ಲಿ ಐಕ್ಯ ಚಿಂತಿಸಬಾರದು. ಈ ಪ್ರಕಾರ ಸರ್ವತ್ರ ಸರ್ವಜಡ, ಜೀವಕ್ರಿಯೆಗಳಲ್ಲಿ ಸಮೀಚೀನವಾಗಿ ಚಿಂತಿಸುತ್ತ, ಸದ್ಭಕ್ತಿಯಲ್ಲಿ ಸರ್ವತ್ರ ಮರೆಯದಲೇ ಶ್ರೀಹರಿಯೆ ಪ್ರೇರಕನೆಂದು ಪ್ರತಿನಿತ್ಯ ಸೇವಿಸುವ ಸದ್ಭಕ್ತರಿಗೆ ತಾನು ಒಲಿಯುವನು. ಕರುಣಾಳುವಾದ ಶ್ರೀಹರಿಯು, ಕರಿರಾಜಗೊಲಿದು ಕಾಪಾಡಿದಂದದಿ ರಕ್ಷಿಸುವನು. ಇಂತು ಶ್ರೀಹರಿಯ ಅದ್ವೈತತ್ರಯ ವಿಭೂತಿ ರೂಪಗಳೆಂದು ತಿಳಿಯಬೇಕು. ಭಾಗವತ ಸಪ್ತಮದಲ್ಲಿ ಇದರ ವಿಚಾರ ವಿಸ್ತಾರವುಂಟು.

ಇನ್ನು ಪದ್ಯ ೧೨ ಆರಂಭಿಸಿ ಪದ್ಯ ೨೮ರ ಪರಿಯಂತರವಾಗಿ ನಾನಾ

ವಿಧವಾದ ಜಡ, ಪಂಚಭೂತಾದಿಗಳು, ದೇಹಗೇಹಾದಿಗಳು, ದಾರಾ ಪುತ್ರಾದಿ, ಗುಣಚಿತ್ತಬುಧ್ಯಾದಿ ಇಂದ್ರಿಯಗತ ರೂಪಗಳಲ್ಲಿ ಪೂಜಾಸಾಧನ ಅನುಸಂಧಾನ ಕ್ರಮವನ್ನು ನಾನಾ ರೀತಿಯಾಗಿ ಬಣ್ಣಿಸಿದ್ದಾರೆ. ಇದು ಸಾಮಾನ್ಯ ಜೀವಿಗಳ ಉಪಾಸನೆ ಅರ್ಚನೆ ಧ್ಯಾನ ಕ್ರಮ ವಿಾರಿದೆ. ಜ್ಞಾನ ಮತ್ತು ಭಕ್ತಿಯೋಗಗಳ ಧ್ಯಾನ ಉಪಾಸನೆ ಕ್ರಮವಿದು.

ಈ ವಿಭೂತಿ ಸಂಧಿಯಲ್ಲಿ ಪೂಜಾ ಅನುಸಂಧಾನ ಬಗೆಗಳು ಏಕೆ ಇದಕ್ಕೇನು ಸಂಬಂಧ, ಇದರ ವಿಚಾರವು ಅತಿ ಗಹನವಾಗಿದೆ. ಸಕಲ ವಸ್ತುಗಳಲ್ಲಿ ಸನ್ನಿಹಿತನಾದ ಶ್ರೀಹರಿಯು ವಿಶಿಷ್ಟಾಶ್ರಯಾ ವ್ಯಕ್ತತೆ ಜೀವರ ಅಧಿಕಾರ ವಿವಿಕ್ಷಾಭೇದದಿಂದ ಗೋಚರವಾಗುತ್ತದೆ. ಸ್ವರೂಪ ಯೋಗ್ಯ ತಾನುಗುಣ ಧರ್ಮ ಕರ್ಮಗುಣಗಳನ್ನು, ಲಿಂಗ ಉಪಚಯ ದ್ವಾರಾ ಪ್ರಚುರಪಡಿಸಿದ ಮೇಲೆ ಅವಶ್ಯ ಅನಿರುದ್ಧ ಸ್ಥೂಲಾದಿ ಶರೀರಗಳನ್ನು, ಹರಿಯು ತನ್ನ ಗುಣ ವಿಭೂತಿಗಳನ್ನಿಟ್ಟು ಕಾರ್ಯಪ್ರವರ್ತಿ ಮಾಡಿಸುವನಾದುದರಿಂದ, ಇಂಥ ಶ್ರೀಹರಿಯ ಗುಣಾತಿಶಯಗಳನ್ನು ನಾನಾ ವಿಧವಾಗಿ ಕೊಂಡಾಡಿ ಆತನಿಗೆ ಸಮರ್ಪಿಸುವುದೇ ಮುಖ್ಯ ತತ್ವ ಇದು, ವ್ಯಾಪ್ತೋಪಾಸನೆ ಕ್ರಮ. ಅದು ಹೇಗೆಂದರೆ ಬಾಂದಳ=ಆಕಾಶವೇ ಮೊದಲಾಗಿ ಪಂಚ ಮಹಾಭೂತಗಳಲ್ಲಿ ಶ್ರೀಹರಿಯ ಪೂಜಾಸಾಧನ ಪದಾರ್ಥಗಳು ನಾನಾ ವಿಧವಾಗಿ, ಹೊಸ ಹೊಸ ಪರಿಯಾಗಿ ತುಂಬಿಕೊಂಡಿಹವು. ಇವುಗಳ ಬಗೆಗಳನ್ನು ತಿಳಿದು, ಧ್ಯಾನಕ್ಕೆ ತಂದು ವೇದ ಪ್ರತಿಪಾದ್ಯನಾದ ಗೋವಿಂದನನ್ನು ಅರ್ಚನೆ ಮಾಡಬೇಕು. ಕಮಲನಾಭನಾದ ಶ್ರೀ ವಿರಾಟರೂಪಿ ಹರಿಯ ಮೂರ್ತಿಯನ್ನು ಮನದೊಳಗೆ ಸ್ಥಿರವಾಗಿ ನಿಲ್ಲಿಸಿ ದಾರಢ್ಯವಾದ ಭಕುತಿ ಮಾಡಬೇಕು. ಶೀತೋಷ್ಣ, ಚಳಿ ಬಿಸಿಲು ಮಳೆಗಳು, ಭಗವದ್ದತ್ತವೆಂದು ತಿಳಿದು ನಿಂದಿಸದೆ ಋತುಪ್ರೇರ್ಯನಾದ ಶ್ರೀಹರಿಯ ಶಕ್ತಿ ಎಂದು ಸಹನ ಮಾಡಬೇಕು. ಪೂಜಾಸಾಧನಕ್ಕೆ ಗಂಧ, ಜಲ, ಫಲ, ಪುಷ್ಪ ದೀಪಾದಿಗಳು ಬೇಕು.

೧) ಪೃಥ್ವಿಯಲ್ಲಿರುವ ಗಂಧವೇ ಶ್ರೀಹರಿಗೆ ಒಳ್ಳೆ ಸುವಾಸನೆಯುಕ್ತವಾದ ಗಂಧವು, ೨) ಅಪ್ಪು=ಜಲವೇ ರಸವು ನೀರು, ೩) ತೇಜದಲ್ಲಿರತಕ್ಕ ರೂಪವೇ ಶ್ರೀಹರಿಗೆ ದೀಪವು, ೪) ವಾಯು ಬೀಸಲು ಶ್ರೀಹರಿಗೆ ಚಾಮರ

ಗಳು, ೫) ಶಬ್ದ ಆಕಾಶಗುಣಧರ್ಮಗಳೆ ಶ್ರೀಹರಿಗೆ ವಾದ್ಯ ವೈಭವ ಗಳೆಂದು ಶ್ರೀಹರಿಗೆ ಸಮರ್ಪಿಸಿದರೆ ಶ್ರೀಹರಿಯು ಒಲಿವ.

ಈ ಪಂಚ ಮಹಾಭೂತಗಳಲ್ಲಿಪ್ಪ ಗುಣಧರ್ಮವೇ ದೇಹಗಳಲ್ಲಿ ಪಂಚ ಮಹಾಭೂತಗಳಲ್ಲಿಪ್ಪವು. ಇಂದ್ರಿಯಗಳ ಗೋಳಕ (ರಕ್ಷಕವಾದ ಕಂಣು, ಕಿವಿ, ನಾಶಕಾದಿ)ಗಳು. ರಮಾರಮಣನಿಗೆ ನಿಜಾಲಯಗಳು. (ಆಕಾಶ ಗುಣ ಧರ್ಮ) ಸಂಪ್ರಕ್ಷಾಲನವೆ ಸಮ್ಮಾರ್ಜನ. ಶುದ್ಧಿ ಮಾಡತಕ್ಕ ಗುಣ (ವಾಯುಗುಣ) ಪ್ರಜ್ವಲಿಸುವ ಇಂದ್ರಿಯಗಳೇ ದೀಪವು (ತೇಜಧರ್ಮ). ಮನಸ್ಸಿನಲ್ಲಿ ಪುಟ್ಟುವ ನಾನಾ ವಿಷಯಗಳ ಸಮ್ಮೇಳನವೆ ಮಂಚ, ಆ ವಿಷಯ ಸುಖ ಹೆಚ್ಚುವಿಕೆಯೆ ಸುಪ್ಪತ್ತಿಗೆ-ಗಾದಿ, ಆತ್ಮನಿವೇದನವು ಶ್ರೀಹರಿಗೆ ತನ್ನ ಪ್ರಾಣಕರಣ ದೇಹಾದಿಗಳನ್ನು ಅರ್ಪಿಸುವದೇ ಆತ್ಮನಿವೇದನ ರೂಪವಾದ ವಸ್ತ್ರಗಳು ದೇಹದಿಂದ ಆಗುವವ-ಪಾಪಕರ್ಮಗಳು ಶ್ರೀಹರಿಗೆ ಪಾದುಕೆಗಳು. ಅನುಲೇಪನ, ಸುಗಂಧಾದಿ ಪರಿಮಳ ಲೇಪನ=ಸತ್ಪುಣ್ಯವು, ಶಾಸ್ತ್ರಾಲಾಪನ ಮಾಡುವದೆ, ಶ್ರೀಹರಿಗೆ ತುಲಸಿದಳ ಅರ್ಪಣೆ, ಮನೋ ವೃತ್ತಿಗಳು=ಪುಷ್ಪಗಳು, ಕೋಪ=ಶಿಟ್ಟು, ದಾರಾಪುತ್ರಾದಿಗಳಲ್ಲಿ ಅವರರಾದ ಶಿಷ್ಯರುಗಳನ್ನು ಧರ್ಮಮಾರ್ಗಕ್ಕೆ ತರಲು ಮಾಡುವ ಶಿಟ್ಟು, ಇದು ಒಳ್ಳೇದು. (ಕಾಮಕ್ರೋಧಾದಿಗಳಲ್ಲ) ಇಂತಹ ಕೋಪವೆ ಶ್ರೀಹರಿಗೆ ಧೂಪ-ಅನನ್ಯ ಭಕ್ತಿ ಮಾಡುವದೇ ಶ್ರೀಹರಿಗೆ ನಾನಾಲಂಕಾರ ಭೂಷಣವು. ಸಕಲ ಇಂದ್ರಿಯಗಳಲ್ಲಿ ಮನವು ಮುಖ್ಯವಾಗಿ ವ್ಯಾಪಿಸಿದೆ. ಇಂಥ ಮನೋಗತ ವಾದ ಉತ್ತಮವಾದ ಸ್ಥಿರಚಿತ್ತವೇ ಸದ್ಬುದ್ಧಿ-ಶ್ರೀಹರಿಗೆ ಛತ್ರರೂಪವಾದುದು. ಸುಜ್ಞಾನವೇ ದೀಪವು, ಶ್ರೀಹರಿಯ ಅನಂತಗುಣ ಕಥನಗಳೇ ಆರತಿಗಳು. ಮತ್ತು ಕಾಯಾ, ವಾಚಾ ಮನಸ್ಸಿಂದಾಗುವ ಎಲ್ಲ ಕ್ರಿಯೆಗಳು, ಶ್ರೀಹರಿಗೆ ಪ್ರದಕ್ಷಣೆ, ಎಂದು ಈ ಪ್ರಕಾರ ಸರ್ವತ್ರ ವ್ಯಾಪಕನಾದ ಶ್ರೀಹರಿಗೆ ಅರ್ಪಿಸ ಬೇಕು. ನಿತ್ಯ ಆನಂದಪಡಬೇಕು. ಇವೆಲ್ಲ ಪೂಜಾ ಸಾಧನಗಳ ಬಗೆ ಗುರುಗಳಿಂದರಿತು, ಅರ್ಪಿಸಿ, ಅನುಭವಕ್ಕೆ ತರಬೇಕು. ಇದನ್ನು ತಿಳಿದ ವರೆ ಬುಧರು. ಪಾಮರ-ಪಾಪಿಷ್ಟ ಅಧಮ ಜನರಿಗೆ ಇದು ಪೇಳಿದರೆ ತಿಳಿಯದು. ಧರ್ಮಾರ್ಥ ಕಾಮ ಮೋಕ್ಷ ಈ ನಾಲ್ಕು ಬಗೆಯ ಪುರುಷಾರ್ಥ ಬಯಸುವವರಿಗೆ ಇದರ ವಿನಾ ಹದಿನಾಲ್ಕು ಲೋಕದಲ್ಲಿ ಯಾವ ಉಪಾಯ

ವಿಲ್ಲ. ಸಕಲ ಶಾಸ್ತ್ರದಲ್ಲಿ ಪೇಳಿದಂತೆ ಸಕಲ ವಿಷಯ ಇಂದ್ರಿಯಗಳಲ್ಲಿ ವ್ಯಾಪ್ತನಾಗಿ, ತೇಜಃಪುಂಜನಾಗಿ ಗಾರಾಜಿಸುವ ಹರಿಗೆ ಸರ್ವ ಸಮರ್ಪಣೆ ಎಂಬುದು. ಇದೆ ಮಹಾ ಪೂಜಾ, ಇದೇ ಸದುಪಾಯ, ದೊಡ್ಡ ಸಾಮ್ರಾಜ್ಯ ಗಳಿಸುವಿಕೆ.

ಇನ್ನು ಅಧ್ಯಾತ್ಮ ಯಜ್ಞ ಕ್ರಮವನ್ನು ಇವೇ ಪೂಜಾದಿಗಳಿಂದ ಮಾಡುವ ಬಗೆ. ಕರುಣಿಗಳಾದ ದಾಸಾರಾಯರು ಪೇಳುತ್ತಾರೆ. ಪ್ರಸಿದ್ಧ ಯಜ್ಞಕ್ಕೆ ಕುಂಡ, ಸಮಿಧೆ, ಅಗ್ನಿ, ಗಾಳಿ, ಹವಿಸ್ಸು ಇತ್ಯಾದಿಗಳು ಬೇಕಾದಂತೆ ಈ ಅಧ್ಯಾತ್ಮ ಯಜ್ಞದಲ್ಲಿ ದೇಹದಲ್ಲಿಪ್ಪ ಇಂದ್ರಿಯ ರಕ್ಷಣಾರ್ಥ ವಾಗಿರುವ ಮೇಲ್ಕಾಣಿಸುವ, ಶ್ರೋತ್ರಾದಿ ಹತ್ತು ೧) ಗೋಳಕಗಳು, ಕುಂಡ, ೨) ವಿಷಯಗಳೇ=ಸಮಿಧಿ ಕಟ್ಟಿಗೆ, ೩) ಯತ್ನವೆ=ಗಾಳಿ, ೪) ಕಾಮವೇ=ಧೂಮ ಹೊಗೆ, ವಿಷಯ ಸನ್ನಿಧಾನವೆ=ಅರ್ಚಿ=ಅಗ್ನಿ ಜ್ವಾಲೆಗಳು, ೫) ಸಮ್ಮೇಳನವೇ ಕೂಡುವದೇ=ಅಗ್ನಿ ಕಿಡಿಗಳು, ಊಳಿಗನ ಕೆಲಸ ಸೇವೆಯು ಆನಂದವು, ಈ ಅಧ್ಯಾತ್ಮ ಯಜ್ಞದಲ್ಲಿ ತತ್ಕಾಲ ಮಾತು ಗಳು=ಮಂತ್ರಗಳು ಇದೇ ಮಂತ್ರಾಧ್ಯಾತ್ಮ ಯಜ್ಞ, ಅವ್ಯಕ್ತ, ಅನಿರುದ್ಧಾದಿ ಶರೀರ ಉತ್ಪತ್ತಿಕಾಲ ಶ್ರೀಹರಿ ರಮೆಯೊಡನೆ ಕ್ರೀಡಿಸುವ ಬಗೆಯನರಿತು ಅರ್ಪಿಸುವ ವಿವರವನ್ನು ಸೂಕ್ಷ್ಮದಿಂದ ತಿಳಿಸಿದ್ದಾರೆ.

ಮುಂದೆ **ದೇಹವೇ ಶ್ರೀಹರಿಯ ಪಟ್ಟಣ.** ಅದರಲ್ಲಿಪ್ಪ ನಾನಾ ವಿಧ ವಸ್ತುಗಳನ್ನು ಶ್ರೀಹರಿಗೆ ಅರ್ಪಿಸುವ ಕ್ರಮ ವಿವರಿಸಿದ್ದಾರೆ.

**ದೇಹವೇ ಶ್ರೀಹರಿಗೆ ಪಟ್ಟಣ :** ಇದಕ್ಕೆ ನಾಲ್ಕು ಕಡಿಗೆ ನಾಲ್ಕು ಬಾಗಿಲಗಳು ೧) ಪೂರ್ವ ದ್ವಾರಗಳು, ಕಣ್ಣು-ಮೂಗು, ೨) ವದನ ಮುಖ ಉತ್ತರ ದ್ವಾರ, ೩) ಶ್ರೋತ್ರಗಳು ಕಿವಿಗಳು, ಉತ್ತರ ಬಾಗಿಲುಗಳು, ೪) ಗುದ-ಉಪಸ್ಥಗಳೆಗಡು, ಪಶ್ಚಿಮ ದ್ವಾರಗಳು. ನಾಡಿಗತ ೬ ಕಮಲ ಗಳೇ ಶ್ರೀಹರಿಯ ಆವಾಸಕ್ಕೆ ಸದನ (ಮನೆಯು). ಹೃದಯವೇ=ದೇಸರು ಕೂಡುವ ಮಂಟಪ. ಸತ್ವ ರಜ ತಮೋ ಗುಣಗಳೇ ಮಂಟಪಕ್ಕೆ ಮೂರು ಕಲಶಗಳು. ಪಟ್ಟಣಕ್ಕೆ ಏಳು ಸುತ್ತಿನ ಕೋಟೆಗಳೆ ದೇಹದಲ್ಲಿರುವ ತ್ವಕ್, ಚರ್ಮಾದಿ ೭ ಧಾತುಗಳು ಆವರ್ಕವಾಗಿವೆ. ಉಪಮಾರ್ಗಗಳೆ ನಾಡಿಗಳು, ಎಂಟು ಮದಗಳೇ ಎಂಟು ಆನೆಗಳು. ಸುಷುಮ್ನಾ ನಾಡಿಯೇ ರಾಜ

ಮಾರ್ಗ. ಪಟ್ಟಣದಲ್ಲಿ ಅಲ್ಲಲ್ಲಿ ವನಗಳು ಶೋಭಿಸುವಂತೆ ದೇಹದಲ್ಲಿಪ್ಪ ರೋಮಾವಳಿಗಳೇ ವನಗಳು. ಪಟ್ಟಣ ರಕ್ಷಣಕ್ಕೆ ಪಹರೆ ಕಾಯುವವರಂತೆ ಈ ದೇಹವೆಂಬ ಪಟ್ಟಣದಲ್ಲಿ ಪ್ರಾಣದೇವರು ತಳವಾರ=ಕಾವಲುಗಾರನಾಗಿ ಹಗಲುರಾತ್ರಿ ಶ್ರೀಹರಿಯ ಪಟ್ಟಣಕ್ಕೆ ಪಹರೆ ತಿರುಗುತ್ತ ತಮೋಗುಣಾಭಿವೃದ್ಧಿಗಳೆಂಬ ಕಳ್ಳರನ್ನು ನಿತ್ಯದಲ್ಲಿ ಸಂಹರಿಸುತ್ತ, ಚೋರರ ಉಪದ್ರವ ಆಗದಂತೆ ರಕ್ಷಣೆ ಮಾಡುವರು.

ಸೂರ್ಯ ಚಂದ್ರಾದಿಗಳೇ ಈ ಪಟ್ಟಣಕ್ಕೆ ದ್ವಾರಪಾಲಕರಾಗಿಹರು. ನಿತ್ಯನೂತನವಾದ ಮನೋವೃತ್ತಿ ಬಯಕೆಗಳೆ ಪದಾತಿ-ಕಾಲಾಳುಗಳು. ಇಂದ್ರಿಯಾದಿಗಳಿಂದ ಅನುಭವಿಪ ವಿಷಯಗಳೇ ಪಟ್ಟಣಕ್ಕೆ ಬರುವ ಪಸಾರ (ವ್ಯಾಪಾರಕ್ಕೆ ತರುವ ಪದಾರ್ಥಗಳ ಮೂಟೆ ಗಂಟುಗಳು). ದೇಹಗತನಾದ ಜೀವನೇ=ಸುವರ್ತಕ, ಸಮೀಚೀನವಾಗಿ ವ್ಯಾಪಾರ ಮಾಡುವ ವರ್ತಕನು. ಪಟ್ಟಣದಲ್ಲಿ ಬರುವ-ಹೋಗುವ ವಸ್ತುಗಳಿಗೆ ಕರನಿರ್ಬಂಧದಂತೆ ದೇಹವೆಂಬ ಪಟ್ಟಣದಲ್ಲಿ ಸುಕರ್ಮ-ದುಷ್ಕರ್ಮಗಳೆಂಬೋ ಕಪ್ಪಗಳನ್ನು ಸಕಲ ಸಮರ್ಪಣಾರೂಪ ಕಾಣಿಕೆಗಳನ್ನು ಶ್ರೀಹರಿಯು ರಾಜನಾಗಿ ಕೈಕೊಳ್ಳುತ್ತಾನೆ.

ಇನ್ನು ಪಟ್ಟಣದಲ್ಲಿ ರಾಜನ ಅರಮನೆ ಇರುವಂತೆ ದೇಹಾಖ್ಯ ಪಟ್ಟಣಕ್ಕೆ ಹಿಂದೆ ಹೇಳಿದಂತೆ ಹೃದಯವೇ ಮಂಟಪ (ಅರಮನೆ). ಹತ್ತು ಇಂದ್ರಿಯಗಳೇ ಕನ್ನಡಿಯ ಸಾಲು (ಆಯನಾ ಮಹಲ್). ಇಂದ್ರಿಯ ಜನ್ಯ ವ್ಯಾಪಾರವೇ ಶ್ರೀಹರಿಯ ಈಕ್ಷಣಕ್ಕೆ ಕನ್ನಡಿ. ದೋಷದೂರನಾದ ಶ್ರೀಹರಿಯ ವಿಹಾರಕ್ಕೆ ಜೀವನ ಚಿತ್ತವೆಂಬುವದೇ ಅಲಂಕಾರಭರಿತವಾದ ಚಿತ್ರವಿಚಿತ್ರ ಮಂಟಪ. ರಾಜನು ರಾಜಮಂಟಪದಲ್ಲಿ ಕುಳಿತಾಗ್ಗೆ ಚಾಮರಗಳು ಬೀಸುವದೆ ಜೀವನಿಂದ ಬಿಡುವ ಶ್ವಾಸೋಚ್ಛ್ವಾಸಗಳು, ಬುದ್ಧಿಯೇ=ವಿಲಾಸಿನಿ ಸತಿಯು, ದಾಮೋದರನಾದ ಶ್ರೀಹರಿಗೆ ಸಾಷ್ಟಾಂಗ ಪ್ರಣಾಮಗಳೇ ಶಯನಗಳು ಎಂದು ಚಿಂತಿಸಬೇಕು.

ಪಟ್ಟಣದ ಮಹಾದ್ವಾರಕ್ಕೆ ತಳಿರು ತೋರಣಗಳಿದ್ದಂತೆ ದೇಹಾಖ್ಯ ಪಟ್ಟಣ ಮಹಾದ್ವಾರವೆನಿಪ ವದನಕ್ಕೆ ಒಪ್ಪುವ ಮೀಶಿಗಳೇ ಶೋಭಿಸುವ ತೋರಣಗಳು. ಕೇಶಗಳೆ ಶಿರೋಕೂದಲುಗಳು ಶೋಭಿಸುವ ಪತಾಕೆಗಳು. ೧) ಅಂಘ್ರಿ ಪಾದಗಳಾರಂಭಿಸಿ, ೨) ಜಂಘೆ ಮೊಣಕಾಲು, ೩) ತೊಡೆಗಳು,

೪) ಮಧ್ಯ ಉದರ, ೫) ಶಿರವು. ರಾಜಗೃಹಕ್ಕೆ ಉಪ್ಪರಿಗೆಗಳಿರುವಂತೆ ದೇಹಕ್ಕೆ ಇವು ಉಪ್ಪರಿಗೆಗಳು. ರಾಜಗೃಹಕ್ಕೆ ಅಲಂಕಾರಯುಕ್ತವಾಗಿರುವ ಕೋಣೆಗಳಿರುವಂತೆ, ದೇಹದಲ್ಲಿರುವ ಆನಂದಮಯಾದಿ ಕೋಶಗಳೇ ಐದು ಖೋಲಿಗಳೆಂದು ಚಿಂತಿಸಿ ಶ್ರೀಹರಿಗೆ ಸಮರ್ಪಿಸಬೇಕು.

ಪಟ್ಟಣದಲ್ಲಿಪ್ಪ ಮಹಾರಾಜಾಧಿರಾಜನ ವಿಹಾರ ಉತ್ಸವಕ್ಕೆ ರಥ ಬೇಕು. ಬಾಹಿರ ರಥದಂತೆ ಈ ಶರೀರವೇ ಶ್ರೀಹರಿಗೆ ರಥವಾಗಿರುವದು. ಸುವಾಸಗಳು=ಸಮೀಚೀನವಾದ ನಿಶಾನಿ ಪತಾಕೆಗಳು, ದ್ವಾದಶ ಪುಂಡ್ರಗಳು ನಾಮ ಮುದ್ರಾದಿ ವಸನಗಳು, ಧ್ವಜವು. ಚಿತ್ತವೇ=ಸಿಂಹಾಸನ, ಸುಬುದ್ಧಿ ಸನ್ಮನವೇ ರಥಕ್ಕೆ ಕಲಶ, ಮಹಾ ಸಮರ್ಥಾಶ್ವಗಳು=ದಶೇಂದ್ರಿಯ ಗಳು, ಈ ಅಶ್ವಗಳಿಗೆ ಹಗ್ಗಗಳು ಪಾಶವೆ ತ್ರಿಗುಣಾತ್ಮಕವಾದ ಪಾಶ-ಹಗ್ಗ. ಶುಭ-ಅಶುಭ ಕರ್ಮಗಳು ರಥಕ್ಕೆ ಎರಡು ಗಾಲಿಗಳು ಎಂದು ಚಿಂತಿಸಿ ದೇಹಾಖ್ಯ ರಥ ಶ್ರೀಹರಿಯ ಭೂವಿಹಾರಕ್ಕೆ ಸಾಧನವೆಂದು ಚಿಂತಿಸಬೇಕು.

ರಥಕ್ಕೆ ಸಾರಥಿ ಬೇಕು. ಈ ದೇಹಾಖ್ಯ ರಥಕ್ಕೆ ಶ್ವಾಸಕಾರ್ಯ ಆರಂಭಿಸಿ ಸಕಲ ಇಂದ್ರಿಯ ವ್ಯಾಪಾರ ನಡೆಸಲು, ಶ್ರೀ ಪ್ರಾಣದೇವರೇ ಸಾರಥಿಯಾಗಿರುವನು. ಶ್ರೀ ಭೂಸಮೇತನಾದ ಶ್ರೀಹರಿಯೇ (ರಥದಲ್ಲಿ ಕೂಡುವ, ಜೀವಾಂತರ್ಯಾಮಿಯಾಗಿರುವ ಅಂತರಾತ್ಮನೇ)ರಥಿಕನು ಎಂದು ಈ ಪ್ರಕಾರ ಪ್ರಕಾಶ ಸಂಹಿತೆ ಉಪನಿಷದಾದಿಗಳಲ್ಲಿ ಪೇಳಿರುವಂತೆ ದೇಹಾಖ್ಯ ರಥವನ್ನು ಶ್ರೀಹರಿಗೆ ಸಮರ್ಪಿಸು. ಈ ದೇಹವನ್ನು ಚಳಿಗಾಳಿ, ಮಳೆ ಬಿಸಲುಗಳಿಂದ ಪೋಷಣೆ ಮಾಡುವದು, ಸಂತತವಾಗಿ ದೇಹ ನಾನು ನನ್ನದು ಎಂಬ ದುರಭಿಮಾನವನ್ನು ಬಿಟ್ಟು ಈ ದೇಹವು ಶ್ರೀಹರಿಗೆ ಆವಾಸ ಸ್ಥಾನವಾದ ಪಟ್ಟಣ ರಥವೆಂದು ಸಮರ್ಪಿಸಬೇಕು.

ರಾಜರು ಭೂವಿಹಾರ ಮಾಡಿ, ಕ್ವಚಿತ್ ಕಾಲದಲ್ಲಿ ಜಲವಿಹಾರ ಮಾಡುತ್ತಾರೆ. ಜಲವಿಹಾರಕ್ಕೆ ನೌಕಾ ಬೇಕು. ಅದರಂತೆ ಭವವೆನಿಪ ಸಂಸಾರ ರೂಪವಾದ ವನಧಿ-ಸಮುದ್ರದಲ್ಲಿ ಕರ್ಮರೂಪ ಪ್ರವಾಹದಲ್ಲಿ ಸಂಚರಿಸುವ ದೇಹವೇ ಸುನಾವಿಯನ್ನು ಮಾಡು, ಸಂಸಾರ ಸಮುದ್ರವನ್ನು ದಾಟಿಸುವ ಅಂಬಿಗನು ಶ್ರೀಹರಿಯು. ಈ ಹರಿಯು ತನ್ನವರಾದ ಸಕಲ ತತ್ವೇಶರಿಂದ ಒಡಗೂಡಿ, ಶ್ರೀ ಲಕ್ಷ್ಮೀಪತಿಯಾದ ಶ್ರೀಹರಿಯು ಕ್ರೀಡಿಸುವ

ನೆಂದು ಚಿಂತಿಸಲು, ಪವನನ ಅಯ್ಯನು ನಾವಿಯು ಗಾಳಿಗೂಟವಾಗಿ ಹೋಗಲು ನಾವಿಗೆ ಪಟಕಟ್ಟಿರುವಂತೆ, ದೇಹಾಖ್ಯ ನಾವಿಗೆ ಪವನನು ಪಟ ರೂಪ. ಈ ಪಟವನ್ನು ತಿರುಗಿಸುವದು ಅಂಬಿಗನ ಸ್ವಾಧೀನವಾಗಿರುವುದು. ಇಂತಹ ಪವನ-ವಾಯುದೇವನ ಒಡೆಯನಾದ ಶ್ರೀಹರಿಯು ಭವವೆಂಬುವ ಸಮುದ್ರವನ್ನು ದಾಟಿಸಿ, ಪರಮ ಉತ್ತಮವಾದ ಮೋಕ್ಷಾದಿ ಸುಖವನ್ನು ಕೊಡುವನು. ಇದು ಶ್ರೀಹರಿಯ ಜಲವಿಹಾರ.

ಇನ್ನು ದೇಹವೇ ಆಪಣ-ಅಂಗಡಿಯು, ಆಲಯ-ಮನೆಯು ಆಗಿದೆ. ಅಂಗಡಿಯು ಮನೆಯಲ್ಲಿಪ್ಪ ಪದಾರ್ಥಗಳೇ, ಸ್ತ್ರೀ ಪುರಷರ ಇಂದ್ರಿಯ ವ್ಯಾಪಾರಗತ ಪದಾರ್ಥಗಳು, ಆಭರಣಾದಿಗಳು. ಮನೆಯ ಪ್ರಕಾಶಕ್ಕೆ ದೀಪ ಬೇಕು. ದೀಪಕ್ಕೆ ತೈಲ ಅಗ್ನಿಸ್ಪರ್ಶಬೇಕು. ಅಂದರೆ ದೀಪವು ಉರಿಯುವದು. ಇಂದ್ರಿಯಜನ್ಯ ವ್ಯಾಪಾರ ಪದಾರ್ಥಗಳನ್ನು ಪ್ರಕಾಶ ಮಾನವಾದ ಅಗ್ನಿಗತನಾದ ಭೃಗುರಾಮನಿಗೆ ಅವದಾನ ಆಹುತಿಗಳೆಂದು ಸ್ಮರಿಸುತ್ತಾ ನಿರ್ಭಯದಿ ರಾಜನೋಪಾದಿಯಲಿ ಸಂಚರಿಸುತ್ತಲಿರಬೇಕು.

ಈ ಪ್ರಕಾರ ಮಂತ್ರಯಜ್ಞ, ದೇಹವೇ ಪಟ್ಟಣ, ರಥ, ನಾವಿ, ಅರ್ಪಣ ಮನೆ, ಮುಂತಾದವುಗಳಲ್ಲಿಪ್ಪ ಹರಿಗೆ ಸಮರ್ಪಿಸುವ ವಿಚಾರವು, ಜೀವರ ಸ್ವರೂಪ ಗುಣ ಸ್ವಭಾವಾನುಸರಿಸಿ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ವರ್ಣದವರಾದ ತತ್ವೇಶರಲ್ಲಿ ಶ್ರೀಹರಿಯ ಕಾರ್ಯ ಚಿಂತಿಸಿ, ತತ್‌ಸಮರ್ಪಣಾ ಕ್ರಮವೂ ವರ್ಣಭೇದದಂತೆ ಪೇಳಿದ್ದಾರೆ. ಇದೇ ಶ್ರೀಹರಿಯ ವಿಭೂತಿ ರೂಪಗಳು. ಅನಿರುದ್ಧಾದಿ ಪಂಚರೂಪಗಳ ಪ್ರಾಮುಖ್ಯ ಕಾರ್ಯ.

ಇನ್ನು, ದೇಹ ಪಿಂಡಾಂಡದಂತೆ ಸಕಲ ಬ್ರಹ್ಮಾಂಡಗತ ವಸ್ತುಗಳನ್ನು ಶ್ರೀಹರಿಗೆ ಅರ್ಪಿಸುವ ಬಗೆ ಹೇಳುತ್ತಾರೆ. ಬ್ರಹ್ಮಾಂಡವೇ ಶ್ರೀ ವಿರಾಟ ರೂಪಿ ಹರಿಗೆ ಮಂಟಪ, ಮೇರು ಪರ್ವತವೇ ಶ್ರೀಹರಿಗೆ ಸಿಂಹಾಸನ. ಭಾಗೀರಥ್ಯಾದಿ ನದಿಗಳೇ ಶ್ರೀಹರಿಗೆ ಮಜ್ಜನ. ದಿಕ್ಕುಗಳೆಂಬ ವಸ್ತ್ರಗಳೇ ಶ್ರೀಹರಿಗೆ ಪೀತಾಂಬರಾದಿ ವಸ್ತ್ರಗಳು. ಬ್ರಹ್ಮಾಂಡದಲ್ಲಿರತಕ್ಕ ಆಕಾಶ ಗುಣಾತ್ಮಕ ಸರ್ವ ಶಬ್ದಗಳು, ಸಕಲ ಜೀವರ ನುಡಿಗಳೇ ಶ್ರೀಹರಿಗೆ ಮಂತ್ರಗಳು. ಭೂರುಹಜ-ಮರಗಳಲ್ಲಿ ಉತ್ಪನ್ನವಾಗುವ ಫಲಪುಷ್ಪಗಳೆ ಶ್ರೀಹರಿಗೆ ಹೂವು-ಕಾಯಿ. ಸಮೀರನೇ ಗಂಧ, ಚಂದ್ರ-ಸೂರ್ಯರೇ ದೀಪಗಳು ;

ಸಕಲ ನಕ್ಷತ್ರಗಳೇ ಶ್ರೀಹರಿಗೆ ಭೂಷಣಗಳೆಂದು ಅರ್ಪಿಸಲು, ಶ್ರೀಹರಿಯು ಕೈಕೊಂಡು ಮನ್ನಿಸುವ. ಇಂಥ ಸುಲಭೋಪಾಯದ ಪೂಜೆಯು, ಮನುಜರಿಂದ ಅಸಾಧ್ಯ. ದೇವತೆಗಳು ಇಂಥ ಸಮನ್ವಯ ವ್ಯತಿರೇಕ ಪೂಜೆಗಳನ್ನು ಮಾಡುವರೆಂಬ ಸುಜ್ಞಾನವು ಸಹ ಮಾನವರಿಗೆ ಯೋಗ್ಯತೆ ತಕ್ಕ ಸಾಧನವೆಂದು ಐತರೇಯ ಉಪನಿಷತ್ತಿನಲ್ಲಿ ಪೇಳಿರುವರು.

ಇಂತು ಅನಿರುದ್ಧಾದಿ ಪಂಚಪಂಚ ರೂಪಗಳ ವಿಭೂತಿಯನ್ನು ವರ್ಣಿಸಿ, ಉಪಸಂಹರಿಸುತ್ತಾರೆ. ಈ ಸಂಧಿಯಲ್ಲಿ ಅನೇಕ ಉಪನಿಷತ್ತಿನ ರಹಸ್ಯೋಪಾಸನೆ ಕ್ರಮವನ್ನು ಅಧಿಕಾರಾನುಸರಿಸಿ ವರ್ಣಿಸಿದ ಕರುಣಾಳುಗಳ ಚರಣಕ್ಕೆ ಶಿರಬಾಗಲಿ.

ಸರ್ವತಂತ್ರ ಸ್ವತಂತ್ರ, ನಿರ್ದೋಷ, ಜ್ಞಾನಾನಂದ ಪರಿಪೂರ್ಣನಾದ ಕಾರಣ ಸರ್ವೋತ್ತಮನು, ವೀತಭಯನಾಮ, ಭಯರಹಿತನಾದ ಮೂಲರೂಪಿ ನಾರಾಯಣನು ಚತುಃಪಾತು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರನ್ನು ರಕ್ಷಿಪ ಶ್ರೀ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಈ ನಾಲ್ಕು ವಿಭೂತಿ ರೂಪಗಳಿಂದ ರಕ್ಷಿಸುತ್ತ, ಬ್ರಾಹ್ಮಣಾದಿ ಚತುರ್ವರ್ಣದ ಆಯಾ ಜಾತಿ ಧರ್ಮಕರ್ಮಗಳ ತಾನೇ ಮಾಡಿಸುತ್ತ ಸಕಲ ಚೇತನರ ಅಂತರಂಗ ಬಹಿರದಲ್ಲಿ ಓತಪ್ರೋತನಾಗಿ ರಕ್ಷಿಸುತ್ತ, ಎಲ್ಲರಿಗೆ ಧರ್ಮಾರ್ಥ ಕಾಮಾದಿಗಳನ್ನು ಕೊಡುತ್ತಿಹನು. ಈ ಪ್ರಕಾರ ತನ್ನ ವಿಭೂತಿಯಿಂದ ನಾಲ್ಕು ವರ್ಗದವರನ್ನು ಉತ್ಪನ್ನ ಮಾಡುವಂತೆ ಬ್ರಹ್ಮಾಂಡದಲ್ಲಿಯೂ, ಇದೇ ಪ್ರಕಾರ ಕಾರ್ಯ ಮಾಡುವನೆಂದು ಅರಿತವನೇ ಜ್ಞಾನಿಯು.

ಇಂಥ ಪರಮಾತ್ಮನು ಅನಂತಗುಣ ಪರಿಪೂರ್ಣ ಶುಭನಾಮನೆಂದು ಸ್ತೋತ್ರಗೈಯ್ಯುತ್ತಾರೆ. ಹೇ ಶ್ರೀ ಹರಿಯೇ ನೀನು ಆದಿ ಉತ್ಪತ್ತಿ ನಾಶ ಅಭಾವನಾದುದರಿಂದ ನಿಧನನೆಂದೂ, ಬ್ರಹ್ಮಾದಿಗಳಿಗೆ ಅವ್ಯಯ ಜ್ಞಾನ ಧನ ಕೊಡುವನಾದುದರಿಂದ ಧನದನೆಂತಲೂ, ವಿಶೇಷವಾಗಿ ಸರ್ವ ಜಗತ್ತನ್ನು ಪೋಷಣ ಕರ್ತೃವಾದುದರಿಂದ ವಿಧಾತನೆಂತಲೂ, ನಿನಗೆ ನಿನಗಿಂತ ಅಧಿಕರಾರಿಲ್ಲದ ಕಾರಣ ವಿಗತಾಭ್ಯಧಿಕನೆಂತಲೂ, ಸಂಸಾರಚಕ್ರ ಸಮ್ಯಗಾವರ್ತನ ಮಾಡುವದರಿಂದ ಸಮವರ್ತಿ, ಅಥವಾ ಸರ್ವರಲ್ಲಿ ಸಮನಾಗಿ ಒಂದೆ ಪ್ರಕಾರನಾಗಿರುವದರಿಂದ ಸಮವರ್ತಿ ಎಂತಲೂ, ಸಾಮವೇದಾದಿಗಳಿಂದ

ಸ್ತುತ್ಯನಾದುದರಿಂದ, ಸಾಮಗನೆಂತಲೂ, ಸದಾ ಸರ್ವಕಾಲ ದೇವತೆಗಳು ಮೂವತ್ತು ವರ್ಷ ವಯಸ್ಸಿನ ದೇಹಕಾಂತಿಯುತರಾದುದರಿಂದ, ತ್ರಿದಶರೆಂತ ಪೆಸರುಳ್ಳ ದೇವತೆಗಳಿಂದ ಸಂಪೂಜ್ಯನೂ, ತ್ರಿಕಕುದ್ಧಾಮ; ಶ್ವೇತದ್ವೀಪ, ಅನಂತಾಸನ ವೈಕುಂಠಾದಿ ಲೋಕಗಳು ಬಹಿಬ್ರಹ್ಮಾಂಡದಿ ಬೆಳಗುವ ಮೂರು ಸ್ಥಾನಗಳಲ್ಲಿ ನಿತ್ಯ ವಿರಾಜಮಾನನಾಗಿರುವನು. ಇವೇ ಮೊದಲಾಗಿ ಅನಂತ ಶುಭನಾಮವುಳ್ಳ ಹರಿಯೇ, ಮಧುನಾಮಕ ದೈತ್ಯನನ್ನು ಸಂಹರಿಸಿ ದುದರಿಂದ ಮಧುಸೂದನನೆಂತಲೂ, ಯಜ್ಞಭೋಕ್ತೃವಾದ ಅಗ್ನ್ಯಂತರ್ಗತ ಪರಶುರಾಮನೇ, ಜ್ಞಾನಪ್ರದನಾದ ಹಯಮುಖನು. ಆದಿಯಿಂದ ಆರಂಭಿಸಿ, ಸರ್ವ ಪದಾರ್ಥಗಳಲ್ಲಿ ತುಂಬಿಕೊಂಡು ವ್ಯಾಪ್ತನಾಗಿಹನೆಂದು ಈ ಎಲ್ಲ ವಿಭೂತಿ ರೂಪಗಳ ಕಾರ್ಯವನ್ನು ಜ್ಞಾನಿಗಳಿಂದ ಅರಿತು, ಬಿಂಬನಲ್ಲಿ ಐಕ್ಯ ಚಿಂತಿಸಬೇಕು. ಶ್ರೀಹರಿಯು ಜೀವನಿಗೆ ಮುಖ್ಯ ಬಿಂಬ-ಜೀವರೆಲ್ಲರು ಪ್ರತಿ ಬಿಂಬರು. ಅದರಂತೆಯೇ ಬ್ರಹ್ಮಾಂಡದಲ್ಲಿ ಸರ್ವತ್ರ ನಿಯಾಮಕ ವ್ಯಾಪ್ತ ನಾದುದರಿಂದ, ಕನ್ನಡಿಯನ್ನು ತನ್ನ ಕೈಲಿ ಹಿಡಿದು ನೋಡಲು, ತನ್ನ ಮುಖಾದಿ ಅವಯವಗಳು, ಸವ್ಯ-ಬಲಕ್ಕಾಗಿರುವವು. ಅಪಸವ್ಯ-ಎಡಕ್ಕೆ ತೋರುವಂತೆ ಅನಿರುದ್ಧನಾಮಕ ಶ್ರೀಹರಿಗೆ ಈ ಜಗತ್ತು ಭಿನ್ನ-ಬೇರೆಯಾಗಿ ತೋರುವದು. ಏಕೆಂದರೆ, ತತ್ ಪದಾರ್ಥ ರೂಪ ತಾನಾಗಿ ಇದ್ದರೂ, ಆಯಾ ಜಡಜೀವರಲ್ಲಿಪ್ಪನಾದರೂ ಭಗವಂತನಿಂದ ಜಗತ್ತು ಪುಟ್ಟಿದ ಕಾರಣ, ಈ ಸಕಲ ಜಗತ್ತು ಶ್ರೀಹರಿಗೆ ಪ್ರತಿಬಿಂಬವಾಗಿರುವುದು ಮತ್ತು ಪ್ರಳಯ ಕಾಲದಲ್ಲಿ ಅನಿರುದ್ಧ ನಾಮಕಗೆ ಅನ್ನವಾಗಿರುವದೆಂದು ಶ್ರುತಿಗಳು ಹೇಳು ತ್ತವೆ. ಇಂಥ ಅನ್ನಮಯನಾದ ಶ್ರೀಹರಿಗೆ ಸಕಲ ಜಗತ್ತು ಪ್ರತಿಬಿಂಬ ವಾಗಿದೆ ಎಂದು ತಿಳಿದು, ಜಗದಂತಃ ಪ್ರತಿಯಾದ ಶ್ರೀಹರಿಯು ಭಿನ್ನನು, ಜಗತ್ತಿಗೆ ಸ್ವಾಮಿ ನಿಯಾಮಕನೆಂದೂ ತಿಳಿದು ಪೂಜಿಸಲು ಪೂಜಾ ಕೈಕೊಂಬನು.

ಇನ್ನು ಜಗತ್ತಿನಲ್ಲಿ ಬ್ರಹ್ಮಾದಿ ಸಕಲ ಜೀವರನ್ನು ಪುಟ್ಟಿಸಿರುವನು. ಈ ಎಲ್ಲ ಜೀವರಲ್ಲಿ ತರತಮ ನೀಚೋಚ್ಚ ಭಾವವೆಂಬ ಸುಜ್ಞಾನ ದೃಢೀಕರಿಸ ಬೇಕು. ಉತ್ತಮರು ಅವರರಾದ ಜೀವರಿಗೆ ಬಿಂಬರೆನಿಸುತ್ತಾರೆ. ಸ್ವಾವರರು ಸ್ವೋತ್ತಮರ ಅಧೀನರಾಗಿರುವುದರಿಂದ ಪ್ರತಿಬಿಂಬರೆನಿಸುತ್ತಾರೆ. ಈ

ನಿಯಮದಿಂದ ತನ್ನಿಂದ ಸರ್ವ ಉತ್ತಮರು ಬಿಂಬರು. ಆದರೆ, ಇಂತಹ ಉತ್ತಮೋತ್ತಮ ಬಿಂಬರೊಳಗೆ ಕೇವಲ ಪರಮ ಮುಖ್ಯನಾಗಿ ಶ್ರೀಹರಿಯೇ ಬಿಂಬನೆನಿಸುವ. ಶ್ರೀಹರಿಯನ್ನೇ ಸಂಭ್ರಮ ಪರಮ ಉತ್ಸಾಹದಿಂದ ನೋಡುತ್ತ, ಉಂಬುವುದು, ಉಡುವುದು, ಕೊಡುವುದು, ಎಲ್ಲವೂ ಶ್ರೀ ಕಮಲ ಪತ್ರನೇತ್ರನಾದ ಶ್ರೀ ಹರಿಯಂಘ್ರಿಗೆ ಪೂಜೆಗಳೆಂದು ಸಮರ್ಪಿಸಿ ನಲಿದಾಡಿ ಕುಣಿದು ಹಾಡಿ ಪಾಡು.

### ಸರ್ವಸಮರ್ಪಣೋಪಾಯ

ಪೂಜಾ ಸಾಧನ ದ್ರವ್ಯಶ್ರಮ ಬಟ್ಟು ತರಬೇಕಾದುದಿಲ್ಲ. ನದಿಯ ನೀರನ್ನು ನದಿಗೆ ಎರೆವಂತೆ ನದಿಯ ಜಲದಿಂದ, ನದಿಗೆ ಅರ್ಘ್ಯಾದಿಗಳನ್ನು ಕೊಡುವಂತೆ; ಭಗವದತ್ತ ಧರ್ಮಗಳನ್ನು ಆ ಫಲರೂಪವಾದ ಕರ್ಮಗಳನ್ನು ಸಮುದ್ರಶಯನನಾದ ಶ್ರೀಹರಿಗೆ ನಿರಂತರ ಅರ್ಪಿಸಿ "ವ್ಯಾವೃತ್ತ ನೀನಾಗಿ" ನಾನು ಶ್ರೀಹರಿಗೆ ದಾಸನು. ಸದಾಭಿನ್ನನು ಎಂಬ ನಿಶ್ಚಯ ಜ್ಞಾನದಿಂದ ಸಂತೋಷ ಮನಸ್ಸಿನಿಂದ ಶ್ರೀಹರಿಯೇ ಬಿಂಬ ಸರ್ವಕರ್ತಾ ಕಾರಯಿತಾ ಎಂಬ ದಾರ್ಢ್ಯದಿಂದ ವಿಧಿನಿಷೇಧಾದಿಗಳಿಗೆ ಒಳಗಾಗಬೇಡ. ಅಡಿಗೆಯವನ ಕೈಲಿರುವ ಸವಟು, ಪಾಚಕನ ಅಧೀನವಾಗಿ ಯಾವ ಪದಾರ್ಥಗಳಲ್ಲಿ ಸವಟು ಹಾಕಿ ತಿರಿವಿದರೂ ಪದಾರ್ಥಗಳನ್ನು ಕಲಿಸಿ ಸಮರಸ ಬೇರೆ ಮಾಡುವ ಗುಣವುಳ್ಳದ್ದು. ದರ್ವಿ, ಇದ್ದರಾದರೂ, ನಾನು ಸದಾ ಭಗವಂತನ ಅಧೀನನು, ಪದುಮನಾಭರೂಪಿ ಪರಮಾತ್ಮನು ಎನ್ನಿಂದ ಸಕಲ ಕರ್ಮಗಳನ್ನು ಮಾಡಿಸುವನೆಂದು, ಸಕಲ ಕರ್ಮಗಳಲ್ಲಿ ಮರೆಯದೇ ನೆನವುತಿರಬೇಕು.

ನದ್ಯಾದಿ ಉದಕಗಳೂ, ಕಾಲಗತಿಯೂ ಸ್ವಾಭಾವಿಕವಾಗಿ ತಮ್ಮಿಂದ ತಾವೆ ಪ್ರವಹಿಸುತ್ತ ಹೋಗುತ್ತಲಿವೆ, ಇದನ್ನು ತಿಳಿದು ನೋಡುತ್ತೇವೆ. ಒಮ್ಮೆ ಅಜ್ಞಾನದಿಂದ ತಿಳಿಯುವದೇ ಇಲ್ಲ. ಆದರೆ ಕಾಲಗತಿ ತಿಳಿದು, ಪುಣ್ಯಕಾಲಗಳಲ್ಲಿ-ನದ್ಯಾದಿಗಳಲ್ಲಿ ಸ್ನಾನಪಾನಾದಿಗಳು ಮಾಡುವುದರಿಂದ ಸುಖವನ್ನು ಕೊಡುವಂತೆ, ನಾವು ಭಗವತ್ಕರ್ತೃತ್ವ ತಿಳಿಯದಿದ್ದರೂ, ಶ್ರೀ ಬಿಂಬನಾದ ಹರಿಯು ಎಮ್ಮೊಳಗೆ ಇದ್ದು, ಸಕಲ ಕರ್ಮಗಳನ್ನು ಮಾಡಿಸಿ, ತನ್ನ ಶುಭರಸಗಳನ್ನು ಉಣುವನು. ಇಂತಹ ಸಮೀಚೀನ ಜ್ಞಾನ

ಹರಿಯಿಂದ ಉದಯಿಸಲು, ಭಗವದ್ದತ್ತ ಶುಭಾಶುಭ ಕರ್ಮಗಳನ್ನು ತನಗೆ ಅರ್ಪಿಸಲು, ಚಿತ್ ಸ್ವರೂಪಸುಖ ವ್ಯಕ್ತಿಮಾಡಿ, ಸಂತೈಪ=ಮೋಕ್ಷಾನಂದ ವನ್ನು ಕೊಟ್ಟು ರಕ್ಷಿಸುವ. ಈ ಕಾರಣದಿಂದ ಸಂತತ ಏನು ಮಾಡುವ ಸಕಲ ವಿಧಿ ನಿಷೇಧ ಕರ್ಮಗಳನ್ನು ಅರ್ಪಿಸುವ ಬಗೆಯನ್ನು ಶ್ರೀ ಲಕ್ಷ್ಮೀ ನಿವಾಸನಿಗೆ ಅರ್ಪಿಸತಕ್ಕ, ಅನುಸಂಧಾನವನ್ನು ಅರಿತು ಧ್ಯಾನಪೂರ್ವಕವಾಗಿ ಸಂದೇಹಮಾಡದೇ ಶ್ರೀ ಬಿಂಬನಾದ ಹರಿಗೆ ಅರ್ಪಿಸಲು, ಮಾನನಿಧಿ= ಗೌರವ ಪೂರಿತನು, ಕೈಕೊಂಡು ಸುಖವನ್ನು ಕೊಟ್ಟು, ಅನತ=ಶರಣಾಗತ ರನ್ನು ರಕ್ಷಿಸುತ್ತಾನೆ. ಹೇಗೆಂದರೆ, ಗೋವುಗಳು ತೃಣ ಹುಲ್ಲು ಮೆದ್ದು, ನೀರು ಕುಡಿದು, ಹಾಲು ಕರೆಯುವಂತೆ, ಶ್ರೀಹರಿಯು ನಾವಿತ್ತ ಶುಭಾಶುಭ ಕರ್ಮ ಫಲವನ್ನು ಸ್ವೀಕರಿಸಿ ಹಾಲಿನಂತೆ ಸುಖಕೊಡುವ, ನಿಜವಾದ ಆನಂದ ಕೊಡುವನು. ಪ್ರಸಿದ್ಧ ಗೋವಿನ ಗುಣಧರ್ಮ ಪ್ರವರ್ತಕನು, ಶ್ರೀ ಗೋವಿಂದನೆ ಆಗಿರುವನು. ಇಂತು ಜೀವರ ಸ್ವಭಾವ ಕರ್ಮ-ಧರ್ಮ-ಜಡ ಪ್ರವರ್ತಿ ವಿಭೂತಿ ರೂಪಗಳನ್ನು ಇಲ್ಲಿಯ ಪರಿಯಂತರವಾಗಿ ಹೇಳಿದರು.

ಮುಂದೆ ದೇಶದಲ್ಲಿ ವ್ಯಾಪಿಸಿದ್ದ ಶ್ರೀಹರಿಯ ದೇಶ ಪ್ರವರ್ತಿಗುಣ ಧರ್ಮಗಳನ್ನು ಪೇಳುತ್ತಾರೆ. ದಿಶಾಗಳು ನಾಲ್ಕು-ವಿದಿಶೆಗಳು ನಾಲ್ಕು ಹೀಗೆ ಎಂಟೂ ದಿಕ್ಕುಗಳಿಗೆ ಅಭಿಮಾನಿಗಳಾದ ೧) ಪೂರ್ವಕ್ಕೆ ಇಂದ್ರ, ೨) ಅಗ್ನಿ ದಿಕ್ಕಿಗೆ ಅಗ್ನಿ, ೩) ದಕ್ಷಿಣಕ್ಕೆ ಯಮ, ೪) ಶಾರ್ವರೀ ಚರ=ರಾತ್ರಿ ಸಂಚರಿಸುವ ನಿಋುಋುತಿ ವಾಯ್ವಕ್ಕೆ ಪ್ರವಾಹ ವಾಯು, ಉತ್ತರಕ್ಕೆ ಚಂದ್ರ, ಕುಬೇರ, ಈಶಾನ್ಯಕ್ಕೆ ಪಾರ್ವತಿ ಪತಿ. ಈ ಅಷ್ಟದಿಕ್ಪಾಲರಿಗೆ ಪ್ರೇರಕನಾಗಿ ದೇಶ ಗುಣ ಧರ್ಮಗಳ ಪ್ರವರ್ತಕನು, ಹಂಸನಾಮಕ ಪರಮಾತ್ಮನು ತನ್ನ ವಿಭೂತಿಯಿಂದ ಸರ್ವ ಕಾಲಗಳಲ್ಲಿ ಅಂದರೇ ಕಾಲಕ್ಕೂ ದೇಶಕ್ಕೂ ಅತಿ ಸಂಬಂಧ ಪೂವಿನೊಳು ಪರಿಮಳ ವ್ಯಾಪಿಸಿದಂತಿರುವ ಕಾರಣ, ನಿತ್ಯದಲ್ಲಿ ಸಕಲ ದೋಷಗಳನ್ನು ದೂರಮಾಡಿ, ಸಾರಭೂತವಾದ ಶುಭರಸ ಸ್ವೀಕರಿ ಸುವ ಕಾರಣ ಹಂಸನೆಂದು ಪರಮಾತ್ಮಗೆ ಹೆಸರು. ದೇಶಗತನಾದ ಹಂಸನು ಕಾಲಗಳಲ್ಲಿಯೂ ಇದ್ದು ಸರ್ವರೊಳಗೆ ಇದ್ದು, ದೇವತೆಗಳಿಗೆ ಸಾರ್ವಭೌಮ ನಾದ ಹರಿಯು ತನ್ನ ಇಚ್ಛೆಯಂತೆ ಇರುತಿಪ್ಪ ಬಗೆ. ಇನ್ನೊಬ್ಬರಿಗೆ ತಿಳಿಯ ಗೊಡದಂತೆ ಅವ್ಯಕ್ತಾತ್ಮ=ತನ್ನ ನಿಜಶಕ್ತಿಯಿಂದ ವ್ಯಕ್ತರೂಪನಾದರೂ,

ಇಂತಹ ನಿಜಶಕ್ತಿಯನ್ನು ಪೂರ್ಣವಾಗಿ ಅರಿಯದ ಬ್ರಹ್ಮಾದಿಗಳಿಗೆ, ಅವ್ಯಕ್ತ ಶರೀರವುಳ್ಳ ಹಂಸನಾಮಕ ಹರಿಯ ಶಕ್ತಿ.

ಇನ್ನು ಶ್ರೀಹರಿಯ ಕಾಲ ನಿಯಾಮಕ, ಕಾಲ ಪ್ರವರ್ತಕ ರೂಪಗಳಲ್ಲಿಪ್ಪ ವಿಭೂತಿ ರೂಪಗಳನ್ನು ವಿವರಿಸಿ ವಿಭೂತಿ ಸಂಧಿ ಸಮಾಪ್ತಿಗೈಯ್ಯುತ್ತಾರೆ. ತೃಟಿಲವಾದಿಕಾಲಾರಂಭಿಸಿ, ಸಂವತ್ಸರಗಳಲ್ಲಿಪ್ಪ ಅನಿರುದ್ಧಾದಿ ವಿಭೂತಿಗಳನ್ನು ವಿಶದೀಕರಿಸುತ್ತಾರೆ. ಈ ಸಂವತ್ಸರಗಳಲ್ಲಿ ೫ ಪ್ರಬೇಧ.

**ಪರಿವತ್ಸರ**=ಬಾರ್ಹಸ್ಪತ್ಯಮಾನ. ಗುರು ಒಂದು ರಾಶಿಯಿಂದ ತಿರುಗಿದರೆ ಇದಕ್ಕೆ ಪರಿವತ್ಸರದಲ್ಲಿ ಅನಿರುದ್ಧನಾಮಕ ಹರಿಯು.

ಇಡಾವತ್ಸರ=ನಕ್ಷತ್ರಮಾನ ೨೭ ನಕ್ಷತ್ರಗಳು ೧೨ ಆವರ್ತಿ ತಿರುಗುವ ಕಾಲ. ಇದರಲ್ಲಿ ವಿಭೂತಿ ಪ್ರದ್ಯುಮ್ನದೇವನು.

ಅನುವತ್ಸರ=೧೨ ಅಮಾವಾಸ್ಯಗಳಿಗೆ ಆಗುವ ಕಾಲದಲ್ಲಿ ಸಂಕರ್ಷಣನು.

ವತ್ಸರ=೩೬೦ ದಿವಸಗಳಿಗೆ ಆಗುವ ಕಾಲನಿಯಾಮಕ ವಾಸುದೇವ.

ಸಂವತ್ಸರ=ಸೂರ್ಯನು ೧೨ ರಾಶಿಯಲ್ಲಿ ತಿರುಗುವ ಕಾಲ–ನಾರಾಯಣನು.

ಈ ಪ್ರಕಾರ ಜಗತ್ತಿಗೆ ಒಡೆಯನಾದ ಹರಿಯು ವ್ಯಾಪಿಸಿ ತನ್ನ ವಿಭೂತಿ ರೂಪಗಳಿಂದ ಎಲ್ಲ ಕಾರ್ಯ ಸಾಗಿಸುವನೆಂದು ಸ್ಮರಿಸುವರನ್ನು, ಅವರ ಜ್ಞಾನ ಕರ್ಮ ಯೋಗ್ಯತೆಯಂತೆ ಉರುಪರಾಕ್ರಮನಾದ ಹರಿಯು ರಕ್ಷಿಸುವನು ದಾಸಾರ್ಯರ ವಿಭೂತಿ ಸಂಧಿಯ ಸಾರ.

॥ ಶ್ರೀ ಕೃಷ್ಣಾರ್ಪಣಮಸ್ತು ॥

॥ ಶ್ರೀ ರಾಘವೇಂದ್ರ ಗುರು-ಶ್ರೀ ವರದೇಂದ್ರ ಗುರು ॥




# ೫ನೇ ವಿಭೂತಿ ಸಂಧಿ

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮ ಭಗವದ್ಭಕ್ತರಿದನಾದರದಿ ಕೇಳುವದು ॥ ಪಲ್ಲವಿ ॥

ಮೂಲ :

**ಶ್ರೀ ತರುಣಿ ವಲ್ಲಭನ ಪರಮ ವಿ ।**
**ಭೂತಿ ರೂಪವ ಕಂಡ ಕಂಡ ।**
**ಲ್ಲೀ ತೆರದಿ ಚಿಂತಿಸುತ ಮನದಲಿ ನೋಡು ಸಂಭ್ರಮದಿ ॥**
**ನೀತ ಸಾಧಾರಣ ವಿಶೇಷ ಸ ।**
**ಜಾತಿ ನೈಜಾ ಹಿತವು ಸಹಜ ವಿ ।**
**ಜಾತಿ ಖಂಡಾಖಂಡ ಬಗೆಗಳ ನರಿತು ಬುಧರಿಂದ ॥ ೧ ॥**

ಅವತಾರಿಕೆ=ಗೀತಾ ೧೫ ಅಧ್ಯಾಯದಲ್ಲಿ ಪೇಳಿದಂತೆ ಭಗವಂತನ ವಿಭೂತಿ ರೂಪ ನಿರೂಪಿಸುತ್ತಾರೆ.

**ಪದ್ಯಾರ್ಥ :** ಶ್ರೀ ತರುಣಿ=ಜ್ಞಾನಾದಿ ಮೋಕ್ಷ ಸಂಪತ್ತಿಗೆ ಕಾರಣಳಾದ ಶ್ರೀ ಲಕ್ಷ್ಮೀದೇವಿಯು, ವಲ್ಲಭನ=ಪತಿಯಾದ ಶ್ರೀಹರಿಯ, ಪರಮ= ಉತ್ತಮವಾದ, ವಿಭೂತಿ=ವಿಶಿಷ್ಟಾಭೂತಿ ಸಾನ್ನಿಧ್ಯ ವಿಶೇಷವಾಗಿದ್ದ ರೂಪಗಳನ್ನು, ಕಂಡಕಂಡಲ್ಲಿ=ಎಲ್ಲಿ ನೋಡಿದರಲ್ಲಿ, ಈ ತೆರದಿ=ಮುಂದೆ ಹೇಳುವಂತೆ, ಚಿಂತನೆ ಮಾಡುತ್ತ, ಮನದಲ್ಲಿ ನೋಡು, ಸಂಭ್ರಮದಿ= ಚಿತ್ತೈಕಾಗ್ರತೆಯಿಂದ, ಮನದಲ್ಲಿ ಕಾಲರೂಪಗಳಾದ ಎಲ್ಲ ವಿಭೂತಿ ರೂಪಗಳು ಹೃತ್ಪದ್ಮಕರ್ಣಿಕಾಗ್ರಸ್ಥಿತ ಬಿಂಬನಲ್ಲಿ ಐಕ್ಯ ಚಿಂತಿಸುತ್ತ, ನೋಡು ಸಂಭ್ರಮದಿ=ಒಳ್ಳೇ ಉತ್ಸಾಹದಿಂದ ಬಿಂಬನ ವಿಭವವನ್ನು, ನೋಡು= ಧ್ಯಾನೋಪಾಸನೆ ಮಾರ್ಗದಿಂದ ನೋಡಬೇಕು. ವಿಭೂತಿಗಳ ವಿವರ.

೧) ನೀತ, ೨) ಸಾಧಾರಣ, ೩) ವಿಶೇಷ, ೪) ಸಜಾತಿ, ೫) ನೈಜ, ೬) ಆಹಿತ, ೭) ಸಹಜ, ೮) ವಿಜಾತಿ, ೯) ಖಂಡ, ೧೦) ಅಖಂಡ. ಇವುಗಳ ಅರ್ಥ ಎಲ್ಲ ಟೀಕಾಕಾರರು ಮುಂದೆ ಬರೆದಿದ್ದಾರೆ.

ಈ ಪ್ರಕಾರ ಆಯಾ ಸ್ಥಾನದಲ್ಲಿಪ್ಪ ಶ್ರೀಹರಿಯ ವಿಭೂತಿ ರೂಪಗಳನ್ನು ಆ ವಿಭೂತಿಗಳ ಬಗೆಗಳು ಬೇರೆ ಬೇರೆ ಸ್ಥಾನದಲ್ಲಿದ್ದ ಭಗವತ್‌ಕಳಾ ಸಾನ್ನಿಧ್ಯ ಗಳ ಇರುವನ್ನು, ಬುಧರಿಂದ=ಜ್ಞಾನಿಗಳಿಂದ ತಿಳಿದು, ಈ ರೂಪಗಳನ್ನೆಲ್ಲ ಬಿಂಬೈಕ್ಯ ಚಿಂತಿಸಿ ಧ್ಯಾನಿಸು ಎಂದು ಫಲಿತಾರ್ಥ.

**ದ್ರೌಪದೀಶ ಪತಿ ವಿಠಲರು**=ಶ್ರೀ ತರುಣಿ ವಲ್ಲಭನ ಪರಮ ವಿಭೂತಿ.

೧. ನೀತ=ಮತ್ಸ್ಯಾದಿ ರೂಪ.
೨. ಸಾಧಾರಣ=ಸರ್ವಜೀವ ಜಡಾಂತರ್ಗತ ರೂಪ.
೩. ವಿಶೇಷ=ದೇವತಾಂತರ್ಯಾಮಿ.
೪. ಸಜಾತಿ=ಇಂದ್ರಾದಿ ಗತರೂಪ.
೫. ನೈಜ=ಸಾಲಿಗ್ರಾಮ.
೬. ಆಹಿತ=ಸ್ವಯಂವ್ಯಕ್ತ.
೭. ಸಹಜ=ಲಕ್ಷ್ಮಣ ಬಲರಾಮಾದಿಗಳಲ್ಲಿ ಆವೇಶ.
೮. ವಿಜಾತಿ=ನಕ್ಷತ್ರಾಪೇಕ್ಷಯಾ ಚಂದ್ರಗತ ರೂಪ.
೯. ಖಂಡ=ಬಾಲಚಂದ್ರಗತರೂಪ.
೧೦. ಅಖಂಡ=ಸೇನಾ-ವನಾದಿಗತರೂಪ.

## ಮತ್ತು ಪ್ರಕಾರಂತರ ಅರ್ಥ

| ಸಂಖ್ಯ ಚೇತಾನಂತರ್ಗತ | ಜಡಾಂತರ್ಗತ | ಪ್ರಥಕು |
|---|---|---|
| ೧. ನೈಜ ರೂಪ-ಜೀವಾಂತರ್ಗತ. | ೧. ನೀತ-ಮೂಲ ಪ್ರಕೃತಿ ಅವ್ಯಾಕೃತಾಕಾಶ ವೇದ ತದಂತರ್ಗತ ಮೂರ್ತಿ. | ೧. ಅಖಂಡ, ಜೀವ ಜಡ ಓತಪ್ರೋತಾತ್ಮಕವ್ಯಾಪ್ತವಾದ ಮೂಲ ರೂಪ. |
| ೨. ವಿಶೇಷ-ಸ್ವಾಧಮಾಪೇಕ್ಷಯಾ ಸೋತ್ತಮರಂತರ್ಯಾಮಿ. | ೨. ಸಾಧಾರಣ - ಮಹತ್ತತ್ವಾದಿಗತರೂಪ. | ೨. ಖಂಡ - ರಾಮ ಕೃಷ್ಣಾದಿರೂಪ. |

| ಸಂಖ್ಯೆ ಚೇತನಾಂತರ್ಗತ | ಜಡಾಂತರ್ಗತ | ಪ್ರಥಕು |
|---|---|---|
| ೩. ಸಜಾತಿ-ಅನಂತ ಬ್ರಹ್ಮ ಅನಂತ ಗರುಡಶೇಷ ಗತರೂಪ. | ೩. ಆಹಿತ ರೂಪ, ಕೃತ ಪ್ರತಿಮಾ. | |
| ೪. ವಿಜಾತಿ – ರಮಾಂತರ್ಯಾಮಿ. | | |
| ೫. ಸಹಜ ವಿಭೂತಿ–ಸಮರೊಳಗೆ ಅಧಿಕ ವೃಕ್ಷದೊಳಗೆ ಅಶ್ವತ್ಥ, ಋಷಿಗಳೊಳಗೆ–ನಾರದ. | | |

| | |
|---|---|
| ಈ ಪ್ರಕಾರ ಚೇತನಾಂತರ್ಗತ | ೫ |
| ಜಡಾಂತರ್ಗತ ವಿಭೂತಿ | ೩ |
| ಪೃಥಕು ವಿಭೂತಿ ೨ ಪ್ರಕಾರ | ೨ |
| ಅಂತೂ ೧೦ ದಶವಿಧ ವಿಭೂತಿಗಳು | |

**ಗುರು ಶ್ರೀಶವಿಠಲರ ಶಿಷ್ಯರು:** ಶ್ರೀಹರೇಃ ಮಾಂಪಾಹಿ। ಶ್ರೀ ತರುಣಿ ವಲ್ಲಭನ ಪರಮ ವಿಭೂತಿ॥ ಶ್ರೀ ಮಂಗಳಕರವಾದ ಶಬ್ದ ರಮಾದೇವಿಗೆ ಮುಖ್ಯ ನಾಮ॥ ಶ್ರೀ ಮಹದೈಶ್ವರ್ಯಾದಿ ಸಂಪತ್ತು, ಶ್ರೀ ಜ್ಞಾನ ಸಂಪತ್ತು ಮಂಗಳಕರವಾದ ಜ್ಞಾನ ಹರಿಸರ್ವೋತ್ತಮ ಜ್ಞಾನ. ಬ್ರಹ್ಮಾದಿಗಳ ಜ್ಞಾನಾನಂದಾದಿ ಗುಣಗಳಿಗೆ ನಿಯಾಮಕಳು ಶ್ರೀ ರಮಾದೇವಿ ತರುಣಿ= ಸ್ತ್ರೀ ನಾಮ. ಮುಖ್ಯ ಸ್ತ್ರೀ ಶಬ್ದ ರಮಾದೇವಿಗೆ, ಸರಸ್ವತೀ, ಭಾರತೀ, ಪಾರ್ವತೀ ಇವರಿಗೆ ಸ್ತ್ರೀ ಶಬ್ದ ಉಂಟು. ಆದರೆ ಶ್ರೀ ರಮಾದೇವಿ ನೋಡಲಾಗಿ ಅವರರು. ಸರಸ್ವತಿ, ಭಾರತಿ, ಪಾರ್ವತಿಯರು ಶ್ರೀ ರಮಾದೇವಿಯರು ಇವರಿಗೆ ಅನಂತ ಗುಣದಿಂದ ಅಧಿಕಳು. ಕಾರಣ ಶ್ರೀ ರಮಾದೇವಿಗೆ ಮುಖ್ಯ ಸ್ತ್ರೀ ಶಬ್ದ ಹೇಳುತ್ತಾರೆ. ಶ್ರೀ ತರುಣಿ ವಲ್ಲಭನ ನಿತ್ಯಮುಕ್ತಳಾದ ಮಂಗಳಕರವಾದ ಜ್ಞಾನ ಸಂಪತ್ತಿನಿಂದ ಪೂರ್ಣಳಾದ ಅಖಂಡಾವಿಚ್ಛಿನ್ನ ಭಕ್ತಿಯುಳ್ಳಂಥಾ, ಅವ್ಯಾಕೃತಾಕಾಶದಂತರ್ಬಹಿಃವ್ಯಾಪ್ತಳಾದ ಶ್ರೀ ತರುಣಿ

ರಮಾದೇವಿಗೆ ವಲ್ಲಭ-ಪತಿಯಾದಂಥ ಓಂಕಾರ ಪ್ರತಿಪಾದ್ಯ ಜಗನ್ಮಂಗಳ ವಿಗ್ರಹ ಅನಂತಾನಂತ ರೂಪಾತ್ಮಕ ವಿಶ್ವಕುಟುಂಬಿ ಶ್ರೀ ರಮಾಲಾಲಿತ ಪಾದಪಲ್ಲವ ಶ್ರೀ ರಮಾನಿವಾಸಿ ಶ್ರೀ ಭೂರಮಣ ಶ್ರೀ ಆದಿನಾರಾಯಣನ ವಿಭೂತಿರೂಪವ, ಶ್ರೀ ಭೂದುರ್ಗಾರಮಣ ಆದಿನಾರಾಯಣನ, ಪರಮ= ಕೇವಲ ಉತ್ತಮವಾದ ವಿಭೂತಿ; ಪರಮ ನಿರ್ಮಲ ಮಂಗಳಕರವಾದ ರೂಪಗಳ, ಕಂಡಕಂಡಲ್ಲಿ-ಚತುರ್ದಶಲೋಕ ಭೂಮಂಡಲದೊಳಗೆ ಎಲ್ಲಿ ನೋಡಿದರಲ್ಲಿ ಈ ತೆರದಿ ಚಿಂತಿಸುತ ಪರಮ ವಿಭೂತಿ ಮಹದೈಶ್ವರ್ಯ ಸಂಪತ್ತಿನಿಂದ ಒಪ್ಪುವಂಥ ಜಗನ್ಮಂಗಳ ವಿಗ್ರಹನಾದ ಹತ್ತು ವಿಧ ರೂಪಗಳ ಈ ಪ್ರಕಾರ ಚಿಂತನ ಮಾಡುತ್ತ, ಮನದಲಿ ನೋಡು. ಅಂತರಂಗದಲ್ಲಿ ಜ್ಞಾನ ದೃಷ್ಟಿಯಿಂದ ಸರ್ವಾಂತರ್ಯಾಮಿ ಶ್ರೀ ರಮಾವಲ್ಲಭನ ರೂಪಗಳ ನೋಡು, ಸಂಭ್ರಮದಿ ಪರಮಾನಂದದಿಂದ ಬ್ರಹ್ಮಾಂಡ ಪಿಂಡಾಂಡದಲ್ಲಿ ವ್ಯಾಪ್ತನಾದ, ಶ್ರೀ ರಮಾಪತಿ ನಾರಾಯಣನ ಮಹಾ ಕಾಂತಿಯುಳ್ಳ ವಿಭೂತಿ ರೂಪಗಳ ಕೇವಲ ಸಂಭ್ರಮದಿಂದ ನೋಡು. ೧) ನೀತ, ೨) ಸಾಧಾರಣ, ೩) ವಿಶೇಷ, ೪) ಸಜಾತಿ, ೫) ನೈಜ, ೬) ಆಹಿತವು, ೭) ಸಹಜ, ೮) ವಿಜಾತಿ, ೯) ಖಂಡ, ೧೦) ಅಖಂಡ. ಈ ಪ್ರಕಾರ ಅಂಬುಜ ಭವಾಂಡದೊಳು, ಹತ್ತು ವಿಧದಿಂದ ರಮಾಕಾಂತ ನಾರಾಯಣನ ವಿಭೂತಿ ರೂಪಗಳ ಬಗೆಗಳನರಿತು ಬುಧರಿಂದ ವಿವರವು, ಸೋತ್ತಮ ಜ್ಞಾನಿಗಳಿಂದ ತಿಳಿದು ಸಂಭ್ರಮದಿ ನೋಡು–ಬಹು ಉತ್ಸಾಹದಿಂದ ನೋಡು.

೧೦ ವಿಧ ಆದಿನಾರಾಯಣನ ವಿಭೂತಿ ರೂಪಗಳು :

೧. ನೀತ=ಮತ್ಸ್ಯಾದಿ ರೂಪಗಳು.

೨. ಸಾಧಾರಣ=ಸರ್ವಜೀವ ಜಡಾಂತರ್ಗತ ರೂಪಗಳು.

೩. ವಿಶೇಷ=ದೇವತಾಂತರ್ಯಾಮಿ ರೂಪ.

೪. ಸಜಾತಿ=ಇಂದ್ರಾದಿ ಗತರೂಪ.

೫. ನೈಜರೂಪ-ಶಾಲಿಗ್ರಾಮ.

೬. ಆಹಿತರೂಪ=ಸ್ವಯಂ ವ್ಯಕ್ತರೂಪ.

೭. ಸಹಜ ವಿಭೂತಿ=ಲಕ್ಷ್ಮಣ ಬಲರಾಮಾದಿಗಳಲ್ಲಿ.

೮. ವಿಜಾತಿ=ನಕ್ಷತ್ರಾಪೇಕ್ಷಯಾ ಚಂದ್ರಗತರೂಪ.

೯. ಖಂಡ=ಬಾಲಚಂದ್ರ, ಒಂದು ರೂಪದೊಳಗನಂತ ರೂಪಗಳು.

೧೦. ಅಖಂಡರೂಪ=ವಿರಾಡ್ರೂಪ ಬ್ರಹ್ಮಾಂಡಾಂತರ್ಬಹಿರರೂಪ.

ಶ್ರೀ ರಮಾವಲ್ಲಭ ಆದಿನಾರಾಯಣ "ಏಕಮೇವಾನ್ನ ದ್ವಿತೀಯಂ ||" ಎನ್ನೊ ಶ್ರುತಿ ಪ್ರತಿಪಾದ್ಯ. ಪಿಂಡಾಂಡಾಂತರ್ಗತ ಆಪಾದಮೌಳಿ ಪರ್ಯಂತ ಖಂಡಾಖಂಡ ರೂಪಗಳು ವ್ಯಾಪ್ತವಾಗಿಹವು. ನವನಾರಿ ಕುಂಜರದಂತೆ ಏಕಾಕಾರ ತೋರ್ಪವು. ಯಾವದವಯವಗಳಲ್ಲಿ ಬ್ಯಾರೆ ಬ್ಯಾರೆ ಕಂಗೊಳಿಸುವ ಶರೀರದೊಳು, ನಾನಾ ಪ್ರಕಾರ, ವಿಕಾರ ಶೂನ್ಯ ವಿರಾಟನೆನಿಸುವ ಪದ್ಮಜಾಂಡದೊಳು, ನಾರಸಿಂಹನ ರೂಪಗಳು.

೧೦ ರೂಪಗಳಿಗೆ: ೧) ಕಾರಣರೂಪ, ೨) ಅಂಶರೂಪ, ೩) ಆವೇಶರೂಪ, ೪) ವ್ಯಾಪ್ತರೂಪ, ೫) ಅವತಾರರೂಪ, ೬) ಕಾರ್ಯರೂಪ, ೭) ವ್ಯಕ್ತರೂಪ, ೮) ಅವ್ಯಕ್ತರೂಪ, ೯) ವಿಭೂತಿರೂಪ, ೧೦) ಅಂತರ್ಯಾಮಿ ರೂಪ. ವಾರಿಜಭವಾಂಡದೊಳು ಲಕ್ಷ್ಮೀನಾರಸಿಂಹನ ರೂಪ ಗುಣಗಳು ವಾರಿಧಿಯೊಳಿಹ ತೆರೆಗಳಂದದಿ ಸಂದಣಿಸಿಯಿಹವು.

ಜಂಬುಖಂಡಿ ವಾದಿರಾಜೀಯಾ=ಭಾವಸೂಚನ: ಶ್ರೀದೇವರು ಪ್ರಕಟಿತ ವಿಶೇಷ ಶಕ್ತಿಯಾದ ಶೇಷಶಯನ ರೂಪಗಳೇ ವಿಭೂತಿತ ಶಬ್ದಗಳು. ಉಕ್ತಂ ಚ ದಶಮಗೀತಾಯಾಂ || "ಯಾಭಿರ್ವಿಭೂತಿಭಿರ್ಲೋಕಾ ಸ್ತ್ವಂ ವ್ಯಾಪ್ಯತಿಷ್ಟಸಿ ಇತಿ ಉಕ್ತಂ ಚ ಸೂತ್ರಕಾರೈಃ || ಓಂ ಅಂತರ್ಯಾಮ್ಯಧಿದೈವಾದಿಷು ತದ್ಧರ್ಮೋಪದೇಶಾದಿತಿ || "ಎತ್ತದಮೃತಮಭಯಂ" ಎಂಬ ಶ್ರುತ್ಯುಕ್ತನಾದ ಪ್ರಯುಕ್ತ, ಸರ್ವದೇವಾದ್ಯಂತರ್ಯಾಮಿಯಂತ ತಾತ್ಪರ್ಯ || ಪರಮಾತ್ಮನ ಜ್ಞಾನವೇ ಅಪರೋಕ್ಷ ನಿದಾನಮಿತಿ || ವಿಭೂತಿ ಜ್ಞಾನ ವ್ಯಾಕಂದರೆ ನಿಷ್ಪಂಕ ಜ್ಞಾನ ಯೋಗ ಸಾಧನವಾದ ಪ್ರಯುಕ್ತಾ || ತದುಕ್ತಂ ಭಗವದ್ಗೀತಾಯಾಂ ನಂದನಂದನೇನ || ಏತಾಂ ವಿಭೂತಿ ಯೋಗಂ ಚಮಮಯೋ ವೇತ್ತಿ ತತ್ವತಃ || ಸೋಽವಿಕಂಪೇನ ಯೋಗೇನಯುಜ್ಯತೇ ನಾತ್ರ ಸಂಶಯ, ಇತಿ|| ಆದಕ್ಕೆ ಸರ್ವರಲ್ಲಿ ಪರಮಾನುಗ್ರಹಮಾಡಿ, ದಾಸರು ಹೇಳಿಕೊಡುತ್ತಾರೆ. ಶ್ರೀ ತರುಣೇತಿ.

"ಅಖಿಳ ಚೇತನದಿಪ್ಪ ಭೂತಿಯು ।
ಸಖನೆ ಎನದೆಂದೆನುತ ಪಾರ್ಥಗೆ ।
ಮುಖದಿ ತೋರಿದ ರೀತಿ ನಿಖಿಳಧಿಕಾರಿಗಳ ಕುರಿತು ॥
ಭಕುತಿಯಿಂದಲಿ ಆರುಹುಗೋಸುಗ ।
ಸುಖಸುತೀರ್ಥರ ಶಾಸ್ತ್ರ ಸಾರವ ।
ಸುಖದಿ ಭುಂಜಿಸಿರೆನುತ ಪೇಳ್ದರು ಭೂತಿಸಂಧಿಯಲಿ ॥ ೫ ॥

(ಮಂಜೂಷಾಯಾಂ)

ಸಾಧಾರಣ ವಿಶೇಷ ಮಹತ್ಮೆ ಪ್ರಕಟಿಸದೆ ಇದ್ದ ಮಾನುಷ ಗತರೂಪ, ಸಜಾತೀಯ ವಿಜಾತೀಯರೂಪ ಸ್ಫುಟ ನೈಜ ಬ್ರಾಹ್ಮಣ–ಗೋ ಸಾಲಿಗ್ರಾಮಾದಿ ಗತರೂಪ, ಆಹಿತ-ಚಲಜ್ಞಾನಿಗತರೂಪ, ಸಹಜದೇವಾದಿಗತ ಆಹಿತಾ । ತದುಕ್ತಂ ವಿಷ್ಣುರಹಸ್ಯೇ ಹಯಾಸ್ಯೇನ ಚತುರ್ಮುಖಂ ಪ್ರತಿ ದಶಮಾಧ್ಯಾಯೆ ॥ "ಚಲಾಚಲ ಪ್ರಭೇದೇನ ಪ್ರತಿಮಾದ್ವಿತಯಂ ಮಮಾ ॥ ಚಲಾತು ವೈಷ್ಣವೊ ವಿಪ್ರೋ ದ್ವಿವಿಧಾತ್ವಚಲಾಮತಾ ॥ ಸಹಜಾಹಿತ ಭೇದೇನ ಸಾಹಜಾ ತ್ರಿವಿಧಾಸ್ಮೃತಾ ॥ ತೀರ್ಥಕ್ಷೇತ್ರ ಶಿಲಾಭೇದಾತ್ ಜಲಂ ತೀರ್ಥಮಿದಂ ಸ್ಮೃತಂ ॥ ಭೂಭಾಗಕ್ಷೇತ್ರ ಮಿತ್ಯುಕ್ತಃ ಸಾಲಿಗ್ರಾಮಾದಿಕಾ ಶಿಲಾ॥ ಪ್ರಯಾಗ ಕಾಶೀ ಬದರೀ ಕುರುಕ್ಷೇತ್ರಾದಿಕಾನಿ ಚಾ ॥ ಭೂಖಂಡಾನಿ ಚತುರ್ವಕ್ತ್ರಾ ಕ್ಷೇತ್ರಾಣಿ ಮಮಮೂರ್ತಯಃ । ಗಂಗಾಪುಷ್ಕರ ಕೃಷ್ಣಾದ್ಯಾಃ ಮಮತಾಸ್ತೀರ್ಥಮೂರ್ತಯಃ । ಸಾಲಿಗ್ರಾಮ ಶಿಲಾಯಾಂತು ಪೂಜನಂ ಸರ್ವಸಮ್ಮತಮ್। ತಸ್ಯಾಸ್ಸಹಜ ಮೂರ್ತಿತ್ವಾತ್ ಶ್ವಪಾಕ ಸ್ಪರ್ಶನಾದಿನಾ। ಸಾನಿಧ್ಯಂ ಮಮನಾಪೈತಿ ಸರ್ವದಾ ಮಮಸನ್ನಿಧಿಃ । ನಾನಾ ರೂಪಧರೋ ಹಂವೈ ತತ್ತದ್ದೇವೇಷು ಸಂಸ್ಥಿತಃ ॥ ತಾನ್ಯಾಹಿತಾನಿ ಜಾನೀಹಿ ಸರ್ವದಾ ಚತುರಾರನನ ಇತಿ ॥ ನೀತಾ (ಆಕಾಶಾದಿಗತರೂಪ) ದದಾ ॥ ೧ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ತದ್ಯಾವೇಶಾನ್ ತಥಾ ಸಮ್ಯತ್ ಜ್ಞಾತ್ವಾ ಮುಕ್ತಿಃ ನಚಾನ್ಯಥಾ ॥ ಇತಿ ಆಚಾರ್ಯವಾಚಂ ಅನುಚಿಂತಯಂತಃ ಗುರುವಃ ಅವಿಸ್ಮೃತ ಗುರವಃ (ವೇ) ವಿಭೂತಿಸಂಧಿಂ ಉಪಕ್ರಮಂತಿ ॥ ಐಹಿಕಾದಿ ವಿಭೂತಿಂ ಇಚ್ಛದ್ಭಿಃ ತದ್ರೂಪಮೇವ ಉಪಾಸ್ಯಮ್ ॥ ಕಾಮ್ಯಾಃ ॥ ಯಸ್ಯ ಯಸ್ಯ ಹಿ ಯ

ಕಾಮಃ ॥ ತಾದೃಶಾನಾಂ ಗುಣಾನಾಂ ಚ ಇತ್ಯಪಿ ಸತ್ವಾಚ್ಚ ತದರ್ಥಂ ವಿಭೂತಿ ಸಂಧ್ಯಾರಂಭಃ ॥ ಆತ್ಮೋ ಗುರೂನ್ ಸ್ಮರಂತಿ ॥ "ಸ್ವೇಷ್ಟಂ ತು ಷ್ಪಾತ್ ನಾಥನೀಯಂ ॥" ರುಷ್ಪಾತ್ನ ॥ ಅತಏವ ಆಹ "ಅಹ ದೇವೋ ರವೋತ್ಸಂಗ ವಿಲಸತ್ಪಾದ ಪಲ್ಲವಃ ॥" ಇತಿ ॥ ಅತಏವ ರವುಣ್ಯಾವಿಹರ ದ್ರಾಜಾದೇಃ ಅರ್ಥಸಾಧಕಾಃ ಏವ ಪ್ರಾಯಃ ದರೀ ದೃಶ್ಯಂತೇ ॥ ಅತ ಆಹ **ಶ್ರೀ ತರುಣಿ ವಲ್ಲಭೇತಿ** ॥

"ತೆರದಿ"=ವಕ್ಷ್ಯಮಾಣಕ್ರಮೇಣ ॥ **ನೀತೇತಿ** ॥ ನೀತಂ ಸಾಧಾರಣಮ್ ॥ ೩ ॥ ವಿಶೇಷಂ (ಷಃ) 3. (೪) ಸಜಾತೀಯಮ್ ॥ (೫) ನೈಜಮ್ ॥ (೬) ಆಹಿತಮ್ ॥ (೭) ಸಹಜಮ್ ॥ (೮) ವಿಜಾತೀಯಮ್॥ (೯) ಖಂಡಮ್ ॥ (೧೦) ಅಖಂಡಮ್ ॥ "**ಬುಧೈಃ**" ಇತಿ ॥ ಗೀತಾ ತಾತ್ಪರ್ಯಾದಿ ನಿಪುಣೈಃ ॥

ನನು ಯತ್ರ "ನಾಸ್ತಿ" ಇತಿ ಕ್ರಮೇಣ ವಿಭೂತಿ ಪದಾರ್ಥಧೀ ವಿರಹೇ ತದ್ವಿಶೇಷಧೀ ಬೋಧನಂ ನ ಚೇತಸಿ ಚಕಾಸ್ತಿ ಪ್ರತಿಪತ್ತೃಣಾಂ । ಅತಃ ತತ್ ನಿರರ್ಕ್ತವ್ಯಂ ಚೇತ್ ॥ ಉಚ್ಯತೇ ॥ ವಿಶಿಷ್ಟ ಭವನಂ ವಿಭೂತಿಃ॥ ಮಹತ್ವಂ ವಿವಿಧ ಭವನಂ ವಾ॥ ಏವಂಚ ಉಭಯಂ॥ "ಕೇಷು ಕೇಷು ಚ ಭಾವೇಷು॥" ಇತ್ಯುಕ್ತತ್ವಾತ್ ಬ್ರಹ್ಮಾದಿ ಜೀವೇಭ್ಯಃ ಅನ್ಯದೇವ ವಿಭೂತಿ ರೂಪಮ್ ॥ ಮಹತ್ವದಾತೃ ಅನ್ಯಗಮ್ ॥ ಸ್ವಸ್ಯೈವ ವಿವಿಧ ಭವನಂ ರಾಮಾದಿ ॥ ಪಾಠ ಕ್ರಮಾದಿತಿ ನ್ಯಾಯೇನಾಹುಃ ॥ ದ್ವಿವಿಧಮಿತಿ ॥ "ದ್ವಿವಿಧಂ ವೈಭವಂ ರೂಪಂ ಪ್ರತ್ಯಕ್ಷಂ ಚ ತಿರೋಹಿತಮ್ ॥ ಕಪಿಲ ವ್ಯಾಸ ಕೃಷ್ಣಾದ್ಯಂ ಪ್ರತ್ಯಕ್ಷಂ ವೈಭವಂ ಸ್ಮೃತಮ್ ॥ ಭಿನ್ನಂ ಬ್ರಹ್ಮಾದಿ ಜೀವೇಭ್ಯಃ ಜಡೇಭ್ಯಶ್ಚಾಪಿ ತದ್ಗತಮ್ ॥ ಸ್ವಜಾತ್ಯಾಧಿಕ್ಯಗಂ ತೇಷಾಂ ತತ್ ತಿರೋಹಿತ ವೈಭವಮ್ ॥ ಇತ್ಯಾದಿ ಚೇತಿ ॥ ಸ್ವಾಭಿನ್ನತ್ವೇಪಿ ಮೂಲಾತ್ ಪೃಥಙ್ನಯನಾತ್ ನೀತಃ ಮತ್ಸ್ಯಾದಿಃ॥ ಸಾಧಾರಣಂ ಸರ್ವಜೀವ ಜಡ ಸಾಧಾರಣಗಮ್ ॥ ೨ ॥ ವಿಶೇಷಂ ಬ್ರಹ್ಮಾದಿದಮ್ ॥ ೩ ॥ ಸಜಾತೀಯಂ ಶಕ್ರ–ಉಶನಾ–ಅರ್ಜುನಾದ್ಯಂತರ್ವರ್ತಿ ॥ ೪ ॥ ನೈಜಂ ಶಾಲಗ್ರಾಮಗಮ್ ॥ ೫ ॥ ಆಹಿತಂ ಸ್ವಯಂ ವ್ಯಕ್ತಂ ॥ ೬ ॥ ಸಹಜಂ ಲಕ್ಷ್ಮಣಾ ಬಲಾದಿಗಮ್ ॥ ೭ ॥ ವಿಜಾತಿ

ರೂಪಂ=ಶಶಿಗಮ್ ॥ ೮ ॥ ಖಂಡಂ ಬಾಲಚಂದ್ರಗಮ್ ॥ ೯ ॥ ಅಖಂಡಂ ಸೇನಾವನಾದಿಗಮ್ ॥ ೧೦ ॥ ತತ್ರಮಾನಮ್ ॥

"ನಾನಾ ಪ್ರಾಣ್ಯಾದಿ ಸಂಸ್ಥಶ್ಚ ವಿಭೂತಿರಿತಿ ಶಬ್ದಿತಃ ॥ ಶಶ್ಯಾದಿಷು ವಿಜಾತೀಯ ಸ್ವಾಮ್ಯದಃ ಸಾರದಃ ಕ್ವಚಿತ್ ॥ ಶರ್ವಾದಿಷು ಸಜಾತೀಯ ಶ್ರೀಪ್ರಸ್ತ್ಯದತ್ವೇನ ಸಂಸ್ಥಿತಃ ॥ ಶಕ್ರೋಶನಾರ್ಜುನಾದ್ಯೇಷು ಸಜಾತೀಯೈಕದೇಶತಃ ॥ ಇತಿ ವಿಷ್ಣುರಹಸ್ಯೇ ॥ ಶಾಲಿಗ್ರಾಮ ಶಿಲಾಯಾಂ ತು ಪೂಜನಂ ಮಮ ಸಮ್ಮತಮ್ ॥ ಸಾನ್ನಿಧ್ಯಂ ಮಮ ನಾಪೈತಿ ಸರ್ವದಾ ಮಮ ಸನ್ನಿಧಿಃ ॥ ಇತಿ ॥ ತಸ್ಯಾಃ ಸಹಜಮೂರ್ತಿತ್ವಾತ್ ಶ್ವಪಾಕ ಸ್ಪರ್ಶನಾದಿನಾ ॥ ಇತಿ ಚ ॥ ಆವಾಹನಂ ತಥಾ ತತ್ವಮಾತ್ರಕಾದ್ಯನಪೇಕ್ಷಿತಮ್ ॥ ವಿನಾ ಸನ್ನಿಧಿಯುಕ್ತಃ ಸನ್ ಸ ಸ್ವಯಂ ವ್ಯಕ್ತ ಇಷ್ಯತೇ ॥ ಇತಿ ಶ್ರೀಮುಷ್ಣ ಮಾಹಾತ್ಮ್ಯೇ ॥ ಬಲೇನ ತತ್ರವಿಷ್ಟ ಫಣಿನಾ ಸಹಜತ್ವಾತ್ ತದ್ಬಲ ಲಕ್ಷ್ಮಣಗಂ ಸಹಜಮ್ ॥ ಲಕ್ಷ್ಮಣಾದ್ಯಃ ತ್ರಯಃ; ರೋಹಿಣೀನಂದನಃ ॥ ನರಃ ಫಲ್ಗುನ ಇತ್ಯಾದ್ಯಾಃ ವಿಶೇಷಾವೇಶಿನೋ ಹರೇಃ ॥ ಇತ್ಯುಕ್ತೇಃ ॥ ಬಲದೇವಃ ತತಃ ಪಶ್ಚಾತ್ ನಾವೇಶಾತ್ ॥ ಆದ್ಯ ತಾತ್ಪರ್ಯೇ ಚ ॥ ಆವೇಶೋ ಬಲಭದ್ರೇ ॥ ಶಂಖಚಕ್ರ ಭೃದೀಶೇಶಃ ಶ್ವೇತವರ್ಣೋ ಮಹಾಭುಜಃ ॥ ಆವಿಷ್ಟಃ ಶ್ವೇತಕೇಶಾತ್ಮಾ ಶೇಷಾಂಶಂ ರೋಹಿಣೀಸುತಮ್ ॥ ಇತಿ ಮಹಾ ವಾರಾಹೇ ॥ ನರೋ ನಾರಾಯಣಶ್ಚೈವ ಹರಿಃ ಕೃಷ್ಣಃ ತಥೈವ ಚ॥ ಚತ್ವಾರೋ ಧರ್ಮತನಯಾಃ ಹರಿರೇವ ತ್ರಯೋ ಮತಾಃ ॥ ಅನಂತೋ ನರನಾಮಾತ್ರ ತಸ್ಮಿಂಸ್ತು ನರನಾಮವಾನ್ ॥ ವಿಶೇಷೇಣ ಸ್ವಯಂ ವಿಷ್ಣುಃ ನಿವಸತ್ಯಂಬುಜೇಕ್ಷಣಃ॥ ಇತಿ ಷಾಡ್ಗುಣ್ಯೇದ್ವಿ-ತಾ-॥ ಖಂಡೋ ಬಾಲೇಂದು ಗೋಽಖಂಡೋ ವನಸೇನಾಗತೋ ಹರಿಃ ॥ ೧ ॥

## ಕನ್ನಡಾರ್ಥ

"ಪರಮಾತ್ಮನ ಮೂಲ ರೂಪಗಳನ್ನೂ, ಅವತಾರ ರೂಪಗಳನ್ನೂ ಹಾಗೂ ಆವೇಶಗಳನ್ನೂ ಸರಿಯಾಗಿ ತಿಳಿದುಕೊಳ್ಳದಿದ್ದರೆ ಮುಕ್ತಿಯಾಗುವದಿಲ್ಲ; ಅವುಗಳನ್ನು ತಿಳಿದರೇ ಮುಕ್ತಿಯಾಗುತ್ತದೆ." ಹೀಗಿರುವ ಶ್ರೀಮದಾಚಾರ್ಯರ ವಚನವನ್ನು ಹೃದಯದಲ್ಲಿ ತಂದುಕೊಂಡು, ಗುರುಗಳನ್ನು

ಸ್ಮರಿಸುತ್ತ ಶ್ರೀ ಜಗನ್ನಾಥದಾಸರು ವಿಭೂತಿ ಸಂಧಿಯನ್ನು ಉಪಕ್ರಮಿಸುತ್ತಾರೆ. ಐಹಿಕ ಮುಂತಾದ ಫಲಗಳನ್ನೂ ಐಶ್ವರ್ಯವನ್ನೂ ಅಪೇಕ್ಷಿಸುವವರು ಈ ವಿಭೂತಿ ರೂಪಗಳನ್ನೇ ಉಪಾಸಿಸಬೇಕು. "ಯಾರಿಗೆ ಯಾವ ಫಲವು ಅಪೇಕ್ಷಿತವೋ ಅವರು ಆ ಫಲಗಳನ್ನು ಕರುಣಿಸುವ ಶ್ರೀಹರಿಯ ವಿಭೂತಿ ರೂಪಗಳನ್ನು ಭಜಿಸತಕ್ಕದ್ದು. ಹೀಗೆ ಪ್ರಮಾಣಗಳಲ್ಲಿ ಹೇಳಿದ್ದರಿಂದ ಈ ವಿಭೂತಿ ಸಂಧಿಯನ್ನು ಪ್ರಾರಂಭಿಸುತ್ತಾರೆ. ಈ ವಿಭೂತಿ ಸಂಧಿಯು ನಿರ್ವಿಘ್ನದಿಂದ ಮುಗಿಯಬೇಕೆಂದು ತಮ್ಮ ಗುರುಗಳನ್ನು ಶ್ರೀ ಜಗನ್ನಾಥದಾಸರು ಬೇಡಿಕೊಳ್ಳುತ್ತಾರೆ "ಹರಿಕಥಾಮೃತಸಾರ" ಎಂದು ಪಲ್ಲವಿ ಪದ್ಯದಿಂದ.

ಪ್ರಸಾದಮಯ ಮೂರುತಿಯಿಂದ ಅಭೀಷ್ಟಗಳನ್ನು ಪ್ರಾರ್ಥಿಸಬೇಕು. ರುಷ್ಟ, ಕ್ರೋಧಯುಕ್ತ ರೂಪದಿಂದ ಅಭೀಷ್ಟಪೂರಣವಾಗದ್ದರಿಂದ ಅದನ್ನು ಪ್ರಾರ್ಥಿಸುವದು ಅನುಚಿತ. ಆದುದರಿಂದಲೇ ಶ್ರೀಮದಾಚಾರ್ಯರು "ಅಹದೇವೋ ರಮೋತ್ಸಂಗ ವಿಲಸತ್ಪಾದ ಪಲ್ಲವಃ" ಎಂಬುದಾಗಿ ಶ್ರೀಹರಿಯನ್ನು ಶ್ರೀ ರಮಾದೇವಿಯವರ ಉತ್ಸಂಗ (ತೊಡೆಗಳಲ್ಲಿ)ದಲ್ಲಿ ಶೋಭಿಸುವ ಪಾದ ತಳಿರುಗಳುಳ್ಳ ಪ್ರಸಾದಮಯ ಮೂರುತಿಯೆಂದು ಸ್ತುತಿಸಿರುತ್ತಾರೆ. ಆದುದರಿಂದಲೇ ಈ ಕಾರಣದಿಂದಲೇ ರಮಣಿಯರಿಂದ ವಿಹರಿಸುವ ರಾಜರು ಮುಂತಾದವರಿಂದ ತಮ್ಮ ತಮ್ಮ ಸ್ವಾರ್ಥಗಳನ್ನು ಸಾಧಿಸಿಕೊಳ್ಳುವದು ಬಹಳವಾಗಿ ರೂಢಿಯಲ್ಲಿ ಬಂದಿರುತ್ತದೆ. ಇದನ್ನು ಅನುಸರಿಸುತ್ತ ಶ್ರೀ ಜಗನ್ನಾಥದಾಸರು "ಶ್ರೀ ತರುಣಿ ವಲ್ಲಭ" ಎಂಬುದಾಗಿ ಹೇಳಿರುತ್ತಾರೆ.

"ವಿಭೂತಿ ರೂಪವ ಕಂಡಕಂಡಲ್ಲಿ 'ಈ ತೆರದಿ' ಚಿಂತಿಸುತ" ಎಂದು ಹೇಳಿರುತ್ತಾರೆ. ಈ ತೆರದಿ ಎಂದರೆ ಈ ರೀತಿಯಾಗಿ ಎಂದು ಅರ್ಥ. ವಿಭೂತಿ ರೂಪಗಳ ಬಗೆಯನ್ನು ಈಗ ಹೇಳಿರದಿದ್ದರೂ ಮುಂದೆ ಹೇಳಲ್ಪಡುವ ಬಗೆಯಿಂದ ಚಿಂತಿಸಬೇಕು ಎಂದು ಅರ್ಥವನ್ನು ಮಾಡಬೇಕು.

ನೀತ (ನಿಯತ) ಸಾಧಾರಣ, ವಿಶೇಷ, ಸಜಾತೀಯ, ನೈಜ, ಆಹಿತ, ಸಹಜ, ವಿಜಾತೀಯ, ಖಂಡ, ಅಖಂಡ ಎಂದು ಹತ್ತು ತರಹದ ವಿಭೂತಿ ರೂಪಗಳನ್ನು ಗೀತಾ ತಾತ್ಪರ್ಯ ಮುಂತಾದ ಗ್ರಂಥಗಳಲ್ಲಿ ನಿಷ್ಣಾತರಾದ ಪಂಡಿತರುಗಳಿಂದ ತಿಳಿದುಕೊಂಡು, ಉಪಾಸಿಸಬೇಕು.

"ವಿಭೂತಿ ಎಂದರೇನು?" ಎಂಬ ಸಾಮಾನ್ಯ ಜ್ಞಾನವಿರದಿದ್ದರೆ "ವಿಭೂತಿಗಳಲ್ಲಿ ಎಷ್ಟು ತರಹ? ಅವು ಯಾವವು?" ಎಂಬ ವಿಶೇಷ ಜ್ಞಾನವು ಬರಲು ಸಾಧ್ಯವಿಲ್ಲ. ಸಾಮಾನ್ಯ ನಿರೂಪಣೆಯಿಲ್ಲದೇ ಒಮ್ಮೆಲೇ ವಿಶೇಷ ವಿಷಯಗಳು ಓದುಗರ ಚಿತ್ತದಲ್ಲಿ ನಿಲ್ಲಲಾರವು. ಆದುದರಿಂದ ವಿಭೂತಿಯ ಲಕ್ಷಣಗಳನ್ನು ಹೇಳಲಾಗುತ್ತದೆ. ಒಂದೇ ಜಾತೀಯ ವಸ್ತುಗಳಲ್ಲಿ ಎಲ್ಲಕ್ಕೂ ಶ್ರೇಷ್ಠವೆನಿಸಿರುವ ವಸ್ತುವಿನಲ್ಲಿರುವ ಭಗವಂತನ ವಿಶಿಷ್ಠ ರೂಪಕ್ಕೆ "ವಿಭೂತಿ" ಎಂದು ಕರೆಯುುತ್ತಾರೆ. ಆ ಭಗವಂತನ ವಿಶಿಷ್ಠರೂಪವೇ ಆ ವಸ್ತುವಿನ ವಿಶಿಷ್ಠತೆಗೆ ಕಾರಣವಾಗಿರುತ್ತದೆ. ವಿಭೂತಿಯುು ವಸ್ತುವಿನ ಮಹತ್ವಕ್ಕೂ, ವೈವಿಧ್ಯಕ್ಕೂ ಕಾರಣವಾಗಿರುತ್ತದೆ. ಈ ವಿಧವಾದ ವಿಭೂತಿ ರೂಪವು ಎರಡು ತರಹದ್ದು. ಈ ವಿಭೂತಿ ರೂಪಗಳು ಆಯಾ ವಸ್ತುಗಳಲ್ಲಿ ಇದ್ದು ಅವುಗಳಿಗೆ ಆಧಿಕ್ಯವನ್ನು ಅತಿಶಯವನ್ನೂ ತಂದುಕೊಡುತ್ತವೆ. ಬ್ರಹ್ಮಾದಿಗಳಿಂದ ವಿಭೂತಿಯುು ಬೇರೆಯಾಗಿರುತ್ತದೆ. ವಸ್ತುಗಳಿಗೆ ಮಹತ್ವವನ್ನು ಕೊಡುವದು ಇನ್ನೊಂದರಲ್ಲಿರುವ ವಿಭೂತಿರೂಪವು. ತನಗೆ ವಿವಿಧ ರೂಪಗಳನ್ನು ತಂದುಕೊಳ್ಳುವದು; ರಾಮ ಮುಂತಾದ ರೂಪಗಳು ಇವು ವಿಭೂತಿಗಳೇ ಆಗಿರುತ್ತವೆ. ಹೀಗೆ ಪ್ರಾಜ್ಞರು ಹೇಳುತ್ತಾರೆ.

"ವಿಭೂತಿ ರೂಪವು ಎರಡು ತರಹವಾದದ್ದು; ಒಂದು ಪ್ರತ್ಯಕ್ಷ ಕಣ್ಣಿಗೆ ಗೋಚರಿಸುವಂತಹದು; ಮತ್ತೊಂದು ಕಾಣದೇ ಗುಪ್ತವಾಗಿರುವಂತಹದು. ಕಪಿಲ, ವ್ಯಾಸ, ಕೃಷ್ಣ ಮುಂತಾದವುಗಳು. ಪ್ರತ್ಯಕ್ಷ ವಿಭೂತಿ ರೂಪಗಳು. ಬ್ರಹ್ಮಾದಿ ಜೀವರಿಂದಲೂ, ಜಡಗಳಿಂದಲೂ ಭಿನ್ನವಾಗಿದ್ದು, ಅವುಗಳಲ್ಲಿ ಇತರ ವಸ್ತುಗಳಿಂದ ಆಧಿಕ್ಯವನ್ನೂ ಅತಿಶಯ ಉತ್ಕರ್ಷ (ಹೆಚ್ಚಳ)ವನ್ನೂ ತಂದುಕೊಡುವ ಗುಪ್ತವಾಗಿರುವದು. ತಿರೋಹಿತ ವಿಭೂತಿಯೆನಿಸುತ್ತದೆ.

೧) ತನ್ನಿಂದ ಬೇರೆ (ಭಿನ್ನ)ಯಾಗದಿದ್ದರೂ, ಮೂಲ ರೂಪದಿಂದ ಬೇರೆಯಾಗಿ ತರಲ್ಪಟ್ಟಿರುವದರಿಂದ ಮತ್ಸ್ಯ ಮುಂತಾದ ರೂಪಗಳಿಗೆ "ನೀತ" ಎಂದು ಕರೆಯುುವರು. ೨) ಸರ್ವಜೀವ ಜಡಗಳಲ್ಲಿ ಸಾಮಾನ್ಯವಾಗಿ ಇರುವ ಹರಿಯು ವಿಭೂತಿ ರೂಪಕ್ಕೆ ಸಾಧಾರಣವೆಂದು ಹೆಸರು. ೩) ಬ್ರಹ್ಮ ಮುಂತಾದವರಲ್ಲಿರುವ ವಿಭೂತಿಗೆ "ವಿಶೇಷ"ವೆಂದು ಸಂಜ್ಞೆಯುು. ೪) ಇಂದ್ರ ಶುಕ್ರ ಅರ್ಜುನ ಮುಂತಾದವರಲ್ಲಿ ಇರುವ ವಿಭೂತಿ ರೂಪಕ್ಕೆ

**ಸಜಾತೀಯವೆಂದು** ಕರೆಯುತ್ತಾರೆ. ೫) ಶಾಲಗ್ರಾಮದಲ್ಲಿರುವ ವಿಭೂತಿಯು "**ನೈಜ**"ವೆನಿಸುತ್ತದೆ. ೬) ಸ್ವಯಂ ವ್ಯಕ್ತ ಪ್ರತಿಮೆಯಲ್ಲಿರುವದು **ಆಹಿತ** ವಿಭೂತಿಯು. ೭) ಲಕ್ಷ್ಮಣ ಬಲರಾಮ ಮುಂತಾದವರಲ್ಲಿ ಇರುವದು **ಸಹಜ** ವಿಭೂತಿಯು. ೮) ಚಂದ್ರನಲ್ಲಿರುವದು **ವಿಜಾತೀಯ** ವಿಭೂತಿಯು. ೯) ಬಾಲ ಚಂದ್ರನಲ್ಲಿರುವದು **ಖಂಡ** ವಿಭೂತಿಯೆನಿಸುತ್ತದೆ. ೧೦) ಸೇನೆ, ವನ, ಮುಂತಾದವುಗಳಲ್ಲಿ ಇರುವದು ಅಖಂಡ ರೂಪವು. ಇದರಲ್ಲಿ ಪ್ರಮಾಣಗಳಿರುತ್ತವೆ. "ನಾನಾ ಪ್ರಾಣಿಗಳಲ್ಲಿರುವ ಶ್ರೀಹರಿಯ ವಿಶಿಷ್ಟ ಸನ್ನಿಧಾನಕ್ಕೆ ವಿಭೂತಿಯೆಂದು ಹೆಸರು. ಚಂದ್ರ ಮುಂತಾದವುಗಳಲ್ಲಿ ವಿಜಾತೀಯ ವಸ್ತುಗಳ ಸ್ವಾಮಿತ್ವವನ್ನು (ಒಡೆತನ) ಕೊಡುವದು; ಕೆಲವು ವಸ್ತುಗಳಲ್ಲಿ ಸಾರವತ್ತೆಯನ್ನು ತಂದಿಡುವದು; ರುದ್ರ ಮುಂತಾದವರಲ್ಲಿ ಸಜಾತೀಯ ವಸ್ತುಗಳಿಂದ ಶ್ರೇಷ್ಠತೆಯನ್ನು ಉಂಟು ಮಾಡುವಂತಹದು; ಇಂದ್ರ, ಶುಕ್ರ, ಅರ್ಜುನ ಮುಂತಾದವರಲ್ಲಿ ಏಕದೇಶದಿಂದ ಆಧಿಕ್ಯವನ್ನಿಡುವಂತಹದು. "ಈ ಮುಂತಾದವುಗಳು ವಿವಿಧ ವಿಭೂತಿಗಳು" ಎಂದು ಶ್ರೀ ವಿಷ್ಣು ರಹಸ್ಯದಲ್ಲಿ ಹೇಳಲ್ಪಟ್ಟಿರುತ್ತದೆ.

"ಶಾಲಿಗ್ರಾಮ ಶಿಲೆಯಲ್ಲಿ ಪೂಜಿಸುವದು ನನಗೆ(ಪರಮಾತ್ಮನಿಗೆ) ಅತಿ ಸಮ್ಮತವಾಗಿರುತ್ತದೆ. ಅದರಲ್ಲಿ ನನ್ನ ಸನ್ನಿಧಾನವು ಕಡಿಮೆಯಾಗುವದಿಲ್ಲ; ಯಾವಾಗಲೂ ಇದ್ದಕ್ಕಿದ್ದಂತೆಯೇ ಇರುತ್ತದೆ" ಎಂದೂ "ಆ ಶಾಲಗ್ರಾಮವು ನೈಜ ಮೂರುತಿಯಾಗಿರುವದರಿಂದ ಚಂಡಾಲರ ಸ್ಪರ್ಶವಾದರೂ ದೋಷ ವಿಲ್ಲ" ಎಂಬುದಾಗಿಯೂ ಹೇಳಲಾಗಿರುತ್ತದೆ. ಮತ್ತು ಆವಾಹನ ತತ್ವ ನ್ಯಾಸ ಮಾತೃಕಾನ್ಯಾಸ ಮುಂತಾದವುಗಳ ಅವಶ್ಯಕತೆ ಇರುವದಿಲ್ಲ" ಎಂದು ಹೇಳಲಾಗಿದೆ. ಹೀಗೆ ಸನ್ನಿಧಿಯಿಲ್ಲದೇ ಸ್ವತಃ ವ್ಯಕ್ತವಾಗಿರುವದು "ಸ್ವಯಂ ವ್ಯಕ್ತವೆನಿಸುತ್ತದೆ" ಎಂದು ಶ್ರೀಮುಷ್ಣ ಮಾಹಾತ್ಮ್ಯೆಯಲ್ಲಿ ಉಕ್ತವಾಗಿರುತ್ತದೆ.

ಬಲರಾಮನಲ್ಲಿಯೂ ಲಕ್ಷ್ಮಣನಲ್ಲಿಯೂ ಇರುವ ಶೇಷನೊಡನೆಯೇ ಶ್ರೀಹರಿಯು ಪ್ರಾದುರ್ಭೂತನಾಗಿರುವದರಿಂದ "ಸಹಜ"ವೆಂದು ಕರೆಯುತ್ತಾರೆ. ಲಕ್ಷ್ಮಣ ಬಲರಾಮರು ಮತ್ತು ಅರ್ಜುನ ಇವರು ಶ್ರೀಹರಿಯ ವಿಶೇಷವಾದ ಆವೇಶದಿಂದ ಕೂಡಿದವರು" ಎಂದು ಶ್ರೀಮದಾಚಾರ್ಯರ

ವಚನವಿರುತ್ತದೆ. ಬಲದೇವನು ಶ್ರೀಹರಿಯ ಶುಕ್ಲಕೇಶದಿಂದಲೂ, ಅರ್ಜುನನು ನರಾವೇಶದಿಂದಲೂ ಯುಕ್ತನು. ಶ್ರೀ ಭಾಗವತ ಮೊದಲನೆಯ ಸ್ಕಂಧದ ತಾತ್ಪರ್ಯದಲ್ಲಿ "ಶಂಖಚಕ್ರ ಗದಾಧಾರಿಯಾದ ಶ್ರೀಹರಿಯು ಶ್ವೇತ (ಬಿಳಿಯ) ವರ್ಣದ ಶುಕ್ಲಕೇಶದಿಂದ ಶೇಷಾಂಶನಾದ ಬಲರಾಮನಲ್ಲಿ ಆವಿಷ್ಟನಾಗಿರುತ್ತಾನೆ" ಎಂದು ಮಹಾ ವರಾಹ ಪುರಾಣದ ವಚನವನ್ನು ಉದಾಹರಿಸಿರುತ್ತಾರೆ. "ನಾರಾಯಣ, ನರ, ಹರಿ–ಕೃಷ್ಣ" ಎಂದು ನಾಲ್ವರು ಧರ್ಮಋಷಿಯ ಪುತ್ರರು. ಅವರಲ್ಲಿ ಶೇಷನು-ನರನು, ಅವನಲ್ಲಿ ನರರೂಪಿ ಹರಿಯು ವಿಶೇಷ ಸನ್ನಿಧಿಯಿಂದ ಇರುತ್ತಾನೆ ಎಂದು ಷಾಡ್ಗುಣ್ಯದಲ್ಲಿ ಹೇಳಲಾಗಿರುತ್ತದೆ. (ದ್ವಿ. ತಾ.) ಬಾಲಚಂದ್ರನಲ್ಲಿ ಖಂಡರೂಪದಿಂದಲೂ, ಸೇನಾವನ ಮುಂತಾದವುಗಳಲ್ಲಿ ಅಖಂಡ ರೂಪದಿಂದಲೂ ಶ್ರೀಹರಿಯು ಇರುತ್ತಾನೆ. ॥ ೧ ॥

ಅವತರಣಿಕೆ=ಹಿಂದಿನ ಪದ್ಯದಲ್ಲಿ ವಿಶದೀಕರಿಸಿದಂತೆ ಉದಕ, ಭೂಮಿ, ಆಕಾಶದಲ್ಲಿ ಚರಿಸತಕ್ಕ ಅನೇಕ ಜೀವರನ್ನು ಪುಟ್ಟಿಸಿ ಅವರಲ್ಲಿರುವ ಸಜಾತಿ, ವಿಜಾತಿ, ಸಾಧಾರಣ ವಿಶೇಶ ವಿಭೂತಿಗಳನ್ನು ವಿವರಿಸುತ್ತಾರೆ.

ಮೂಲ :

**ಜಲಧರಾಗಸದೊಳಗೆ ಚರಿಸುವ ।**
**ಹಲವು ಜೀವರ ನಿರ್ಮಿಸಿಹ ನದ ।**
**ರೊಳು ಸಜಾತಿ ವಿಜಾತಿ ಸಾಧಾರಣ ವಿಶೇಷಗಳ ॥**
**ತಿಳಿದು ತತ್ತತ್ ಸ್ಥಾನದಲಿ ವೆ ।**
**ಗ್ಗಳಿಸಿ ಹಬ್ಬಿದ ಮನದಿ ಪೂಜಿಸು ।**
**ತಲವ ವ್ಯಾಪ್ತನ ರೂಪಗಳ ನೋಡುತಲೆ ಹಿಗ್ಗುತಿರು ॥ ೨ ॥**

**ಪದ್ಯಾರ್ಥ :** ಜಲ=ನೀರಿನಲ್ಲಿ, ಧರಾ=ಭೂಮಿಯಲ್ಲಿ, ಆಗಸ=ಆಕಾಶದಲ್ಲಿ, ಚರಿಸುವ=ತಿರುಗಾಡತಕ್ಕ, ಹಲವು ಜೀವರ=ಅನೇಕ ತರದ ಜೀವರಾಶಿಗಳನ್ನು, ನಿರ್ಮಿಸಿಹ=ಸೃಷ್ಟಿ ಮಾಡಿರುವನು. ಈ ಮೂರು ಬಗೆಯ ಜೀವರಲ್ಲಿ ೧) ಜಲದಲ್ಲಿ ಪುಟ್ಟಿದವು ಸಜಾತಿ, ಇದೇ ಜಲದಲ್ಲಿ ೨) ಬೇರೆ ಬೇರೆ ಯೋನಿಗಳಲ್ಲಿ ಪುಟ್ಟಿದವು ವಿಜಾತಿ ರೂಪ, ೩) ಇವರೊಳಗೆ

ಶಕ್ತಿಹೀನ, ಅವರ ಪ್ರಾಣಿಗಳು ಸಾಧಾರಣ. ಅವುಗಳಲ್ಲಿ ದೇಹ, ಬಲ, ಇತ್ಯಾದಿ ಪ್ರಾಣಿಗಳು ವಿಶೇಷ. ಇದರಂತೆ ಭೂಮಿಯೊಳಗೆ ಜನಿಸಿದ ಜೀವರಲ್ಲಿಯೂ ನಾಲ್ಕು ಪ್ರಕಾರ. ಆಕಾಶದಲ್ಲಿ ಚರಿಸುವ ಜೀವರಲ್ಲಿ ಮೇಲಿನಂತೆ ನಾಲ್ಕು ವಿಧ. ಎಲ್ಲ ಜೀವರಲ್ಲಿಪ್ಪ ತತ್ವಾಭಿಮಾನಿ ದೇವತೆಗಳ ವಿಶೇಷ ರೂಪ. ತತ್ತಸ್ಥಾನದಲ್ಲಿಪ್ಪ ಶ್ರೀಹರಿಯ ೪ ವಿಧ ರೂಪ ತಿಳಿದು, ವೆಗ್ಗಳಿಸಿ=ಹೆಚ್ಚಾಗಿ ಆನಂದಯುಕ್ತವಾಗಿ ಹಬ್ಬಿದ ಮನದಿ=ಮನವು ನಿತ್ಯ ಬಳ್ಳಿಯ ಕುಡಿಯಂತೆ ಹಬ್ಬಿ, ಪರಮಾತ್ಮನ ವ್ಯಾಪ್ತ ವಿಭೂತಿಗಳಲ್ಲಿ ಮನಸ್ಸು ಎರಗಿಸಿ, ಆಲವ=ಬಹು ಪ್ರಕಾರ ವ್ಯಾಪ್ತನ ವಿಭೂತಿ ರೂಪದಿಂದ ವ್ಯಕ್ತವಾಗಿರುವ, ರೂಪಗಳನ್ನು ನೋಡುತ್ತ, ಪೂಜಾ ಮಾಡುತ್ತ, ಹಿಗ್ಗುತಿರು=ಆನಂದ ಪಡುತ್ತಿರು.

**ಶ್ರೀ ವಿಜಯದಾಸರು :** "ಸುರರಂತರ್ಯಾಮಿಯೆ ವಿಶೇಷ ವಿಭೂತಿಯು । ತರುವು ವಿಹಗಾದಿಗತ ಸಾಧಾರಣ । ನರಗತ ಸಜಾತಿಯು । ನಕ್ಷತ್ರ ಚಂದ್ರರಲ್ಲಿ । ಕರೆಸುತಿಹದೆ ಸದಾ ವಿಜಾತಿಯೆಯೆಂದು ಶ್ರೀ ವಿಜಯ ದಾಸರ ಸುಳಾದಿ.

**ದ್ರೌಪದೀಶಪತಿ ವಿಠಲರು** ನಾಲ್ಕು ವಿಧ ಜೀವರ ವಿವರ–ಜಲ ಧರಾಗಸದೊಳಗೆ :

ಜಲ=ವಿಜಾತಿ.

ಭೂಮಿ=ಸಜಾತಿ.

ಅಂತರಿಕ್ಷ=ಸಾಧಾರಣ.

ವಿಶೇಷ=ದೇವತೆಗಳು.

**ಶ್ರೀ ಗುರು ಶ್ರೀಶವಿಠಲರ ಶಿಷ್ಯರು:** ಜಲಧರಾಗಸದೊಳಗೆ ಚರಿಸುವ ಹಲವು ಜೀವರ ನಿರ್ಮಿಸಿಹನು. ಶ್ರೀ ರಮಾಪತಿ ಓಂಕಾರ ಪ್ರತಿಪಾದ್ಯ ಆದಿ ನಾರಾಯಣ ಜಲ=ಜಲದೊಳಗೆ ಸಂಚಾರ ಮಾಡುವಂಥ, ಅನೇಕ ವಿಧ ಯೋನಿಯಲ್ಲಿ ಉತ್ಪನ್ನವಾಗುವಂಥ ತ್ರಿವಿಧ ಜೀವರುಗಳ ಸೃಷ್ಟಿಸಿದ, ಧರ=ಭೂಮಿಯಲ್ಲಿ ಸಂಚಾರ ಮಾಡುವಂಥ ಅನೇಕ ವಿಧ ಯೋನಿಗಳಲ್ಲಿ ಉತ್ಪನ್ನರಾಗುವ ತ್ರಿವಿಧರಾಶಿ ಜೀವರುಗಳ ಶ್ರೀಹರಿ ಸೃಷ್ಟಿ ಮಾಡಿದ.

**ಆಗಸ**=ಆಕಾಶದಲ್ಲಿ ಸಂಚಾರ ಮಾಡುವ, ಅನೇಕ ವಿಧ ಯೋನಿಗಳಲ್ಲಿ ತ್ರಿವಿಧ ಜೀವರನ್ನು ಸೃಷ್ಟಿಮಾಡಿಹನು.

ಅದರೊಳು ಜಲ, ಧರ, ಆಗಸ, ಮೂರು ವಿಧ ಸ್ಥಳದೊಳಗೆ ಸಜಾತಿ, ವಿಜಾತಿ, ಸಾಧಾರಣ ವಿಶೇಷಗಳ, ಈ ಪ್ರಕಾರ ಶ್ರೀ ರಮಾಕಾಂತ ಸ್ವಗತ ಸ್ವರಮಣ ಸೃಷ್ಟ್ಯಾದೃಷ್ಟಕರ್ತ, ಸರ್ವಾಂತರ್ಯಾಮಿ ಆದಿನಾರಾಯಣ, ಸತ್ವ ರಜ ತಮ ತ್ರಿಗುಣಾತ್ಮಕ ಲಿಂಗಾಂಗಿಗಳಾದ ದೇವ, ಮಾನವ, ದಾನವ, ತ್ರಿವಿಧ ಜೀವರ ಹಲವು ಯೋನಿಗಳಲ್ಲಿ ಸೃಷ್ಟಿಸಿ ನಾಲ್ಕು ಪ್ರಕಾರ ಭೇದ ಭೇದವಾಗಿ ಆಚರಣಮಿಶಿ=ವ್ಯಾಪಾರಮಾಡಿಸಿ ಬಾಹ್ಯಾಂತರ ವ್ಯಾಪ್ತನಾಗಿ, ವಿಭೂತಿ ರೂಪಗಳಿಂದ ಶ್ರೀ ಆದಿನಾರಾಯಣ, ಭೂ-ಜಲ-ಖೇ-ತ್ರಿಜಗತ್ತಿನಲ್ಲಿ ಮೂರುವಿಧ ಜೀವಾಂತರ್ಗತನಾಗಿ ವ್ಯಾಪಾರ ಮಾಡುತಿಹ.

೧) ಜಲಚರ ಪ್ರಾಣಿಗಳು, ೨) ಭೂಚರರು, ೩) ಖೇಚರ ಜೀವರು. ತ್ರಿವಿಧ ಜಗತ್ತಿನಲ್ಲಿ ಸಜಾತಿ, ವಿಜಾತಿ, ಸಾಧಾರಣ, ವಿಶೇಷಗಳಿಗೆ ವಿವರ.

ಜಲದಲ್ಲಿ ಸಜಾತಿ ಮತ್ಸ್ಯಗೆ ಮೀನು, ಕೂರ್ಮಗೆ ಕೂರ್ಮ, ತಾಂಬೇಲು ಈ ಪ್ರಕಾರ ಮಾಡುತ್ತ ಏಡಿ, ಮೊಸಳಿ, ಸಜಾತಿ ಸ್ಥಾವರಕ್ಕೆ ಸ್ಥಾವರ. ಸ್ಥಾವರದೊಳಗೆ ದ್ವಿವಿಧ, ತೃಣಾದಿ ವೃಕ್ಷ ಜೀವರು. ಪ್ರತಿಮಾದಿ ಶಿಲಾ. ಜೀವರು ಇದರೊಳಗೆ ಸಜಾತಿ ತೃಣಕ್ಕೆ ವೃಕ್ಷಜೀವ. ಪ್ರತೀಕ-ಪ್ರತೀಕ ಗಳು, ಇದರೊಳಗೆ ಅನಂತ ವಿಧ. ವಿಜಾತಿ ತೃಣ ವೃಕ್ಷಗಳಿಗೆ-ಸಜಾತಿ ತುಲಸಿಗೆ, ರಾಮತುಲಸಿ, ಕೃಷ್ಣತುಲಸಿ, ಪಿಪ್ಪಲ ಅಶ್ವತ್ಥ ವಿಜಾತಿ ಶ್ರೀತುಳಸಿಗೆ ಉಳಿದ ವೃಕ್ಷಗಳು ಸಜಾತಿ ವಿಜಾತಿ ಅನಂತ ಪ್ರಕಾರ, ಸಾಧಾರಣ ಪ್ರತಿಮಾಗಳ ಕಿಂತಶಿಲಗಳು ಪರ್ವತಗಳು ವಿಶೇಷಗಳ, ಪೂರ್ವೋಕ್ತ ಪ್ರಕಾರ ಅನಂತ ವಿಧ ಸ್ಥಾವರ ಜೀವರೊಳಗೆ ಶ್ರೀ ರಮಾ ವಲ್ಲಭ ಶ್ರೀ ಆದಿನಾರಾಯಣನ ಸೃಷ್ಟಿಗೆ ಆದ್ಯಂತ ಮಧ್ಯಗಳ ವಿಚಾರಗಳ ಗಣನಾ ಮಾಡಲಿಕ್ಕೆ ಬ್ರಹ್ಮಾದಿಗಳಿಗೆ ಅಸಾಧ್ಯ. ಶ್ರೀ ರಮೇಶ ಸ್ವಮಹಿಮೆ ಗಳಾದ್ಯಂತ ಶ್ರೀ ನಾರಾಯಣ ತಾನೆ ಬಲ್ಲ. ಚತುರ್ದಶ ಲೋಕಗಳುಳ್ಳ ಬ್ರಹ್ಮಾಂಡದಲ್ಲಿ ಜಲಧರಾಗಸದೊಳಗೆ ಸತ್ವ ರಜ ಸ್ತಮ ಜೀವರ, ಎಂಭತ್ತು ನಾಲ್ಕು ಲಕ್ಷಯೋನಿ ಜೀವರುಗಳ ಸಜಾತಿ-ವಿಜಾತಿ ಸಾಧಾರಣ ವಿಶೇಷಗಳ ತಿಳಿದು, ಭೂ-ಜಲ-ಖೇಚರ, ಮೂಜಗದೊಳಗಿಹ ತ್ರಿವಿಧ ಜೀವರು

ಗಳಂತರ್ಯಾಮಿ, ಅಂಬುಜ ಭವಾಂಡದೊಳು ಒಂಭತ್ತು ವಿಧದಲಿಪ್ಪ ಅಂಬುಜಾಕ್ಷನ ವಿಭೂತಿ ರೂಪಗಳು. ಭೂಮಿಯಲ್ಲಿ ತ್ರಿವಿಧ ಜೀವರು, ಜಲಚರರು ತ್ರಿವಿಧರು. ಖೇಚರರು ತ್ರಿವಿಧ ಜೀವರು. ಮೂರು ವಿಧ ಸ್ಥಳದಲ್ಲಿ ಮೂರು ವಿಧ ಜೀವರು. ಮೂರಮೂರಲೆ ಒಂಭತ್ತು ವಿಧ ರೂಪಗಳು. ಈ ಪ್ರಕಾರ ಶ್ರೀ ಭೂದುರ್ಗಾರಮಣ ಶ್ರೀ ಆದಿನಾರಾಯಣ ನೀರಜಭವಾಂಡೋದಯ ಸ್ಥಿತಿಕಾರಣ ಕೈವಲ್ಯದಾಯಕನಾದ ವಿಭೂತಿ ಮಹದೈಶ್ವರ್ಯಾದಿಗಳಿಂದ ಅಲಂಕೃತವಾದ ನವರೂಪಗಳು, ಜ್ಞಾನಿಗಳ ಮುಖ ಕಮಲಗಳಿಂದ ಶ್ರೀ ನಾರಾಯಣನ ಮಂಗಳಕರವಾದ ವಿಭೂತಿ ರೂಪಗಳ ಕಥಾಶ್ರವಣದಿಂದ, ಕೇಳಿ ತಿಳಿದುಕೊಂಡು ಮನನಮಾಡಿ, ನಿಧಿಧ್ಯಾಸವುಳ್ಳ ಮನಸ್ಸಿನಿಂದ, ಜ್ಞಾನಭಕ್ತಿ ಪುರಸ್ಸರ ತತ್ತತ್ ಸ್ಥಾನದಲಿ ಜಲ ಧರಾಗಸದಲ್ಲಿ, ವೆಗ್ಗಳಿಕೆ=ಶ್ರೀ ನಾರಾಯಣನ ಸ್ಮರಣೆಯಿಂದ ಮೈಮರೆದು, ಆನಂದದಿಂದ, ಜ್ಞಾನದೃಷ್ಟಿಗೆ ಲಭ್ಯವಾದಷ್ಟು ಶ್ರೀ ಆದಿನಾರಾಯಣನ ರೂಪಗಳ ವ್ಯಾಪ್ತತ್ವ ಮನಃಪೂರ್ವಕ ಕಾಯಾ ವಾಚಾ ಮನಸಾ ತ್ರಿಕರಣ ಶುದ್ಧಿಯಿಂದ ಏಕೋಭಾವ ಉಳ್ಳವನಾಗಿ ಪೂಜಿಸುತ; ತನ್ನ ಸ್ವರೂಪಕ್ಕೆ ಯೋಗ್ಯತಾನುಸಾರ, ಸರ್ವತ್ರ ವ್ಯಾಪ್ತನಾದ ಶ್ರೀ ರಮಾ ಕಳತ್ರನ, ಅನು ಸಂಧಾನಪೂರ್ವಕ, ಅರೆಲವ ಮರೆಯದೆ, ಶ್ರೀ ಹರಿಗುರುಗಳ ಸ್ಮರಣೆ ಪೂರ್ವಕ ಶ್ರೀ ವಿಷ್ಣು ಪ್ರೇರಣಯಾ ಶ್ರೀ ವಿಷ್ಣು ಪ್ರೀತ್ಯರ್ಥ ಶ್ರೀ ರಮಾನಿವಾಸ ಭೂವೈಕುಂಠಪತಿ ಶ್ರೀ ಆದಿನಾರಾಯಣನ ಅರ್ಚನ ಮಾಡುತ್ತ; ಅಲವ= ಸ್ವಲ್ಪ, ಅಲವೆಂದರೆ ಪೂರ್ಣವ್ಯಾಪ್ತನ ರೂಪಗಳ ಬ್ರಹ್ಮಾಂಡ ಪಿಂಡಾಂಡದಲ್ಲಿ, ಭೂ-ಜಲ-ಖೇಚರ ಸತ್ವ ರಜ ಸ್ತಮಜೀವರಲ್ಲಿ, ಬಾಹ್ಯಾಂತರದಲ್ಲಿ ಪೂರ್ಣ ವಾಗಿ ತುಂಬಿಕೊಂಡು, ವ್ಯಾಪ್ತವಾದ ನವರೂಪಗಳ, ಶ್ರೀ ಮೂಲರೂಪಿ ನಾರಾಯಣನಿಂದ ಅವತಾರ, ವಿಶ್ವತೈಜಸ, ಪ್ರಾಜ್ಞ, ತುರ್ಯ, ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ ಈ ಪ್ರಕಾರ ಒಂಭತ್ತು ವಿಭೂತಿ ಗಳ ನೋಡುತಲಿ ಹಿಗ್ಗುತಿರು. ಜ್ಞಾನದೃಷ್ಟಿಯಿಂದ ಹಬ್ಬಿದ ಮನದಿ, ಲಭ್ಯವಾದ ಮನಸ್ಸಿನಲ್ಲಿ ಶ್ರೀ ನಾರಾಯಣನ ಮಂಗಳರೂಪ ನೋಡುತಲಿ ಆನಂದ ಉನ್ಮಾಹವುಳ್ಳವನಾಗಿ, ಆನಂದ ಬಾಷ್ಪಗಳಿಂದ ಶ್ರೀಹರಿಚರಣ ಕೊಂಡಾಡುತ್ತ, ಶ್ರೀ ಆದಿನಾರಾಯಣನ ನಾಮಾಮೃತ ವನಧಿಯೊಳಗೆ

ಲೋಲಾಡಿ, ನರ್ತನಮಾಡಿಕೊಳ್ಳುತ್ತ, ಮದ್ಗುರುಗಳಂತರ್ಯಾಮಿ ಶ್ರೀಮದಾನಂದ ತೀರ್ಥಾಂತರ್ಗತ ಶ್ರೀ ರಮಾಕಾಂತ ಶ್ರೀನಿವಾಸನಾರಾಯಣನ ಪೂಜಿಸಿ ಹಿಗ್ಗುತಿರು.

**ಸಾಧಾರಣ :** ಮುಕ್ತಿಯೋಗ್ಯರಿಗೆ ನಿತ್ಯ ಸಂಸಾರಿಗಳು. ರಜೋಜೀವರಿಗೆ, ತಮೋಜೀವರು. ಮನುಷ್ಯರೊಳಗೆ ಸ್ತ್ರೀ ಪುರುಷರ ನೋಡಲಾಗಿ ನಪುಂಸಕ ಸಾಧಾರಣ. ವರ್ಣಗಳೊಳಗೆ ಬ್ರಾಹ್ಮಣನಕ್ಕಿಂತಲೂ ಕ್ಷತ್ರಿಯ ಸಾಧಾರಣ. ಕ್ಷತ್ರಿಯರಿಗಿಂತ ವೈಶ್ಯರು. ವೈಶ್ಯರಿಗಿಂತ ಶೂದ್ರರು ಅವರರು. ಪಶುಗಳೊಳಗೆ ಗೋವಿನಕ್ಕಿಂತ ಸಾಧಾರಣ ಗಜ ವ್ಯಾಘ್ರಾದಿಗಳು. ಇವುಗಳಕ್ಕಿಂತಲೂ ಖರಉಷ್ಟ್ರಾದಿಗಳು. ಸರ್ಪವೃಶ್ಚಿಕಗಳು ಅಧಮ ಜೀವರು.

ವಿಶೇಷಗಳು : ಮುಕ್ತಿಯೋಗ್ಯರು. ಪಶುಗಳೊಳಗೆ ಗೋ ವಿಶೇಷ, ಜಾತಿಯೊಳಗೆ ಬ್ರಾಹ್ಮಣ, ಆಶ್ರಮದೊಳಗೆ ಯತಿ ವಿಶೇಷ.

ಹೀಗೆ ಭೂಚರ ಜೀವರುಗಳು, ಸಜಾತಿ ಜೀವರು. ಅನಂತ ವಿಜಾತಿ, ಅನಂತ ಸಾಧಾರಣ ಜೀವಿಗಳನಂತ ; ಸತ್ವ ರಜ ಸ್ತಮ ಜೀವರುಗಳ ಸ್ವರೂಪ ದೇಹದಲ್ಲಿ ತತ್ತದ್ಯೋನಿ ಸ್ವರೂಪಗಳಂತೆ, ತದಾಕಾರನಾಗಿ ತದ್ವಾಚ್ಯನಾಗಿ ಶ್ರೀ ಭೂ ದುರ್ಗಾರಮಣ ಆದಿನಾರಾಯಣ ಬ್ರಹ್ಮಾಂಡ ಪಿಂಡಾಂಡದಲ್ಲಿ ವ್ಯಾಪ್ತನಾಗಿ ವಿಹರಿಸುವನು.

ಆಗಸದೊಳಗೆ : ಆಕಾಶದಲ್ಲಿ ಸಂಚಾರ ಮಾಡುವ ಜೀವರುಗಳು. ಸಜಾತಿ ಗರುಡಪಕ್ಷಿಗೆ ಖಗ, ಶುಕ ಪಿಕ ಮಯೂರ, ಏವಮಾದಿ ಪಕ್ಷಿಗಳಲ್ಲಿ ಶುಕಗೆ ಗಿಳಿ, ಪಿಕಗೆ ಕೋಕಿಲ, ಮಯೂರಕ್ಕೆ ನವಿಲು, ಈ ಪ್ರಕಾರ ಅನಂತ ಜೀವಿಗಳು, ಸಜಾತಿ ವಿಜಾತಿ. ಗರುಡಗೆ ಗಿಳಿ ಕೋಕಿಲ ಒಂದಕ್ಕೊಂದು ವಿಜಾತಿ. ಸಾಧಾರಣ=ಗರುಡನ ತರುವಾಯ ಉಳಿದ ಪಕ್ಷಿಗಳು. ಸಮಸ್ತ ಪಕ್ಷಿಗಳೊಳಗೆ, ವಾಯಸ, ಘೂಕ ವಿಶೇಷಗಳು. ಪಕ್ಷಿಗಳೊಳಗೆ ಗರುಡ ವಿಶೇಷ. ಸಜಾತಿ ಜೀವರು ಅನಂತ, ವಿಜಾತಿ ಜೀವರು ಅನಂತ, ಸಾಧಾರಣ ಜೀವರನಂತ.

ಇನ್ನೊಂದು ಪ್ರಕಾರ=ಸಜಾತಿ, ವಿಜಾತಿ, ಸಾಧಾರಣ ವಿಶೇಷಗಳು. ಜಲಧರಾಗಸದೊಳಗೆ=ಚಲನ ಜೀವರು ಅಚಲನ ಜೀವರು. ಸ್ಥಾವರ ಜೀವರು, ಜಂಗಮ ಜೀವರು. ಸಜಾತಿ=ಚಲನ ಜೀವರಿಗೆ ಜಂಗಮ

ಜೀವರು. ಏವಮಾದಿ ಅನಂತವಿಧ ಸಜಾತಿ ಯೋನಿಗಳಲ್ಲಿ ಉತ್ಪನ್ನರಾದ ಜೀವರು ಸಜಾತಿ.

ವಿಜಾತಿ=ಮತ್ಸ್ಯಗೆ ವಿಜಾತಿ ಕೂರ್ಮ; ಅದಕ್ಕೆ ವಿಜಾತಿ ನಾನಾವಿಧ ಕ್ರಿಮಿಗಳು.

ಸಾಧಾರಣ=ಮತ್ಸ್ಯ ಕೂರ್ಮಾದಿಗಳಿಗೆ ಮಂಡೂಕಾದಿ ಜಂತುಗಳು ಸಾಧಾರಣ.

ವಿಶೇಷಗಳು=ಸಜಾತಿ ಅನಂತ ಜೀವಿಗಳು, ವಿಜಾತಿ ಅನಂತ-ಸಾಧಾರಣ, ಅನಂತ ಜೀವಿಗಳು.

ಜಲಚರ ಪ್ರಾಣಿಗಳೊಳಗೆ ಸಜಾತಿ, ವಿಜಾತಿ, ಸಾಧಾರಣ ವಿಶೇಷಗಳ ವೊಳಗೆ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ಚತುರ್ಮೂರ್ತ್ಯಾತ್ಮಕ ಶ್ರೀ ರಮಾನಿವಾಸ ಓಂಕಾರ ಪ್ರತಿಪಾದ್ಯ ಆದಿನಾರಾಯಣ ತನ್ನಾಮ ತದ್ರೂಪನಾಗಿ ಅನಂತಾನಂತ ರೂಪಗಳಿಂದ ವ್ಯಾಪ್ತ ನಿರ್ಲಿಪ್ತನಾಗಿ ಅಗಣಿತ ಮಹಿಮಸ್ವಾಮಿ ವ್ಯಾಪಾರ ಮಾಡುತಿಹನು.

ಜಲಚರ ಪ್ರಾಣಿಗಳಲ್ಲಿ ತ್ರಿವಿಧ ಜೀವರು. ಸತ್ವರಿಗೆ ಸತ್ವಜೀವರು ಸಜಾತಿ. ಇವರಿಗೆ ನಿತ್ಯ ಸಂಸಾರಿಗಳು ತಮೋಜೀವರು ವಿಜಾತಿ ವಿಶೇಷಗಳು. ಉಭಯ ಜೀವರಿಗೆ ಮುಕ್ತಿಯೋಗ್ಯರು ವಿಶೇಷರು, ಅನಂತ ಜೀವರು ಸಜಾತಿ ಅನಂತ ಜೀವಿಗಳು ಸಾಧಾರಣರು. ಶ್ರೀ ನಾರಾಯಣ ತ್ರಿವಿಧ ಜೀವರ ಸ್ವರೂಪಗಳೊಳಗೆ, ಅನಂತವಿಧ ರೂಪದಿಂದ ತತ್ತದ್ಯೋನಿ ಜೀವರ ಸ್ವರೂಪ ದೇಹ ಅಂತರ್ಗತನಾಗಿ, ತದ್ರೂಪ ತನ್ನಾಮದಿಂದ ವ್ಯಾಪ್ತನಾಗಿಹ.

ಇನ್ನು ಭೂಮಿಯಲ್ಲಿ ಸಂಚಾರ ಮಾಡುವಂಥ ಜೀವರುಗಳು. ಸಜಾತಿ=ಮನುಷ್ಯರಿಗೆ ಮನುಷ್ಯರು, ಪುರುಷರಿಗೆ ಪುರುಷರು, ಸ್ತ್ರೀಯರಿಗೆ ಸ್ತ್ರೀಯರು, ಮುಕ್ತಿಯೋಗ್ಯರಿಗೆ ಮುಕ್ತಿಯೋಗ್ಯರು, ನಿತ್ಯಸಂಸಾರಿಗೆ ನಿತ್ಯ ಸಂಸಾರಿ. ತಮೋಧಿಕಾರಿಗೆ ತಮೋಧಿಕಾರಿ, ಬ್ರಾಹ್ಮಣಗೆ ಬ್ರಾಹ್ಮಣ, ಕ್ಷತ್ರಿಯಗೆ ಕ್ಷತ್ರಿಯ, ವೈಶ್ಯಗೆ ವೈಶ್ಯ, ಶೂದ್ರಗೆ ಶೂದ್ರ, ತ್ರಿವಿಧ ಜೀವರುಗಳು ಚತುರ್ವರ್ಣಗಳು ಸಜಾತಿಗೆ ಸಜಾತಿ.

ವಿಜಾತಿ. ಭೂಚರರೊಳಗೆ ವಿಜಾತಿ=ಪಶುಗಳು, ಗೋಗಜಾಶ್ವ

ವ್ಯಾಘ್ರ ಸಿಂಹಾದಿ ಮೃಗಗಳು; ಸರ್ಪ, ವೃಶ್ಚಿಕ ಅನೇಕ ವಿಧ ಯೋನಿ ಕ್ರಿಮಿ ಕೀಟಾದಿ ಜೀವರುಗಳು ಸಾಧಾರಣ.

### (೩) ಮತ್ತೊಂದು ಪ್ರಕಾರ

ಜಲಧರಾಗಸದೊಳಗೆ ಸಜಾತಿ, ವಿಜಾತಿ, ಸಾಧಾರಣ ವಿಶೇಷಗಳ ಮತ್ತೊಂದು ಪ್ರಕಾರ **ಸಜಾತಿ=ಭೂಚರರಿಗೆ** ಭೂಚರರು, ಜಲಚರ ಜೀವರಿಗೆ ಜಲಚರರು, ಖೇಚರರಿಗೆ ಖೇಚರ ಜೀವರು. **ವಿಜಾತಿ=ಭೂಚರ** ರಿಗೆ ಜಲಜಂತುಗಳು ಖೇಚರರು ವಿಜಾತಿ ಜೀವರು. **ಸಾಧಾರಣ=ತತ್ತತ್** ಸ್ಥಳದಲ್ಲಿ ತತ್ತತ್ ಜ್ಯಾತಿಗೆ ಅವರ ಜೀವರು. **ವಿಶೇಷಗಳು** ತ್ರಿವಿಧ ಸ್ಥಳದಲ್ಲಿ ಸಂಚಾರ ಮಾಡುವ ಜೀವಿಗಳಿಗೆ, ಹಾಗೆ ಸ್ಥಾವರ ಜೀವಿಗಳಿಗೆ ಮನುಷ್ಯರು ಉತ್ತಮ. ಮಾನುಷರೊಳಗೆ ನಾಲ್ಕು ಜಾತಿ. ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರ. ಇದರೊಳಗೆ ಶೂದ್ರನಕ್ಕಿಂತ ವೈಶ್ಯ ವಿಶೇಷ. ವೈಶ್ಯ ಜೀವನ ನೋಡಲು ಕ್ಷತ್ರಿಯ ಅಧಿಕ. ಕ್ಷತ್ರಿಯನಿಂದ ಅಧಿಕ ಬ್ರಾಹ್ಮಣ ಜೀವ. ಇವರೊಳಗೆ ಸತ್ವ ರಜ ತಮೋಜೀವರೊಳಗೆ, ಸಜಾತಿ ವಿಜಾತಿ ಸಾಧಾರಣ ವಿಶೇಷ ಪೂರ್ವದಲ್ಲಿ ಹೇಳಿದೆ. ತಮೋಜೀವರಿಗೆ ಅಧಿಕ ರಜೋಜೀವಿ. ಈ ಉಭಯರಿಗೆ ಮುಕ್ತಿಯೋಗ್ಯರು ವಿಶೇಷ. ಸತ್ವಾಧಿಕಾರಿಗಳೊಳಗೆ ಮಾನು ಷೋತ್ತಮರುತ್ತಮರು. ಇವರಿಂದಧಿಕ ದೇವತೆಗಳು. ಸಮಸ್ತ ದೇವತೆ ಗಳಿಗೆ ಬ್ರಹ್ಮ ವಾಯುಗಳು ಜೀವೋತ್ತಮರು.

ಈ ಪ್ರಕಾರ ಸ್ವರೂಪದೇಹ ತಾರತಮ್ಯ. ಕ್ಷರಜೀವರು ಬ್ರಹ್ಮ ವಾಯು ಗಳ ನೋಡಲಾಗಿ ನಿತ್ಯಮುಕ್ತಳಾದ ಅಕ್ಷರಳು–ಶ್ರೀ ರಮಾದೇವಿ ವಿಶೇಷಳು. ಈಶಕೋಟಿ ಪ್ರವಿಷ್ಟಳು. ಶ್ರೀ ರಮಾದೇವಿಗೆ ಅನಂತಾನಂತ ಗುಣಗಳಿಂದ ಅನಂತಾನಂತ ರೂಪಾತ್ಮಕ ಸರ್ವಾಂತರ್ಯಾಮಿ ಶ್ರೀ ರಮಾಪತಿ ಓಂಕಾರ ಪ್ರತಿಪಾದ್ಯ ಶ್ರೀ ಆದಿನಾರಾಯಣ ಸರ್ವೇಶಕ್ಷರಾಕ್ಷರ ಜೀವರುಗಳಿಗೆ ವಿಶೇಷ. ಸರ್ವೋತ್ತಮ. ಆದಿಮಧ್ಯಾಂತರಹಿತ. ಚತುರ್ದಶ ಲೋಕದೊಳಗೆ ಚರಾ ಚರ ಜೀವರೊಳಗೆ ತ್ರಿಜಗದ್ವ್ಯಾಪ್ತ ಮಂಗಳಗಾತ್ರ ಪರಮ ಪವಿತ್ರ ಸಜ್ಜನ ಮಿತ್ರ ಅನಾಥರಕ್ಷಕ ದೀನೋದ್ಧಾರ ದೀನಜನ ಬಂಧು ಸರ್ವಸ್ವಾಮಿ, ಶ್ರೀ ರಮಾಲಾಲಿತ ಪಾದಪಲ್ಲವ, ಶ್ರೀ ಭೂದುರ್ಗಾರಮಣ, ಶ್ರೀ ನಾರಾ ಯಣ ಸಜಾತಿ ವಿಜಾತಿ ಸಾಧಾರಣ ವಿಶೇಷ ಜೀವರ **ಸ್ವರೂಪ ದೇಹಗಳಲ್ಲಿ**

ವ್ಯಾಪ್ತ ನಿರ್ಲಿಪ್ತನಾಗಿ ಮಾಡುವ ವ್ಯಾಪಾರ ರೂಪಗಳ ನೋಡುತಲಿ ಹಿಗ್ಗುತಿರು. ಪರಮಾನಂದದಿಂದ ಬಿಂಬರೂಪಿ ಪರಮಾತ್ಮನ್ನ ಪೂಜಾ ಮಾಡುತಿರು. ಸರ್ವತ್ರ ವ್ಯಾಪ್ತನಾದ ಆದಿನಾರಾಯಣನ್ನ ತಿಳಿದು ಸರ್ವ ಸಮರ್ಪಣ ಮಾಡುವುದು ಮಹಾ ಪೂಜಾ ॥ ೨ ॥

**ಜಂಬುಖಂಡಿವಾದಿರಾಜೀಯ=ಭಾವಸೂಚನ. ಜಲಧರೇತಿ ॥೨॥**

ಉಕ್ತಂ ವ್ಯನಕ್ತಿ-ಜಲೇತಿ ॥ ವೆಗ್ಗಳಿಸಿ=ಸ್ಪಷ್ಟವಾಗಿ, ಹಬ್ಬಿದ=ವರ್ಧಿಸಿದ, ಅಲವ=ಬಹು. ॥ ೨ ॥

## ಕನ್ನಡಾರ್ಥ

ಹಿಂದೆ ಹೇಳಿದುದನ್ನು ವಿಶದಪಡಿಸುತ್ತಾರೆ. "ಜಲಧರಾಗಸದೊಳಗೆ" ಎಂಬ ಪದ್ಯದಿಂದ.

ವೆಗ್ಗಳಿಸಿ=ಸ್ಪಷ್ಟವಾಗಿ, ಹಬ್ಬಿದ=ವರ್ಧಿಸಿದ, ಅಲವ=ಬಹು (ಬಹಳ) ॥ ೨ ॥

**ಅವತರಣಿಕಾ:** ಜಡಗಳಾದ ಪ್ರತಿಮಾದಿಗಳು, ಸ್ಥಾವರ ಜೀವರಾದ ಶ್ರೀ ತುಲಸಿ ಪಿಪ್ಪಲಾದಿಗಳಲ್ಲಿ ಜಂಗಮ ಜೀವರಲ್ಲಿಪ್ಪ ವಿಭೂತಿಗಳು. ಪೃಥಿವ್ಯಾದಿ ಪಂಚ ಭೂತಗಳಲ್ಲಿ ದೇಶ, ಕಾಲಗಳಲ್ಲಿಪ್ಪ ವಿಭೂತಿ ರೂಪಗಳನ್ನು ಪ್ರತಿಮ ಸಾಲಗ್ರಾಮ ಎಂಬ ಪದ್ಯದಿಂದ ವರ್ಣಿಸುತ್ತಾರೆ.

ಮೂಲ:

**ಪ್ರತಿಮ ಸಾಲಗ್ರಾಮ ಗೋಽಭ್ಯಾ ।**
**ಗತ ಅತಿಥಿ ಶ್ರೀತುಲಸಿ ಪಿಪ್ಪಲ ।**
**ಯತಿ ವನಸ್ಥ ಗೃಹಸ್ಥ ವಟು ಯಜಮಾನ ಸ್ವಪರ ಜನ ॥**
**ಪೃಥಿವಿ ಜಲಶಿಖಿ ಪವನ ತಾರಾ ।**
**ಪಥ ನವಗ್ರಹ ಯೋಗ ಕರಣ ಭ ।**
**ತಿಥಿ ಸಿತಾಸಿತಪಕ್ಷ ಸಂಕ್ರಮಣವನಧಿಷ್ಠಾನ ॥ ೩ ॥**

**ಪದ್ಯಾರ್ಥ:** ಪ್ರತಿಮ=ದಾರು, ಲೋಹ, ತಾಮ್ರ, ರಜತ, ಹೇಮ, ಮಯಾದಿ ವೆಂಕಟೇಶಾದಿ ಪ್ರತಿಮಾಗಳಲ್ಲಿ, ಚಿತ್ರಲಿಖಿತ ಪ್ರತಿಮಾ, ರಂಗ ವಲ್ಲ್ಯಾದಿ ಸೈಕತಲಿಖಿತ ಮೂರ್ತಿಗಳಲ್ಲಿ, ಗೋ=ಪಶುಜಾತಿಯಲ್ಲಿ ಪೂಜ್ಯ

ವಾದ ಆಕಳಲ್ಲಿ, ಅಭ್ಯಾಗತ=ಅಭಿ+ಆ+ಗತ=ಅಭ್ಯಾಗತ-ತಾನಾಗಿ ಮನೆಗೆ ಊಟಕ್ಕೆ ಬಂದ ಅತಿಥಿ, ಅಂದರೆ ವೈಶ್ವದೇವಕಾಲಕ್ಕೆ, ದೂರದಿಂದ ಶ್ರಮ ಪಟ್ಟು ಬಂದವರಿಗೆ ಅಭ್ಯಾಗತರೆಂದು, ಅತಿಥಿ=ಎಂದರೆ, ಔತನ ಕೊಟ್ಟ ನಂತರ ಊಟದ ವೇಳೆಗೆ ಬಂದವರು. ಶ್ರೀ ತುಲಸಿವೃಕ್ಷ, ಪಿಪ್ಪಲ=ಅರಳೀ ಗಿಡದಲ್ಲಿ ಮತ್ತು ಯತಿಗಳು, ವಾನಪ್ರಸ್ಥರು=ಚೀರವಸ್ತ್ರದಿಂದಿದ್ದು ಗಡ್ಡೆಗೆಣಸು ಮೆಲ್ಲುತ್ತ ಅಡವಿಯ ತಪಸ್ವಿಗಳು, ಗೃಹಸ್ಥ=ಮನೆಮಾಡಿಕೊಂಡು ಸಂಸಾರ ವೃತ್ತಿಯಲ್ಲಿ ಇರುವರು, ವಟು=ಬ್ರಹ್ಮಚಾರಿಗಳು, ತಮ್ಮ ಧರ್ಮದಲ್ಲಿರುವರು. ಸ್ವ=ತನ್ನವರು, ಪರಜನ=ಎರಡನೇದವರಾದ ಭಗವದ್ಭಕ್ತರು. ಇನ್ನು ಪಂಚಭೂತಾದಿ, ಪೃಥಿವಿ=ಭೂಮಿ, ಜಲ=ನೀರು, ಶಿಖಿ=ಅಗ್ನಿ ಬೆಂಕಿ, ಪವನ=ವಾಯು, ತಾರಾಪಥ=ಆಕಾಶ, ಮತ್ತು ನವಗ್ರಹಗಳಾದ ಸೂರ್ಯ, ಚಂದ್ರ, ಮಂಗಳ, ಬುಧ, ಗುರು, ಶುಕ್ರ, ಶನೇಶ್ಚರ, ರಾಹು ಕೇತು ಎಂಬ ಒಂಭತ್ತು ಗ್ರಹಗಳಲ್ಲಿ ಯೋಗ=ವಿಷ್ಕಂಭಾದಿ ಯೋಗಗಳು, ಕರಣ=ಬವಾದಿ ಕರಣಗಳು, ಭ=ಅಶ್ವಿನ್ಯಾದಿ ನಕ್ಷತ್ರಗಳು, ತಿಥಿ=ಪ್ರತಿಪದಾದಿ ೧೫ ತಿಥಿಗಳು, ಸಿತಪಕ್ಷ=ಶುಕ್ಲಪಕ್ಷ, ಅಸಿತಪಕ್ಷ=ಕೃಷ್ಣ ಪಕ್ಷಗಳು, ಸಂಕ್ರಮಣ=೧೨ ಸಂಕ್ರಮಣಗಳು. ಇವೆಲ್ಲವೂ ಶ್ರೀಹರಿಗೆ ಇರಲಿಕ್ಕೆ ಯೋಗ್ಯವಾದ ಸ್ಥಳಗಳು, ಅಧಿಷ್ಠಾನವಾಗಿರುವವು ಅಂದರೆ, ಇವೆಲ್ಲವುಗಳಲ್ಲಿ ಶ್ರೀಹರಿಯು ತಾನು ತನ್ನ ವಿಭೂತಿ ರೂಪಗಳನ್ನಿಟ್ಟು, ಜೀವ ಜಡಗಳ ಕಾರ್ಯಪ್ರವರ್ತಿ ಮಾಡಿಸುವನು. "ಅಧಿಷ್ಠಾನಗಳ ಭೇದ ತಿಳಿದು, ಸಕಲ ವಿಧಿ ಭವಾದಿಗಳ ನೆನೆದು ಪದು ಮೊದಲುಮಾಡಿ, ಪುಷ್ಕರ ಪರಿಯಂತ" ಎಂಬ ಗೋಪಾಲದಾಸರ ಉಕ್ತಿಯಂತೆ ಸಕಲಾಧಿಷ್ಠಾನಗತ ಹರಿಯಚಿಂತನ ಮುಖ್ಯ.

ದ್ರೌಪದೀಶಪತಿ ವಿಠಲರು. ಪ್ರತಿಮಾ ಸಾಲಗ್ರಾಮ ಗೋಅಭ್ಯಾಗತ.

| ಜಡರೂಪ | ಚೇತನರೂಪ |
|---|---|
| ೧ ಪ್ರತಿಮಾ, ೨ ಸಾಲಗ್ರಾಮ | ೩ ಗೋ, ೪ ಅಭ್ಯಾಗತ |
| ೧೫ ಪೃಥಿವಿ, ೧೬ ಅಪ್ಪು | ೫ ಅತಿಥಿ, ೬ ಶ್ರೀತುಲಸಿ |
| ೧೭ ಶಿಖಿ, ೧೮ ಪವನ | ೭ ಅಶ್ವತ್ಥವೃಕ್ಷ, ೮ ಯತಿ |
| ೧೯ ತಾರಾಪಥ, ೨೧ ಯೋಗ | ೯ ವಾನಪ್ರಸ್ಥ, ೧೦ ಗೃಹಸ್ಥ |

| ಜಡರೂಪ | ಚೇತನರೂಪ |
|---|---|
| ೨೨ ಕರಣ, ೨೩ ನಕ್ಷತ್ರ | ೧೧ ಬ್ರಹ್ಮಚಾರಿ, ೧೨ ಯಜಮಾನ |
| ೨೪ ತಿಥಿ, ೨೫ ಸಿತಪಕ್ಷ | ೧೩ ಸ್ವಜನ, ೧೪ ಪರಜನ |
| ೨೬ ಅಸಿತ ಪಕ್ಷ | ೨೦ ನವಗ್ರಹ |
| ೧೩ ಜಡಗಳಲ್ಲಿ | ೧೩ ಚೇತನರಲ್ಲಿ |

**ಶ್ರೀ ಗುರು ಶ್ರೀಶವಿಠಲ ಶಿಷ್ಯರ ವ್ಯಾಖ್ಯಾನ :** ಪ್ರತಿಮ ಶಾಲ ಗ್ರಾಮ । ಪೂರ್ವದಲ್ಲಿ ಸಜಾತಿ, ವಿಜಾತಿ ಸಾಧಾರಣ ವಿಶೇಷಗಳು ವಿಸ್ತಾರ ವಾಗಿ ಹೇಳಿದ್ದ ಕಥಾಭಾಗ. ಶ್ರೀ ಜಗನ್ನಾಥದಾಸರಾಯ ಮಹಾನು ಭಾವರು ಸುಜೀವಿಗಳು ಸುಮಾರ್ಗ ಪ್ರವರ್ತಕರಾಗೋಸುಗ, ಶ್ರೀಹರಿ ಕಥಾಮೃತಸಾರದಲ್ಲಿ, ಸಕಲ ಶಾಸ್ತ್ರಗಳಲ್ಲಿದ್ದ ಶ್ರೀ ರಮಾವಲ್ಲಭ ಶ್ರೀ ಆದಿ ನಾರಾಯಣನ ಮಂಗಳ ಗುಣಗಳ ಅಮೃತಸಾರ ಪ್ರಥಮಾಧ್ಯಾಯದಿಂದ ಚತುರ್ಥಾಧ್ಯಾಯದವರೆಗೆ ವರ್ಣನೆಮಾಡಿ, ಪಂಚಮಾಧ್ಯಾಯದಲ್ಲಿ ಶ್ರೀ ರಮಾವಲ್ಲಭ ಆದಿನಾರಾಯಣನ ವಿಭೂತಿ ರೂಪಗಳ ಕೊಂಡಾಡಿ, ಈ ತೃತೀಯ ಪದ್ಯದಲ್ಲಿ ಶ್ರೀಪತಿ ನಾರಾಯಣನ ಅಧಿಷ್ಠಾನಗತರೂಪಗಳನ್ನು ತಮ್ಮ ಶಿಷ್ಯಮಂಡಲಿಯ ಉದ್ಧಾರಗೋಸುಗ ಪೂರ್ಣಾನುಗ್ರಹದಿಂದ ಉಪ ದೇಶ ಮಾಡಿದರು.

ಶ್ರೀ ಗುರುಭ್ಯೋನಮಃ : ಅಚಲ ಪ್ರತಿಮೆಗಳೊಳಗೆ ಸುವರ್ಣಶಿಲಾದಿ ಪ್ರತಿಮೆಗಳ ನೋಡಲಾಗಿ, ಶಾಲಗ್ರಾಮದಲ್ಲಿ ಶ್ರೀಹರಿ ಸಾನ್ನಿಧ್ಯ ವಿಶೇಷ. ಗೋ, ಸಕಲ ಪಶುಗಳೊಳಗೆ ಗೋವಿನಲ್ಲಿ ಸಾನ್ನಿಧ್ಯ ವಿಶೇಷ. ಅಭ್ಯಾಗತ, ಅತಿಥಿ, ಬ್ರಾಹ್ಮಣರೊಳಗೆ, ಔತನಸ್ಥಿತ ಅತಿಥಿ. ಅಭ್ಯಾಗತ-ಸಕಾಲಕ್ಕೆ ಆಗತನಾದವನು. ಶ್ರೀ ವಿಷ್ಣುಭಕ್ತಿಯುಳ್ಳ ವೈಷ್ಣವರು. ಅತಿಥಿ ಅಭ್ಯಾಗತ ರಲ್ಲಿ ಸ್ವಯಂ ಆದಿನಾರಾಯಣನ ರೂಪ ಸಾನ್ನಿಧ್ಯ ವಿಶೇಷ. ಈ ಪ್ರಕಾರ ಮಹಾಭಾರತದಲ್ಲಿ ಶ್ರೀ ರುಗ್ಮಿಣೀಕಾಂತ-ಶ್ರೀಕೃಷ್ಣ, ಧರ್ಮ ಭೀಮಾರ್ಜುನ ರಿಗೆ ಉಪದೇಶ ಮಾಡಿದ್ದಾನೆ. ಶ್ರೀತುಲಸಿ ಪಿಪ್ಪಲ ತೃಣಾದಿ ವೃಕ್ಷಗಳೊಳಗೆ, ಅಶ್ವತ್ಥಕ್ಕಿಂತ ಶ್ರೀತುಲಸಿ ವಿಶೇಷ, ಯತಿ ವನಸ್ಥ ಗೃಹಸ್ಥ ವಟು, ಚತುರ್ಥಾಶ್ರಮದೊಳಗೆ ಯತಿಯಲ್ಲಿ ವಿಶೇಷ, ಯಜಮಾನ ಸ್ವಪರಜನ ಯಜಮಾನನೇ ಮೊದಲಾಗಿ ಸ್ವಜನ ದೇಹಾನುಬಂಧಿಗಳು ; ಪರ=ಉತ್ತಮ

ಸಜ್ಜನರು, ಪರಜನ=ಉತ್ತಮ ಮುಕ್ತಿಯೋಗ್ಯರು, ಪರಲೋಕ ಬಂಧುಗಳು, ದೇಹಾನುಬಂಧಿಗಳಿಗಿಂತಲೂ ಪರಲೋಕ ಬಂಧುಗಳು ಶ್ರೀಹರಿ ಭಕ್ತರು ಉತ್ತಮರು, ಪೃಥಿವಿ ಜಲ ಶಿಖಿ ಪವನ ತಾರಾಪಥ ಭೂಮಿ ಜಲ ಅಪ್ಪು ಶಿಖಿ=ಅಗ್ನಿ, ಪವನ ವಾಯು, ತಾರಾಪಥ=ನಕ್ಷತ್ರಮಾರ್ಗ=ಆಕಾಶ ಇವು ಶ್ರೀಪತಿ ಆದಿನಾರಾಯಣಗೆ ಅಧಿಷ್ಠಾನ. ನವಗ್ರಹ, ರವಿ ಚಂದ್ರ ಮಂಗಳ ಬುಧ ಗುರು ಶುಕ್ರ ಶನಿ ರಾಹು ಕೇತು ಈ (೯) ನವಗ್ರಹಗಳು ತಿಥಿವಾರ ನಕ್ಷತ್ರಯೋಗ ಕರಣ ಶಿತಾಸಿತ ಪಕ್ಷ=ಶುಕ್ಲ ಪಕ್ಷ, ಕೃಷ್ಣ ಪಕ್ಷ, ಸಂಕ್ರಮಾಣ ಮಾಸ ಏವಮಾದಿಗಳು, ಅವನ ಅಧಿಷ್ಠಾನ=ಓಂಕಾರ ಪ್ರತಿಪಾದ್ಯ ಶ್ರೀ ರಮಾಕಾಂತ ಶ್ರೀ ನಾರಾಯಣನಿಗೆ ಅಧಿಷ್ಠಾನವೆನಿಸುತ್ತವೆ.

**ಭಾವಸೂಚನ:** ವಿಶೇಷ ವಿಭೂತಿ ಹೇಳುತ್ತಾರೆ. ಪ್ರತಿಮೇತಿ ಎಂಟು ವಿಧ ॥ ತದುಕ್ತಂ ಏಕಾದಶಸ್ಕಂಧೇ ಶ್ರೀನಿಲಯೇ ನೋದ್ಧವಂ ಪ್ರತಿ ॥ ದಾರುಮಯೀ ಲೌಹಿ ಲೇಪ್ಯಾ ಲೇಖ್ಯಾಚ ಸೈಕತೀ ॥ ಮನೋಮಯೀ ಮಣಿಮಯೀ ಪ್ರತಿಮಾ ಅಷ್ಟವಿಧಾ ಸ್ಮೃತೇತಿ ॥ ಶೈಲೀ=ಕೃಷ್ಣಾದಿ ಶಿಲಾಪ್ರತಿಮಾ ೧) ದಾರುಮಯೀ=ಚಂದನ ಶ್ರೀನಿವಾಸಾದಿ ಪ್ರತೀಕಾ, ೨) ಲೌಹಿ=ಪಂಚಲೋಹದ ರಾಮಾದಿ ಪ್ರತೀಕಗಳು, ೩) ಲೇಪ್ಯಾ ಶುದ್ಧ ಚತುರಶ್ರ ಪ್ರದೇಶಾ ಬಾಹ್ಯ ಪುರುಷೋತ್ತಮಾದಿ ಪ್ರತಿಮಾ, ೪) ಲೇಖ್ಯಾ=ಚಿತ್ರಲಿಖಿತ ಪ್ರತಿಮಾ, ೫) ಸೈಕತೀ=ಕೃಷ್ಣಾದಿ ಉಸುಬಿನ ಪ್ರತಿಮಾ, ೬) ಮನೋಮಯೀ=ಮಾನಸ ಪೂಜಾದಲ್ಲಿ ಇರತಕ್ಕ ಪ್ರತಿಮಾ, ೭) ಮಣಿಮಯೀ=ಸ್ಫಟಿಕೇಂದ್ರ ನೀಲಾದಿರಚಿತ. ಅಭ್ಯಾಗತೇತಿ ॥ ಉಕ್ತಮೇಕಾದಶಸ್ಕಂಧೇ॥ ಸೂರ್ಯೋಗ್ನಿ ಬ್ರಾಹ್ಮಣಾಗಾವೋ ವೈಷ್ಣವಃ ಖಂ ಮರುಜ್ಜಲಮಿತಿ ॥ ಗೀತಾಯಾಂ ಚ ॥ ಅಶ್ವತ್ಥಸ್ಸರ್ವವೃಕ್ಷಾಣಾಮಿತಿ ॥ ಅಹಂಕ್ರತುರಹಂ ಯಜ್ಞಃ ಸ್ವಧಾಹ ಮಹಮೌಷಧಂ ॥ ಮಂತ್ರೋಹ ಮಹಮೇವಾಜ್ಯ ಮಹಮಗ್ನಿರಹಂ ಹುತಂ ॥ ಭಾಗವತೇಚ ॥ ಆಶ್ರಮಿಣಾಮಹಂತುರ್ಯೇತಿ ॥ ಸ್ಕಾಂದೇಚಾ ಕಲಾಕಾಷ್ಟ ಮುಹೂರ್ತಶ್ಚೇತಿ ॥ ವಿಷ್ಣುರಹಸ್ಯೇ ಚ ॥ ಅಹಂ ಸೋಮೋ ಬೃಹಸ್ಪತಿಃ ॥ ಬ್ರಹ್ಮಾ ವಾಯುಸ್ತತೋ ರುದ್ರೋ ವರುಣೋ ಮಿತ್ರ ಏವಚ ॥ ಯಜಮಾನೋ ಹವಿಶ್ಚಾಹಂ ಸರ್ವಂ ಸರ್ವಸ್ಥಿತತ್ವತಃ ಇತಿ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ವಿಭೂತೀಃ ಆಹ "ಪ್ರತಿಮೇತಿ ||" ವಕ್ಷ್ಯಮಾಣರೀತ್ಯಾ ಅಸ್ಯ ವಿಭೂತಿತ್ವಾ ಅವಸೇಯಾ || ಪಿಪ್ಪಲ="ತಥಾಶ್ವತ್ಥಸ್ಥಿತೋ ಹರಿಃ || ಉತ್ಕರ್ಷ ಹೇತುಃ ವೃಕ್ಷೇಭ್ಯೋ ಯ ಏವಾಶ್ವತ್ಥನಾಮಕಃ|" ಇತ್ಯಾದಿ ವಿಭೂತಿ ತತ್ವೇ|| "ಯತಿ"=ಆಶ್ರಮಾಣಾಂ ತುರಿಯೋಽಹಮ್" ಇತಿಚ || ಪೃಥುತ್ವಾತ್ ಪೃಥಿವೀ || "ಜಲಮ್ ವರುಣೋ ವರುಣಾದಿತಿ || ಶಿಖೀ=ಪಾವಕಃ ಶೋಧ ನಾದಿತಿ || ಪವನ=ಪಾಲಕೈಃ ವನನೀಯತ್ವಾತ್ || ಇತಿ || ರವಜ್ಞೇಯೋ ಯತೋ ರವಿಃ || ಸುಖಾತ್ ಸುಖತ್ವಾತ್ತು ಶಶೀ || ಇತಿ || ಕಲಾಕಾಷ್ಠಾ ಮುಹೂರ್ತಾಶ್ಚ | ಇತ್ಯಾದೇಃ || ೩ ||

## ಕನ್ನಡಾರ್ಥ

ವಿಭೂತಿಗಳನ್ನು ಹೇಳುತ್ತಾರೆ "ಪ್ರತಿಮೆ" ಎಂಬ ಪದ್ಯದಿಂದ, ಮುಂದೆ ಹೇಳಲಾಗುವ ರೀತಿಯಲ್ಲಿ ಪ್ರತಿಮೆಯನ್ನೂ ವಿಭೂತಿಯೆಂದು ತಿಳಿಯಬೇಕು. "ಪಿಪ್ಪಲ"=ಅಶ್ವತ್ಥ. "ಅಶ್ವ (ಕುದುರೆ)ದಂತೆ ಇರುವದರಿಂದ (ನಿಲ್ಲುವದ ರಿಂದ) ಅಶ್ವತ್ಥನೆಂದು ಕರೆಯುತ್ತಾರೆ. ಮತ್ತು ಅಶ್ವತ್ಥವೃಕ್ಷದಲ್ಲಿ ಈ ನಾಮ ದಿಂದ ಇದ್ದು ಸಕಲ ವೃಕ್ಷಗಳಿಗಿಂತಲೂ ಆಧಿಕ್ಯ (ಹೆಚ್ಚಳ)ವನ್ನು ತಂದು ಕೊಟ್ಟಿರುತ್ತಾನೆ" ಎಂದು ವಿಭೂತಿ ತತ್ವದಲ್ಲಿ ಹೇಳಲಾಗಿರುತ್ತದೆ. ಆಶ್ರಮ ಗಳಲ್ಲಿ ಯತಿಯ ಆಶ್ರಮವು ಶ್ರೇಷ್ಠವಾಗಿರುವದು; ಅದರಲ್ಲಿ ಭಗವಂತನ ವಿಭೂತಿ ಇರುವದು ಎಂದೂ ಹೇಳಲ್ಪಟ್ಟಿರುತ್ತದೆ. ಪೃಥು=ವಿಸ್ತಾರ ರೂಪ ವಿರುವದರಿಂದ "ಪೃಥಿವೀ"ಎನಿಸುತ್ತದೆ. ವರವನ್ನೀಯುವದರಿಂದ ವರುಣನು; ಅಥವಾ ವರಿಸುವದರಿಂದ ವರುಣನು; ಶೋಧಿಸಿ-ಸ್ವಚ್ಛಮಾಡುವದರಿಂದ ಶಿಖಿಯು ಪಾವಕನು. ಪಾಲಕರಿಂದ ವನನೀಯನು-ಪ್ರಾರ್ಥಿತನಾದುದರಿಂದ ಪಾವಕನು. ಜ್ಞಾನಿಗಳಿಂದ ತಿಳಿಯಲ್ಪಡುವವನಾದುದರಿಂದ ರವಿಯು, ಸುಖಸ್ವರೂಪನಾದುದರಿಂದ ಶಶಿಯು." ಈ ಮುಂತಾದ ಪ್ರಮಾಣಗಳಿ ಗನುಸಾರವಾಗಿಯೂ "ಕಲಾಕಾಷ್ಠಾ" ಎಂದು ಮುಂತಾದ ಪ್ರಮಾಣಗಳಿ ಗನುಸಾರವಾಗಿಯೂ ಪರಮಾತ್ಮನ ವಿಭೂತಿ ರೂಪಗಳನ್ನು ತಿಳಿಯಬೇಕು. || ೩ ||

ಅವತರಣಿಕಾ: ಸಾಲಗ್ರಾಮದಲ್ಲಿರುವ ನಿತ್ಯಸನ್ನಿಹಿತನಾದ ಸಹಜ ಹರಿಯ ರೂಪಗಳ ವಿವರ ಮಾಹಾತ್ಮ್ಯೆಯನ್ನು ದಾಸಾರ್ಯರು ಕಾದಕಾಂಚನದೊಳಗೆ ಶೋಭಿಪ ಎಂಬ ಪದ್ಯದಿಂದ ಹೇಳುತ್ತಾರೆ.

ಮೂಲ:

**ಕಾದ ಕಾಂಚನದೊಳಗೆ ಶೋಭಿಪ ।**
**ಆದಿತೇಯಾಸ್ಯನ ತೆರದಿ ಲ ।**
**ಕ್ಷ್ಮೀಧವನು ಪ್ರತಿದಿನದಿ ಸಾಲಗ್ರಾಮದೊಳಗಿಪ್ಪ ॥**
**ಐದು ಸಾವಿರ ಮ್ಯಾಲೆ (ಮೇಲೆ) ಮೂವ ।**
**ತ್ರ್ಯೈದಧಿಕ ಐನೂರು ರೂಪದಿ ।**
**ಭೂಧರಗಳಭಿಮಾನಿ ದಿವಿಜರೊಳಿಪ್ಪನನವರತ ॥ ೪ ॥**

**ಪದ್ಯಾರ್ಥ:** ಕಾದಕಾಂಚನ=ಅಕ್ಕಸಾಲಿಗನು ಶುದ್ಧವಾದ ಬಂಗಾರವನ್ನು ಕಾಯಿಸಿದರೆ, ಅಗ್ನಿಯು ಬಂಗಾರದಲ್ಲಿ ವ್ಯಾಪಿಸಿ ಒಳ್ಳೇ ಶುದ್ಧವಾದ ಆದಿತೇಯಾಸ್ಯ=ಅದಿತಿದೇವಿ ಮಕ್ಕಳಾದ ದೇವತೆಗಳಿಗೆ ಮುಖನಾದ (ದೇವತೆಗಳು ಸಕಲ ಹವಿಸ್ಸನ್ನು ಅಗ್ನಿದ್ವಾರಾ ಸ್ವೀಕರಿಸುವರಾದ ಕಾರಣ ದೇವತೆಗಳಿಗೆ ಆಸ್ಯ=ಮುಖನಾದ) ಅಗ್ನಿಯೋಪಾದಿಯಲಿ ಶೋಭಿಪತೆರದಿ= ಪ್ರಕಾಶಮಾನನಾಗಿ ಶೋಭಿಸುವಂತೆ. ಧಾತುಗಳಲ್ಲಿ ಬಂಗಾರವೇ ಶುದ್ಧ, ಅದರಲ್ಲಿ ಪರಿಶುದ್ಧನಾದ ಅಗ್ನಿಯು ವ್ಯಾಪಿಸಿದರೆ ಹೇಗೆ ತೇಜಃಪುಂಜವಾಗಿ ಶೋಭಿಸುವುದೋ, ದೋಷದೂರನೂ, ಪಾವನಾತ್ಮನಾದ ಶ್ರೀ ಲಕ್ಷ್ಮೀಧವ= ಧನಸಂಪದ ಜ್ಞಾನಸಂಪದವಿಗೆ ಒಡೆಯಳಾದ ಲಕ್ಷ್ಮೀದೇವಿಗೆ ಪತಿಯಾದ ಶ್ರೀ ನಾರಾಯಣನು, ಪ್ರತಿದಿನದಿ=ಪ್ರತಿನಿತ್ಯದಲ್ಲಿ ಅಂದರೆ ಸದಾಕಾಲದಲ್ಲೂ ಸಾಲಗ್ರಾಮದೊಳಗೆ ಪ್ರಕಾಶಮಾನನಾಗಿರುವನು. ಅಗ್ನಿಯಂತೆ ಪ್ರಕಾಶ ಮಾನವಾದ ಸಾಲಗ್ರಾಮದಲ್ಲಿ ಸಹಜ ವಿಭೂತಿ ಇರುವದು ಸತ್ಯ. ಇದು ಜ್ಞಾನಿಗಳಿಗೆ ಗೋಚರ, ನಮ್ಮಂಥ ಅಜ್ಞಾನಿಗಳಿಗೆ ತೋರದಾದರೂ ಇಂಥ ಪ್ರಕಾಶಮಾನವಾದ ರೂಪ ಜ್ಞಾನಿ ಗೋಚರವೆಂದು ಸಾಲಗ್ರಾಮ ಮಹಿಮೆ ತಿಳಿದು ಭಜಿಸಿದರೆ ಫಲ ದೊರಕುವದು. (ಸಾ ಲ ಗ್ರಾ ಮ-ಅಂಕಾನಾಮ್ ವಾ ಮ ತೋ ಗ ತಿ ಃ ಗುರುವೃತ್ತ ೫ ३ ೫ ೫ = ೫೫३೫. ಗ್ರಾ ಇದಕ್ಕೆ ಗ+ಆ+ರ=ಕ್ಕೆ ೫ ಆಗುವದು). ಸಾಲಗ್ರಾಮದಲ್ಲಿ-ಪ್ರಕೃತಿ

ಪರಮಾಣುಗಳ ಸಂಖ್ಯೆಯು ೫೫೩೫ ಈ ಬಿಂದುಗಳಲ್ಲಿಪ್ಪ ಹರಿಯ ರೂಪಗಳೆಂದು ತಿಳಿದು ಭಜಿಸಬೇಕು. ಸಾಲಗ್ರಾಮದಿ ನಿತ್ಯಸ್ಯ ಸನ್ನಿಹಿತನಾದ ಹರಿಗೆ ಗೋಳಕ ಚಿಂತನ ಆವಾಹನಾದಿಗಳಿಲ್ಲ. ಈ ಸಾಲಗ್ರಾಮದಲ್ಲಿಪ್ಪ ಶ್ರೀಹರಿಯ ರೂಪವೇ. ಭೂಧರಗಳಭಿಮಾನಿ=ಪರ್ವತಗಳಿಗೆ ಅಭಿಮಾನಿಗಳಾದ, ದಿವಿಜರು=ದೇವತೆಗಳಲ್ಲಿ, ಅನವರತ=ನಿತ್ಯದಲ್ಲಿ ಇರುವುದೆಂದು ಭಜಿಸು. ಶ್ವೇತದ್ವೀಪಗತನಾದ ಶ್ರೀಹರಿಯೇ ನಿತ್ಯವ್ಯಕ್ತನಾಗಿ ಸಾಲಗ್ರಾಮದಿ ಇರುವನೆಂದು ಚಿಂತನೆಮಾಡುವದು.

**ದ್ರೌಪದೀಶಪತಿ ವಿಠಲರು:** ಕಾದಕಾಂಚನದೊಳಗೆ ಶೋಭಿಪ= ಅಯಃಗೋಳಕದಲ್ಲಿ ವನ್ಹಿ ಹೇಗೆ ವ್ಯಾಪ್ತವೋ ಹಾಗೆ ವ್ಯಾಪ್ತರೂಪ ೧ ಸಾಲಗ್ರಾಮದಲ್ಲಿ-ಸಾಲಗ್ರಾಮ ೫೫೩೫ ರೂಪ. ಹಾಗೇವೇ ೨ ಪರ್ವತ, ಚೇತನ ಅಭಿಮಾನಿ; ದೇವತೆಗಳಲ್ಲಿ.

**ಗುರು ಶ್ರೀಶವಿಠ್ಠಲರ ಶಿಷ್ಯರು:** ಕಾದಕಾಂಚನದೊಳಗೆ ಶೋಭಿಪ, ಅಗ್ನಿಸಂಬಂಧದಿಂದ ತಪ್ತಕಾಂಚನದಲ್ಲಿ ಶೋಭಿಪ=ಶೋಭಾಯಮಾನವಾಗಿ ಒಪ್ಪುವಂಥ ಆದಿತೇಯಾಸ್ಯನ ತೆರದಿ, ದೇವತಿಗಳಿಗೆ ಆಸ್ಯಮುಖಸಾದೃಶನಾದ ಅಗ್ನಿಯೋಪಾದಿವೊಪ್ಪುವಂಥಾತನು ಹೇಗೆ ಇರುತ್ತಾನೋ ಹಾಗೆ ಲಕ್ಷ್ಮೀಧವನು ಪ್ರತಿದಿನದಿ=ಶ್ರೀರಮಾಧವ ಶ್ರೀ ನಾರಾಯಣ ನಿತ್ಯ ನಿತ್ಯ ಸರ್ವದಾ ಶಾಲಗ್ರಾಮದೊಳಗೆ, ಕಾದಂಥ ಬಂಗಾರದಲ್ಲಿ ಸಪ್ತಜಿಂಹ್ವ ಪ್ರಕಾಶಮಾನನಾಗಿ, ದಾವಪ್ರಕಾರ ತೋರುತ್ತಾನೋ ಆ ಪ್ರಕಾರ ಶ್ರೀ ಲಕ್ಷ್ಮೀಧವನು ಶ್ರೀ ಆದಿನಾರಾಯಣನು ಇಪ್ಪ=ಇರುತಿಹನು.

ಪ್ರತೀಕಗಳಲ್ಲಿ ಬೀಜಾಕ್ಷರಗಳಿಂದ ಆಹ್ವಾನ ಮಾಡಿದರೆ ಶ್ರೀಹರಿ ಸನ್ನಿದ್ಧನಾಗಿ ಪೂಜೆಗೊಂಬ. ಶಾಲಗ್ರಾಮದಲ್ಲಿ ಸ್ವಯಂವ್ಯಕ್ತ ಸಾನ್ನಿಧ್ಯ. ಇಲ್ಲಿ ಆವಾಹನ ಕೂಡದು. ಕಾರಣ ಸಕಲ ವೃಕ್ಷಗಳೆಲ್ಲ ತುಳಸಿಯ ಹಿಂದೆ, ಸಕಲ (ಶಿಲೆ ಪ್ರತಿಮೆ) ದೈವಗಳೆಲ್ಲ ಶಾಲಗ್ರಾಮದ ಹಿಂದೆ. ಈ ಪ್ರಕಾರ ಜ್ಞಾನಿಗಳ ಉಕ್ತಿ ಅದೆ. ಐದು ಸಾವಿರ ಮ್ಯಾಲೆ ಮೂವತ್ತೈದಧಿಕ ಐನೂರು ರೂಪದಿ, ೫೫೩೫ ಶಾಲಗ್ರಾಮದಿ ಶ್ರೀರಮಾಧವ ಆದಿನಾರಾಯಣ ಸ್ವಯಂ ವ್ಯಕ್ತನಾಗಿ ಶಾಲಿಗ್ರಾಮದೊಳಗೆ ವ್ಯಾಪ್ತನಾಗಿಹ. ಭೂಧರಗಳಭಿಮಾನಿ ದಿವಿಜರೊಳಿಪ್ಪನನವರತ. ಪೃಥಿವ್ಯಾದಿ ಪಂಚಭೂತಾದಿ ಚತು

ರ್ವಿಂಶತಿ ದೇವತೆಗಳಂತರ್ಗತನಾಗಿ ಶ್ರೀ ಆದಿನಾರಾಯಣ ಸರ್ವತ್ರ ಸರ್ವದಾ ವ್ಯಾಪ್ತನಾಗಿಪ್ಪ ॥ ೪ ॥

**ಭಾವಸೂಚನ :** ಕಾದಕಾಂಚನೇತಿ ॥ ಆದಿತೇಯಾಸ್ಯ=ಅಗ್ನಿಃ ॥ ಪ್ರಮೇಯರತ್ನಾಕರೇಚ ॥ ಪಂಚತ್ರಿಂಶಾಧಿಕಃ ಪಂಚಾಶತೋಽಪೇತೇ ಸಾಹಸ್ರಕೈಃ ॥ ಪಂಚಭಿ ರ್ಭಗವಾನ ರೂಪೈಃ ಸಹಜ ಪ್ರತಿಮಾಗತ ಇತಿ ॥ ೪ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಉತ್ತಾನಾಂ ವಿಭೂತಿತಾಂ ಆಹ "ಕಾದೆ" ಇತಿ ॥ ಆದಿತೇಯಾಸ್ಯಃ ಅಗ್ನಿಃ ॥ ಸಹಸ್ರ ಪಂಚತಂ ಪಂಚ ತ್ರಿಂಶತ್‌ಯುತ್‌ಶತ ಪಂಚತವ್‌ ॥ ಇತಿ ॥ ಪ್ರ.ಭಾ.ತಾ ॥ ಪಂಚರಾತ್ರೇ ಚ ॥ ರೂಪಾಣಾಂ ಪಂಚ ಸಾಹಸ್ರಂ ಹರೇಃ ಪಂಚಶತೋತ್ತರಮ್‌ ॥ ತಥೈವ ಪಂಚತ್ರಿಂಶಚ್ಚ ಶಾಲಿಗ್ರಾಮೇತು ವೈ ಹರೇಃ ॥ ಇತಿ ॥ ೪ ॥

## ಕನ್ನಡಾರ್ಥ

ಹಿಂದೆ ಹೇಳಿರುವ ಶಾಲಿಗ್ರಾಮ ಮುಂತಾದವುಗಳಲ್ಲಿರುವ ಭಗವಂತನ ವಿಭೂತಿ ರೂಪಗಳನ್ನು ವಿಶದೀಕರಿಸುತ್ತಾರೆ-"ಕಾದ ಕಾಂಚನದೊಳಗೆ" ಎಂಬ ಪದ್ಯದಿಂದ ಆದಿತೇಯಾಸ್ಯಃ=ಅಗ್ನಿ. ದೇವತೆಗಳಿಗೆ ಮುಖವೆನಿಸಿರುವದರಿಂದ ಅಗ್ನಿಗೆ ಆದಿತೇಯಾಸ್ಯನೆಂದು ಕರೆಯುತ್ತಾರೆ. ಶಾಲಿಗ್ರಾಮದಲ್ಲಿ ೫೫೩೫ ಭಗವದ್ರೂಪಗಳಿರುವವೆಂದು ಪ್ರಥಮಸ್ಕಂಧ ತಾತ್ಪರ್ಯದಲ್ಲಿಯೂ ಪಂಚರಾತ್ರಾಗಮದಲ್ಲಿಯೂ ಹೇಳಲಾಗಿರುತ್ತದೆ ॥ ೪ ॥

**ಅವತರಣಿಕಾ :** ಇನ್ನು ದಾರು ಲೋಹಮಯಾದಿ ಪ್ರತಿಮೆಗಳಲ್ಲಿ ಶ್ರೀ ಹರಿಯ ವ್ಯಕ್ತಾವ್ಯಕ್ತ ರೂಪಗಳನ್ನು ದೃಷ್ಟಾಂತಪೂರ್ವಕವಾಗಿ ಶ್ರೀರಮಣ ಪ್ರತಿಮೆಗಳೊಳಗೆ ಎಂಬ ಪದ್ಯದಿಂದ ಹೇಳುತ್ತಾರೆ.

**ಮೂಲ :**

**ಶ್ರೀರಮಣ ಪ್ರತಿಮೆಗಳೊಳಗೆ ಹದಿ ।**
**ಮೂರಧಿಕವಾಗಿಪ್ಪ ಮೇಲ್ಕೈ ।**
**ನೂರು ರೂಪವ ಧರಿಸಿ ಇಪ್ಪನು ಅಹಿತಾಚಲದಿ ॥**

**ದಾರು ಮಥನವ ಗೈಯ್ಯೆ ಪಾವಕ।**
**ತೋರುವಂತೆ ಪ್ರತೀಕ ಸುರರೊಳು।**
**ತೋರುತಿಪ್ಪನು ತತ್ತದಾಕಾರದಲಿ ನೋಳ್ಪರಿಗೆ ॥ ೫ ॥**

**ಪದ್ಯಾರ್ಥ :** ಶ್ರೀರಮಣ=ಶ್ರೀ ಶಬ್ದವಾಚ್ಯನಾದ ವಿಜ್ಞಾನಮಯ ಹರಿಯು, ಆನಂದಮಯನಾದ ಪುರುಷನು, ತನ್ನಲ್ಲೇ ತಾನು ರಮಣ ಮಾಡುವ-ಸ್ವರಮಣನಾದರೂ, ಶ್ರೀ ಲಕ್ಷ್ಮೀದೇವಿಗೆ ಶ್ರೀ ಸಂಪತ್ತು ಐಶ್ವರ್ಯ ಭೋಗಾದಿಗಳನ್ನು ಕೊಡಲು, ಜಗತ್ತಿನ ಸೃಷ್ಟಿ ಸ್ಥಿತಿ ಲಯಾದಿ ವ್ಯಾಪಾರ ಮಾಡಲು, ಶ್ರೀ ಲಕ್ಷ್ಮೀದೇವಿಯಲ್ಲಿ ರಮಣ ಮಾಡಿದರೆ, ಶ್ರೀ ಲಕ್ಷ್ಮೀದೇವಿಗೆ ಭೋಗಾನಂದವೇ ಹೊರತಾಗಿ ಲಕ್ಷ್ಮೀದೇವಿಯಿಂದ ಶ್ರೀಹರಿಗೆ ಸುಖಾದಿ ಗಳಿಲ್ಲ. (ಸ್ವರಮಣ) ಇಂಥ ಶ್ರೀ ಲಕ್ಷ್ಮೀಪತಿಯೂ ರಮಣನೂ, ಲೋಹಾದಿ ಪ್ರತಿಮೆಗಳಲ್ಲಿ ಪ್ರತಿಮಾ: (೫೧೩) ಹದಿಮೂರಧಿಕವಾಗಿಪ್ಪ ರೂಪವನ್ನು ಧರಿಸಿ, ಆಹಿತ+ಅಚಲ=ಆಹಿತಾಚಲ. ಅಚಲವಾದ ಜಡಪ್ರತಿಮಾಗಳಲ್ಲಿ ಬೀಜಾಕ್ಷರ ಮಂತ್ರಗಳಿಂದ ಅಹಿತ=ಇಟ್ಟ, ಆವಾಹನ ಮಾಡಿದಂತೆ. ಅಧಿ ಕಾರ ವಿವಕ್ಷೆಯಿಂದ ಹರಿ ವ್ಯಕ್ತಾವ್ಯಕ್ತನಾಗಿರುವನು. ಹೇಗೆಂದರೆ, ದಾರು ಮಥನವಗೈಯ್ಯೆ ಪಾವಕ ತೋರುವಂತೆ ಪ್ರತೀಕ ಸುರರೊಳು ತೋರು ತಿಪ್ಪನು=ಯಜ್ಞಾದಿಗಳಲ್ಲಿ ಅರಳಿಕಟ್ಟಿಗೆಯಾದ ಅರಣಿ ಪಾತ್ರೆಯನ್ನು, ಅದೆ ಅರಳಿಕಟ್ಟಿಗೆ ಮಂಥನ=ಕಡಗೋಲಿನಿಂದ ಕಡೆಯಲು, ಕಟ್ಟಿಗೆಯಲ್ಲಿ ಅಡ ಗಿರುವ ಅಗ್ನಿಯು, ಬಾಹ್ಯದಲ್ಲಿ ಪ್ರಕಾಶಮಾನವಾಗಿ ತೋರುವಂತೆ, ಪ್ರತೀಕ ಸುರರೊಳು, ಪ್ರತಿಮಾಂತರ್ಗತರಾದ ದೇವತೆಗಳು, ತದಂತರ್ಗತವಾಯು, ವಾಯ್ವಂತರ್ಗತ ಶ್ರೀಹರಿಯು ಪ್ರಕಾಶಮಾನನಾಗಿ, ತತ್ತದಾಕಾರನಾಗಿ ನೋಳ್ಪರಿಗೆ ತೋರುತಿಪ್ಪನು, ಪ್ರತಿಮಾಪೂಜಾ ಮಾಡುವ ಅಧಿಕಾರಿಗಳ ಯೋಗ್ಯತೆಯಂತೆ ತದಾಕಾರ ತದ್ವಾಚ್ಯ ತದ್ರೂಪನಾಗಿ ತೋರುವನು. ದೇವತೆಗಳು ಅಂತಃ ಬಹಿಃ ಪ್ರಕಾಶರು. ಋಷಿಗಳು ಅಂತಃಪ್ರಕಾಶ ಉಳ್ಳ ವರು. "ಪ್ರತಿಮಾಸು ಅಪ್ರಬುದ್ಧಾನಾಂ" ಎಂಬುವಂತೆ ಸಾಧನ ಸಂಪನ್ನ ರಾದ ಪ್ರತಿಮಾರ್ಚಕರಿಗೆ ಅರಣಿಮಂಥನ ಅಗ್ನಿಯಂತೆ ಬಹಿಃಪ್ರಕಾಶನಾಗಿ ತೋರುವನು. "ಆಹಿತಾದಿ ವಿಭೂತಿಯಾ ನೋಡು ಸೋಹಂ ಎಂಬರೆ ವಿಜಾತಿಯಾ" ಎಂಬ ಶ್ರೀಶವಿಠಲರ ವಚನ ಸರಿಯಾಗಿ ತಿಳಿಯಬೇಕು.

**ದ್ರೌಪದೀಶ ಪತಿ ವಿಠಲರು**=ಶ್ರೀರಮಣ ಪ್ರತಿಮ=೧ ಪ್ರತಿಮಿ=೫೧೩ ತೋರುತಿಪ್ಪನು. ಬ್ರಹ್ಮ ಶೇಷ ಗರುಡ ಪ್ರತಿಮಾಗಳಲ್ಲಿ, ತತ್ತದಾಕಾರ ಭಗವದ್ರೂಪ ಕಾಣಿಸುವನೋಳ್ಪರಿಗೆ ॥ ೫ ॥

ಶ್ರೀಗುರು ಶ್ರೀಶವಿಠ್ಠಲರ ಶಿಷ್ಯರು=ಸತ್ವಾದಿ ಗುಣಗಳಿಗೆ ನಿಯಾಮಕಳಾದ ಶ್ರೀ ರಮಾದೇವಿ ರಮಣ-ವಲ್ಲಭ-ಶ್ರೀ ರಮಾನಿವಾಸ-ಶ್ರೀರಮಣ=ಶ್ರೀ ರಮಾವಲ್ಲಭ, ಶ್ರೀ ಆದಿನಾರಾಯಣ ಪ್ರತಿಮೆಗಳೊಳಗೆ-ಲೋಹ ಶಿಲಾದಿ ವಿಷ್ಣು ಪ್ರತಿಮಾಗಳೊಳಗೆ ಹದಿಮೂರಧಿಕವಾಗಿಪ್ಪ ಮ್ಯಾಲೈನೂರು ರೂಪವ ಧರಿಸಿ ಇಪ್ಪನು. ಆಹಿತಾಚಲದಿ ೫೧೩ ಐನೂರು ಮ್ಯಾಲೆ ಹದಿಮೂರು ರೂಪಗಳ ಧಾರಣಮಾಡಿ ವ್ಯಾಪ್ತನಾಗಿಹ. ಆಹಿತಾಚಲ, ಲೋಹಾದಿ ಅಚಲನ ಪ್ರತೀಕದಲ್ಲಿ ವ್ಯಾಪ್ತನಾಗಿ ಶ್ರೀಹರಿ ಪ್ರಕಾಶನಾಗಿಹ. ದಾರು=ಕಾಷ್ಟವ ಮಥನಗೈಯ್ಯೆ=ಅಗ್ನಿಹೋತ್ರದ ಕಾಲದಲ್ಲಿ ಅರಳಿವೃಕ್ಷದ ಕಾಷ್ಟದ ಪಾತ್ರೆಯೊಳಗೆ, ಅರಳಿಗಿಡ ಕಾಷ್ಟದಿಂದ ಮಥನಮಾಡಿದರೆ, ಪಾವಕ ತೋರುವಂತೆ, ಕಾಷ್ಠದಲ್ಲಿ ಅಗ್ನಿ ಪ್ರಕಾಶವಾಗಿ ತೋರಿದ ಪ್ರಕಾರ, ಪ್ರತೀಕ ಸುರರೊಳು, ಪ್ರತೀಕದಲ್ಲಿ ದೇವತೆಗಳೊಳಗೆ ತೋರುತಿಪ್ಪನು. ತದ್ರೂಪನಾಗಿ ವ್ಯಾಪ್ತನಾಗಿ ಜ್ಞಾನಿಗಳಿಗೆ ಕಾಣಿಸುತಿಹ, ತತ್ತದಾಕಾರನಾಗಿ ನೋಳ್ಪರಿಗೆ, ಜೀವರ ಸ್ವರೂಪ ಯೋಗ್ಯತೆಯಂತೆ, ಜ್ಞಾನದೃಷ್ಟಿಯಿಂದ ನೋಡುವ ಸಜ್ಜನರಿಗೆ, ಯೋಗ್ಯತಾನುಸಾರ ಕಾಣಿಸಿಕೊಂಬ ಶ್ರೀ ನಾರಾಯಣ ॥ ೫ ॥

**ಭಾವಸೂಚನ**=ಶ್ರೀರಮಣೇತಿ ॥ ಪ್ರಮೇಯ ಮಾಲಾಯಾಂಚ ॥ ತ್ರಯೋದಶಾಧಿಕೈಃ ಪಂಚ ಶತೈರರ್ಚಾಗತೋ ಹರೀರಿತಿ ॥ ೫ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

" ಶ್ರೀ " ಇತಿ ॥ ತ್ರಯೋದಶಾಧಿಕಂ ರೂಪಂ ಶತ ಪಂಚಕಮಾಹಿತೇ ॥ ಪಂಚರಾತ್ರೇಚ ॥ ಅರ್ಚಾಯಾಂ ಚಿಂತನೀಯಂ ಸ್ಯಾತ್ ರೂಪಾಣಾಂ ಪರಮಾತ್ಮನಃ ॥ ತ್ರಯೋದಶೋತ್ತರಂ ಪಂಚಶತಂ ಶಾಸ್ತ್ರಾರ್ಥಕೋವಿದೈಃ ॥ ಇತಿ ॥ ದಾರು ಕಾಷ್ಠಃ ॥ ೫ ॥

**ಕನ್ನಡಾರ್ಥ**

ಪ್ರತಿಮೆಗಳಲ್ಲಿ ಶ್ರೀಹರಿಯು ೫೧೩ ರೂಪಗಳಿಂದ ಇರುತ್ತಾನೆ. ಶ್ರೀ ಶಾಸ್ತ್ರಾರ್ಥಕುಶಲರಾದ ಜ್ಞಾನಿಗಳು. ಪ್ರತಿಮೆಯಲ್ಲಿರುವ ಈ ರೂಪಗಳನ್ನು

ತಿಳಿದು ಪೂಜಿಸುತ್ತಾರೆ. ಕಟ್ಟಿಗೆಯನ್ನು ಮಥಿಸಿದ ನಂತರ ಅಲ್ಲಿರುವ ಅಗ್ನಿಯು ಅಭಿವ್ಯಕ್ತವಾಗುವಂತೆ ಶ್ರೀಹರಿಯು-ತತ್ತದಾಕಾರ ರೂಪ ನಾಮ ಗಳಿಂದ ಪ್ರತೀಕದಲ್ಲಿ ವ್ಯಕ್ತಾವ್ಯಕ್ತನಾಗಿರುತ್ತಾನೆ || ೫ ||

**ಅವತರಣಿಕಾ :** ಹಿಂದಿನ ೨ ಪದ್ಯಗಳಲ್ಲಿ ಪೂಜಾರ್ಹವಾದ ಸಾಲಗ್ರಾಮ ಪ್ರತಿಮಾಗಳಲ್ಲಿರತಕ್ಕ ಭಗವದ್ರೂಪ ತನ್ಮಾಹಾತ್ಮ್ಯ ಹೇಳಿ, ಪೂಜಾವಸಾನ ಬಿಂಬೈಕ್ಯ ಸಮನ್ವಯ ಸೂಕ್ಷ್ಮದಿಂದ ತಿಳಿಸಿ, ಈಗ ಪೂಜಾಸಾಧನ ಸಾಮಗ್ರಿಗಳಲ್ಲಿಯೂ ಸಹ ಭಗವಂತನೆ ಇರುವನೆಂದು, ಈ ಪದ್ಯದಿಂದ ಹೇಳುತ್ತಾರೆ.

**ಮೂಲ :**

**ಕರಣ ನೀಯಾಮಕನು ತಾ ಉಪ |**
**ಕರಣದೊಳಗೈವತ್ತೆರಡು ಸಾ |**
**ವಿರದ ಹದಿನಾಲ್ಕಧಿಕ ಶತ ರೂಪಂಗಳನು ಧರಿಸಿ ||**
**ಇರುತಿಹನು ತದ್ರೂಪ ನಾಮಗ |**
**ಳರಿತು ಪೂಜಿಸುತಿಹರ ಪೂಜೆಯ |**
**ನಿರುತ ಕೈಕೊಂಬನು ತೃಷಾರ್ತನು ಜಲವ ಕೊಂಬಂತೆ || ೬ ||**

**ಪದ್ಯಾರ್ಥ :—**ಕರಣ ನೀಯಾಮಕನು=ಕರಣ ಮುಖ್ಯ ಮನಸ್ಸು, ಉಪ-ಪಂಚ ಜ್ಞಾನೇಂದ್ರಿಯ ಪಂಚ ಕರ್ಮೇಂದ್ರಿಯಗಳು, ಇವುಗಳಿಗೆ ನಿಯಾಮಕನಾದ ಶ್ರೀ ಹೃಷೀಕೇಶನಾದ ಹರಿಯು, ತಾನಿದ್ದು ಕರ ಮುಂತಾದ ಇಂದ್ರಿಯಗಳಿಂದ ತನ್ನ ಪೂಜಾ ತಾನೆ ಮಾಡಿಕೊಳ್ಳುವನು. (ಸೇವ್ಯ ಸೇವ ಕನು) ಈ ಹೃಷಿಕೇಶನೇ, ಉಪಕರಣದೊಳಗೆ=ಪೂಜಾಸಾಧನ ದ್ರವ್ಯ ಗಳಾದ, ಘಂಟಾ, ನೀಲಾಂಜನ-ಹಲಿಗಾರ್ತಿ, ಕಲಶ ಮುಂತಾದ ಪದಾರ್ಥ ಗಳಲ್ಲಿ, ಐವತ್ತೆರಡು ಸಾವಿರದ ಹದಿನಾಲ್ಕಧಿಕ ಶತ ರೂಪಗಳ ಧರಿಸಿ,= ಪೂಜಾ ಸಾಧನವಾದ ಉಪಕರಣದಲ್ಲಿ, ಅಲ್ಲಿಪ್ಪ ಪ್ರಕೃತಿ ಪರಮಾಣುಗಳಂತೆ (೫೨೧೧೪) ರೂಪ, ಅಥವಾ ಗುರುವೃತ್ತ ನಿಯಮಪ್ರಕಾರ ಉ=೪, ಪ=೧ ಕ=೧ ರ=೨, ಣ=೫. ಅಂಕಾನಾಂ ವಾಮತೋ ಗತಿಃ ಎಂಬ ಪ್ರಮಾಣಾನು ಸಾರ ೫೨೧೧೪ ಇಷ್ಟು ರೂಪಗಳಿಂದ ಪೂಜಾ ಸಾಧನಗಳಲ್ಲಿ ತಾನಿದ್ದು ತನ್ನ ಪೂಜಾಕ್ಕೆ ತಾನೆ ಸಾಧನ ರೂಪವಾಗಿರುವನು. (ಈ ರೂಪಗಳನ್ನೆಲ್ಲ ಅರಿ

ವುದು-ಅರಿತು ನೋಡುವುದು. ಜ್ಞಾನ ಯೋಗಿಗಳಿಗೆ ಗೋಚರ.) ಇರುತಿಹನು ತದ್ರೂಪನಾನುಗ=ಪೂಜಾ ಸಾಧಕಗಳಾದ, ಘಂಟಾ-ಶಂಖ ಇತ್ಯಾದಿ ಪದಾರ್ಥಗಳಲ್ಲಿ ಆಯಾ ರೂಪದಂತೆ, ಆಯಾ ನಾಮಗಳನ್ನು ಧಾರಣ ಮಾಡಿರುವನು. ಈ ಪ್ರಕಾರ, ಪೂಜಾಸಾಧನ ದ್ರವ್ಯಗಳಲ್ಲಿ ಪೂಜಾ ಮಾಡತಕ್ಕ ಪ್ರತಿಮಾಸಾಲಗ್ರಾಮಗಳಲ್ಲಿ, ಇರುವ ಶ್ರೀಹರಿಯು ಒಬ್ಬನೇ ಎಂದು ತಿಳಿದು ಈ ಎಲ್ಲ ರೂಪಗಳಿಗೂ ಬಿಂಬೈಕ್ಯ ಚಿಂತಿಸಿ ಯಾರು ನಿರಂತರ ಪೂಜಿಸುವರೋ ಅವರ ಪೂಜೆಯನ್ನು, ಬಹು ಆತುರದಿಂದ, ನಿರುತ ಕೈಕೊಂಬನು ತೃಷಾರ್ತನು ಜಲವ ಕೊಂಬಂತೆ=ಬಿಸಲಿನಿಂದ ಬಳಲಿ ನೀರಡಿಕೆಯಾದವನು, ಬಾಯಿ ಒಣಗಿ, ನೀರು ಅಪೇಕ್ಷ ಉಳ್ಳವನಾಗಿ ಆರ್ತನಾಗಿ ಜಲವ-ನೀರನ್ನು ಕುಡಿದು ತೃಪ್ತನಾಗುವಂತೆ ಶ್ರೀಹರಿಯು, ಇಂತು ತ್ರಿವಿಧ ರೂಪಗಳಿಗೆ ಐಕ್ಯ ಚಿಂತಿಸುವರ ಪೂಜೆಯನ್ನು ಆದರದಿಂದ ಸ್ವೀಕರಿಸಿ, ತೃಪ್ತಿಬಡುವನು. ಸಕಲ ವ್ಯಾಪ್ತಿರೂಪ, ಸಕಲ ವಸ್ತುಗತ ತದ್ರೂಪ, ಕರಚರಣಾದ್ಯವಯವಗಳಾದ ಚಿನ್ಮಯ ರೂಪಗಳು ಒಂದೇ ಎಂದು ತಿಳಿಯುವುದು ಉತ್ತಮ ಪೂಜೆ.

**ಶ್ರೀ ದ್ರೌಪದೀಶಪತಿ ವಿಠಲರು :** ಕರಣ ನಿಯಾಮಕನು-೧ ಉಪಕರಣ ೫೨೧೧ಗಳ ತತ್ತದಾಕಾರದಿಂದ ಇರುತ್ತಾನೆ.

**ಶ್ರೀಗುರು ಶ್ರೀಶವಿಠಲರ ಶಿಷ್ಯರು :** ಕರಣ ನಿಯಾಮಕನು, ಕರಣ=ಇಂದ್ರಿಯಗಳು ನಿಯಾಮಕನು, ದಶೇಂದ್ರಿಯಗಳಿಗೆ ನಿಯಾಮಕನಾದ ಶ್ರೀ ಹೃಷಿಕೇಶನು, ತಾನುಪಕರಣದೊಳಗೆ=ತಾನು ಹೃಷಿಕೇಶಾತ್ಮಕ ಆದಿ ನಾರಾಯಣ, ಉಪಕರಣ-ಶ್ರೀ ರಮಾವಲ್ಲಭ ಶ್ರೀ ನಾರಾಯಣನ ಪೂಜೋಪಚಾರ ಪದಾರ್ಥ-ನೀಲಾಂಜನ, ಹಲಿಗಾರ್ತಿ, ಕಲಶ, ಘಂಟಾ, ತೀರ್ಥ ಪಾತ್ರೆ ಏವಮಾದಿ ಉಪಕರಣಗಳೊಳಗೆ, ಐವತ್ತೆರಡು ಸಾವಿರದಾ ಹದಿನಾಲ್ಕಧಿಕ ಶತ, ೫೨೧೧ಗಳ ಉಪಕರಣ ರೂಪಂಗಳು ಧರಿಸಿ ಧಾರಣಮಾಡಿ, ಇರುತಿಹನು, ಶ್ರೀ ನಾರಾಯಣನು ಪೂಜಾಪ್ರಕ್ರಿಯೆಗಳೊಳಗೆ, ತದಾಕಾರನಾಗಿ ವ್ಯಾಪ್ತನಾಗಿಹನು. ತತ್ತದ್ರೂಪತನ್ನಾಮಗಳರಿತು, ತಿಳಿದು, ಪೂಜಿಸುತಿಹರ ಪೂರ್ವೋಕ್ತಪ್ರಕಾರ ಸ್ವೋತ್ತಮರ ಮುಖದಿಂದ ಶ್ರವಣಮಾಡಿ ತಿಳಕೊಂಡು, ಶ್ರೀ ರಮಾವಲ್ಲಭ ಓಂಕಾರ ಪ್ರತಿಪಾದ್ಯ ಆದಿ ನಾರಾಯಣನ ಪೂಜಾಮಾಡುವ ಭಗವದ್ಭಕ್ತರ, ಪೂಜೆಯ=ಜ್ಞಾನಭಕ್ತಿ

ಪುರಸ್ಸರ ಮಾಡುವಂಥಾ ಪೂಜಾವನ್ನು, ನಿರುತ ಕೈಕೊಂಬನು=ನಿತ್ಯ-ಸರ್ವದಾ ಸ್ವೀಕಾರ ಮಾಡುವನು. ತೃಷಾರ್ತನು ಜಲವಕೊಂಬಂತೆ= ಸರ್ವಾಂತರ್ಯಾಮಿ ಶ್ರೀ ಪರಮಾತ್ಮನ ಧ್ಯಾನಪರನಾಗಿ ಆದರದಿಂದ, ತದ್ವಾಚ್ಯನಾದ ನಾರಾಯಣನ ಸ್ಮರಣ ಪೂರ್ವಕ ಮಾಡಿದಂಥಾ ಪೂಜಾ, ತೃಷಾರ್ತನು=ನೀರಡಿಸಿ ಆರ್ತನಾದ ಪುರುಷನು, ಜಲವನ್ನು ದಾವಪ್ರಕಾರ ಸ್ವೀಕಾರ ಮಾಡುತ್ತಾನೋ, ಆ ಪ್ರಕಾರ, ಕರುಣಾಸಾಗರ ಶೇಷಶಾಯಿ ಭಕ್ತವತ್ಸಲ, ತನ್ನ ಭಕ್ತರು ಮಾಡಿದ ಪೂಜಾ ಸ್ವೀಕಾರಮಾಡಿ ಆದಿನಾರಾಯಣ ಪ್ರೀತನಾಗುವನು ॥ ೬ ॥

**ಭಾವಸೂಚನ :** ಉಪಕರಣ ದಶೇಂದ್ರಿಯಗಳು ॥ ಶ್ರೀ ಪ್ರವೃತ್ತೀಚ॥ ದ್ವಿಪಂಚಶತ್ಸಹಸ್ರೈಸ್ತು ಚತುಭಿರ್ದಶ ಸಂಯುತೈ । ಶತೈರ್ವಿರ್ಣತೈ ಸ್ವರೂಪೇಸ್ತು ಹೃಷೀಕೇಷುಗತೋ ಹರಿಃ ಇತಿ ॥ ೬ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಕರಣ ನಿಯಾಮುಕನು" ಇತಿ ॥ ದ್ವಿಪಂಚಾಶತ್ ಸಹಸ್ರಂ ತು ಶತೋತ್ತರ ಚತುರ್ದಶ ।। ರೂಪೈಃ ಪ್ರಧಾನ ಚಿತ್ತಸ್ಥಃ ಪೂಜೇಚ್ಛುರುದ ಮಾರ್ತವತ್ ।। ಇತಿ ।। ೬ ।।

## ಕನ್ನಡಾರ್ಥ

೫೨೧೧೪ ರೂಪಗಳಿಂದ ಶ್ರೀಹರಿಯು ಉಪಕರಣಗಳಲ್ಲಿ ಇರುತ್ತಾನೆ. ಇಂದ್ರಿಯಗಳಲ್ಲಿ ಮುಖ್ಯವಾದ ಮನಸ್ಸು-ಚಿತ್ತಗಳಲ್ಲಿ ಪ್ರೇರಕನಾಗಿ ಇರುತ್ತ ಶ್ರೀಹರಿಯು, ನೀರಡಿಸಿದವನು ನೀರನ್ನು ಸ್ವೀಕರಿಸುವಂತೆ ಆತುರದಿಂದ ಭಕ್ತರು ಮಾಡುವ ಪೂಜೆಯನ್ನು ಸ್ವೀಕರಿಸುತ್ತಾನೆ. ಶ್ರೀಹರಿಗೆ ಭಕ್ತರ ಪೂಜೆಯನ್ನು ತೆಗೆದುಕೊಳ್ಳುವ ಆದರಾತಿಶಯವನ್ನು ಮಾತ್ರ ಇಲ್ಲಿ ದೃಷ್ಟಾಂತದಿಂದ ಸ್ಫುಟ ಪಡಿಸಿರುತ್ತಾರೆಯೇ ಹೊರತಾಗಿ ನೀರಿನಿಂದ ಸಮಾಧಾನ, ತೃಪ್ತಿ ಮುಂತಾದ ಪ್ರಯೋಜನಗಳಾಗುವಂತೆ ಭಗವಂತನಿಗೆ ಭಕ್ತರ ಪೂಜೆಯಿಂದ ಯಾವ ಪ್ರಯೋಜನವೂ ಆಗುವದಿಲ್ಲವೆಂದು ತಿಳಿಯಬೇಕು.

**ಅವತರಣಿಕಾ:** ಬಿಂಬರೂಪನಾದ ಹರಿಯು, ಸಕಲ ಜಡಪದಾರ್ಥಗಳಲ್ಲಿ ಸಜ್ಜೀವರಾದ ಬ್ರಹ್ಮಾದಿ ತೃಣಾಂತ ಜೀವರಲ್ಲಿ ಇದ್ದು ತತ್ತತ್ಕಾರ್ಯ ಮಾಡಿಸುವನೆಂದರಿವುದೇ

ಮುಖ್ಯ. ಕಾಲಕಾಲಕ್ಕೆ ಹರಿಕೊಟ್ಟದ್ದೆ ನಿರಪೇಕ್ಷದಿಂದ ಭುಂಜಿಸಿ ಬಿಂಬನಾದ ಶ್ರೀಹರಿಯ ಭಜಿಸುವದೆಂದು ಈ ಪದ್ಯದಿಂದ ಶ್ರೀ ದಾಸಾರ್ಯರು ಹೇಳುವರು.

**ಮೂಲ :**

**ಬಿಂಬರೂಪನು ಈ ತೆರದಿ ಜಡ ।**
**ಪೊಂಬಸಿ (ಸು) ರ ಮೊದಲಾದ ಸುರರೊಳ ।**
**ಗಿಂಬುಗೊಂಡಿಹನೆಂದರಿದು ಧರ್ಮಾರ್ಥ ಕಾಮುಗಳ ॥**
**ಹಂಬಲಿಸದನುದಿನದಿ ವಿಶ್ವ ಕು ।**
**ಟುಂಬಿ ಕೊಟ್ಟ ಕಣಾನ್ನ ಕುತ್ಸಿತ ।**
**ಕಂಬಳಿಯೆ ಸೌಭಾಗ್ಯವೆಂದವನಂಘ್ರಿಗಳ ಭಜಿಸು ॥ ೬ ॥**

**ಪದ್ಯಾರ್ಥ :** ಬಿಂಬರೂಪನು=ತನ್ನ ಹೃತ್ಕಮಲ ಕರ್ಣಿಕಾಸ್ಥಿತನಾದ ಶ್ರೀ ಭೂಮಿಯರಿಂದ ಸಹಿತನಾದ ಅಗ್ರೇಶನಾದ ಹರಿಯೇ, ಸಕಲ, ಜಡ= ಮೂಲಪ್ರಕೃತಿ ಪರಮಾಣುಗಳಲ್ಲಿ ಕದುಪಚಯವಾದ ೨೪ ಜಡ ತತ್ವಗಳಲ್ಲಿ, ಬಹಿಬ್ರಹ್ಮಾಂಡ-ಅಂತರ ಬ್ರಹ್ಮಾಂಡ ಸಕಲ ಜಡವಸ್ತುಗಳಲ್ಲಿ, ಪೊಂಬಸಿರ= ಪೊಂಬಸುರ=ಪೊಂ-ಹೊನ್ನು ಬಂಗಾರ, ಬಸುರ=ಹೊಟ್ಟೆಯುವ, ಬಂಗಾರ ದೊಡಲುಳ್ಳ ಹಿರಣ್ಯ ಗರ್ಭನಾದ ಬ್ರಹ್ಮದೇವರೇ ಮೊದಲಾದ ಸುರರೊಳಗೆ ದೇವತೆಗಳೊಳಗೆಂದು ಹೇಳುವದರಿಂದ ಸಕಲ ಚೇತನರಾದ ಜೀವರು ಗಳಲ್ಲಿಯೂ ಇಂಬುಗೊಂಡಿಹನೆಂದರಿದು, ಸದಾ ಜಡಚೇತನರಲ್ಲಿ ಆಶ್ರಯ ನಾಗಿ ಮನೆಮಾಡಿಕೊಂಡು ಸತ್ಯುತನಾಗದೇ ಸಕಲರ ಬಿಂಬನಾಗಿರುವನೆಂದ ರಿವುದು.

"ಎನ್ನ ಸ್ವಾಮಿ, ಸರ್ವಸ್ವಾಮಿ, ಭಿನ್ನರಹಿತ ಅಖಿಳ ಜಗದಂತ ರ್ಯಾಮಿ" ಎಂದು ವೇಣುಗೋಪಾಲದಾಸರ ವಚನ.

"ಬ್ರಹ್ಮಾಂಡಂತರ್ಬಹಿಸ್ಥಾನಾಂ ರೂಪಾಣಾಂ ಮಧಿಸರ್ವಶಃ ।
ಆತ್ಮಹೃತ್ಪಗೇನೈಕ್ಯ, ಚಿಂತನಂ ಪರಮಾರ್ಚನ ॥

(ಮಾನಸಸ್ಮೃತಿ)

ಈ ಪ್ರಕಾರ ಬಿಂಬೈಕ್ಯ ಚಿಂತಿಸುತ್ತ, ಧರ್ಮ=ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಟ್ಟ ಪುಣ್ಯಕರ್ಮ, ಅರ್ಥ=ದ್ರವ್ಯ, ಸಂಪತ್ತು, ಕಾಮ=ಬಯಕೆ, ಅಪೇಕ್ಷ, ತ್ರಿವಿಧ ಪುರುಷಾರ್ಥಗಳನ್ನು ಹಂಬಲಿಸದೆ=ಚಿಂತಿಸದೆ, ಅನುದಿನದಿ=

ನಿರಂತರದಲ್ಲಿ ಇತರ ಅಪೇಕ್ಷ ಮಾಡದೇ, ವಿಶ್ವಕುಟುಂಬಿ=ಸಕಲ ಜಗತ್ತನ್ನೇ ರಕ್ಷಣ ಮಾಡುವ, ಅವ್ಯಾಕೃತ ಗ್ರಹಸ್ಥನಾದ ಹರಿಯು, ಯಾವ ಕಾಲಕ್ಕೆ ಏನು ಕೊಡುವನೋ ಆತನು ತನ್ನಿಚ್ಛೆಯಿಂದ ಕೊಟ್ಟ, ಕಣಾನ್ನ=ಕಣ=ಕಾಳು, ಸೂಕ್ಷ್ಮವಾದ ಸ್ವಲ್ಪೇ ಅನ್ನ ಅಥವಾ ಕಣಾನ್ನ=ಕದನ್ನ, ನಿಂದ್ಯವಾದ ಹೊತ್ತಿ ಹುರಿದ ಅನ್ನ, ಕುತ್ಸಿತ=ನಿಂದ್ಯವಾದ, ಕಂಬಳಿಯೇ=ಹರಕು ಕಂಬಳಿಯೇ, ಶ್ರೀಹರಿಯಿತ್ತದೆ ಮಹಾ ಸೌಭಾಗ್ಯವೆಂದು ತಿಳಿದು, ಅವ ನಂಘ್ರಿಗಳ=ಆ ಬಿಂಬರೂಪಿ ಹರಿಯ ಅಂಘ್ರಿ-ಪಾದದಲ್ಲಿರುವ ಶ್ರೀಕೃಷ್ಣನನ್ನು ನಿತ್ಯ ಭಜಿಸುವದೇ ಮಹಾ ಭಾಗ್ಯ. "ಯದೃಚ್ಛಾ ಲಾಭದಿಂ ತುಷ್ಟನಾಗುವದೇ" ಫಲವಿದು ಬಾಳ್ದುದಕೆ || ಎಂಬ ದಾಸರ ವಚನ.

**ಶ್ರೀ ದ್ರೌಪದೀಶಪತಿ ವಿಠಲರು :** ಬಿಂಬರೂಪನು ಜಡಗಳಲ್ಲಿ ಪೊಂಬಸುರ, ಬ್ರಹ್ಮಾದಿಗಳಲ್ಲಿ || ೭ ||

**ಶ್ರೀಗುರು ಶ್ರೀಶವಿಠಲರ ಶಿಷ್ಯರು :** ಬಿಂಬರೂಪನ=ಹೃದಯಾಂತರ್ಗತ ಬಿಂಬಮೂರ್ತಿ ಶ್ರೀ ರಮಾಪತಿ ನಾರಾಯಣನ, ಈ ತೆರದಿ=ಈ ಪ್ರಕಾರದಿಂದ, ಸತ್ವಗುಣ ರಾಜಸ ತಾಮಸಗುಣ, ತ್ರಿಗುಣ, ಪ್ರಥುವ್ಯಾದಿ ಚತುರ್ವಿಂಶತಿ ತತ್ವಗಳು, ನಿತ್ಯಜಡ, ಅನಿತ್ಯಜಡ ನಿತ್ಯಾನಿತ್ಯ ಜಡಗಳು. ನಿತ್ಯ ಜಡದೊಳಗೆ ಮೂರು ವಿಧ. ಅನಾದಿನಿತ್ಯ ಅಪರಿಚ್ಛಿನ್ನ ಅವ್ಯಾಕೃತಾಕಾಶ, ಅನಾದಿನಿತ್ಯ ಅಪರಿಚ್ಛಿನ್ನ ಅನಂತ ವೇದಗಳು, ಅನಾದಿನಿತ್ಯ ಅಪರಿಚ್ಛಿನ್ನ ಅಜಾದಿ ಪಂಚಾಶದ್ವರಣಗಳು, ಈ ಪ್ರಕಾರ ನಿತ್ಯ ಜಡಗಳು.

ಅನಿತ್ಯಜಡ ಮೂರು ಪ್ರಕಾರ, ಪ್ರಾಕೃತಜಡ, ವಿಕೃತಜಡ, ವೈಕೃತ ಜಡಗಳು. ಈ ತ್ರಿವಿಧ ಜಡಗಳಿಗೆ ವಿವರ ಪ್ರಾಕೃತಜಡ ತ್ರಿಗುಣಗಳು. ವಿಕೃತಜಡ ಬ್ರಹ್ಮಾಂಡದ ಹೊರಗೆ ದಶಾವರಣ, ಚತುರ್ವಿಂಶತಿ ತತ್ವಾತ್ಮಕವಾದಂಥವು. ಇನ್ನು ವೈಕೃತ ಜಡಗಳು-ಪುರಾಣಾದಿಗಳು ಪರಮಾಣುಗಳು, ಲವತೃಟಿ ಅನಂತ ಸೂಕ್ಷ್ಮಕಾಲ ಮಹಕಾಲ ಅಣುಕಾಲ. ಇನ್ನು ನಿತ್ಯಾನಿತ್ಯಜಡಗಳು-ವರಣನಿತ್ಯ, ಶಬ್ದ ಅನಿತ್ಯ. ಈ ಪ್ರಕಾರ ಜಡಗಳೊಳಗೆ ಪೊಂಬಸುರ ಹೊಂಬಣ್ಣ ಸುವರ್ಣ, ಬಸುರ-ಉದರ, ಪೊಂಬಸುರ=ಹಿರಣ್ಯಗರ್ಭ, ಬ್ರಹ್ಮ ಮೊದಲಾದ ಸುರರೊಳಗೆ ಹಿರಣ್ಯಗರ್ಭನಾದ ಬ್ರಹ್ಮಾದಿ ಆದಿ ಶಬ್ದದಿಂದ ಬ್ರಹ್ಮ ವಾಯು ಸರಸ್ವತಿ ಭಾರತಿ ಗರುಡಶೇಷ ರುದ್ರ ಸೌಪರಣಿ

ವಾರುಣಿ ಪಾರ್ವತಿ ಇಂದ್ರಾದಿ ದೇವತೆಗಳೊಳಗೆ, **ಇಂಬುಗೊಂಡಿಹ ನೆಂದರಿದು**=ಸಮಸ್ತ ಬ್ರಹ್ಮಾದಿ ದೇವತೆಗಳೊಳಗೆ ಸಕಲ ಜಡಗಳೊಳಗೆ, ವ್ಯಾಪ್ತನಾಗಿ ಶ್ರೀ ರಮಾಪತಿ ಶ್ರೀ ನಾರಾಯಣ ಅಂತರ್ಗತನಾಗಿ ಇಹನೆಂದು ತಿಳಿದು, **ಧರ್ಮಾರ್ಥಕಾಮಗಳ**=ಧರ್ಮ ಅರ್ಥ ಕಾಮ ಮೋಕ್ಷ, ಚತುರ್ವಿಧ ಪುರುಷಾರ್ಥಗಳ **ಹಂಬಲಿಸದೆ**=ಇಚ್ಛೈಸದೆ, ಅನುದಿನದಿ= ಪ್ರತಿದಿವಸಗಳಲ್ಲಿ ವಿಶ್ವಕುಟುಂಬಿ ಜಗತ್ಕುಟುಂಬಿ, ಕೊಟ್ಟ ಕಣಾನ್ನ ಚತು ರ್ದಶಲೋಕದ ಜೀವಜಡಾತ್ಮಕವಾದ ವಿಶ್ವಕುಟುಂಬಿ ಶ್ರೀ ನಾರಾಯಣ ನಿಂದ ದತ್ತವಾದಂಥ, ಓದನ, ಕುತ್ಸಿತ ಕಂಬಳಿ, ಕೇವಲ ಕನಿಷ್ಟವಾದ ರೋಮಶಾಠಿಯಾಗಲಿ, ಸೌಭಾಗ್ಯವೆಂದು, ಶ್ರೀ ರಮಾಕಾಂತ ಶ್ರೀ ನಾರಾ ಯಣನ ಇಚ್ಛಾದಿಂದ ದತ್ತವಾದಂಥ ಕಣಾನ್ನನಳ ವಿಭಾಗ ಓದನ ಕಂಬಳಿಯೆ ಪರನು ಸೌಭಾಗ್ಯವೆಂದು, ಅವನಂಘ್ರಿಗಳ ಭಜಿಸು=ಅವನ ಶ್ರೀ ಆದಿನಾರಾ ಯಣನ ಅಂಘ್ರಿಗಳ ಭಜಿಸು=ಸುಜ್ಞಾನ ಭಕ್ತಿ ಪುರಸ್ಸರ ಸರ್ವೇಶ್ವರ ಶ್ರೀ ರಮಾಲಾಲಿತ ಪಾದಪಲ್ಲವಗಳ ಭಜನಮಾಡು.

**ಪೂರ್ವ ಪಕ್ಷ**=ಆದಿನಾರಾಯಣ ಜಗತ್ಪತಿ. ರಮಾ ಬಹ್ಮಾದಿ ಗಳಿಂದ ಪೂಜ್ಯ ಜಗತ್ ಸ್ವಾಮಿಗೆ ಅವನಂಘ್ರಿಗಳ ಭಜಿಸು. ಅವನು ಎಂದರೆ ಏಕವಚನವಾಯಿತು. ಬಹುವಚನದಿಂದ ಸ್ವಾಮಿ ಚರಣಗಳ ಕೊಂಡಾಡು ಅಂತ ಹೇಳಿದೆ. ಶ್ರೀ ಗುರು ಜಗನ್ನಾಥದಾಸರಾಯರು, ಏನು ಕಾರಣ ಏಕವಚನ ಪ್ರಯೋಗ ಮಾಡ್ಯಾರೆಂದರೆ, ಶ್ರೀ ರಮಾಪತಿ ಪ್ರಣವಪ್ರತಿಪಾದ್ಯ ಆದಿನಾರಾಯಣ, ಚತುರ್ದಶ ಲೋಕಗಳಿಗೆ ಸಕಲ ಜೀವ ಜಡಗಳಿಗೆ, ಒಬ್ಬನೇ ಕಾರಣಕರ್ತ. ಶ್ರೀ ನಾರಾಯಣನ ವಿನಾ ಇನ್ನೊಬ್ಬ ರಿಲ್ಲವೆಂದು, ಯೇಕಮೇವಾ ದ್ವಿತೀಯಂ || ಎಂಬ ಶ್ರುತಿ ಪ್ರತಿಪಾದಿಸು ತ್ತಿದೆ. ಕಾರಣ ಶ್ರೀ ನಾರಾಯಣಗೆ ಏಕವಚನ ಬಂದು ಸ್ವಾಮಿಗೆ ಕೂಡು ತ್ತದೆ. ರಮಾ ಬ್ರಹ್ಮಾದಿ ಸತ್ವಾದಿ ಜಗತ್ತು ಸರ್ವೇಶ್ವರನ ಅಧೀನವೆಂದು, ದೇವತೆಗಳು ಕೊಂಡಾಡುತ್ತಾರೆ. ಶ್ರೀ ಸತ್ವಾದಿ ಜಗತ್ತು ಈಶಾವಶವೆಂದು ಭೂಸುರೋತ್ತಮರು ಪೇಳ್ವರು. "ಮುಖ್ಯ ಪ್ರಾಣವಶೇತ್ಸರ್ವಂ ಸವಿಷ್ಣೋರ್ವ ಶಗಃ ಸದಾ ||" ಹೀಗಿದ್ದ ಪ್ರಯುಕ್ತ, ಶ್ರೀ ಆದಿನಾರಾಯಣ ಒಬ್ಬನೇ

ಜಗದುದ್ಧಾರಕರ್ತನೆಂದು ಶ್ರೀ ಜಗನ್ನಾಥದಾಸರಾಯ ಮಹಾನುಭಾವರು, ಅವನಂಘ್ರಿಗಳ ಭಜಿಸೆಂದು ಸಜ್ಜನರಿಗೆ ಉಪದೇಶಿಸಿದರು.

**ಪೂರ್ವಪಕ್ಷ** ಬ್ರಹ್ಮ, ಗರುಡ, ಶೇಷ, ದೇವೇಂದ್ರ ಇವರಿಗೆ ಆತ ಬ್ರಹ್ಮ, ಆತ ಗರುಡ ಈ ಪ್ರಕಾರ ಪ್ರತ್ಯೇಕ ಪ್ರತ್ಯೇಕನಾಮ ಹಾಗೆ ಉಳದಾದ ಜೀವಿಗಳಿಗೆ ಅವಯಿವನೆಂದು ಲೋಕವ್ಯವಹಾರ ಏಕವಚನದಿಂದ ಕರೆಯುತ್ತಾರೆ. ಆದರೊಳಗೆ ಸ್ವಾಮಿ ಮಹಿಮೆ ವಿಶೇಷ. ಏನೆಂದರೆ, ಬ್ರಹ್ಮ ರುದ್ರೇಂದ್ರಾದಿಗಳು ಸಮಜೀವರು. ಅನೇಕ ಜೀವರು ಅಸೃಜ್ಯರಾಗಿರುವಾಗ ನಾಮ ಉಂಟಾಗಿರೋದಿಲ್ಲ. ಶ್ರೀ ಆದಿನಾರಾಯಣನ ಆಜ್ಞೆಯಿಂದ ಸೃಷ್ಟರಾದ ಮೇಲೆ ಜೀವರಧಿಕಾರಾನುಸಾರ ಒಂದೊಂದು ಪದದಿಂದ, ಆ ನಾಮದಿಂದ ಕರೆಸುತ್ತಾರೆ.

**ಮತ್ತು ಪೂರ್ವ ಪಕ್ಷ:** ಪದದಿಂದ ನಾಮ ಉಂಟಾದಾಗ್ಯೂ, ಮುಕ್ತ್ಯನಂತರ ನಿತ್ಯಪದವುಳ್ಳವರಾಗಿ ಅವರವರ ನಾಮದಿಂದ ಕರೆಸುತ್ತಾರಲ್ಲಾ ಎಂದರೆ, ಮುಕ್ತರಾದಮೇಲಾದರೂ ದಾವದಾವ ಪದದಿಂದ ಮುಕ್ತರಾಗಿರುತ್ತಾರೋ ಅವರವರ ಯೋಗ್ಯತಾನುಸಾರ ವೈಕುಂಠದಲ್ಲಿ ತಮ್ಮತಮ್ಮ ಆವಾಸಕ್ಕೆ ಯೋಗ್ಯರಾಗಿ, ತಾರತಮ್ಯಾನುಸಾರ ಆನಂದಾನುಭವ ಮಾಡುತ್ತಾರೆ. ಬ್ರಹ್ಮನ ಸ್ಥಳ ಗರುಡಶೇಷಾದಿಗಳಿಗೆ ಇಲ್ಲ. ಈ ಪ್ರಕಾರ ತರತಮಾನುಸಾರ ವುಳದಾದ ದೇವತೆಗಳಿಗೆ ಆವಾಸ. ಮುಕ್ತಿಯಲ್ಲಾದರೂ, ಆವಾಸ ಸ್ಥಳ ಭೇದದಿಂದ ತತ್ತನ್ನಾಮದಿಂದ ಕರೆಸುತ್ತಾರೆ. ವಿನಾ ಸರ್ವಶಬ್ದ ವಾಚ್ಯ ಶ್ರೀ ರಮಾಕಾಂತ ಬ್ರಹ್ಮನಾಮ ಮುಖ್ಯವಾಗಿ, ಪರತತ್ವನಾದ ಪರಬ್ರಹ್ಮ ಆದಿನಾರಾಯಣ ಸರ್ವಪದಕ್ಕೂ ಶ್ರೀಹರಿಯೇ ಮುಖ್ಯಕರ್ತ. ಬ್ರಹ್ಮಗರುಡ ಭವಾದಿಗಳ ನಾಮ. ಶ್ರೀ ನಾರಾಯನ ನಾಮ. ಇತರ ದೇವತೆಗಳಿಗೆ ಆಭಾಸ ನಾಮ. ಅನಂತ ಬ್ರಹ್ಮ ಭವಾದಿ ಜೀವರು, ಅಸೃಜ್ಯರಾಗಿದ್ದಾರೆ ಸೃಷ್ಟರಾಗಿ ಅನಂತ ಬ್ರಹ್ಮಭವಾದಿಗಳು ಮುಕ್ತಿಪದ ಹೊಂದುತ್ತಾರೆ. ಜೀವರು ಬಹು ಪ್ರಕಾರ ಇದ್ದಕಾರಣ ಇವರಿಗೆ ಏಕವಚನ ಕೂಡದು. ಬ್ರಹ್ಮಾದಿಗಳಿಗೆ ಪ್ರತಿಜೀವರುಂಟು. ಶ್ರೀ ಲಕ್ಷ್ಮೀಕಾಂತ ಶ್ರೀ ನಾರಾಯಣ ಅಪ್ರತಿಮ. ಸ್ವಾಮಿ ಸಮರು ದಾರೂ ಇಲ್ಲ.

**ಪುನಃ ಪೂರ್ವಪಕ್ಷ:** ಶ್ರೀ ನಾರಾಯಣನ ರೂಪಗಳು, ಕೇಶವಾದಿ

ಮತ್ಸ್ಯಾದಿ ವಿಶ್ವಾದಿ ಅನೇಕ ರೂಪಗಳು ಅವೆ. ಶ್ರೀ ನಾರಾಯಣ ಒಬ್ಬನೇ ಹ್ಯಾಗೆಂದರೆ, ಶ್ರೀ ಆದಿನಾರಾಯಣ ಕೇಶವಾದಿ ರಾಮಕೃಷ್ಣಾದಿ ಅವತಾರಗಳ ಮಾಡಿದಾಗ್ಯೂ, ಮೂಲರೂಪಿ ನಾರಾಯಣನಿಗೂ, ಕೇಶವಾದಿ ರಾಮ ಕೃಷ್ಣಾದಿ ಅನಂತ ಅವತಾರಗಳಿಗೂ ಭೇದವಿಲ್ಲ. ಆತನೇ ಈತ, ಈತನೇ ಆತ.

ಇನ್ನು ಬ್ರಹ್ಮಾದಿ ಜೀವರುಗಳು ಅನಂತ. ಬ್ರಹ್ಮಭವಾದಿಗಳಿಗೆ ತರತಮ ಕಾರಣ, ಮುಕ್ತ ಬ್ರಹ್ಮ ಬೇರೆ, ಸೃಷ್ಟಿಗೆ ಬಂದ ಬ್ರಹ್ಮ ಬೇರೆ. ಅಸೃಜ್ಯ ಬ್ರಹ್ಮ (ಋಜುಗಳು). ಈ ಪ್ರಕಾರ ಗರುಡ ಶೇಷ ಭವಾದಿಗಳು ಅನೇಕ ವಿಧ ಜೀವರು. ಆ ಬ್ರಹ್ಮ–ಈ ಬ್ರಹ್ಮ, ಈ ಬ್ರಹ್ಮನೇ–ಆ ಬ್ರಹ್ಮ ಆಗೋದಿಲ್ಲ. ಜೀವರು ಬಹು ಪ್ರಕಾರ ಇದ್ದ ಕಾರಣ "ಏಕಮೇವಾನ್ನ ದ್ವಿತಿಯನ್" ಎಂಬೋ ಶ್ರುತಿಗೆ ಮುಖ್ಯವಾಗಿ ಶ್ರೀ ಆದಿನಾರಾಯಣ ಒಬ್ಬನೇ ಕಾರಣನೆಂದು ಗ್ರಂಥಕಾರರು ಉದಾಹರಣ ಮಾಡಿದ್ದಾರೆ. ಶ್ರೀ ನಾರಾಯಣ ಒಬ್ಬನೇ ಅನಂತ, ಅನಂತನೇ ಒಬ್ಬ. ಈ ಪ್ರಕಾರ ಶ್ರುತಿ ಸ್ಮೃತಿಗಳಲ್ಲಿ ಉಕ್ತವಾಗಿ ಅದಂತೆ. ಜ್ಞಾನಿಗಳು, ಶ್ರೀ ರಮಾಕಾಂತ ಆದಿನಾರಾಯಣನ ಮಾಹಾತ್ಮ್ಯ ಕೊಂಡಾಡುತ್ತಾರೆ. ಪ್ರಮಾಣ ॥ "ಮುಖ್ಯತಃ ಸರ್ವ ಶಬ್ದೈಶ್ಚ ವಾಚ್ಯ ಏಕೋ ಮಿತಾತ್ಮಕಾ ॥ ಅವ್ಯಕ್ತ ಕರ್ಮ ವಾಕ್ಯೈಶ್ಚ ವಾಚ್ಯ ಮೇಕೋ ಜನಾರ್ದನಃ ॥ ೭ ॥

**ಭಾವಸೂಚನ :** ಬಿಂಬೇತಿ, ಪೊಂಬಸುರ ಬ್ರಹ್ಮ, ಹಂಬಲಿಸಲು, ಅಪೇಕ್ಷಿಸಲು, ಕಣಾನ್ನ ಕದಾನ್ನ ॥ ೭ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಬಿಂಬ" ಇತಿ ॥ ತೆರ=ರೀತಿಃ ॥ ಪೊಂಬಸರು=ಹಿರಣ್ಯಗರ್ಭಃ ॥ ಇಂಬು=ಸ್ಥಲ ॥ ಹಂಬಲಿಸದೆ=ಇಚ್ಛಿಸದೆ । ಕಣಾನ್ನೇತಿ ॥ ದೈವೋಪ ಸಾದಿತಂ ಯಾವತ್ ಇತಿ ಉಕ್ತ್ವಾ ಪರಿತುಷ್ಯೇತ್ತತಸ್ತಾತ ತಾವನ್ಮಾತ್ರೇಣ ಪೂರುಷಃ ॥ ಇತಿ ಧ್ರುವಂ ಪ್ರತಿ ನಾರದೋಕ್ತೇಃ ॥ ೭ ॥

### ಕನ್ನಡಾರ್ಥ

ತೆರ=ರೀತಿ. ಪೊಂಬಸುರ=ಹಿರಣ್ಯಗರ್ಭ. ಅಂದರೆ ಚತುರ್ಮುಖ ಬ್ರಹ್ಮದೇವನು, ಇಂಬು=ಸ್ಥಳ, ಹಂಬಲಿಸದೆ=ಇಚ್ಛಿಸದೆ "ಕಣಾನ್ನ"

ಎಂಬಲ್ಲಿ ಈ ವಿಶೇಷ ಸಂಗತಿಯನ್ನು ತಿಳಿಯಬೇಕು. ಭಾಗವತ ಚತುರ್ಥ ಸ್ಕಂಧದಲ್ಲಿ ಧ್ರುವನಿಗೆ ನಾರದರು ಈ ರೀತಿಯಾಗಿ ಉಪದೇಶಿಸಿರುತ್ತಾರೆ. "ಭಗವದ್ವ್ಯಾಪಾರಗಳನ್ನು ನಿರೀಕ್ಷಿಸಿ ತಿಳಿದು, ಭಗವದಿಚ್ಛೆಯಿಂದ ಒದಗಿ ಬಂದುದರಿಂದ ಬುಧನು ಸಂತೋಷವನ್ನು ಹೊಂದಬೇಕು." ಎಂಥ ಸ್ಥಿತಿಯು ತನಗೆ ಬಂದರೂ ತನ್ನ ಕರ್ಮಾನುಬಂಧಿಯಾಗಿ ಬಂದುದೆಂದು ಬಗೆದು ಭಗವಂತನ ಇಚ್ಛೆಯೆಂದು ಅದನ್ನು ಭುಂಜಿಸಿ ಸಂತುಷ್ಟನಾಗಬೇಕು" ಎಂಬುದು ತಾತ್ಪರ್ಯ ॥ ೭ ॥

**ಅವತರಣಿಕಾ :** ಪೂಜಾ ಸಾಧನಗಳಾದ ನೀರು, ತುಲಸಿ, ಪುಷ್ಪ, ಗಂಧ, ದೀಪಾದಿಗಳಲ್ಲಿರುವ ಭಗವನ್ಮೂರ್ತಿಗಳ ವಿವರ. ಮತ್ತು ಮಾಹಾತ್ಮ್ಯ ಇವುಗಳನ್ನು ವಾರಿಯೊಳಗಿಪ್ಪತ್ತು ನಾಲ್ಕು ಈ ಪದ್ಯದಿಂದ ಹೇಳುತ್ತಾರೆ.




**ಮೂಲ :**

**ವಾರಿಯೊಳಗಿಪ್ಪತ್ತು ನಾಲಕು ।**
**ಮೂರೆರಡು ಸಾವಿರದ ಮೇಲ್ಮು ।**
**ನ್ನೂರು ಹದಿನೇಳೆನಿಪರೂಪವು ಶ್ರೀತುಳಸಿ ದಳದಿ ॥**
**ನೂರು ಅರುವತ್ತೊಂದು ಪುಷ್ಪದಿ ।**
**ಮೂರಧಿಕ ದಶದೀಪದೊಳು ನಾ ।**
**ನೂರು ಮೂರು ಸುಮೂರ್ತಿಗಳು ಗಂಧದೊಳಗಿರುತಿಹವು ॥ ೮ ॥**

**ಪದ್ಯಾರ್ಥ :** ವಾರಿಯೊಳಗೆ=ನೀರಿನಲ್ಲಿ, ವಾ=೪+ರಿ=೨ ಎಡದಿಂದ ಬಲಕ್ಕೆ ೨೪ ರೂಪಗಳು. ಪ್ರಕೃತಿ ಪರಮಾಣುಗಳಂತೆ ಎಲ್ಲಕಡೆಗೆ ರೂಪಗಳನ್ನು ಅರಿಯಬೇಕು. (ವೈಜ್ಞಾನಿಕರು ಸಹ ಇದೇ ತತ್ವವನುಸರಿಸಿ ನೀರಿನಲ್ಲಿ ೨೪ ಪಾಯಿಂಟು ಎಂದು ಹೇಳುತ್ತಾರೆ.) ಮೂರೆರಡು ಸಾವಿರದ ಮೇಲ್ಮುನ್ನೂರು ಹದಿನೇಳಿಪ ರೂಪವು ಶ್ರೀ ತುಳಸಿ ದಳದಿ ॥ ಶ್ರೀತುಲಸಿ ೫೩೧೭. ಇಲ್ಲಿ ಸರಿಯಾಗಿ ಸಂಖ್ಯಾಗಣನೆ, ವಾಮಾಂಕವಿಲ್ಲ. ಶ್ರೀತುಲಸಿ ದಳಗಳಲ್ಲಿ ಇಷ್ಟು ರೂಪಗಳು ಚಿಂತಿಸಬೇಕು.

ಇಲ್ಲಿ ಸಾಕ್ಷಾತ್ ರಮಾಸಾನ್ನಿಧ್ಯ. ಸವ್ಯಾಂಕ

ಪುಷ್ಪ=ಪು-೧ ಷ-೬ ಪ೧=೧೬೧ ರೂಪಗಳು. ಸವ್ಯಾಂಕ, ದೀಪ= ದೀ=೩-ಪ ವಾಮಾಂಕ. ದೀಪದಲ್ಲಿ ೧೩ ರೂಪಗಳು. ಗಂಧದೊಳಗೆ ಗಂಧ=ಗ-೩-೦-೦, ಧ ೪=೪೦೩ ವಾಮಾಂಕ, ಗಂಧದೊಳಗೆ ೪೦೩ ರೂಪಗಳು ಇರುವವು. ಶ್ರೀ ದಾಸಾರ್ಯರ ಉಕ್ತಿಯಲ್ಲಿ ವಿಶ್ವಾಸವಿಟ್ಟು, ಈ ವಿಭೂತಿ ರೂಪಗಳನ್ನು ನಿತ್ಯ ಪೂಜಾವ್ಯಾಳ್ಯ ಚಿಂತಿಸಬೇಕು.

**ದ್ರೌಪದೀಶಪತಿ ವಿಠಲರು:** ವಾರಿಯೊಳಗೆ ೧. ಉದಕ-೨೪, ೨. ಶ್ರೀ ತುಳಸಿ.೫೩೧೭, ೩. ಪುಷ್ಪ-೧೬೧, ೪. ದೀಪ-ಹದಿನೂರು, ೫. ಗಂಧ-೪೦೩.

**ಗುರು ಶ್ರೀಶವಿಠ್ಠಲರ ಶಿಷ್ಯರು:** ವಾರಿಯೊಳಗಿಪ್ಪತ್ತುನಾಲಕು, ವಾರಿ=ಉದಕ, ಶ್ರೀ ರಮಾಕಾಂತ ಆದಿನಾರಾಯಣಗೆ ಅಭಿಷೇಕ ಮಾಡುವ ಅರ್ಘ್ಯೋದಕದಲ್ಲಿ, ಇಪ್ಪತ್ತುನಾಲ್ಕು ಚತುರ್ವಿಂಶತಿ ರೂಪಗಳು, ಮೂರೆರಡು ಸಾವಿರದ ಮೇಲ್ ಮುನ್ನೂರು ಹದಿನೇಳೆನಿಪ ರೂಪವು ಶ್ರೀ ತುಲಸಿದಳದಿ= ಶ್ರೀತುಲಸಿ ದಳದಲ್ಲಿ ೫೩೧೭ ರೂಪಗಳು. ಇಷ್ಟು ರೂಪಗಳಿಂದ ವ್ಯಾಪ್ತ ನಾಗಿಹನು. ನೂರು ಅರುವತ್ತೊಂದು ಪುಷ್ಪದಿ=೧೬೧ (ಪುಷಪ). ಮೂರಧಿಕ ದಶದೀಪದೊಳು, ೧೩ ತ್ರಯೋದಶ ರೂಪದಿಂದ ದೀಪದಲ್ಲಿ ಜ್ಞಾನಪ್ರದ ರೂಪಗಳು. ನಾನೂರು ಮೂರು ಮೂರ್ತಿಗಳು ಗಂಧದೊಳಿರುತಿಹವು= ೪೦೩ ರೂಪಗಳು ಗಂಧದಲ್ಲಿ. ಶ್ರೀ ರಮಾಕಾಂತ ಶ್ರೀ ನಾರಾಯಣನ ಸಮೀಚೀನ ರೂಪಗಳು ಅರ್ಘ್ಯೋದಕಾದಿ ಪೂಜಾ ಪದಾರ್ಥಗಳಲ್ಲಿ ತದಂತ ರ್ಗತ ಭಗವನ್ಮೂರ್ತಿಗಳ ತಿಳಿದು, ಶ್ರೀ ಆದಿನಾರಾಯಣನ ಪೂಜಾ ಮಾಡಿ ದರೆ ಶ್ರೀಹರಿ ಪ್ರೀತನಾಗಿ ಸ್ವೀಕಾರ ಮಾಡುವನು. ಅಜಾದಿ ೫೧ ವರ್ಣ ಗಳಿಗೆ ಅಜಾದಿ ೫೧ ಭಗವದ್ರೂಪಗಳನ್ನು ಚಿಂತಿಸಬೇಕು. ವಾರಿ, ತುಲಸಿ, ಪುಷ್ಪ, ದೀಪ, ಗಂಧದಲ್ಲಿ ತತ್ತದ್ವರ್ಣವಾಚ್ಯ ಭಗವಂತನ ೫೧ ರೂಪಗಳೇ ಮುಖ್ಯವಾಗಿ ಚಿಂತಿಸಬೇಕು. ಇವುಗಳ ಸಂಖ್ಯಾಕ್ರಮ:

| | | | | |
|---|---|---|---|---|
| ಕ | ಖ | ಗ | ಘ | ಙ |
| ೧ | ೨ | ೩ | ೪ | ೫ |
| ಚ | ಛ | ಜ | ಝ | ಞ |
| ೧ | ೨ | ೩ | ೪ | ೫ |

ಟ ಠ ಡ ಢ ಣ
೧ ೨ ೩ ೪ ೫
ತ ಥ ದ ಧ ನ
೧ ೨ ೩ ೪ ೫
ಪ ಫ ಬ ಭ ಮ
೧ ೨ ೩ ೪ ೫
ಯ ರ ಲ ವ ಶ ಷ ಸ ಹ ಳ
೧ ೨ ೩ ೪ ೫ ೬ ೭ ೮ ೯
ಕ್ಷ=ಕ+ಷ=ಸಂಯುಕ್ತ ವರ್ಣಕ್ಕೆ ಓಂ ಕ್ಷಂ ಲಕ್ಷ್ಮೀನರಸಿಂಹ

**ಭಾವಸೂಚನ:** ವಾರೇತಿ ಪ್ರವೃತ್ತೀಚ ॥ "ಷಟ್ ಸಹಸ್ರೈಶ್ಚತು ರ್ವಿಂಶದುಪೇತೈ । ಸ್ತ್ರಿಶತೈಃ ತಥಾ ॥ ಪುನಃ ಸಪ್ತದಶೋಪೇತೈ ತುಲಸೀ ಜಲ ಮಧ್ಯಗಃ॥ ಸುಮನೋವನ ಮಧ್ಯಸ್ಥೋಯೇಕಷ ಷಷ್ಟ್ಯಧಿಕೈಶ್ಶತೈಃ॥ ತ್ರಯೋದಶ ಸ್ವರೂಪೈಸ್ತು ಜ್ಯೋತಿರ್ದೀಪ ಗತೋಹ್ಯ ಭೂತ್॥ ಸುಗಂಧೋ ಗಂಧಗೋಪ್ಯಾಸೀತ್, ತ್ರ್ಯಧಿಕೈಶ್ಚ ಚತುಃಶ್ಯತೈಃ ರಿತಿಃ ॥ ೮ ॥

**ವಿಶೇಷ ವಿಚಾರಾಂಶ:** ಮೇಲಿನ ಪ್ರವೃತ್ತಿ ಎಂಬ ಗ್ರಂಥದಲ್ಲಿ ಹೇಳಿದಂತೆ ದಾಸರು ಹೇಳಿದ್ದಾರೆಂದು ಭಾವಸೂಚನೆಯಲ್ಲಿ ಹೇಳಿದ್ದಾರೆ. ದಾಸರಾಯರ ವಾಕ್ಯಕ್ಕೆ ಈ ಪ್ರಮಾಣಗಳೇ ಪ್ರೋದ್ಬಲ. ಕಾರಣ ಎಷ್ಟೆಷ್ಟು ರೂಪಗಳನ್ನು ಹೇಳಿರುತ್ತಾರೋ ಅದರಂತೆ ರೂಪಗಳ ಸಂಖ್ಯಾ. ಅಜಾದಿ ೫೧ ರೂಪಗಳ ವಿವರ ತಿಳಿದರ್ಚಿಸಿದರೆ ಶ್ರೀಹರಿಯ ವಿಭೂತಿ ರೂಪಗಳ ಕಾರ್ಯ ತಿಳಿದಂತಾಯಿತು. ಇದೇ ಮಾನವರಧಿಕಾರ. ರೂಪಗಳನ್ನು ನೋಡುವದು ದೇವಾಧಿಕಾರ. ಒಂದು ರೂಪವಾದರೂ ಕೊನೆಗೆ ಶ್ರೀಹರಿಯು ತೋರಿಸಿದರೆ ಅವನೇ ಧನ್ಯ-ಮಾನ್ಯ.

ಇಲ್ಲಿ ಸರ್ವತ್ರ ವಾಮಾಂಕ ಗಣನೆ ಪೇಳಿರಲು ಶ್ರೀತುಲಸಿ ಪುಷ್ಪದಲ್ಲಿ ಸವ್ಯಾಂಕ ಗಣನೆ ಪೇಳಿದ್ದಾರೆ. ಇದು ಸಹ ಜ್ಞಾನಿಗೋಚರ. ಈ ರಹಸ್ಯ- ಇದರ ವಿವರ ತಿಳಿದ ಜ್ಞಾನಿಗಳು ತಿಳಿಸಿದಲ್ಲಿ ಅವರ ಪರಮೋಪಕಾರ. ಅವರಡಿಗಳಿಗೆ ಈಗಲೇ ಶಿರಬಾಗಿದೆ ಮತ್ತು ಅಕ್ಷತಾ, ಧೂಪದಲ್ಲಿ ರೂ

ವಿವರ ಪೇಳಿಲ್ಲ. ಇದು ಮಹತ್ತರವಾದ ವಿಚಾರಾಂಶ. ಬಹುಶಃ ಚಂದನ ಪರಿಮಳದಲ್ಲಿ ಅಕ್ಷತಾ, ದೀಪ ಜ್ಯೋತಿಯಲ್ಲಿ ಧೂಪವಡಗಿದೆ ಎಂಬ ವಿವಕ್ಷ ಇದ್ದೀತು. ಸರಿಯೇ ಹೇಗೆ ? ವಿಚಾರಾಂಶ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ವಾರಿ" ಇತಿ ॥ ಚತುರ್ವಿಂಶತ್ಯುದೇ ಪಂಚಸಹಸ್ರ ತ್ರಿಶತಂ ದಶ ॥ ತ್ರ್ಯುತ್ತರಂ ಬಾಷ್ಪಜಾತಾಯಾಂ ಪುಷ್ಪೇ ಷಷ್ಠ್ಯುತಮೀಶತುಃ ॥ ಇತಿ ॥ ತ್ರಯೋದಶ ಸುದೀಪಸ್ಥಂ ಗಂಧೇಽಷ್ಟೈ ಹಿ ಚತುಃಶತಮ್ ॥ ಇತಿ ಚ ॥ ಪಂಚರಾತ್ರೇಚ ॥ ಚತುರ್ವಿಂಶತಿ ರೂಪಾಣಿ ಜಲೇ ಭಗವತೋ ಹರೇಃ॥ ಕಂಸಾರೇಃ ಪಂಚ ಸಾಹಸ್ರಂ ತಥೈವ ತ್ರಿಶತೋತ್ತರಮ್ ॥ ರೂಪಾಣಾಂ ಸಪ್ತದಶಕಂ ಏಕಸ್ಮಿನ್ ತುಲಸೀದಲೇ ॥ ಏಕಷಷ್ಟ್ಯುತ್ತರಶತಂ ರೂಪಾಣಾಂ ಪರಮಾತ್ಮನಃ ॥ ಪುಷ್ಪೇಷು ಚಿಂತನೀಯಂ ಸ್ಯಾತ್ ಮಹಾ ಶಾಸ್ತ್ರಾರ್ಥ ವಿತ್ತಮೈಃ ॥ ದೀಪೇ ತ್ರಯೋದಶ ಜ್ಞೇಯಂ ರಮಾನಾಥಸ್ಯ ವೈ ಹರೇಃ ॥ ಗಂಧೇ ಭಗವತೋ ರೂಪುತ್ರ್ಯುತ್ತರಂ ಚ ಚತುಃಶತಮ್ ॥ ಇತಿ ಪ್ರಕಾಶ ಸಂಹಿತಾಯಾಮ್ ॥ ೮ ॥

## ಕನ್ನಡಾರ್ಥ

"ನೀರಿನಲ್ಲಿ ೨೪ ರೂಪಗಳು, ೫೩೧೭ ರೂಪಗಳು ಒಂದು ತುಲಸಿಯ ದಲದಲ್ಲಿ ೧೬೧ ರೂಪಗಳು ಪುಷ್ಪದಲ್ಲಿ (ಹೂವಿನಲ್ಲಿ). ೧೩ ರೂಪಗಳು ದೀಪದಲ್ಲಿ. ಗಂಧದಲ್ಲಿ ೪೦೩ ರೂಪಗಳು. ಹೀಗೆ ಪಂಚರಾತ್ರದಲ್ಲಿಯೂ ಪ್ರಕಾಶ ಸಂಹಿತೆಯಲ್ಲಿಯೂ ಹೇಳಲಾಗಿರುತ್ತದೆ. ಹರಿಕಥಾಮೃತಸಾರದ "ವಾರಿ" ಎಂಬ ಪದ್ಯದಲ್ಲಿ ಹೇಳಿದ ಭಗವದ್ರೂಪಗಳ ವಿಷಯದಲ್ಲಿ ವ್ಯಾಖ್ಯಾನ ಕಾರರು ಆಧಾರ ಪ್ರಮಾಣಗಳನ್ನು ಉದಾಹರಿಸಿರುವುದಾಗಿ ತಿಳಿಯಬೇಕು. ॥ ೮ ॥

**ಅವತರಣಿಕಾ :** ಹಿಂದಿನ ಪದ್ಯಗಳಲ್ಲಿ ನಿರೂಪಿಸಿದ ಸುಜ್ಞಾನ ಪುಟ್ಟಬೇಕಾದರೆ, ಹೃದಯಾಷ್ಟದಳ ಕಮಲನಾಳ ಮೂಲಸ್ಥಿತ ಮೂಲೇಶನು. ಹೃದಯ ಅಷ್ಟದಳ ಗಳಲ್ಲಿ ಸಂಚರಿಸಿ ತ್ರಿವಿಧರ ಯೋಗ್ಯತೆಯಂತೆ ಪ್ರೇರಿಸುತ್ತಾನೆಂದು ಹೇಳುತ್ತಾರೆ.

ಮೂಲ:

ಅಷ್ಟದಳ ಸದ್ಧೃದಯ ಕಮಲಾ ।
ಧಿಷ್ಠಿತನು ತಾನಾಗಿ ಸರ್ವೋ ।
ತ್ಕೃಷ್ಟ ಮಹಿಮನು ದಳಗಳಲಿ ಸಂಚರಿಸುತೊಳಗಿದ್ದು ॥
ದುಷ್ಟರಿಗೆ ದುರ್ಬುದ್ಧಿ ಕರ್ಮ ವಿ ।
ಶಿಷ್ಟರಿಗೆ ಸುಜ್ಞಾನ ಧರ್ಮ ಸು ।
ಪುಷ್ಟಿಗೈಸುತ ಸಂತೈ(ಯಿ)ಪ ನಿರ್ದುಷ್ಟ ಸುಖಪೂರ್ಣ ॥ ೯ ॥

**ಪದಾರ್ಥ :** ಅಷ್ಟದಳ ಸದ್ಧೃದಯ ಕಮಲಾಧಿಷ್ಠಿತನು ತಾನಾಗಿ= ಹೃದಯ ಸ್ಥೂಲಾಷ್ಟದಳ ರಕ್ತಾಂಬುಜ ಕಮಲ ನಿವಾಸಿಯಾದ ಅಗ್ರೇಶನಾದ ಬಿಂಬರೂಪಿ ಹರಿಯೇ ಕಮಲನಾಳ ದುಗ್ಧಭಾಗದಲ್ಲಿ ಅಷ್ಟಭುಜದಿಂದ ಒಪ್ಪುವ ಮೂಲೇಶ ನಾಮಕ ಹರಿಯು, ಪೂರ್ವಾದಿ ೮ ಕಮಲಗಳಲ್ಲಿ ಸಂಚಾರ ಮಾಡುತ್ತಾ (ಬಿಂಬರೂಪನಾಗಿ ತಾನು ಜೀವಾಂತರ್ಯಾಮಿ ಯಾಗಿ ಒಳಗೆ ಇದ್ದರೂ) ಅಂತಃಪ್ರೇರಣಾ ಮಾಡುತ್ತ ಆಯಾ ದಳಗಳಲ್ಲಿಗೆ ಬಂದು ತ್ರಿವಿಧ ಜೀವರ ಯೋಗ್ಯತೆಯಂತೆ, ದುಷ್ಟರಿಗೆ=ತಮೋಗುಣ ಪ್ರಾಚುರ್ಯವಾದ ತಾಮಸ ಜೀವರಿಗೆ, ದುರ್ಬುದ್ಧಿ=ದುಷ್ಟ ಕೆಟ್ಟಬುದ್ಧಿ ಯನ್ನು ಪ್ರೇರಿಸುವನು. ಕರ್ಮವಿಶಿಷ್ಟರಿಗೆ=ವೇದವಿಹಿತವಾದ ಧರ್ಮಕರ್ಮಾ ಚರಣರತರಾದ ಸಜ್ಜೀವಿಗಳಾದ ಮುಕ್ತಿಯೋಗ್ಯರಿಗೆ, ಸುಜ್ಞಾನ=ಸಮೀಾ ಚೀನವಾದ ತರತಮ ಪಂಚಭೇದ ಹರಿಯೇ ಸರ್ವಕರ್ತಾಕಾರಯಿತಾ ಎಂಬುವ ಒಳ್ಳೇ ಜ್ಞಾನ, ಸದ್ಧರ್ಮ=ವಿಷ್ಣು ಪರಾಯಣವಾದ ಒಳ್ಳೇ ಧರ್ಮ ಕರ್ಮಾಚರಣೆ, ಸುಪುಷ್ಟಿಗೈಸುತ=ಸಮೀಾಚೀನವಾಗಿ ಒಳ್ಳೇ ಸದ್ಭಕ್ತಿಯಿಂದ ಮಾಡುವಂತೆ ಪ್ರವರ್ಧಿಸುವ ಬಲಶಕ್ತಿ ಜ್ಞಾನಾದಿಗಳನ್ನು ಕೊಡುತ್ತ, ಸಂತೈಪ=ರಕ್ಷಿಪ, ಸಂತೋಷಗೈಸುವ, ಆನಂದಾಭಿವೃದ್ಧಿಗೈಸುವ. ಏಕಂದರೆ ಶ್ರೀಹರಿ ಸ್ವತಂತ್ರನಾದ ಕಾರಣ ನಿರ್ದುಷ್ಟ ದೋಷದೂರನೂ, ಜ್ಞಾನಾನಂದ ಐಶ್ವರ್ಯಾದಿ ಸುಖಪೂರ್ಣನೂ ಆದುದರಿಂದ, ಶ್ರೀಹರಿಯು, ಜೀವರ ಯೋಗ್ಯತಾನುಸಾರ ಬುದ್ಧಿ ಪ್ರೇರಿಸುವನೆಂದು ಅಭಿಪ್ರಾಯ.

**ದ್ರೌಪದೀಶಪತಿ ವಿಠಲರು:** ಅಷ್ಟದಳ ಸದ್ಧೃದಯ ರೂಪಕ್ಕೂ

ಅಭಿನ್ನ ಪರಮಾತ್ಮನಿಂದ ಸೃಷ್ಟಿಸಿಕೊಂಡವರಾದುದರಿಂದ ಇವರು (ಜೀವರು) ಭೃತ್ಯರು. ಇವರೆ ಪ್ರತಿಬಿಂಬರು.

**ಶ್ರೀ ಗುರು ಶ್ರೀಶವಿಠಲರ ಶಿಷ್ಯರು :** ಅಷ್ಟದಳ ಸದ್ಹೃದಯ ಕಮಲ ಅಷ್ಟದಳೋಪೇತ ಸಮೀಚೀನವಾದ ಹೃತ್ಕಮಲದಲ್ಲಿ, ಅಧಿಷ್ಟಿತನು ತಾನಾಗಿ, ಶ್ರೀ ರಮಾಕಾಂತ ಆದಿನಾರಾಯಣನು ಹೃತ್ಪದ್ಮ ಅಧಿಷ್ಠಾನದಲ್ಲಿ ವ್ಯಾಪ್ತನಾಗಿ, ಸರ್ವೋತ್ಕೃಷ್ಟ ಮಹಿಮನು=ಸರ್ವದರಿಂದಲೂ; ಪರಮೋತ್ಕೃಷ್ಟ ಮಹಿಮನಾದಕಾರಣ ಶ್ರೀ ಕಮಲಾಪತಿ, ದಳಗಳಲ್ಲಿ=ಇಂದ್ರದಳ ಅಗ್ನಿ ಯಮ ನಿಋುರುತಿ ವರುಣ ವಾಯುವ್ಯ ಕುಬೇರ ಈಶಾನ್ಯ ಈ ಅಷ್ಟದಳಗಳಲ್ಲಿ, ಸಂಚರಿಸುತೊಳಗಿದ್ದು=ಶ್ರೀ ರಮಾ ಸಮೇತನಾಗಿ, ಗರುಡವಾಹನ ಆದಿ ನಾರಾಯಣ, ಬ್ರಹ್ಮ ರುದ್ರೇಂದ್ರಾದಿಗಳಿಂದ ಸ್ತೋತ್ರಮಾಡಿಸಿಕೊಳ್ಳುತ್ತ, ಅಷ್ಟ ದಿಗ್ದೇವತೆಗಳಿಂದ ಪಾಲ್ಗೈಪನಾಗಿ ವಿಹಾರ ಮಾಡುತ್ತ, ಅಷ್ಟದಳ ಗಳಂತರ್ಗತನಾಗಿ ವ್ಯಾಪ್ತನಾಗಿದ್ದು, ದುಷ್ಟರಿಗೆ ದುರ್ಬುದ್ಧಿ=ದುಷ್ಟರಾದ ತಮೋಗುಣರಾದ ದೈತ್ಯಾಧಮರಿಗೆ, ಶ್ರೀಹರಿ ಗುರುಗಳಲ್ಲಿ ದ್ವೇಷ, ಮಿಥ್ಯಾವಾದವುಳ್ಳ ಅಜ್ಞಾನ ಕೊಡುವ, ಕರ್ಮವಿಶಿಷ್ಟರಿಗೆ ಸುಜ್ಞಾನ=ಸುಕರ್ಮ ಮಾಡೋ ಶಿಷ್ಟರಾದ ಸತ್ವಗುಣವುಳ್ಳ ಕೇವಲ ಶಿಷ್ಟರಿಗೆ, ಸುಜ್ಞಾನ= ಸು-ಸಮೀಚೀನವಾದ ಹರಿಸರ್ವೋತ್ತಮ ತಾರತಮ್ಯ ಪಂಚಭೇದ ಜ್ಞಾನ, ಧರ್ಮಸುಹೃಷ್ಟಿಗೈಸುತ-ಯೋಗ್ಯರಾದ ಸಜ್ಜನರು ಮಾಡುವಂಥ ಸದ್ಧರ್ಮದಿಂದ ಜ್ಞಾನ ಭಕ್ತ್ಯಾದಿ ಗುಣಗಳಿಂದ ತೃಪ್ತಿಬಡಿಸುತ್ತ, ಸಂತೈಪ= ಶ್ರೀ ರಮಾಪತಿ ಶ್ರೀ ನಾರಾಯಣ ಜ್ಞಾನಿಗಳಿಂದ ತನ್ನ ವಿಷಯವಾಗಿ ಸದ್ಧರ್ಮ ವಿಹಿತ ಕರ್ಮಗಳ ಮಾಡಿಸಿ ತದಂತರ್ಗತನಾಗಿ ಸ್ವೀಕಾರ ಮಾಡಿ, ತನ್ನ ಭಕ್ತರ ಸಂತೈಪ=ವೈಕುಂಠಪುರದಲ್ಲಿ ವಾಸಮಾಡಿಸಿ ಮುಕ್ತಿಪ್ರದನಾಗಿ ಸ್ವರೂಪಾಭಿವ್ಯಕ್ತಿಮಾಡಿಸಿ ಸಂರಕ್ಷಿಸುವ. ನಿರ್ದುಷ್ಟ ಸ್ವಾಮಿ ಹೋಗಲ್ಪಟ್ಟ ದೋಷ ಉಳ್ಳಾತ. ನಿರ್ದುಷ್ಟ ಸುಖ-ದುಷ್ಟಸುಃಖ=ಸಂಸಾರ ಸುಖ ಬಂದು, ಗುಣಸಂಬಂಧ ಅಶಾಶ್ವಿತ ಸುಖ. ನಿರ್ದುಷ್ಟ ಸುಖಪೂರ್ಣ, ಶ್ರೀ ರಮಾ ನಿವಾಸ ಶ್ರೀ ನಾರಾಯಣ ಜ್ಞಾನಾನಂದಾದಿ ಸುಖಪೂರ್ಣ ॥ ೯ ॥

**ಭಾವಸೂಚನ :** ಅಷ್ಟದಳೇತಿ ದುಷ್ಟೇತಿ ಏತಚ್ಚಾಗ್ರೇ ಸ್ಫುಟೀಕರಿಷ್ಯತಿ ಸ್ವಯಮೇವ ದಾಸರಾಜಃ ॥ ೯ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಅಷ್ಟೇತಿ ॥ "ಅಷ್ಟಪತ್ರೇ (ತ್ರಂ) ತು ಹೃತ್ಕಂಜಮ್" ಇತ್ಯುಕ್ತೇಃ ॥ ಸದುರ್ಬುದ್ಧಿ ಪ್ರದಾನಾಯ ದಲೋಪರ್ಯಟತೇ ಪರಃ ॥ ಇತಿ ಚ ॥ ಗೈಸುತ= ಮಾಡುತ. ಸಂತೈಪ=ರಕ್ಷತಿ ॥ ೯ ॥

## ಕನ್ನಡಾರ್ಥ

ಹೃದಯ ಕಮಲವು ಎಂಟು ದಲಗಳಿಂದ ಯುಕ್ತವಾಗಿರುವದೆಂದು ಪ್ರಮಾಣಗಳಲ್ಲಿ ಹೇಳಿರುತ್ತದೆ. "ಸುಜನರಿಗೂ, ದುರ್ಜನರಿಗೂ ಕ್ರಮವಾಗಿ ಸುಬುದ್ಧಿ ಸದ್ಧರ್ಮ ಕರ್ಮಗಳನ್ನೂ, ದುಃಬುರ್ದ್ಧಿ ದುಷ್ಟಕರ್ಮ ಅಧರ್ಮ ಮುಂತಾದವುಗಳನ್ನೂ ಮಾಡಿಸಲು ಶ್ರೀಹರಿಯು ಹೃದಯ ಕಮಲದ ದಳಗಳ ಮೇಲೆ ಸಂಚರಿಸುತ್ತಾನೆ" ಎಂಬ ಪ್ರಮಾಣೋಕ್ತಿಯನ್ನೇ ಮೂಲ ಪದ್ಯ ವಚನವು ಅನುಸರಿಸಿರುತ್ತದೆ.

ಗೈಸುತ=ಮಾಡುತ್ತ, ಸಂತೈಪ=ರಕ್ಷಿಸುತ್ತಾನೆ. ॥ ೯ ॥

ಅವತರಣಿಕಾ : ಜಡವಸ್ತುಗಳಾದ ಧನದೇಹಾದಿಗಳಲ್ಲಿ ಚೇತನರಾದ ದಾರಾ ಪುತ್ರಾದಿಗಳಲ್ಲಿ ಸತ್ವಾದಿ ಗುಣಗಳಲ್ಲಿ ಮನಚಿತ್ತಾದಿ ಇಂದ್ರಿಯುಗಳಲ್ಲಿ ಸತ್ಯಸಂಕಲ್ಪ ನಾದ ಶ್ರೀಹರಿಯ ವ್ಯಾಪಾರ ಸ್ಮರಿಪ ಕ್ರಮ ಈ ಪದ್ಯದಿಂದ ಹೇಳುತ್ತಾರೆ.

**ಮೂಲ :**

**ವಿತ್ತ ದೇಹಾಗಾರ ದಾರಾ ।**
**ಪತ್ಯ ಮಿತ್ರಾದಿಗಳೊಳಗೆ ಗುಣ ।**
**ಚಿತ್ತಬುದ್ಧ್ಯಾದಿಂದ್ರಿಯುಗಳೊಳು ಜ್ಞಾನಕರ್ಮದೊಳು ॥**
**ತತ್ತದಾಹ್ವಯನಾಗಿ ಕರೆಸುತ ।**
**ಸತ್ಯಸಂಕಲ್ಪಾನುಸಾರದಿ ।**
**ನಿತ್ಯದಲಿ ತಾ ಮಾಡಿ ಮಾಡಿಪನೆಂದು ಸ್ಮರಿಸುತಿರು ॥ ೧೦ ॥**

**ಪದ್ಯಾರ್ಥ :** ವಿತ್ತ=ಧನ ಧಾನ್ಯಾದಿಗಳಲ್ಲಿ ದೇಹ ಜಡ ದೇಹದಲ್ಲಿ, ಆಗಾರ=ಮನೆ ಮುಂತಾದ ತನಗೆ ಭಿನ್ನವಾದ ಜಡವಸ್ತುಗಳಲ್ಲಿ, ದಾರಾ= ಹೆಂಡತಿ, ಅಪತ್ಯ=ಪುತ್ರ, ಮಿತ್ರಾದಿ=ಸ್ನೇಹಿತರು, ಇತರ ಬಂಧುವರ್ಗ ದವರಲ್ಲಿ, ಗುಣ=ಸತ್ವಾದಿಗುಣ ಜೀವರ ಸ್ವಭಾವ ಯೋಗ್ಯತಾನುಸಾರವಾದ

ಮನಪ್ರಭೇದವಾದ ಚಿತ್ತ=ಚೇತಯತೇನಯೇತಿಚಿತ್=ಜ್ಞಾನಾದಿಗಳನ್ನು ವಿಕಸಿತ ಮಾಡುವದು ಚಿತ್ತ, ಬುದ್ಧಿ=ಬುಧ್ಯತೇನಯಾಬುದ್ಧಿ. ನಿಶ್ಚಯಾತ್ಮಕ ಜ್ಞಾನ, ಆದಿ=ಮೊದಲಾದ ಇಂದ್ರಿಯಗಳು, ಜ್ಞಾನ-ಕರ್ಮ. ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಲ್ಲಿ ಅಥವಾ ಜ್ಞಾನ=ತಿಳುವಳಿಕೆಯಲ್ಲಿ, ಕರ್ಮದೊಳು=ಸಕಲೇಂದ್ರಿಯಗಳಿಂದ ಆಗುವ ಕ್ರಿಯಾ ವ್ಯಾಪಾರಗಳಲ್ಲಿ, ಶ್ರೀಹರಿಯು ವ್ಯಾಪ್ತನಾಗಿ ಅಂತರ್ನಿಯಾಮಕನಾಗಿ, ತತ್ತದಾಹ್ವಯನಾಗಿ=ಆಯಾ ನಾಮಗಳಿಂದ ಕರೆಸುತ್ತ, ಸತ್ಯಸಂಕಲ್ಪಾನುಸಾರದಿ=ಅನಾದಿ ನಿತ್ಯರಾದ ಜೀವರ ಯೋಗ್ಯತೆ ಸ್ವಭಾವ ಜ್ಞಾನ ಕರ್ಮವನುಸರಿಸಿ, ತನ್ನ ನಿಜವಾದ ಸಂಕಲ್ಪದಂತೆ ಸ್ವಲ್ಪಾದರೂ ಮೀರಗೊಡದೇ, ನಿತ್ಯದಲಿ=ಪ್ರತಿ ದಿನ ಒಂದು ಆರಕ್ಷಣ ಬಿಡದಲೇ, ಶ್ರೀಹರಿಯು ಎಲ್ಲರಲ್ಲಿ, ಎಲ್ಲ ಪದಾರ್ಥ ಗುಣಗಳಲ್ಲಿ ತಾನಿದ್ದು ತಾನೆ ಸ್ವತಃ ಮಾಡಿ, ತತ್ವಾಭಿಮಾನಿ ದೇವತೆಗಳ ದ್ವಾರಾ ಜೀವರಿಂದ ಮಾಡಿಸುವನೆಂದು ನಿಶ್ಚಯವಾಗಿ ತಿಳಿದು, ಸ್ಮರಿಸುತಿರು=ನೆನೆಯುತಿರು. ಸಕಲ ಜಡವಸ್ತುಗಳು ನನ್ನವಲ್ಲ. ಹೆಂಡತಿ ಮಕ್ಕಳು ಮಿತ್ರಬಾಂಧವರು ನನ್ನವರಲ್ಲ. ಮನಾದಿ ಇಂದ್ರಿಯಗಳು ನನ್ನವಲ್ಲ. ಎಲ್ಲ ಕ್ರಿಯಾ ವ್ಯಾಪಾರಗಳೂ ನಾನು ಮಾಡುವನಲ್ಲ. ನಾನಲ್ಲ-ನನ್ನದಲ್ಲ ಎಂಬ ದುರಾಭಿಮಾನವನ್ನು ಬಿಟ್ಟು, ಶ್ರೀಹರಿ ಕೊಟ್ಟವು, ಸಕಲರಲ್ಲಿ ಶ್ರೀಹರಿಯೆ ಆಯಾ ಹೆಸರುಗಳಿಂದ ಕರೆಸುತ್ತ, ಸಕಲ ವ್ಯಾಪಾರ ಮಾಡಿಸುವನೆಂದು ನಿತ್ಯ ನೆನೆವುತಿರು ಎಂದು ಫಲಿತಾಭಿಪ್ರಾಯ.

**ದ್ರೌಪದೀಶಪತಿ ವಿಠಲರು :** ವಿತ್ತದೇಹಾಗಾರ ದಾರಾ.



**ಗುರು ಶ್ರೀಶವಿಠಲರ ಶಿಷ್ಯರು :** ವಿತ್ತ=ದ್ರವ್ಯದಲ್ಲಿ, ದೇಹ=ದೇಹಗಳೊಳಗೆ, ಆಗಾರ=ಮನೆಯಲ್ಲಿ, ದಾರ=ಪತ್ನಿಯಲ್ಲಿ, ಆಪತ್ಯ-ಪುತ್ರರಲ್ಲಿ ಮಿತ್ರಾದಿಗಳೊಳು=ದೇಹಾನುಬಂಧಿಗಳಾದ, ಪಿತ ಜನನಿ ಭ್ರಾತೃ-ಅನುಜರು ಭಗಿನಿ, ಶ್ವಶುರ-ಏವಮಾದಿ ಬಂಧುಗಳಲ್ಲಿ-ಗುಣ=ಸತ್ವಗುಣ ರಾಜಸಗುಣ ತಾಮಸಗುಣ ತ್ರಿಗುಣಗಳಲ್ಲಿ, ಚಿತ್ತದಲ್ಲಿ, ಬುದ್ಧ್ಯಾದಿಂದ್ರಿಯಗಳೊಳು, ಮನಸ್ಸು ಬುದ್ಧಿಯೇ ಮೊದಲಾದ ಏಕಾದಶ ಇಂದ್ರಿಯಗಳಲ್ಲಿ, ಪಂಚಭೂತ ಪಂಚತನ್ಮಾತ್ರಾ ಜ್ಞಾನ ಕರ್ಮದೊಳು, ಜ್ಞಾನ=ಸುಜ್ಞಾನದಲ್ಲಿ ಕರ್ಮದೊಳಗೆ, ಕ್ರಿಯಾಗಳಲ್ಲಿ ತತ್ತದಾಹ್ವಯನಾಗಿ ಕರೆಸುವ, ಶ್ರೀ ರಮಾವಲ್ಲಭ

ಜಗತ್ತಿನ ಕಾರಣ ಅನಂತ ರೂಪಾತ್ಮಕ ಶ್ರೀ ನಾರಾಯಣ, ಚಿತ್ತದೇಹಾಗಾರ ಮೊದಲಾದುದರೊಳಗೆ, ತದಾಕಾರನಾಗಿ ತದ್ರೂಪ ತನ್ನಾಮದಿಂದ ಸ್ವಾಮಿ ಮಹಾ ಪ್ರಭು ಕರೆಸುವ, ಸತ್ಯಸಂಕಲ್ಪ=ಶ್ರೀ ರಮಾಪತಿ ಸತ್ಯಸಂಕಲ್ಪಾನು ಸಾರದಿಂದ, ತ್ರಿವಿಧ ಜೀವರ ಯೋಗ್ಯತಾನುಸಾರವಾಗಿ, ದೇಹ-ಗೇಹ, ಸತಿ-ಸುತ, ಜ್ಞಾನ ಕರ್ಮಾದಿಗಳ ಶ್ರೀಹರಿ ಸತ್ಯಸಂಕಲ್ಪಾನುಸಾರವಾಗಿ, ನಿತ್ಯದಲ್ಲಿ ಪ್ರತಿದಿವಸಗಳಲ್ಲಿ, ತಾನೇ ಮಾಡಿ ಮಾಡಿಸುವನೆಂದು, ತಾ=ಆದಿನಾರಾ ಯಣನೇ ಪ್ರೇರ್ಯಪ್ರೇರಕನಾಗಿ, ತತ್ತದಾಹ್ವಯನಾಗಿ ಸರ್ವರಂತರ್ಗತ ನಾಗಿ, ಚೇಷ್ಟಾಪ್ರದನಾಗಿ, ಸ್ವರೂಪಾನುಸಾರ=ಸ್ವಭಾವಾನುಸಾರ ಅಭಿವ್ಯಕ್ತಿ ಮಾಡಿ, ಸಕಲ ಕಾರ್ಯಕರ್ಮಗಳ ಶ್ರೀ ಆದಿನಾರಾಯಣನೇ ಮಾಡಿಪನೆಂದು ಸ್ವಕರ್ತೃತ್ವ ತ್ಯಾಗಮಾಡಿ, ಅಹಂಭಾವರಹಿತನಾಗಿ ಸ್ಮರಿಸುತಿರು.

ಶ್ರೀ ರಮಾ ಬ್ರಹ್ಮಾದಿಗಳಿಂದ ಪೂಜ್ಯನಾದ, ಸರ್ವಾಂತರ್ಯಾಮಿ ಶ್ರೀ ನಾರಾಯಣನ ಸಕಲ ಕ್ರಿಯ ಕರ್ಮಗಳಲ್ಲಿ ದೇಹೇಂದ್ರಿಯಗಳಲ್ಲಿ, ಪತ್ನಿ ಪುತ್ರ ಮಿತ್ರಾದಿಗಳಲ್ಲಿ ವಿತ್ತಾದಿಗಳಲ್ಲಿ ಶ್ರೀ ನಾರಾಯಣನೇ ತದ್ವಾಚ್ಯನಾಗಿ ಕರೆಸುತ್ತಾನೆಂದು ಸ್ವಾಮಿಧ್ಯಾನ ಪರನಾಗಿ ವಂದನಮಾಡು.

ಪ್ರಮಾಣ ॥ ತ್ವಮೇವ ಮಾತಾ ಚ ಪಿತಾ ತ್ವಮೇವ । ತ್ವಮೇವ ಬಂಧುಶ್ಚ ಸಖಾ ತ್ವಮೇವ ॥ ತ್ವಮೇವ ವಿದ್ಯಾ ದ್ರವಿಣಂ ತ್ವಮೇವ । ತ್ವಮೇವ ಸರ್ವಂ ಮಮ ದೇವದೇವ ॥ ೧ ॥ ದಾರಾನ್ ಸುತಾನ್ ಪ್ರಿಯಾಂ ಪ್ರಾಣಾನ್ ಪರಸ್ಮೈ ಸನ್ನಿವೇದಯೇತ್ ॥ ೨ ॥ ॥ ೧೦ ॥

**ಭಾವಸೂಚನ :** ವಿತ್ತೇತಿ ॥ ಉಕ್ತಮೇ ತತ್ಪ್ರಾಕ್ ॥ **ಮಾಡೇತಿ ॥** ಯಥೋಕ್ತಂ ವಾಯು ಪುರಾಣೆ ॥ “ವಿಷ್ಣು ರ್ವಾಯುಂ ಪುರಸ್ಕೃತ್ಯ ಸರ್ವೇ ಷ್ವೇತೇಷು ಸಂಚರನ್ ॥ ಕರೋತಿ ಕಾರಯತ್ಯದ್ಧಾ ಜಗತ್ಕಾರ್ಯ ಮತ ದ್ರಿತ ಇತಿ ॥ ೧೦ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ವಿತ್ತೇತಿ॥ ವೇದ್ಯತ್ವಾತ್ ವಿತ್ತಃ । “ಯಸ್ಯಾನು ವಿತ್ತಃ” ಇತಿಶ್ರುತೇಃ॥ ಉಪಚಿತತ್ವಾತ್ ವೃದ್ಧತ್ವಾತ್ ದೇಹಃ ॥ ದಿಹ ಉಪಚಯೇ ॥ ಜಗದತ್ತೃ ತ್ವಾತ್ ಆಗಾರಃ ॥ ಗೃ ನಿಗರಣೇ ॥ ಭೀಷಕತ್ವಾತ್ ಪಾಪದಾರಕತ್ವಾತ್ ದಾರಾಃ ॥ ದೃ ವಿದಾರಣೇ ॥ ದೃ ಭಯೇ ॥ ವ್ಯಾಪ್ತತ್ವಾತ್ ಆವರಣ

ರಾಹಿತ್ಯಾತ್ ಅಪತ್ಯಮ್ ।। ತತೋ ರಿತ್ಯುಕ್ತೇಃ ।। ಮಿನೋತಿ ತ್ರಾಯತೇ ಇತಿ ಚ ಮಿತ್ರಮ್ ಕಾರಣತ್ವಾತ್ ಆದಿಃ ।। ಭರ್ತೃಂ ಅರ್ಹಗತ್ವಾತ್ ಭಾರ್ಯಾ ।। ಜೀವಮ್ ಅನುಜಾತತ್ವಾತ್ । ಅನುಜಃ । ಅಗ್ರಜತ್ವಾತ್ ಅಗ್ರಜಃ ।। ಪೂಯಶೋಣಾದಿಭಾಜಃ ತಾರಯತೀತಿ ಪುತ್ರಃ।। ಸಾಧುತ್ವಾತ್ ಸತೀ ।। ಸುಖದತ್ವಾತ್ ನಂದನಃ ॥ ವಿಸ್ತೃತತ್ವಾತ್ ತನಯಃ ॥ ಗತಿ ದೀಪ್ತಿ ಸುಖತ್ವಾತ್ ಅರ್ಭಕಃ ॥ ಪಾತಿ ಇತಿ ಪಿತಾ ॥ ಮಾನಾತ್ ತ್ರಾತಾ ಯತ್ ಸಪಿತು ರ್ಮಹಾನ್ ॥ ಪಿತಾಮಹ ಇತ್ಯಾದಿ ಪದನಿರುಕ್ತಿಂ ॥ ಏವಂ ನಾನಾ ಗುಣೋ ವಿಷ್ಣುಃ ನಾನಾನಾಮ ಭಿರೀರಿತಃ ।। ಇತ್ಯುಕ್ತೇಃ ।। ಮಾಡಿಪ= ಮಾಡಿಸುತ್ತಾನೆ. ॥ ೧೦ ॥

## ಕನ್ನಡಾರ್ಥ

"ಯಸ್ಯ"=ಯಾವ ಉಪಾಸಕನಿಂದ, ಸರ್ವಜ್ಞ ಸರ್ವಕರ್ತೃ ವಾಯು ಕರ್ತೃ ಹೃದಯ ಗುಹಾ ನಿವಾಸಿಯಾದ ಶ್ರೀಹರಿಯು "ಅನುವಿತ್ತಃ" ಯಥಾರ್ಥವಾಗಿ ತಿಳಿಯಲ್ಪಡುತ್ತಾನೋ, "ತಸ್ಯ"=ಆ ಉಪಾಸಕನಿಗೆ ವಿಷ್ಣು ಲೋಕವೇ ಆಗುತ್ತದೆ" ಎಂದು ಶ್ರುತಿಯಲ್ಲಿ "ಅನುವಿತ್ತಃ" ಸರಿಯಾಗಿ ತಿಳಿಯಲ್ಪಡುವವನು ಎಂದು ಅರ್ಥವನ್ನು ನಿರೂಪಿಸಿರುತ್ತಾರೆ. ಈ ಶ್ರುತಿ ವಾಕ್ಯಕ್ಕೆ ಅನುಗುಣವಾಗಿ ಮೂಲ ಪದ್ಯದಲ್ಲಿರುವ ವಿತ್ತಶಬ್ದವು "ಜ್ಞಾನಿಗಳಿಂದ ತಿಳಿಯಲ್ಪಡುವವನು" ಎಂಬ ಅರ್ಥವನ್ನು ಹೇಳುತ್ತದೆ. ಪ್ರಸಿದ್ಧ ದುಡ್ಡಿನಲ್ಲಿ ರೂಢವಾದ "ವಿತ್ತ" ಶಬ್ದವು ವಿತ್ತಗತನಾದ ಪರಮಾತ್ಮನ ಗುಣವನ್ನು ಹೇಗೆ ಹೇಳುವದು? ಎಂಬುದು ಇದರಿಂದ ತಿಳಿದು ಬರುತ್ತದೆ. ಇದರಂತೆ ಮಿಕ್ಕ ಕಡೆಗಳಲ್ಲಿಯೂ ತಿಳಿದುಕೊಳ್ಳಬೇಕು.

"ದಿಹ" ಎಂಬ ಧಾತುವು ಉಪಚಯ ಬೆಳವಣಿಗೆಯೆಂಬ ಅರ್ಥದಲ್ಲಿ ಇರುವದರಿಂದ ದೇಹವೆಂದರೆ ಪೂರ್ಣವಾಗಿ ವೃದ್ಧಿಹೊಂದಿರುವ ರೂಪವು "ದೇಹ"ವೆಂದೆನಿಸುತ್ತದೆ. ಗೃಧಾತುವಿಗೆ "ನಿಗರಣ" "ನುಂಗು" ಎಂದು ಅರ್ಥವಿರುವದರಿಂದ ಆಗಾರವೆಂದರೆ "ಜಗತ್ತನ್ನು ನುಂಗುವವನು" ಎಂದು ಅರ್ಥವಾಗುತ್ತದೆ. ದೃಧಾತುವಿಗೆ "ಭಯಗೊಳಿಸು" ಮತ್ತು "ಸೀಳು" ಎಂದು ಅರ್ಥಗಳಿರುವದರಿಂದ ಹೆದರಿಸುವ ಹಾಗೂ ಪಾಪಗಳನ್ನು ಸೀಳುವ ಭಗವಂತನ ರೂಪಗಳಿಗೆ "ದಾರಾ" ಎಂದು ಕರೆಯುತ್ತಾರೆ. ವ್ಯಾಪ್ತನೂ,

ಆವರಣಗಳಿಲ್ಲದವನೂ ಆದುದರಿಂದ ಶ್ರೀಹರಿಗೆ "ಅಪತ್ಯ"ವೆಂದು ಕರೆಯುತ್ತಾರೆ. "ತತೇಃ" ಎಂದು ಪ್ರಮಾಣಗಳಿರುವದರಿಂದ. ಜಗತ್ತನ್ನು ಸುಖದಲ್ಲಿ ಇಡುವುದರಿಂದ ಹಾಗೂ ಸಂರಕ್ಷಿಸುವದರಿಂದ "ಮಿತ್ರ"ನೆಂದು ಕರೆಯುತ್ತಾರೆ. ಜಗತ್ಕಾರಣನಾದುದರಿಂದ "ಆದಿ" ಎಂದು ಕರೆಯುತ್ತಾರೆ. "ಪ್ರೋ[illegible]ಲು ಅರ್ಹವಾದ ವಸ್ತುಗಳಲ್ಲಿ ಇರುವದರಿಂದ "ಭಾರ್ಯಾ" ಎಂದು ಕರೆಯುತ್ತಾರೆ. ಜೀವರನ್ನು ಅನುಸರಿಸಿ ಪ್ರಾದುರ್ಭೂತನಾಗುವದರಿಂದ "ಅನುಜ" ಎಂದು ಕರೆಯುತ್ತಾರೆ. ಪೂಯಶೋಣ" ಮುಂತಾದ ನರಕಗಳಿಂದ ಬಿಡಿಸುವವನಾದುದರಿಂದ "ಪುತ್ರ" ಎನ್ನುತ್ತಾರೆ. ಸಾಧುತನವಿರುವದರಿಂದ "ಸತೀ" ಎಂದು ಹೇಳುತ್ತಾರೆ. ಸುಖವನ್ನು ಕೊಡುವದರಿಂದ "ನಂದನ" ಎನ್ನುತ್ತಾರೆ. ವಿಸ್ತಾರವನ್ನು ಹೊಂದುವದರಿಂದ "ತನಯ" ನೆನ್ನುತ್ತಾರೆ. ಗತಿವಂತನೂ-ಪ್ರಕಾಶವಂತನೂ, ಸುಖಮಯನೂ ಆದುದರಿಂದ "ಅರ್ಭಕ"ನೆನ್ನುತ್ತಾರೆ. ಪಾಲನ ಮಾಡುವದರಿಂದ "ಪಿತ"ನೆನ್ನುತ್ತಾರೆ. ಮಹತ್ತರನೂ ಜಗತ್ತನ್ನು ಓತಪ್ರೋತನಾಗಿ ವ್ಯಾಪಿಸಿ ಸಂರಕ್ಷಿಸುವದರಿಂದ "ಪಿತಾಮಹ" ಎಂದು ಕರೆಯುತ್ತಾರೆ. ಹೀಗೆ ಅನಂತಗುಣ ಪೂರ್ಣನಾದ ಶ್ರೀಹರಿಯು ಅನಂತಾನಂತ ನಾಮಗಳಿಂದ ಕರೆಯಲ್ಪಡುತ್ತಾನೆ ಎಂದು ಪ್ರಮಾಣಗಳಿರುವದರಿಂದ "ತತ್ತದಾಹ್ವಯನಾಗಿ ಕರೆಸುತ" ಎಂದು ಹೇಳಿದುದು ಮೂಲದಲ್ಲಿ ಅತ್ಯಂತ ಸಂಗತವಾಗಿರುತ್ತದೆ. ಮಾಡಿಪ=ಮಾಡಿಸುತ್ತಾನೆ. ॥ ೧೦ ॥

ಅವತರಣಿಕಾ : ಹಿಂದೆ ಪೇಳಿದ ಜಡವಸ್ತುಗಳಲ್ಲಿ ಸಕಲ ಚೇತನರಲ್ಲಿ, ಸಕಲ ಕ್ರಿಯೆಗಳಲ್ಲಿ ಶ್ರೀಹರಿಯೇ ತತ್ತದಾಹ್ವಯನಾಗಿ, ಸಕಲ ವ್ಯಾಪಾರ ಮಾಡುವನಾಗಿರುವನು. ಈ ಜಡ, ಚೇತನ ಕ್ರಿಯಾಗಳಲ್ಲಿ ಬೇರೆಬೇರೆ ರೂಪದಿಂದ ಮಾಡಿಸುವನಾದರೂ ಶ್ರೀಹರಿಯೊಬ್ಬನೇ. ಈ ಮೂರು ರೂಪಗಳೊಂದೇ ಎಂದು ದಾಸರಾಯರು ಪೇಳುತ್ತಾರೆ.

ಮೂಲ :

> ಭಾವದ್ರವ್ಯ ಕ್ರಿಯೆಗಳೆನಿಸುವ ।
> ಈ ವಿಧಾದ್ವೈತತ್ರಯಂಗಳ ।
> ಭಾವಿಸುತ ಸದ್ಭಕ್ತಿಯಲಿ ಸರ್ವತ್ರ ಮರೆಯದಲೆ ॥

**ತಾವಕನು ತಾನೆಂದು ಪ್ರತಿದಿನ ।**
**ಸೇವಿಸುವ ಭಕ್ತರಿಗೆ ತನ್ನನು ।**
**ಈವ ಕಾವ ಕೃಪಾಳು ಕರಿವರಗೊಲಿದ ತೆರದಂತೆ ॥ ೧೧ ॥**

**ಪದ್ಯಾರ್ಥ :** ಭಾವ=ಭಾವಯತೀತಿ ಭಾವ: ಸತ್ತಾ ಮಾಡುವದು, ಸ್ವಭಾವ ಚೇಷ್ಟಾ ಇಷ್ಟು ಅರ್ಥವಾಗುತ್ತವೆ. ದ್ರವ್ಯ=ಹಣ ರೂಪ ರಸ ಮುಂತಾದ ೨೪ ಸತ್ವಾದಿ ಗುಣ ಧರ್ಮ ರೂಪರಸಾದಿಗಳ ಗುಣಗಳ ಆಶ್ರಯ, ಕ್ರಿಯಾ=ಕರಣಂ ಕ್ರಿಯತೇಽನಯಾ ವಾಕ್ರಿಯಾ ಇಂದ್ರಿಯಗಳಿಂದಾಗುವ ಕಾರ್ಯ, ಕ್ರಿ=ಮಾಡು, ಕರ-ಮಾಡುವ, ಕೈ ಕರಣ ಇಂದ್ರಿಯ=ಸಾಧನ ಕರ್ತಾ=ಮಾಡುವ ಕರ್ಮ ಮಾಡೋಣ=ಈ ಪ್ರಕಾರ ಅರ್ಥ. ಭಾವದ್ರವ್ಯ ಕ್ರಿಯಗಳೆನಿಸುವ ಈ ವಿಧಾದ್ವೈತ ತ್ರಯಂಗಳ ಭಾವಿಸುತ, ಸದ್ಭಕ್ತಿಯಲಿ= ಎನ್ನುವದಕ್ಕೆ ಬಹು ಶಾಸ್ತ್ರಾರ್ಥ ವಿಚಾರ. ಸಾಂಖ್ಯರು, ಪರಿಣಾಮ ವಾದಿಗಳು ಅದ್ವೈತಾದಿ ಮತಗಳನ್ನು ನಿರಾಕರಿಸಿ-೧) ಕಾರ್ಯಕಾರಣ ವಸ್ತುಗಳಲ್ಲಿ ಸತ್ತಾವಂತನಾದ ಹರಿಯು, ೨) ಆತ್ಮಜಾಯಾ ಸುತಾದಿಗಳ ಲ್ಲಿಪ್ಪ ಹರಿಯು, ೩) ಸಕಲ ಕ್ರಿಯಾಗಳಲ್ಲಿ ಪ್ರೇರ್ಯಪ್ರೇರಕ ಹರಿಯು ಮೂರು ಬೇರೆ ರೂಪಗಳಿದ್ದರೂ ಆ ಹರಿಯು ಅದ್ವೈತತ್ರಯ=ಏಕಮೇವಾ ದ್ವಿತೀಯ" ಎಂಬುವಂತೆ ಎಲ್ಲ ರೂಪಗಳು ಒಂದೇ! ಭೇದವಿಲ್ಲವೆಂದು ತಿಳಿಯುವದೆ, ಅದ್ವೈತ ತ್ರಯವೆಂದು ಕರೆಸುತ್ತದೆ. ಇದನ್ನೇ ಭಾಗವತ ಸಪ್ತಮಸ್ಕಂಧ ೧೫ನೇ ಅಧ್ಯಾಯ, ಶ್ಲೋಕ ೬೨, ೬೩, ೬೪ ಶ್ರೀಮದನಂದ ನೀಕಾರರಾದ ಶ್ರೀ ವ್ಯಾಸ ತತ್ವಜ್ಞರು ಭಾವಾದ್ವೈತಾದಿ ಸ್ವರೂಪಂ ವಿವಿಚ್ಯ ದರ್ಶಯತಿ । ಕಾರ್ಯ ಇತ್ಯಾದಿನಾ=ಪಟತಂತುವತ್ತದ್ಗತರೂಪ ಭಗವ ದ್ರೂಪದ್ವಯವತ್ । ಕಾರ್ಯಕಾರಣವಸ್ತುಷು । ಪ್ರಕೃತಿ ಮಹದಹಂಕಾರಾ ದಿಷು, ವಿದ್ಯಮಾನ ಭಗವದ್ರೂಪೈಕ್ಯಸ್ಯದರ್ಶನಂ ಯತ್ । ಅವಿಕಲ್ಪಸ್ಯ ಭೇದಸ್ಯಾಽವಸ್ತುತ್ವಾತ್ ಅಸತ್ಯತ್ವಾತ್ತದೈಕ್ಯ ದರ್ಶನಂ ಭಾವಾದ್ವೈತ ಮುಚ್ಯತ ಇತಿ ಯೋಜನಾ ॥ ೬೨ ॥

ಮನೋವಾಕ್ ತನುಭಿಃ ಕ್ರಿಯಮಾಣೇತ್ಯಧ್ಯಾಹೃತಂ । ಸರ್ವ ಕರ್ಮೇತ್ಯನೇನ ಸಂಬಧ್ಯತೇ । ಯತ್ಸಮರ್ಪಣಂ ತತ್ಕ್ರಿಯಾದ್ವೈತ ಮುಚ್ಯತ ಇತಿ ಯೋಜನಾ ॥ ೬೩ ॥

ಸ್ವಾರ್ಥಕಾಮಯೋ ಸ್ತದ್ಗತಯೋ ಭಗವದ್ರೂಪಯೋರೈಕ್ಯಂ ತದ್ದ್ರ
ವ್ಯಾದ್ವೈತ ಮುಚ್ಯತ ಇತಿ ಯೋಜನಾ । ಆತ್ಮಜಾಯೇತ್ಯಾದಿನಾ ಸ್ವಾರ್ಥ
ಕಾಮಯೋರ್ವಿವರಣಂ ಮಂತವ್ಯವ್ ॥ ೬೪ ॥

ಸದ್ಭಕ್ತಿಯಲಿ ಭಾವಿಸುತ=ಸಮೀಚೀನವಾದ ಭಕ್ತಿಯಿಂದ ತಿಳಿಯುತ್ತ, ಸರ್ವತ್ರ, ಎಲ್ಲ ಕಡೆಗೂ, ಜೀವಜಡ ಕ್ರಿಯಾದಿಗಳಲ್ಲಿ, ಮರೆಯುದಲೆ=ಅಜ್ಞಾನದಿಂದ ಮತ್ತತೆ ಗರ್ವದಿಂದ ಮರೆಯುಬೇಡ, ನೆನಸು. ತಾವಕನು=ನಿನ್ನವನು, ತಾನೆಂದು=ನಾನು ಎಂಬುದಕ್ಕೆ ತಾನೆಂದು, ಆತ್ಮನೇ ಪದಪ್ರಯೋಗ. ಶ್ರೀಹರಿಯೇ ನಾನು ನಿನ್ನವ ನಿನ್ನಾಧೀನದವ, ನಿನ್ನ ಪ್ರೇರಣೆಯಂತೆ ನಡೆಯುವನೆಂದು ಪ್ರತಿದಿನದಲ್ಲಿ ಸೇವಿಸುವ ಸೇವಾ-ಊಳಿಗವನ್ನು ಮಾಡುವ ಭಕುತರಿಗೆ, ತನ್ನನು ಈವ=ತನ್ನನ್ನೇ ಕೊಡುವ ಸಾಕ್ಷಾತ್ಕಾರನಾಗುವ, ಕಾವ ಕಾಯುವ-ಸಂರಕ್ಷಿಸುವನು, ಏಕೆಂದರೆ ಶ್ರೀಹರಿಯು ಬಹು ಕೃಪಾಳು. ಕರುಣಿಯು, ಹೇಗೆ ಕರಿವರ=ಗಜೇಂದ್ರನು ನಕ್ರನ ಬಾಧೆ ತಾಳಲಾರದೇ ಶ್ರೀಹರಿಯೇ ಸಂರಕ್ಷಿಸೆಂದು ಮೊರೆ ಇಡಲು, ಬಹುತ್ವರೆಯಿಂದ ಬಂದು, ಚಕ್ರದಿಂದ ನಕ್ರನನ್ನು ಶೀಳಿ ಕರಿಯನ್ನು ಸಂರಕ್ಷಿಸಿದಂತೆ ರಕ್ಷಿಸುವ "ಭಾವಕ್ರಿಯಾದ್ರವ್ಯಾದ್ವೈತತ್ರಯ । ಆವಾಗ ಚಿಂತಿಸು ಭೂಮ್ಯಾದಿ ಭೂತಾ । ಜೀವಿಗಳೊಳು ಜಗನ್ನಾಥ ವಿಠಲ–ಶ್ರೀ ಗೋಪಾಲದಾಸಾರ್ಯರು ಸುಳಾದಿಲಿ ಇಂತು ಅಪ್ಪಣೆ ಕೊಡಿಸುತ್ತಾರೆ.

ಭಾವಾದ್ವೈತ ಕ್ರಿಯಾದ್ವೈತ ದ್ರವ್ಯಾದ್ವೈತ ಇವು ಮೂರನ್ನೇ ದೇವನಲ್ಲಿ ಇಪ್ಪವೆಂದು ಅರಿದುನೋಡು । ಆವಾವಲ್ಲಿ ಚಿಂತಿಸು ಬಿಡದೆ । ಕಾವಾಕೊಂಬುವಲ್ಲಿ ಈವಲ್ಲಿ ಕೊಂಬಲ್ಲಿ । ಧಾವತಿಗಳಲ್ಲಿ ಸುಲಭ ಸೂಕ್ಷ್ಮದಲ್ಲಿ । ಭಾವಕ್ರೀಯ ದ್ರವ್ಯ ದೇವದೇವ ಎಂದು । ನೀ ವಿವೇಕದಿ ನೀಚ ಊಚ ಕ್ರಮದಿ । ಜೀವಿಗಳ ಗತಿಯು ಜಿತವಾಗಿ ಅರಿತು । ಭಾವಶುದ್ಧದಲ್ಲಿ ಭಕುತಿ ಪೂರ್ವಕದಿಂದ । ನೀ ಪೊಲಿಪೊಲಿದು ತಿಳಿದು ಒಲಿಸಿ ಒಲಿಸಿ ಪಾಡು। ಸೇವ್ಯಸೂತ್ರವು ನಿಂದ್ಯ ನೋವು ದಂಡನೆಯೆಲ್ಲ । ದೇವಪೂಜ್ಯ ಎಂಬ ಭಾವ ಕ್ರಿಯುವಫಳಿಸು । ಆವ ವಿಷಯದಲ್ಲಿ ದೇವದೇವರನ್ನ । ಸಾವಧಾನಧಿ ಹುಡುಕಿ ಪಾವನಾಂಗನಾಗೊ । ಕೋವಿದರ ಪ್ರಿಯ ಗೋಪಾಲ ವಿಠ್ಠಲ । ಕಾವ ನಿನ್ನ ಬಿಡದೆ ಆವಲ್ಲಿ ಇದ್ದರು ॥೨॥ (ಉಪಾಸನಾಸುಳಾದಿ ಪುಟ ೧೫೦)

**ಶ್ರೀ ದ್ರೌಪದೀಶಪತಿ ವಿಠಲರು :** ಭಾವದ್ರವ್ಯ ಕ್ರಿಯುಗಳೆನಿಸುವ, ಮೃತ್ತಿಕಾ ಕಾರಣ ಘಟ ಕಾರ್ಯ; ಘಟಮೃತ್ತಿಕಾಂತರ್ಗತರೂಪ ಐಕ್ಯವೇ ಭಾವಾದ್ವೈತ. ಘಟಕಾರ್ಯ=ಜಡ, ಇದು ಕರ್ಮ-ಕ್ರಿಯಾದ್ವೈತ. ಕಾಯಾ ವಾಚಾ ಮನಸಾ ಮಾಡುವಂಥ ದಾವ ಕರ್ಮಬಿಂಬ ಮಾಡಸುತ್ತಾನೆಂಬ ಚಿಂತನೆ ಕ್ರಿಯಾದ್ವೈತ. ಜೀವ=ದ್ರವ್ಯಾದ್ವೈತ ತಾನು ತನ್ನ ಹೆಂಡತಿ ಮಗ ಬಂಧುಗಳು ಸರ್ವಾಂತರ್ಗತ ರೂಪಕ್ಕೂ ತನ್ನಂತರ್ಗತ ರೂಪಕ್ಕೂ ಐಕ್ಯಚಿಂತನವೇ ದ್ರವ್ಯಾದ್ವೈತ ॥ ೧೧ ॥

ಶ್ರೀಗುರು ಶ್ರೀಶವಿಠಲರ ಶಿಷ್ಯರು : ಭಾವದ್ರವ್ಯ ಕ್ರಿಯುಗಳೆನಿಸುವ, ಭಾವ ದ್ರವ್ಯ ಕ್ರಿಯುಗಳು ಎನಿಸುವ-ಎನಿಸಿಕೊಂಬಂಥ, ಈ ವಿಧ ಈ ವಿಧವಾಗಿ ಅದ್ವೈತ ತ್ರಯುಂಗಳ ೧) ಭಾವಾದ್ವೈತ, ೨) ದ್ರವ್ಯಾದ್ವೈತ, ೩) ಕ್ರಿಯಾದ್ವೈತ, ಮೂರು ಪ್ರಕಾರ ಅದ್ವೈತ ಸಮನ್ವಯಿಸಬೇಕು ಎರಡನೇ ಚಿಂತನಾ ಕೂಡದು. ಅದ್ವೈತ ತ್ರಯುಗಳಿಗೆ ವಿವರ, ಭಾವಾದ್ವೈತ= ಶ್ರೀ ರಮಾನಿವಾಸ ಶ್ರೀ ಆದಿನಾರಾಯಣನಲ್ಲಿ ಸರ್ವೋತ್ತಮ ಜ್ಞಾನ ಭಕ್ತಿ ಏಕೋಭಾವನ ಒಂದೇ ಪ್ರಕಾರವಾಗಿ ದೃಢವಾಗಿ ಭಾವನವುಳ್ಳದ್ದು ಭಾವಾದ್ವೈತ. ಅನ್ಯಥಾ ಭಾವನ ಮಾಡಕೂಡದು. ಅನ್ಯಥಾ ಭಾವನವೆಂದರೆ, ಶ್ರೀಹರಿ ಸರ್ವೋತ್ತಮ ಸ್ವತಂತ್ರ ಪುರುಷ, ಶ್ರೀ ರಮಾ ಬ್ರಹ್ಮಾದಿಗಳಿಗೆ ತಾರತಮ್ಯ ಪಂಚಭೇದ ಜ್ಞಾನಕ್ಕೆ ವಿರಹಿತವಾದ ಅದ್ವೈತ ಜ್ಞಾನವೇ ಅನ್ಯಥಾ ಜ್ಞಾನ. ಶ್ರೀ ಆದಿನಾರಾಯಣನೇ ಚತುರ್ದಶ ಭುವನಾಧಿಪತಿ. ಶ್ರೀ ರಮಾ ಬ್ರಹ್ಮಾದಿಗಳಿಂದ ಪೂಜ್ಯ ಸರ್ವಸ್ವಾಮಿ ಎನ್ನಸ್ವಾಮಿ, ಭಿನ್ನರಹಿತ ಶ್ರೀಹರಿಯ ರೂಪಗಳಿಗೆ, ಗುಣಗಳಿಗೆ ಅಭಿನ್ನ, ಅಖಿಳ ಜಗದಂತರ್ಯಾಮಿ ಎಂದು ಸ್ವಾಮಿಯ ಪಾದದಲ್ಲಿ ಏಕೋಭಾವನವುಳ್ಳ ಜ್ಞಾನದಿಂದ ಭಕ್ತಿ ಮಾಳ್ಪದೇ ಭಾವಾದ್ವೈತ.

ಜ್ಞಾನಿಗಳು ಇನ್ನೊಂದು ಪ್ರಕಾರಾಂತರ ಹೇಳುತ್ತಾರೆ. ಶ್ರೀ ರಮಾವಲ್ಲಭ ಶ್ರೀ ಆದಿನಾರಾಯಣನ ರೂಪಕ್ಕೆ ವಾಸುದೇವಾದ್ಯವತಾರ ರೂಪಗಳಿಗೆ ಅದ್ವೈತಭಾವನ ಚಿಂತನಮಾಡೋದು (ಪರಸ್ಪರ ಭೇದವಿಲ್ಲವೆಂದು) ಚಿಂತನ ಮಾಡುವದು ಭಾವಾದ್ವೈತ. ಎರಡನೇ ಭಾವನವೆ-ದ್ವಯಚಿಂತನ

ಮಾಡಕೂಡದು. ಶ್ರೀ ರಮಾನಿವಾಸ ಆದಿನಾರಾಯಣಾದ್ಯಮಿತ ರೂಪಗಳಿಗೆ ಗುಣಗಳಿಗೆ ಅಭೇದ ಚಿಂತನವೇ ಭಾವಾದ್ವೈತ ಜ್ಞಾನ.

ಶ್ರೀ ರಮಾಕಾಂತ ಪ್ರಣವ ಪ್ರತಿಪಾದ್ಯ "ವಿಶ್ವಂ ವಿಷ್ಣು ವಷಟ್ಕಾರಾದಿ ರೂಪಗಳಿಗೆ ಮೂಲರೂಪಿ ಶ್ರೀ ನಾರಾಯಣನ ರೂಪಕ್ಕೆ ಗುಣಗಳಿಗೆ ಅಭೇದ ಚಿಂತನವೇ ಭಾವಾದ್ವೈತ, ಭೇದ ಚಿಂತನವೇ ಅಜ್ಞಾನ.

ಇನ್ನು ದ್ರವ್ಯಾದ್ವೈತ=ಧನಾದಿ ದ್ರವ್ಯಗಳಲ್ಲಿ ಶ್ರೀ ರಮಾಕಾಂತ ಶ್ರೀ ನಾರಾಯಣ, ತನ್ನಾಮ ತದ್ರೂಪತದಾಕಾರದಿಂದ ದ್ರವ್ಯಗಳಲ್ಲಿ ವ್ಯಾಪ್ತನಾಗಿದ್ದಾನೆಂಬೋ ಏಕೋ ಭಾವನವುಳ್ಳದ್ದೇ ದ್ರವ್ಯಾದ್ವೈತ. ಅನ್ಯಥಾ ಜ್ಞಾನದಿಂದ ಧನಾದಿ ಈಷಣತ್ರಯ ನನ್ನದೆಂಬೋ ಎರಡನೇದು ದ್ವೈತಜ್ಞಾನ. ಇನ್ನು ಕ್ರಿಯಾದ್ವೈತ=ತನ್ನಿಂದ ಜ್ಞಾನಕರ್ಮೇಂದ್ರಿಯಗಳಿಂದ ಮಾಡೋ ಕ್ರಿಯಗಳಲ್ಲಿ ತದ್ವಾಚ್ಯನಾಗಿ ತದ್ರೂಪದಿಂದ ಶ್ರೀ ನಾರಾಯಣನೇ ಮಾಡಿಸುತ್ತಾನೆಂದು ತಿಳಿವುದು ಕ್ರಿಯಾದ್ವೈತ, ಅನ್ಯತ್ರ ತಿಳಿವೋದು ಅಜ್ಞಾನ. ಶ್ರೀ ಆದಿನಾರಾಯಣನ ವಿನಾ ನಾನೇ ಸಮಸ್ತ ಕರ್ಮಕ್ರಿಯಾಗಳ ಅಹಂಕಾರವುಳ್ಳವನಾಗಿ ಮಾಡುತ್ತೇನೆ ಎಂಬುವದೇ ಅನ್ಯಕರ್ಮ. ಅನ್ಯತ್ರಕ್ರಿಯಾ ಇದೇ ಅಜ್ಞಾನ. ಸಕಲ ಕ್ರಿಯಾಗಳಲ್ಲಿ ಏಕೋಭಾವನವುಳ್ಳವನಾಗಿ, ಶ್ರೀ ಆದಿನಾರಾಯಣನ್ನ ತಿಳಿಯೋದೆ ಕ್ರಿಯಾದ್ವೈತ. ಈ ಪ್ರಕಾರ ಶ್ರೀ ರಮಾಕಾಂತ ಶ್ರೀ ನಾರಾಯಣನ ಚರಣಾರವಿಂದಗಳಲ್ಲಿ ಯೇಕ ನಿಷ್ಠೆಯಿಂದ ನಿಶ್ಚಲಭಕ್ತಿ ಪುರಸ್ಸರ ಏಕೋಭಾವವುಳ್ಳದ್ದು ಭಾವಾದ್ವೈತ. ದ್ರವ್ಯಾದ್ವೈತ ಧನಾದಿ ದ್ರವ್ಯಗಳಿಗೆಲ್ಲ ಶ್ರೀ ಆದಿನಾರಾಯಣ ಕರ್ತಾ ಶ್ರೀ ನಾರಾಯಣನ ಪದಾರ್ಥವೆಂಬುವುದೇ ದ್ರವ್ಯಾದ್ವೈತ. ಕ್ರಿಯಾದ್ವೈತ=ಸಕಲ ಕ್ರಿಯಗಳ ಶ್ರೀಹರಿ ಮಾಡಿಸುತ್ತಾನೆಂದು ತಿಳಿಯುವದು, ಕ್ರಿಯಾದ್ವೈತ.*

ಭಾವಾದ್ವೈತ ದ್ರವ್ಯಾದ್ವೈತ ಕ್ರಿಯಾದ್ವೈತ ಪೂರ್ವೋಕ್ತ ಪ್ರಕಾರ ಭಾವಿಸುತ ಏಕೋ ಭಾವನವುಳ್ಳ ಜ್ಞಾನದಿಂದ, ಸದ್ಭಕ್ತಿಯಲ್ಲಿ ಶ್ರೀ ಆದಿನಾರಾಯಣನ ಪಾದದಲ್ಲಿ ಸಮೀಚೀನವಾದ ಭಕ್ತಿ ಪುರಸ್ಸರ, ಸರ್ವತ್ರ ಜೀವ ಜಡಾತ್ಮಕ ಬ್ರಹ್ಮಾಂಡ ಪಿಂಡಾಂಡದಲ್ಲಿ, ಸತ್ವರಜಸ್ತಮ ಜೀವರಲ್ಲಿ ಭೂಜಲ

---

* ಈ ಸೂಕ್ಷ್ಮದರ್ಶಿಗಳ ವಿಷಯ ವಿಮರ್ಶೆ ಬಹು ಸೂಕ್ಷ್ಮತರವಾಗಿ, ಭಗವಂತನಲ್ಲಿ ನಿರ್ಭರ ಭಕ್ತಿಭಾವನೆ ಪುಟ್ಟಿಸುವುದು. ಇದೇ ಭಾಗವತದ ನಿಜ

ಖೇಚರ ಪ್ರಾಣಿಗಳಲ್ಲಿ, ತ್ರಿವಿಧ ಗುಣದಲ್ಲಿ, ಸ್ಥಾವರ ಜಂಗಮ ಜೀವರಲ್ಲಿ, ಸ್ತ್ರೀ ನಪುಂಸಕ ಪುರುಷರುಗಳಲ್ಲಿ, ಶ್ರೀ ರಮಾಬ್ರಹ್ಮ ಗರುಡಶೇಷ ರುದ್ರೇಂದ್ರಾದಿ ದೇವತೆಗಳಲ್ಲಿ, ಸಕಲ ಧರ್ಮ ಕ್ರಿಯಗಳಲ್ಲಿ, ಚತುರ್ದಶ ಲೋಕಗಳಂತರ್ಬಹಿರದಲ್ಲಿ, ಮರೆಯದಲೇ ಶ್ರೀಹರಿಯಲ್ಲಿ ಏಕೋಭಾವನದಿಂದ, ಜ್ಞಾನ ಭಕ್ತಿಪೂರ್ವಕ, ಧನಗಳಲ್ಲಿ ಕ್ರಿಯೆಗಳಲ್ಲಿ ವ್ಯಾಪ್ತನಾದ ಶ್ರೀ ಆದಿನಾರಾಯಣನ ವಿಸ್ಮರಣೆವುಳ್ಳವನಾಗದೇ, ಶ್ರೀ ವಿಷ್ಣು ಪ್ರೇರಣಯಾ ಶ್ರೀ ವಿಷ್ಣು ಸ್ಮರಣೆ ಪೂರ್ವಕ ಧ್ಯಾನವುಳ್ಳವನಾಗಿ, ಕಾವವನು ತಾನೆಂದು, ಬ್ರಹ್ಮಾಂಡ ಪಿಂಡಾಂಡದಲ್ಲಿ, ಹಿಂದು=ಅಸೃಜ್ಯ ಕಾಲದಲ್ಲಿ, ಇಂದು=ಸೃಷ್ಟಿಗೆ ಬಂದಾಗ, ಮುಂದೆಂದಿಗು=ಮುಕ್ತನಾದಾಗ್ಗೆ, ಶ್ರೀ ನಾರಾಯಣನೇ ಸಂರಕ್ಷಣೆ ಕರ್ತನೆಂದು, ಪ್ರತಿದಿನ ಸೇವಿಸುವ ಭಕ್ತರಿಗೆ, ನಿತ್ಯನಿತ್ಯದಲ್ಲಿ ಹರಿ ಸರ್ವೋತ್ತಮ ತಾರತಮ್ಯ, ಪಂಚಭೇದ ಜ್ಞಾನದಿಂದ ಭಕ್ತಿ ಪುರಸ್ಸರ, ಶ್ರೀ ಭೂದುರ್ಗಾ ರಮಣ ಶ್ರೀ ನಾರಾಯಣನ ಪೂಜಾ ಮಾಡುವಂಥ ಭಕ್ತರಿಗೆ, ತನ್ನನೆ ಈವ= ಧರ್ಮಾರ್ಥ ಕಾಮ ಮೋಕ್ಷ ಚತುರ್ವಿಧ ಪುರುಷಾರ್ಥ ರೂಪಕ, ಅನಿರುದ್ಧ, ಪ್ರದ್ಯುಮ್ನ, ಸಂಕರಷಣ, ವಾಸುದೇವ ಚತುಮೂರ್ತ್ಯಾತ್ಮಕ ಶ್ರೀ ಆದಿ ನಾರಾಯಣ ಪೊಲಿವ, ತನ್ನನ್ನೇ ಕೊಡುವ, ಸ್ವಾಮಿ ಭಕ್ತವತ್ಸಲ, ಭಕ್ತಪರಾಧೀನನಾಗುವ, ಕಾಮ=ಕಾಮಧೇನು ಕಲ್ಪತರು ಚಿಂತಾ ಮಣಿಂದೆನಿಸಿ, ತನ್ನ ಭಕ್ತರಿಷ್ಟಾರ್ಥ ಪೂರೈಸಿ, ದುಷ್ಟರ ಸಂಗ ದೂರ ಮಾಡಿ, ಅರಿಷಡ್ವರ್ಗಗಳ ಖಂಡ್ರಿಸಿ, ಅಹಂಕಾರ ಮಮಕಾರ ಪರಿಹಾರಮಾಡಿ ಸಂರಕ್ಷಿಸುವ, ಕೃಪಾಳು=ಶ್ರೀ ಪುರುಷೋತ್ತಮ ಕರುಣಾಳು, ಕರಿವರ ಗೊಲಿದತೆರದಂತೆ, ಕರಿ=ಗಜ, ವರ=ಶ್ರೇಷ್ಠ, ಕರಿವರಗೆ=ಗಜರಾಜಗೆ ಪೊಲಿದ, ಗಜರಾಜ ಇಂದ್ರದ್ಯುಮ್ನ ಮಹಾರಾಜನ ಅವತಾರ-ಗಜರಾಜನ ಬಾಧಿಸುವಂಥ ನೆಗಳನ್ನು ಸಂಹಾರಮಾಡಿ, ಕರಿವರಗೆ ಶ್ರೀ ರಮಾರಮಣ ಭಕ್ತ ಬಂಧು ಅನಾಥ ರಕ್ಷಕ, ಆಪತ್ಕಾಲ ಬಾಂಧವ, ಶ್ರೀ ಆದಿನಾರಾಯಣ ಶಂಖಚಕ್ರ ಧಾರಿಯಾಗಿ, ತನ್ನ ಸಂದರುಶನ ಕೊಟ್ಟು, ಮುಕ್ತಪದಪ್ರದನಾಗಿ, ಗಜರಾಜನ್ನ ಯಾವ ಪ್ರಕಾರ ಸಂರಕ್ಷಣೆ ಮಾಡಿದನೋ ಆ ಪ್ರಕಾರ ಶ್ರೀ ಆದಿ ನಾರಾಯಣ, ತನ್ನ ನಂಬಿದ ಭಕ್ತರನ ಬಾಧಿಸುವಂಥ, ಭವಾಖ್ಯ ಸಂಸಾರ

ಪರಿಹರಿಸಿ, ತನ್ನ ನಾಮಸ್ಮರಣೆ ಕೊಟ್ಟು ಸ್ವರೂಪ ಸುಖಾಬ್ಧಿಯೊಳು ಲೋಲ್ಯಾಡಿಸುವ ॥ ೧೧ ॥

**ಭಾವಸೂಚನ:** ಭಾವೇತಿ ಕರವರ-ಗಜೇಂದ್ರ ॥ ತದುಕ್ತಂ ಸಪ್ತಮ ಭಾಗವತೇ ತುರ್ಯಾಧ್ಯಾಯೇ ಧರ್ಮಜಂ ಪ್ರತಿ ನಾರದೇನ "ಭಾವಾದ್ವೈತಂ ಕ್ರಿಯಾದ್ವೈತಂ ದ್ರವ್ಯಾದ್ವೈತಂ ತಥೈವ ಚಾ ॥ ವರ್ತಯನ್ ಸ್ವಾನು ಭೂತ್ಯೇಹ ತ್ರೀನ್ ಸ್ವಪ್ನಾನ್‌ಧುನುತೇ ಮುನಿಃ" ॥೬೨॥ "ಕಾರ್ಯಕಾರಣ ವಸ್ತ್ವೈಕ್ಯ ದರ್ಶನಂ ಪಟತಂತುವತ್ ॥ ಅವಸ್ತುತ್ವಾದ್ವಿಕಲ್ಪಸ್ಯ ಭಾವಾ ದ್ವೈತಂ ತದುಚ್ಯತೇ" ॥ ೬೩ ॥ "ಯದ್ಬ್ರಹ್ಮಣಿ ಪರೇ ಸಾಕ್ಷಾತ್ಸರ್ವ ಕರ್ಮ ಸಮರ್ಪಣಂ ॥ ಮನೋ ವಾಕ್ ತನುಭಿಃ ಪಾರ್ಥ ಕ್ರಿಯಾದ್ವೈತಂ ತದು ಚ್ಯತೇ" ॥೬೪॥ "ಆತ್ಮಜಾಯಾ ಸುತಾದೀ ನಾಮನ್ಯೇಷಾಂ ಸರ್ವದೇಹಿನಾಂ॥ ಯತ್ಸ್ವಾರ್ಥ ಕಾಮಯೋರೈಕ್ಯಂ ದ್ರವ್ಯಾದ್ವೈತಂ ತದುಚ್ಯತೇ ಇತಿ" ॥೬೫॥

ಸರ್ವ ವಸ್ತುಗತ ಶಕ್ತಿ ಹರಿ ಆಧೀನವೆಂದು, ವಸ್ತುಗತನಾದ ಸರ್ವೋ ತ್ತಮ ಗುಣಪೂರ್ಣ, ನಿತ್ಯಾಽ ಪ್ರತಿಹತನಾದ ಪ್ರಯುಕ್ತ, ವಸ್ತು ಶಬ್ದ ವಾಚ್ಯನಾದ ಪರಮಾತ್ಮನ ರೂಪಗಳಿಗೆ ಐಕ್ಯವೇ ಈ ಭಾಗವತಾರ್ಥ ॥ ತದುಕ್ತಂ ವಿಷ್ಣುರಹಸ್ಯೇ ಹಯಾಸ್ಯೇನ ಚತುರಾಸ್ಯಂ ಪ್ರತಿ ॥ ಸರ್ವವಸ್ತು ಷು ಯಾಶಕ್ತಿಃ ಸಾಮಾದೀ ಯೈವನಾನ್ಯಥ ಇತಿ ॥ ನಿತ್ಯ ಸಂಹಿತಾಯಾಂ ಚ ॥ ಸರ್ವದಾ ಪರಮಂ ಬ್ರಹ್ಮತಸ್ಮಾದ್ವಾಸ್ತವ ಮಿಾರ್ಯತ ಇತಿ ॥ ವಸ್ತ್ವ ಪ್ರತಿಹತ ಮಿತಿ ಪ್ರಥಮ ತಾತ್ಪರ್ಯೇ ಚ ॥ ಸ್ಕಾಂದೇಚ॥ ವಸನಾ ದ್ವಾಸನಾ ದ್ವಸ್ತು ನಿತ್ಯಾ ಪ್ರತಿಹತಂ ಯತ ಇತಿ ॥ ೧೧ ॥

ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಅನ್ಯಾಸಾಧ್ಯೋಪಕಾರಕ ಸರ್ವಾತ್ಮ (ಚರಣ) ಸಮರ್ಪಣ ಸಮಯೇ ಭಾವನಾಪ್ರಕಾರಂ ದರ್ಶಯತೀತಿ" ವೈಜಯಧ್ವಜಮಾಲೋಚ್ಯ ಆಹ "ಭಾವೇತಿ" ॥ "ಭಾವಾದ್ವೈತಂ ಕ್ರಿಯಾದ್ವೈತಂ ದ್ರವ್ಯಾದ್ವೈತಂ ತಥಾಽ ತ್ಮನಃ ॥ ವರ್ತಯನ್ ಸ್ವಾನುಭೂತ್ಯೇಹ ತ್ರೀನ್ ಸ್ವಪ್ನಾನ್ ಧುನುತೇ ಮುನಿಃ ॥" ಆತ್ಮನಃ ಪರಮಾತ್ಮನಃ । ಸ್ವಾನುಭೂತ್ಯಾ ಆವಿರ್ಭೂತ ಸ್ವರೂಪ ಜ್ಞಾನೇನ । ಸ್ವಪ್ನಾನ್ ಜಾಗ್ರದಾದ್ಯವಸ್ಥಾನುಭವ ನಿಮಿತ್ತಾಜ್ಞಾನ ಶಬ್ದ ವಾಚ್ಯಾನ್ ಅನರ್ಥಾನ್ । ಧುನುತೇ ಮುನಿಃ ನಿರಸ್ಯತೀತಿ ॥ ತೇಷು

ಅನಾಸಕ್ತ ಇತಿ || ಅದ್ವೈತತ್ರಯ ಮಾಹ | "ಕಾರ್ಯಕಾರಣ ವಸ್ತ್ವೈಕ್ಯ ದರ್ಶನಂ ಪಟತಂತುವತ್ || ಅವಸ್ತುತ್ವಾತ್ ವಿಕಲ್ಪಸ್ಯ ಭಾವಾದ್ವೈತಂ ತದುಚ್ಯತೇ ||" ವಿಕಲ್ಪಸ್ಯ ಪ್ರಕೃತ್ಯಾಖ್ಯ ಪ್ರಪಂಚಸ್ಯ || ಕಾರ್ಯಜನನ ಶಕ್ತ್ಯಭಾವಾತ್ ಮಹದಾದಿಕಾರ್ಯೇ ಪ್ರಕೃತಿ ತದ್ಗುಣಾಹ್ವ(ಖ್ಯ) ಕಾರಣ ಗತ ಹರಿ ಮೂರ್ತ್ಯೋಃ ಐಕ್ಯಂ ಭಾವಾದ್ವೈತಮ್ || "ಯದ್‌ಬ್ರಹ್ಮಣಿ ಪರೇ ಸಾಕ್ಷಾತ್ ಸರ್ವಕರ್ಮ ಸಮರ್ಪಣಮ್ || ಮನೋವಾಕ್ತನುಭಿಃ ಪಾರ್ಥ ಕ್ರಿಯಾದ್ವೈತಂ ತದುಚ್ಯತೇ ||" "ನ ಋತೇ ತ್ವತ್ ಕ್ರಿಯತೇ" ಇತಿ ಕ್ರಿಯಾದ್ವೈತಮ್ || "ಆತ್ಮಜಾಯಾ ಸುತಾದೀನಾಂ ಅನ್ಯೇಷಾಂ ಸರ್ವದೇಹಿನಾಮ್ || ಯಚ್ಛಾರ್ಥ ಕಾಮಯೋಃ ಐಕ್ಯಂ ದ್ರವ್ಯಾದ್ವೈತಂ ತದುಚ್ಯತೇ || ಆತ್ಮಜಾಯಾ ಸುತ ತದನ್ಯ ದೇವದತ್ತಾದೀನಾಂ ಭಗವದ ಧೀನತ್ವಂ | ಅರ್ಥ ಕಾಮಯೋಃ ಭಗವದ್ವಿಷಯತ್ವಬುದ್ಧಿಃ || "ಮನ್ಯೇ ತದರ್ಪಿತ ಮನೋವಚನಾತ್ಮಗೇಹ ಪ್ರಾಣಃ "ಇತ್ಯುಕ್ತ ದ್ರವ್ಯಾದ್ವೈತಮ್|| ತಾವಕ ಹರಿಂ ಪ್ರತಿ "ತವಾಹಂ" ಇತಿ ವಾದೀ || "ಕರಿ" ಇತಿ ಗಜೇಂದ್ರಃ || ೧೧ ||

## ಕನ್ನಡಾರ್ಥ

"ಯಾರಿಂದಲೂ ಮಾಡಲಸಾಧ್ಯವಾದ ಉಪಕಾರವನ್ನು ಮಾಡುವ ಸರ್ವಾತ್ಮಕ ಸರ್ವನಿಯಾಮಕನಾದ ಶ್ರೀಹರಿಯ ಚರಣಗಳಲ್ಲಿ ಸರ್ವಸ್ವವನ್ನೂ ಸಮರ್ಪಿಸುವಾಗ ಇರಬೇಕಾದ ಭಾವನೆಯನ್ನು ತೋರಿಸುತ್ತಾರೆ "ಭಾವ" ಎಂಬುದಾಗಿ ಎಂದು ಶ್ರೀ ವಿಜಯಧ್ವಜ ತೀರ್ಥರ ವಚನವನ್ನು ಪರ್ಯಾಲೋಚಿಸಿ ಹೇಳುತ್ತಾರೆ ದಾಸವರ್ಯರು "ಭಾವ" ಎಂಬುದಾಗಿ. "ಭಾವಾದ್ವೈತ, ಕ್ರಿಯಾದ್ವೈತ, ದ್ರವ್ಯಾದ್ವೈತ" ಈ ಮೂರು ಅದ್ವೈತಗಳನ್ನು ಸ್ಮರಿಸುತ್ತ ಅದರಿಂದ ಬಂದ ಸ್ವರೂಪ ಜ್ಞಾನದಿಂದ "ಸ್ವಪ್ನ ಸುಷುಪ್ತಿ ಜಾಗ್ರತ್" ಎಂಬ ಮೂರು ಅವಸ್ಥೆಗಳಿಂದಾಗುವ ಅಜ್ಞಾನವೆಂಬ ಅನರ್ಥವನ್ನು ಜ್ಞಾನಿಯು ತಪ್ಪಿಸಿಕೊಳ್ಳುತ್ತಾನೆ. (ಭಾ. ಸ. ೧೬, ೬೨) ಆತ್ಮನಃ ಎಂದರೆ "ಪರಮಾತ್ಮನ" ಎಂದು ಅರ್ಥ. ಸ್ವಾನುಭೂತ್ಯಾ ಅಂದರೆ "ಭಗವತ್ಸ್ಮರಣದಿಂದ ಅಭಿವ್ಯಕ್ತವಾದ ಸ್ವರೂಪ ಜ್ಞಾನದಿಂದ" ಎಂದು ಅರ್ಥ. "ಸ್ವಪ್ನಾನ್" "ಜಾಗ್ರತ್" ಮುಂತಾದ ಅವಸ್ಥೆಗಳ ಅನುಭವದಿಂದ ಆಗುವ

"ಅಜ್ಞಾನ" ಎಂದು ಕರೆಯಲ್ಪಡುವ ಅನರ್ಥಗಳನ್ನು" ಎಂದು ಅರ್ಥ. ಮುನಿಃ=ಶಾಸ್ತ್ರತತ್ವಜ್ಞಾನಿಯು "ಧುನುತೇ"=ಕಳೆದುಕೊಳ್ಳುತ್ತಾನೆ. ಅಂದರೆ ಆಯಾ ಅವಸ್ಥಾ ವಿಷಯಗಳಲ್ಲಿ ಆಸಕ್ತನಾಗುವದಿಲ್ಲವೆಂದು ಅಭಿಪ್ರಾಯ.

ಮೂರು ಅದ್ವೈತಗಳನ್ನು ಹೇಳುತ್ತಾರೆ. ಮಹತ್ತತ್ವ ಮುಂತಾದ ಕಾರ್ಯಗತವಾದ ಭಗವದ್ರೂಪಗಳಿಗೂ ಪ್ರಕೃತಿ ಹಾಗು ಅದರ ಗುಣಗಳು ಮುಂತಾದ ಕಾರಣಗತವಾದ ಭಗವದ್ರೂಪಗಳಿಗೂ ಐಕ್ಯ-ಅಭೇದವನ್ನು ತಿಳಿಯುವದು "ಭಾವಾದ್ವೈತವು". ವಸ್ತ್ರಕ್ಕೂ ಅಲ್ಲಿರುವ ಎಳೆಗಳಿಗೂ ಹೇಗೆ ಅಭೇದವೋ ಹಾಗೆ ಕಾರಣ ಕಾರ್ಯಗತ ರೂಪಗಳಿಗೆ ಅಭೇದವು. ಪ್ರಕೃತಿ ಹಾಗೂ ವಿಕಾರ ರೂಪವಾದ ಪ್ರಪಂಚವು ಸ್ವತಃ ಜಡವಾದುದರಿಂದ ಸ್ವತಂತ್ರವಾಗಿ ಕಾರ್ಯವನ್ನು ಹುಟ್ಟಿಸುವದಿಲ್ಲ. ಆದಕ್ಕಾಗಿ ಕಾರಣ ಕಾರ್ಯಗಳಲ್ಲಿ ಭಗವಂತನ ರೂಪಗಳು ಸನ್ನಿಹಿತವಾಗಿ ಕಾರ್ಯಗಳನ್ನು ಹುಟ್ಟಿಸುತ್ತವೆ. ಆದುದರಿಂದ ಕಾರಣ ಕಾರ್ಯಗತ ಭಗವದ್ರೂಪಗಳನ್ನು ಅಭೇದದಿಂದ ಚಿಂತಿಸುವದು ಭಾವಾದ್ವೈತವು. "ನ ಋತೇ ತ್ವತ್ ಕ್ರಿಯತೇ" ಎಂದು ಶ್ರುತಿಯಲ್ಲಿ ಹೇಳಿದಂತೆ. "ಶರೀರ ವಾಕ್ ಮನಸ್ಸು" ಇವುಗಳಿಂದ ಮಾಡುವ ಯಾವದೇ ಕಾರ್ಯವು "ಭಗವಂತನಿಲ್ಲದೇ ನಡೆಯದು ಎಂದು" ತಿಳಿದು ಸರ್ವಕರ್ಮಗಳನ್ನೂ ಭಗವಂತನಲ್ಲಿ ತದಧೀನತಾ ಬುದ್ಧಿಯಿಂದ ಸಮರ್ಪಿಸುವದು ಕ್ರಿಯಾದ್ವೈತವು.

ದೇಹ ಹೆಂಡರು ಮಕ್ಕಳು ಮುಂತಾದವುಗಳೂ ಮಿಕ್ಕ ಸಕಲ ವಸ್ತುಗಳೂ "ಶ್ರೀಹರಿಯ ಅಧೀನ" ಎಂದು ಅರ್ಪಿಸುವದೂ ಅರ್ಥ ಕಾಮುಗಳೆಲ್ಲವೂ ಭಗವತ್ಸಂಬಂಧಿಯಾಗಿರುವವೆಂದು ಚಿಂತಿಸುವದೂ ದ್ರವ್ಯಾದ್ವೈತವೆನಿಸುತ್ತದೆ.

ಭಗವಂತನಲ್ಲಿ ಸಮರ್ಪಿತವಾದ ಮನಸ್ಸು ವಚನ ದೇಹ ಗೃಹ ಇಂದ್ರಿಯಗಳು ಪವಿತ್ರಗೊಳಿಸುವದೇ ಹೊರತು ಅಹಂಕಾರ ಮಮಕಾರಗಳಿಂದ ಅಂತಃಕರಣವು ಮತ್ತಷ್ಟು ಕಲುಷ ಹೊಂದುತ್ತದೆ ಎಂದು ಹೇಳಲಾಗಿರುತ್ತದೆ. ಹೀಗೆ ಸಕಲವನ್ನೂ ಭಗವದಧೀನವೆಂದು ತಿಳಿದು ಒಪ್ಪಿಸುವದು "ದ್ರವ್ಯಾದ್ವೈತ". "ತಾವಕನು ತಾನು" ಎಂದರೆ "ನಿನ್ನವನು ನಾನು"

ಎಂದು ತಿಳಿಯುವದು. ಕರಿವರ ಎಂದರೆ ಗಜೇಂದ್ರನೆಂದು ತಿಳಿಯ ಬೇಕು ॥ ೧೧ ॥

**ಅವತರಣಿಕಾ:** ಈ ೧೨ನೇ ಪದ್ಯ ಆರಂಭಿಸಿ ೨೮ ಪದ್ಯ ಪೂರ್ತಿ ಶ್ರೀಹರಿಯ ನಾನಾ ವಿಭೂತಿ ರೂಪಗಳನ್ನು ಏಕೀಕರಣ ಮಾಡುತ್ತ ಅಧಿಕಾರಾನುಸಾರ ಬಿಂಬನಲ್ಲಿ ಸಮನ್ವಯ ಕ್ರಮ ಪೂಜಾ ಧ್ಯಾನೋಪಾಸನ ಬಗೆಯನ್ನು ಹೇಳುತ್ತಾರೆ.

**ಮೂಲ:**

**ಬಾಂದಳವೆ ಮೊದಲಾದುದರೊಳೊಂ ।**
**ದೊಂದರಲಿ ಪೂಜಾ ಸುಸಾಧನ ।**
**ವೆಂದೆನೆಸುವ ಪದಾರ್ಥಗಳು ಬಗೆಬಗೆಯ ನೂತನದಿ ॥**
**ಸಂದಣಿಸಿಕೊಂಡಿಹವು ಧ್ಯಾನಕೆ ।**
**ತಂದಿನಿತು ಚಿಂತಿಸಿ ಸದಾ ಗೋ ।**
**ವಿಂದನರ್ಚಿಸಿ ನೋಡು ನಲಿನಲಿದಾಡು ಕೊಂಡಾಡು ॥ ೧೨ ॥**

**ಪದ್ಯಾರ್ಥ:** ಬಾಂದಳವೆ=ಆಕಾಶವೇ ಮೊದಲಾದವು. ಆಕಾಶ ವಾಯು ತೇಜ ಅಪ್ಪು ಪೃಥ್ವಿ ಈ ಐದು ಪಂಚಮಹಾ ಭೂತಗಳೊಳಗೆ ಒಂದೊಂದರೊಳಗೆ ಪೂಜಾ ಸುಸಾಧನವೆಂದೆನಿಸುವ ಶ್ರೀಹರಿ ಬಿಂಬಾರ್ಚನೆ ಪೂಜಾ ಸಾಧನವಾದ ಪೂಜಾಕ್ಕೆ ಯೋಗ್ಯವಾದ ಪದಾರ್ಥಗಳು ವಸ್ತುಗಳು, ಬಗೆಬಗೆಯ=ನಾನಾ ವಿಧವಾಗಿ, ನೂತನದಿ=ಹೊಸಹೊಸದಾಗಿ, ಸಂದಣಿಸಿ ಕೊಂಡಿಹವು=ಗುಂಪುಗುಂಪಾಗಿ ಒಟ್ಟು ಕೂಡಿರುವವು, ಇವುಗಳ ಬಗೆಗಳ ನರಿತು, ಧ್ಯಾನಕೆ ತಂದಿನಿತು ಚಿಂತಿಸಿ=ಆಯಾ ಪದಾರ್ಥಗಳು ತದ್ಗತ ತದಭಿಮಾನಿ ದೇವತಗಳ ರೂಪಗಳನ್ನು ಮನಕೆ ತಂದು ಚಿಂತನಮಾಡುತ್ತಾ, ಧ್ಯಾನೋಪಾಸನೆಯನ್ನು ಮಾಡುತ್ತ, ಗೋವಿಂದನರ್ಚಿಸಿ=ಓಂಕಾರಾದಿ ವೇದ ಪ್ರತಿಪಾದ್ಯ, ಮುಕ್ತಿ ಪ್ರದಾತೃವಾದ ಗೋವಿಂದನನ್ನು ಪೂಜಿಸುತ್ತಾ, ಪದಾರ್ಥ ತದಭಿಮಾನಿ ದೇವತೆಗಳು ತದಂತರ್ಗತ ಶ್ರೀಹರಿಯ ರೂಪಗಳನ್ನು ಮನಮುಟ್ಟಿ ಕಣ್ಣಾರೆ ನೋಡು, ನಲಿನಲಿದಾಡು, ಸಂತೋಷದಿಂದ ಕುಣಿ ದಾಡು, ಉಲ್ಲಾಸ ಮನಸ್ಸಿನಿಂದ ಶ್ರೀಹರಿಯ ಧ್ಯಾನಿಸು, ಕೊಂಡಾಡು. ಶ್ರೀಹರಿಯ ಮಹಿಮೆಗಳನ್ನು ಸ್ತೋತ್ರ ಮಾಡು ಎಂದು ಸಾಧನ ಜೀವಿಗಳಿಗೆ

ದಾಸರಾಯರು ಕಟ್ಟಾಜ್ಞೆ ಮಾಡಿರುವರು. "ಆಪ್ತ ಅಖಿಳ ಮುಕ್ತಿ ಯೋಗ್ಯ" ವೆಂಬ ಸುಳಾದಿ "ಪರಮೇಷ್ಠಿ ಪವಮಾನ । ಗರುಡಾಹಿ ಶಿವ ಇಂದ್ರ । ಸ್ಮರ ಪ್ರಾಣ ಅನಿರುದ್ಧ ರವಿಚಂದ್ರ ಮೊದಲಾದ । ಸುರರುತಾತ್ವಿಕರು ಚತುರ ವಿಂಶತಿತತ್ವ । ಧರಿಸಿ ಇದ್ದವರು ಮಿಕ್ಕಾದ ಜೀವರಾಶಿ ಪರಿಯಂತ ನೆನೆದು ಒಂದೊಂದಧಿಷ್ಠಾನದಲ್ಲಿ, ಹರಿಯ ಧ್ಯಾನವಮಾಡು ತತ್ಕಾರ್ಯವ । ಅರುಹಿ ಕೊಡುವನಯ್ಯಾ ಕ್ರಮದಿಂದ ನೇಮಿಸಿ । ಮರ್ಯಾದೆ ತಪ್ಪದು ತಮ್ಮ ಯೋಗ್ಯತದಷ್ಟು । ಕಿರಿಯ ಜನಕೆ ಶಕ್ತಿ ಉತ್ತ । ಮರಿಗೆ ಸರ್ವಸಾಧ್ಯವಾಗಿ ಪ್ಪದು ಕೇಳಿ । ಸರಸಿಜಗರ್ಭಂಗೆ ಇತರ ಸಂಶಯುಸಲ್ಲ । ಹರಿಕರುಣವೊಂದೇ ಪ್ರಧಾನ ಸಾಧನ । ಪರಮ ಪಾವನ ಸಿರಿವಿಜಯವಿಠಲ ತನ್ನ । ಶರಣರಿ ಗೊಂದೊಂದು ಕ್ಲಿಪ್ತಮಾಡಿ ಇಪ್ಪೆ ॥ ೪ ॥ ಉಪಾಸನಾಭಾಗ ಸುಳಾದಿ ೩೬, ಅಟ್ಟತಾಳ ಪುಟ ೧೮೭.

**ದ್ರೌಪದೀಶಪತಿ ವಿಠಲರು:** ಈ ಪದ್ಯ ಆರಂಭಿಸಿ ೩೦ನೇ ಪದ್ಯದ ವರೆಗೆ ವ್ಯಾಖ್ಯಾನ ಬರೆದಿಲ್ಲ. ಈಶ ಪ್ರೇರಣೆಯಂತೊ ॥

**ಗುರು ಶ್ರೀಶವಿಠ್ಠಲರ ಶಿಷ್ಯರು:** ಬಾಂದಳವೆ ಮೊದಲಾದ-ಆಕಾಶವೆ ಮೊದಲಾದ, ಅದರೊಳು ಆಕಾಶಾದಿ ಪಂಚಭೂತ ಪಂಚತನ್ಮಾತ್ರ ಒಂದೊಂ ದರಲಿ, ಪೃಥಿವಿ ಅಪ್ಪು ತೇಜ ವಾಯು ಆಕಾಶ, ಗಂಧ ರಸ ರೂಪ ಸ್ಪರ್ಶ ಶಬ್ದಗಳೊಂದೊಂದರೊಳಗೆ, ಪೂಜಾಸುಸಾಧನ ಶ್ರೀ ರಮಾ ಬ್ರಹ್ಮಾದಿಗಳಿಂದ ಪೂಜ್ಯ ಆದಿನಾರಾಯಣಗೆ, ಪೂಜಾಪ್ರಕ್ರಿಯೆ ಸಮೀಚೀನವೆಂದೆನಿಸುವ ಪದಾರ್ಥಗಳು, ಬಗೆಬಗೆಯ ನೂತನದಿ, ಬಾಂದಳವೆ ಮೊದಲಾದ ಪಂಚ ಭೂತ, ಪಂಚ ತನ್ಮಾತ್ರಗಳು ಶ್ರೀ ನಾರಾಯಣನ ಪೂಜಾ ಮಾಡೋ ವಿಷಯವಾಗಿ, ಪ್ರತ್ಯ್ರತ್ಯೇಕ ವಿಚಿತ್ರ ಚಿತ್ರೋಪಚಿತ್ರವಾಗಿ, ಪದಾರ್ಥಗಳು ಪರಿಪರಿನೂತನವಾಗಿ, ಸಂದಣಿಸಿಕೊಂಡಿಹವು. ನಿಬಿಡೀಕೃತವಾಗಿ ಬ್ರಹ್ಮಾಂಡ ಪಿಂಡಾಂಡದಲ್ಲಿ ಪೂರ್ಣವಾಗಿಹವು. ಧ್ಯಾನಕೆ ತಂದು, ಶ್ರೀ ಆದಿನಾರಾಯಣನ ಧ್ಯಾನ ಪುರಸ್ಕರ (ಸ್ಸರ) ಇನಿತು ಚಿಂತಿಸಿ, ಈ ಪ್ರಕಾರ ಗಗನ ಮೊದಲಾದ ಪದಾರ್ಥ ಶ್ರೀ ರಮಾಕಾಂತ ನಾರಾಯಣನ ಪೂಜಾ ಕಲ್ಪಿಸಿ, ಸದಾ ಗೋವಿಂದನ, ಸರ್ವದಾ, ಗೋ-ವೇದ, ವಿಂದ-ವಿನುತ, ಗೋವಿಂದ-ವೇದ ಗಳಿಂದ ಸ್ತೋತ್ರಮಾಡಿಸಿಕೊಂಬುವಂಥ ಶ್ರೀ ರುಗ್ಮಿಣಿನಾಥ ಅಗಣಿತ

ಗುಣಧಾಮ, ನಿಶ್ಚಲ ಸ್ವಗತಭೇದ ವಿಶೂನ್ಯ, ಶಾಶ್ವತ ಜಗದ ಜೀವಾತ್ಮಂತ ಭಿನ್ನ, ಪ್ರಪನ್ನರ ಪರಿಪಾಲನ ಮಾಡುವಂಥಾ ಸ್ವಾಮಿ, ತ್ರಿಗುಣವರ್ಜಿತ ತ್ರಿಭುವನೇಶ್ವರ, ಹಗಲಿರಳು ಸ್ಮರಿಸುತಲಿಹರ ಬಿಟ್ಟಗಲ ಕರುಣಾಸಾಗರ, ಶ್ರೀ ಗೋಪಾಲಕೃಷ್ಣನ ಅರ್ಚಿಸಿ ನೋಡು.* ಸ್ವಾಮಿಯ ಪೂಜಿಸಿ, ಜ್ಞಾನದಿಂದ ಶ್ರೀಹರಿಯ ರೂಪಗಳ, ಸದಾ ಸರ್ವತ್ರ, ಅಲವ ವ್ಯಾಪ್ತನ ನೋಡು, ನಲಿನಲಿದಾಡು, ಆನಂದ ಉನ್ಮಾಹದಿಂದ ನರ್ತನಮಾಡು. ಕೊಂಡಾಡು. ಶ್ರೀ ನಾರಾಯಣ ಸ್ಮರಣೆಯಿಂದ ಮಾತುಗಳಾಡು, ಭಗವದ್ಭಕ್ತರ ಒಡನಾಡು ॥ ೧೨ ॥

**ಭಾವಸೂಚನ :** ಬಾಂದಳೇತಿ ॥ ಆಕಾಶ, ಸಂದಣಿಸಿ=ಸಮ್ಮರ್ದಿಸಿ, ಅನಿತು=ಅಷ್ಟು, ನಲಿನಲಿದಾಡು-ಕುಣಿಕುಣಿದಾಡು ॥ ೧೨ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಬಾಂದಳ=ಆಕಾಶ, ಸಂದಣಿಸಿ=ಸಮ್ಮರ್ದಿಸಿ, ಅನಿತು=ಅಷ್ಟು, ನಲಿನಲಿದಾಡು=ಕುಣಿಕುಣಿದಾಡು ॥ ೧೨ ॥

**ಅವತರಣಿಕಾ :** ಪಂಚಭೂತಾದಿಗಳಲ್ಲಿಪ್ಪ ಗುಣಗಳನ್ನು ಶ್ರೀಹರಿಗೆ ಪೂಜಾ ಸಾಧನ ದ್ರವ್ಯಗಳೆಂದು ಶ್ರೀಹರಿಯ ಅರ್ಚಾ ಕ್ರಮವನ್ನು ದಾಸಾರ್ಯರು ಈ ಪದ್ಯದಲ್ಲಿ ಹೇಳುತ್ತಾರೆ. ಇದು ವ್ಯಾಪ್ತ್ಯೋಪಾಸಕರ ಅಧಿಕಾರ.

**ಮೂಲ :**

ಜಲಜನಾಭನ ಮೂರ್ತಿ ಮನದಲಿ ।
ನೆಲೆಗೊಳಿಸಿ ನಿಶ್ಚಲ ಭಕುತಿಯಲಿ ।
ಚಳಿ ಬಿಸಿಲು ಮಳೆ ಗಾಳಿಗಳ ನಿಂದಿಸದೆ ನಿತ್ಯದಲಿ ॥
ನೆಲದೊಳಿಹ ಗಂಧವೆ ಸುಗಂಧವು ।
ಜಲ (ಫಲ) ವೆ ರಸ ರೂಪವೆ ಸುದೀಪವು ।
ಎಲರು ಚಾಮರ ಶಬ್ದ ವಾದ್ಯಗಳರ್ಪಿಸಲು ಪೊಲಿವ ॥ ೧೩ ॥

* ಇಂತಹ ಸುಜ್ಞಾನಿಗಳ ಜ್ಞಾನ ಭಗವದ್ಗುಣೋತ್ಕರ್ಷವೇ ತಾರಕ. ಬಹು ಸೂಕ್ಷ್ಮತರ ವಿಚಾರಗಳನ್ನು ಲೇಖಿಸಿರುವರು. ಈ ೫ನೇ ಸಂಧಿ ೧೪ ಪದ್ಯದವರೆಗೆ ವ್ಯಾಖ್ಯಾನ ಬರೆದ ಪುಸ್ತಕ. ಬಹು ಶ್ರಮದಿಂದ ದೊರಕಿದ್ದು ಪುಣ್ಯ.

**ಪದ್ಯಾರ್ಥ :** ಜಲಜನಾಭನ=ಕಮಲವೇ ಹೊಕ್ಕಳಾಗಿರುವ ಕಮಲ ನಾಭನನ್ನು, ಮನದಲಿ ನೆಲೆಗೊಳಿಸಿ=ಕ್ರಮೇಣ ಗುರುಗಳ ಅನುಗ್ರಹದಿಂದ ಧ್ಯಾನೋಪಾಸನೆಯಿಂದ ಪದ್ಮನಾಭನನ್ನು ತನ್ನ ಹೃತ್ಪದ್ಮದಲ್ಲಿ ನೆಲೆಗೊಳಿಸಿ, ನಿಶ್ಚಲ ಭಕುತಿಯಲಿ=ಚಲನೆ ಇಲ್ಲದ ದೃಢ ಭಕುತಿಯಿಂದ ಚಳಿ ಬಿಸಿಲು, ಮಳೆಗಾಳಿಗಳ ನಿಂದಿಸದೆ=ಚಳಿ-ಶೀತ, ಬಿಸಿಲು-ಉಷ್ಣ, ಮಳೆಗಾಳಿಗಳನ್ನು ನಿಂದ್ಯಮಾಡದೇ, ಋತುಕಾಲ ನಿಯಾಮಕನಾದ ಶ್ರೀಹರಿಯ ಆಜ್ಞೆಯಿ ವೆಂದು ತಿಳಿದು ಶೀತೋಷ್ಣಗಳನ್ನು ಸಹಿಸಬೇಕು. (ಅಂದರೆ ಇಂಥ ಧ್ಯಾನೋಪಾಸನಕ್ಕೆ ಯೋಗ್ಯನಾಗುವನು). ನೆಲ=ಪೃಥ್ವಿ ಭೂಮಿಯಲ್ಲಿ ರುವ ಗಂಧವು, ಗಂಧವತೀ ಪೃಥಿವಿ ಎಂಬಂತೆ ಭೂಮಿಯಲ್ಲಿಪ್ಪ ಗಂಧವೇ ಶ್ರೀಹರಿಗೆ ಸುಗಂಧವು=ಸುವಾಸನೆಯುಳ್ಳ ಚಂದನಾದಿ ಶ್ರೀಗಂಧವೆನಿಪ ಪೂಜಾ ದ್ರವ್ಯವು. ಜಲವೆ=ಪಂಚಭೂತವಾದ ಅಪ್ಪಿನ ಗುಣ ರಸ ದ್ರವ ರೂಪು, ಶ್ರೀಹರಿಗೆ ಅಭಿಷೇಕಾರ್ಥ ಉದಕ, ಪಾನೀಯಾರ್ಥ ಜಲರಸ, ಅಗ್ನಿ ಗುಣವಾದ ತೇಜಸ್ಸು; ರೂಪವೆ=ಶ್ರೀಹರಿಗೆ ದೀಪ, ಪ್ರಕಾಶ, ಎಲರು= ವಾಯುವಿನ ಗುಣ, ಗಾಳಿ ಬೀಸುವದು ಇದೇ ಶ್ರೀಹರಿಗೆ ಚಾಮರ, ಆಕಾಶ ಗುಣ=ಶಬ್ದ, ಈ ಶಬ್ದಗಳೇ ಶ್ರೀಹರಿಗೆ ಗಂಟಾಜಾಗಟೆ, ಶಂಖ, ತುತೂರಿ, ಕಹಳೆ ಮುಂತಾದ ವಾದ್ಯಗಳೆಂದು ಅರ್ಪಿಸಿದರೆ, ಶ್ರೀ ಭಗವಂತ ಪ್ರೀತ ನಾಗುವ, ಒಲಿವ=ಪ್ರಸನ್ನನಾಗುವ. ಶ್ರೀಮದ್ಭಾಗವತ ದ್ವಿತೀಯದಲ್ಲಿ ಹೇಳಿದ ಅಧಿಕಾರಿಗಳ ಸಾಧನವಿದು. ಮನುಜರಿಗೆ ಜ್ಞಾನ ಮಾತ್ರವಾದರೂ ದಾರ್ಢ್ಯವಾಗಿರಬೇಕು.

**ಶ್ರೀ ಗುರು ಶ್ರೀಶವಿಠಲರ ಶಿಷ್ಯರು :** ಜಲಜನಾಭನ ಮೂರ್ತಿ ಜಲ-ಉದಕ, ಜ-ಉತ್ಪನ್ನ ಕಮಲ, ಜಲಜನಾಭ=ಜಲದಲ್ಲಿ ಉತ್ಪನ್ನವಾದ ಕಮಲ ದೋಪಾದಿ ನಾಭಿಯುಳ್ಳ, ಶ್ರೀ ಆದಿನಾರಾಯಣನ ಬಿಂಬಮೂರ್ತಿಯ, ಮನದೊಳಗೆ ನೆಲೆಗೊಳಿಸಿ=ಮನಸ್ಸೇಂದ್ರಿಯ ಅಂತರಂಗದಲ್ಲಿ ಆವಾಹನ ಮಾಡಿ, ನಿಶ್ಚಲ ಭಕುತಿಯಲಿ=ಚಂಚಲ ರಹಿತನಾಗಿ ಕೇವಲ ಭಕ್ತಿಪುರಸ್ಸರ, ಛಳಿ (ಚಳಿ) ಬಿಸಿಲು ಮಳೆ ಗಾಳಿಗಳ=ಛಳಿ, ಹಿಮಗಾಲದಲ್ಲಿ ಸ್ವಾಮಿಯ ಆಜ್ಞೆಯಿಂದ (ಹಿಮ) ಛಳಿ ಪ್ರವರ್ತಿಸುತ್ತದೆ. ಬಿಸಿಲು=ವಸಂತ ಕಾಲದಲ್ಲಿ ಸೂರ್ಯನ ಕಾಂತಿಯಿಂದ ಬಿಸಿಲು ಪ್ರಜ್ವಲಿಸುತ್ತದೆ. ಮಳೆ=ವರ್ಷಾ

ಕಾಲದಲ್ಲಿ ಶ್ರೀ ನಾರಾಯಣನ ಆಜ್ಞೆಯಿಂದ ವೃಷ್ಟಿಗರೆವುತ್ತಿದೆ. ಘಾಳಿ (ಗಾಳಿ) ಗ್ರೀಷ್ಮ ಕಾಲದಲ್ಲಿ ಪ್ರಚಂಡ ವಾಯು ಬೀಸುತ್ತದೆ. ಛಳಿ ಬಿಸಿಲು ಮಳೆ ಘಾಳಿಗಳ ನಿಂದಿಸದಲೇ ಶ್ರೀ ಆದಿನಾರಾಯಣನ ಆಜ್ಞಾ ಧಾರಕರಾಗಿ, ವಾಯು ಚಂದ್ರ ಸೂರ್ಯರು ವರುಣಾದಿಗಳು ತಮ್ಮ ತಮ್ಮ ವ್ಯಾಪಾರ ಮಾಡುತ್ತಾರೆಂದು, ಮಳೆ ಘಾಳಿ, ಛಳಿ ಬಿಸಿಲುಗಳ ನಿಂದಾ ಮಾಡದೇ, ಸರ್ವಾಂತರ್ಯಾಮಿ ಶ್ರೀ ಲಕ್ಷ್ಮೀಕಾಂತ ಶ್ರೀ ನಾರಾಯಣನ ಸ್ಮರಣೆ ಪೂರ್ವಕ, ನಿತ್ಯದಲ್ಲಿ=ಪ್ರತಿದಿವಸ ಬಿಂಬಮೂರ್ತಿ ಶ್ರೀ ನಾರಾಯಣನೇ ವ್ಯಾಪ್ತನೆಂದು ಪೂಜಾಮಾಡು.

ನೆಲದಲಿಹ ಗಂಧವೆ ಸುಗಂಧವು=ಶ್ರೀ ರಮಾಪತಿ ಶ್ರೀನಿವಾಸಗೆ, ಪೃಥುವ್ಯಾದಿ ಪಂಚಭೂತಗಳಿಂದುತ್ಪತ್ತಿ, ಪಂಚತನ್ಮಾತ್ರಾಗಳ ಪೂಜಾ ಪ್ರಕ್ರಿಯ ಪದಾರ್ಥಗಳ ಸಮರ್ಪಣ ಜ್ಞಾನಿಗಳು ಮಾಡುವ ಸಂಪ್ರದಾಯ. ಶ್ರೀಮನ್ ಮಹಾ ಗುರು ಜಗನ್ನಾಥರಾಯ ಸ್ವಾಮಿಗಳವರು ಅಧಿಕಾರಿಗಳಾದ ಸಜ್ಜನರಿಗೆ ಉಪದೇಶ ಮಾಡುತ್ತಾರೆ. ನೆಲದಲಿಹ ಗಂಧವೆ=ಪೃಥಿವಿಯಿಂದ ಉತ್ಪತ್ತಿ ಗಂಧ, ಭೂಮಿಯಲ್ಲಿದ್ದ ಗಂಧವೇ ಸುಗಂಧ, ಸಮೀಚೀನವಾದ ಶ್ರೀಗಂಧ ಮೊದಲಾದ ಅಷ್ಟಗಂಧ ಶ್ರೀ ಆದಿನಾರಾಯಣಗೆ ಅರ್ಪಣ. (ಜ) ಫಲವೆರಸ=ಅಪ್ಪು ತತ್ವದಿಂದ ರಸೋತ್ಪತ್ತಿ, ಫಲವೇ-ನಾರೀಕೇಳ ಚೂತಫಲ ಕದಳಿ ಏನಮಾದಿ ಫಲಗಳು ಶ್ರೀ ಲಕ್ಷ್ಮೀಪತಿ ಸ್ವೀಕಾರ ಮಾಡೋದಕ್ಕೆ ರಸವೇ ಫಲಗಳು. ರೂಪವೇ ಸುದೀಪ=ತೇಜದಿಂದ ರೂಪ ಉತ್ಪತ್ತಿ, ಸ್ವಾಮಿಚರಣ ಸನ್ನಿಧಾನದಲ್ಲಿ ರೂಪವೇ ಗೋಘೃತ ನಂದಾದೀಪ, ಯಲರು ಚ್ಯಾಮರ-ಯಲರು ಅಂದರೆ ಘಾಳಿ, ವಾಯುವಿನಿಂದ ಸ್ಪರುಶ ಉತ್ಪತ್ತಿ, ಯಲರು ಚಾಮರ, ಬೀಸುವ ಘಾಳಿಗಳೇ ಶ್ವಾಸೋಚ್ಛ್ವಾಸಗಳೇ ಶ್ರೀಹರಿಯ ಸೇವಾಕ್ಕೆ ಚಾಮರಗಳು. ಶಬ್ದ ವಾದ್ಯಗಳು=ಆಕಾಶದಿಂದ ಶಬ್ದ ಉತ್ಪತ್ತಿ, ಶ್ರೀ ಆದಿನಾರಾಯಣನ ಪೂಜಾಕ್ಕೆ ಶಬ್ದವೇ ಭೇರಿ, ಮೃದಂಗ ತಾಳ ಝಾಗಟಿ, ಏನಮಾದಿ ಶಬ್ದಗಳು, ಪಂಚ ಭೂತಗಳಿಂದ ಪಂಚತನ್ಮಾತ್ರ ಉತ್ಪತ್ತಿ, ಪಂಚತನ್ಮಾತ್ರಗಳು ಪಂಚ ಜ್ಞಾನೇಂದ್ರಿಯಾರ್ಥ, ಈ ವಿಧಾನ ಶ್ರೀ ಗುರುಗಳ ದ್ವಾರಾ ಶ್ರವಣಮಾಡಿ, ಯೋಗ್ಯತಾನುಸಾರ ತಿಳಿದು, ಶ್ರೀ ಆದಿನಾರಾಯಣನ ಪೂಜಾ ಮಾಡುವದು.

**ಜ್ಞಾನಿಗಳು ಇನ್ನೊಂದು ಪ್ರಕಾರ ಹೇಳುತ್ತಾರೆ. ಪೃಥುವಿಯಿಂದ ಗಂಧೋತ್ಪತ್ತಿ,** ಗಂಧ ಬಂದು ಘ್ರಾಣೇಂದ್ರಿಯಾರ್ಥ, ನೆಲದಲಿಹ ಗಂಧವೆ ಸುಗಂಧವು–ಸುಸಮೀಚೀನವಾದ ಶ್ರೀಗಂಧ ಸುವಾಸನ, ಘ್ರಾಣೇಂದ್ರಿಯಕ್ಕೆ ಅಧಿಪತಿ, ಅಶ್ವಿನಿ ದೇವತೆಗಳಂತರ್ಗತ, ಶ್ರೀ ಮಧ್ವಾಂತರ್ಯಾಮಿ, ರಮಾಲಾಲಿತ ಪಾದಪಲ್ಲವ, ಶ್ರೀಧರಮೂರ್ತಿ ಸ್ಮರಣೆಪೂರ್ವಕ ಶ್ರೀ ರಮಾಕಾಂತ ಆದಿನಾರಾಯಣ ಬಿಂಬಮೂರ್ತಿಗೆ ಆಘ್ರಾಣಿಸಿ ಉದ್ಧಾರಮಾಡೆಂದು, ವಿಜ್ಞಾಪನ ಮಾಡಿ ಅರ್ಪಿಸು. **ಅಪ್ಪು ತತ್ವದಿಂದ ರಸೋತ್ಪತ್ತಿ,** ರಸ ಬಂದು ಜಿಹ್ವೇಂದ್ರಿಯಾರ್ಥ, ಫಲವೆ ರಸ=ಚೂತಫಲ, ನಾರಿಕೇಳ, ಖರ್ಜೂರ, ಕದಳೀಫಲ ಏವಮಾದಿ ಫಲಗಳ, ಜಿಹ್ವೇಂದ್ರಿಯ ಪತಿ-ವರುಣಾಂತರ್ಯಾಮಿ, ಶ್ರೀ ಶ್ವಸನಾಂತರ್ಗತ, ಶ್ರೀ ವಾಮನ ಮೂರ್ತಿಯ ಧ್ಯಾನ ಪುರಸ್ಸರ ಶ್ರೀ ರಮೇಶ ಶ್ರೀ ನಾರಾಯಣಗೆ, ಸರ್ವ ಫಲಗಳ ಸ್ವೀಕಾರ ಮಾಡೆಂದು ಅರ್ಪಿಸಿ, ಸರ್ವಸಾರ ಭೋಕ್ತೃ ಶ್ರೀಪತೇ ಪ್ರೀತನಾಗೆಂದು ಸಮರ್ಪಣ ಮಾಡು. **ರೂಪವೆ ಸುದೀಪವು**=ರೂಪ ನಯನೇಂದ್ರಿಯಾರ್ಥ ನೇತ್ರಾಭಿಮಾನಿ ಸೂರ್ಯಾಂತರ್ಗತ, ಶ್ರೀಮದ್ಗುರುವರ ದಶಪ್ರಮತಿ ಮುನಿಗಳಂತರ್ಯಾಮಿ ಶ್ರೀ ತ್ರಿವಿಕ್ರಮಮೂರ್ತಿ ಶ್ರೀ ರಮಾರಮಣ ಶ್ರೀ ನಾರಾಯಣಗೆ ರೂಪವೆಂಬೋ ನಂದಾದೀಪ ಸಮರ್ಪಿಸಿ, ಪರಮಾನುಗ್ರಹ ದೃಷ್ಟಿಯಿಂದ ನೋಡಿ ಪ್ರೀತನಾಗೆಂದು ಶ್ರೀಹರಿಗೆ ವಂದನ ಮಾಡು. **ಯಲರು ಚಾಮರ,** ವಾಯುವಿನಿಂದ ಸ್ಪರ್ಶ ಉತ್ಪತ್ತಿ, ಸ್ಪರ್ಶಬಂದು, ತ್ವಗೇಂದ್ರಿಯಾರ್ಥ-ತ್ವಗೇಂದ್ರಿಯಾಭಿಮಾನಿ ಅಹಂಕಾರಿಕ ಪ್ರಾಣಾಂತರ್ಗತ, ಶ್ರೀ ಮಧುಸೂದನ ರೂಪಾತ್ಮಕ–ಶ್ರೀ ಆದಿನಾರಾಯಣಗೆ ಶ್ವಾಸೋಚ್ಛ್ವಾಸಗಳ ಉಭಯ ಚಾಮರ ಸರ್ವರ ಹೃದಯಾಂತರ್ಗತ ಶ್ರೀ ಮುಖ್ಯ ಪ್ರಾಣಾಂತರ್ಯಾಮಿ ಶ್ರೀ ಲಕ್ಷ್ಮೀಪತಿಗೆ ಅರ್ಪಿಸು.

**ಶಬ್ದ ವಾದ್ಯಗಳು** ಆಕಾಶದಿಂದ ಶಬ್ದ ಉತ್ಪತ್ತಿ, ಶಬ್ದ ಶ್ರವಣೇಂದ್ರಿಯಾರ್ಥ, ಕರ್ಣಾಭಿಮಾನಿ ದಿಗ್ದೇವತೆಗಳಂತರ್ಗತ ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ, ಶ್ರೀ ವಿಷ್ಣು ಮೂರ್ತ್ಯಾತ್ಮಕ ರಮಾಕಾಂತ ಶ್ರೀ ನಾರಾಯಣಗೆ ಭೇರಿ ದುಂದುಭಿ ಘಂಟಾ ಏವಮಾದಿ ನಾನಾ ವಾದ್ಯಗಳ ಅರ್ಪಣ ಮಾಡು. ಈ ಪ್ರಕಾರ ಪಂಚಭೂತಾತ್ಮಕ ಶರೀರ ಪಿಂಡಾಂಡದಲ್ಲಿ

ಪ್ರಾಣಾಂತರ್ಗತ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ನಾರಾಯಣ, ಪಂಚ ಭಗವದ್ರೂಪಗಳ ಚಿಂತನ ಪುರಸ್ಸರ, ಪೂರ್ವೋಕ್ತ ಪ್ರಕಾರ ಚತುರ್ದಶ ಲೋಕಗಳುಳ್ಳ ಬ್ರಹ್ಮಾಂಡದಲ್ಲಿ ಉತ್ಪನ್ನವಾದ ಸುಗಂಧ ಫಲಾದಿಗಳನ್ನು ಸಮರ್ಪಣ ಮಾಡಿ, ಸ್ವಾಮಿಗೆ ವೃಷ್ಟಿಯೇ ಮಜ್ಜನ, ದಿಗ್ವಲಯಗಳೇ ವಸನ, ಭೂರುಹಜ ಬೆಳಸುಗಳು ನೈವೇದ್ಯ, ನಕ್ಷತ್ರ ಸ್ತೋಮ ಲಕ್ಷ ದೀಪಾರಾಧನೆ, ಸೋಮಸೂರ್ಯರೇ ಸುನಂದಾದೀವಿಗೆ, ಮೇಘಗರ್ಜನವೇ ದುಂದುಭಿ ವಾದ್ಯಗಳು, ಭೂಮಂಡಲವೇ ಪೀಠ, ವ್ಯೋಮಮಂಡಲ ಛತ್ರ. ಈ ಪ್ರಕಾರ ಬ್ರಹ್ಮಾಂಡ ಪಿಂಡಾಂಡದಲ್ಲಿ ವ್ಯಾಪ್ತನಾದ, ವಿರಾಡ್ರೂಪಿ ಶ್ರೀ ರಮಾಪತಿ ನಾರಾಯಣಗೆ ಅರ್ಪಿಸಲು ಒಲಿವಾ.

ದೇಹಾಭಿಮಾನ ತ್ಯಾಗಮಾಡಿ, ಚತುರ್ವಿಂಶತಿ ತತ್ವಾಭಿಮಾನಿಗಳಂತರ್ಗತ ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಯಾಮಿ ಶ್ರೀ ಲಕ್ಷ್ಮೀಕಾಂತ ನಾರಾಯಣನ ಸರ್ವರೂಪಾತ್ಮಕ, ಸರ್ವಾಂತರ್ಯಾಮಿ, ಶ್ರೀ ರಮಾಧವನೆಂದು ಜ್ಞಾನಭಕ್ತಿ ಪುರಸ್ಸರ ಸರ್ವಸ್ವ ಸಮರ್ಪಣೆ ಮಾಡಿದರೆ ಶ್ರೀಹರಿ ಒಲಿವ. ತನ್ನನ್ನೇ ಈವ, ಶ್ರೀ ಆದಿನಾರಾಯಣ ಸಚ್ಚಿದಾನಂದಾತ್ಮಕ ಸ್ವಾಮಿ ತನ್ನ ನಂಬಿದಂಥ ಭಕ್ತರ ಅಜ್ಞಾನಾದಿ ದೋಷಗಳ ಪರಿಹಾರ ಮಾಡಿ, ಚಿದಾನಂದ ಸ್ವರೂಪ ಅಭಿವ್ಯಕ್ತಮಾಡಿ ಮುಕ್ತಿಪ್ರದನಾಗುವ ||೧೩||

**ಭಾವಸೂಚನ :** ಪ್ರಕಾರಾಂತರೇಣ ಪೂಜಾಕರಣ ಕ್ರಮಮಾಹ । ಜಲಜೇತಿ । ನೆಲೆಗೊಳಿಸಿ ನಿಂದರಿಸಿ, ಇಂದಿರಾರಾಧ್ಯನಾದರೂ, ಹರಿ ಈ ವಿಧ ನಿರ್ಧನ ಪೂಜಾ ಸ್ವೀಕರಿಸುತ್ತಾನೆಂತ ಹೇಳುತ್ತಾರೆ || ಜಲಜೇತಿ || ೧೩ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಜಲಜೇತಿ || ನೆಲೆಗೊಳಿಸಿ=ನಿಲಿಸಿ, ಚಳಿ=ಛಾಂದೋಗ್ಯ ದ್ವಿತೀಯ ಖಂಡೇ-ಉದ್ಯಹ್ನಿಂಕಾರ ಇತ್ಯುಕ್ತ್ವಾ ತಪಂತಂ ನ ನಿಂದೇತ್ ತದ್ವ್ರತಮ್ || ಅಭ್ರಾಣಿ" ಇತ್ಯತ್ರ ವರ್ಷಂತಂ ನ ನಿಂದೇತ್ ತದ್ವ್ರತಮ್ || ವಸಂತ ಇತ್ಯತ್ರ ಕೀರ್ತ್ಯತೂನ್ ನ ನಿಂದೇತ್ ತದ್ವ್ರತಮ್ || ರೂಪಮೇವ ದೀಪಃ । ಎಲರು=ಘಾಳಿ । ಶಬ್ದಾಃ ವಾದ್ಯಾನಿ । ಅಕ್ಷಿ ವಿದ್ಯಯಾಯುತ್ ಸ್ಥಾನತ್ವಾದಿ ವಾಚಾ || ೧೩ ||

## ಕನ್ನಡಾರ್ಥ

ನೆಲೆಗೊಳಿಸಿ=ನಿಲ್ಲಿಸಿ. ಚಳಿ ಬಿಸಿಲು ಮಳೆಗಾಳಿಗಳನ್ನು ನಿಂದಿಸದೆ ನಿತ್ಯದಲ್ಲಿ ಸರ್ವಸಮರ್ಪಣದಿಂದ ಭಗವಂತನನ್ನು ಉಪಾಸಿಸಬೇಕು. ಛಾಂದೋಗ್ಯ ಉಪನಿಷತ್ತಿನಲ್ಲಿ ಬೃಹತ್ಸಾಮವೇದ್ಯ ಭಗವದುಪಾಸನಾ ಪ್ರಕರಣದಲ್ಲಿ "ಉದಯಿಸುತ್ತಿರುವ ಆದಿತ್ಯದಲ್ಲಿ ಹಿಂಕಾರನೆಂಬ ಪ್ರದ್ಯುಮ್ನನು, ಉದಿತರವಿಯಲ್ಲಿ ಪ್ರಸ್ತಾವ ನಾಮಕ ವಾಸುದೇವ, ಮಧ್ಯಾಹ್ನಗತ ಆದಿತ್ಯನಲ್ಲಿ ಉದ್ಗೀಥ ನಾಮಕ ನಾರಾಯಣ, ಅಪರಾಹ್ಣಗತ ಆದಿತ್ಯನಲ್ಲಿ ಪ್ರತಿಹಾರ ನಾಮಕ ಅನಿರುದ್ಧ, ಅಸ್ತಂಗತನಾಗುವ ಆದಿತ್ಯನಲ್ಲಿ ನಿಧನನಾಮಕ ಸಂಕರ್ಷಣ" ಹೀಗೆ ಪಂಚವಿಧ ಸಾಮೋಪಾಸನೆಯನ್ನು ಪಂಚರೂಪಗಳಲ್ಲಿ ಮಾಡಬೇಕು ಎಂದು ಹೇಳಲಾಗಿರುತ್ತದೆ. ಮತ್ತೂ ಮುಂದುವರೆಯುತ್ತ ಅದೇ ಉಪನಿಷತ್ತು "ಬೃಹತ್ಸಾಮವನ್ನು ಆದಿತ್ಯನಲ್ಲಿ ಐದು ತರಹಗಳಿಂದ ಉಪಾಸಿಸುವದು ವ್ರತವೆನಿಸುವದು. ಅವನು ತಪಿಸುವ (ಉರಿಯುವ) ಸೂರ್ಯನನ್ನು ನಿಂದಿಸಕೂಡದು. ಇದು ಉಪಾಸಕನಿಗೆ ಇರಬೇಕಾದ ವ್ರತ" ಎಂದು ಹೇಳಿರುತ್ತದೆ. ಇದರಂತೆಯೇ ವೈರೂಪವೆಂಬ ಸಾಮದಿಂದ ತಿಳಿಯಲ್ಪಡುವ ಶ್ರೀಹರಿಯ ಉಪಾಸನೆಯನ್ನು ಹೇಳುತ್ತ "ಅಭ್ರಾಣಿ ಸಂಪ್ಲವತೇ ಸ ಹಿಂಕಾರಃ" ಎಂದು ಛಾಂದೋಗ್ಯ ಉಪನಿಷತ್ತೇ ಹೇಳುತ್ತದೆ. ಈ ಉಪಾಸನೆಯನ್ನು ಹೇಳುತ್ತ "ಈ ವೈರೂಪ ಸಾಮೋಪಾಸಕನು, ವೃಷ್ಟಿಯನ್ನು ಸುರಿಸುವಾಗ ಮೇಘವನ್ನು ನಿಂದಿಸಕೂಡದು; ಇದು ಅವನ ವ್ರತ" ಎಂದು ಹೇಳಲಾಗಿರುತ್ತದೆ. ವೈರಾಜ ಸಾಮೋಪಾಸನೆಯನ್ನು ನಿರೂಪಿಸುತ್ತ "ಋತುಗಳನ್ನು ನಿಂದಿಸದಿರುವದು ಅವನ ವ್ರತ"ವೆಂದು ಹೇಳಲಾಗಿರುತ್ತದೆ. ಆದುದರಿಂದ ಮಳೆ ಬಿಸಿಲು ಗಾಳಿ ಚಳಿಗಳನ್ನು ನಿಂದಿಸ ಕೂಡದೆಂದು ಹೇಳಿದ ಮೂಲಕಾರರ ವಚನವು ಉಪನಿಷತ್ಸಾರಾನುವಾದಕವೆಂದು ತಿಳಿಯಬೇಕು. ಭೂಮಿಯಲ್ಲಿಯ ಗಂಧವು ದೇವರಿಗೆ ಸುಗಂಧವು. ಜಲದಲ್ಲಿರುವ ರಸಭಾಗವೇ ಶ್ರೀಹರಿಗೆ ರಸ. ರೂಪವೇ ಶ್ರೀಹರಿಗೆ ರೂಪವು. ವಾಯುಗುಣ ಸ್ಪರ್ಶವು ಚಾಮರ. ಆಕಾಶ ಗುಣವಾದ ಶಬ್ದವು ಶ್ರೀಹರಿಗೆ ವಾದ್ಯವೆಂದು ತಿಳಿದು ಭಗವಂತನನ್ನು ಹಿಂದೆ ಹೇಳಿದ ವ್ರತಗಳಿಂದ ಬದ್ಧನಾಗಿ ಉಪಾಸಿಸಬೇಕು.

**ಅವತರಣಿಕಾ :** ಗೋಳಕಗಳು ರಮಾರಮಣನ ಈ ೧೪ನೇ ಪದ್ಯವಾರಂಭಿಸಿ ೧೫, ೧೬, ೧೭ ಈ ನಾಲ್ಕು ಪದ್ಯಗಳಿಂದ—ಶ್ರೀಹರಿಗೆ ಶರೀರವೇ ನಿಕೇತನ, ಶರೀರ ದಿಂದಾಗುವ ಎಲ್ಲ ವ್ಯಾಪಾರಗಳು ಶ್ರೀಹರಿಗೆ ಪೂಜಾತ್ವೇನ ಸಮರ್ಪಿಸುವ ನಿಧಿ. ಧ್ಯಾನೋಪಾಸನೆ ವಿಧಿಯನ್ನು ದಾಸಾರ್ಯರು ಹೇಳುತ್ತಾರೆ. ಇದಾದರೂ ಸುಜ್ಞಾನಿ ಗಳ ಅಧಿಕಾರ ವಿವಿಕ್ಷಾ.

**ಮೂಲ :**

**ಗೋಳಕಗಳು ರಮಾರಮಣನ ನಿ ।**
**ಜಾಲಯುಗಳನುದಿನದಿ ಸಂಪ್ರ ।**
**ಕ್ಷಾಲನೆಯೆ ಸಮ್ಮಾರ್ಜನವು ಕರಣಗಳೆ ದೀಪಗಳು ॥**
**ಸಾಲುತತ್ತದ್ವಿಷಯುಗಳ ಸ ।**
**ಮ್ಮೇಳನವೆ ಪರಿಯಂಕ ತತ್ಸುಖ ।**
**ದೇಳಿಗೆಯೆ ಸುಪ್ಪತ್ತಿಗಾತ್ಮ ನಿವೇದನವೆ ವಸನ ॥ ೧೪ ॥**

**ಪದ್ಯಾರ್ಥ :** ಗೋಳಕಗಳು=ಗುಡ್ಯತೇ ಇತಿ ಗೋಲಕಃ, ರಕ್ಷಣ ಮಾಡುವದು ಯಾವದೋ ಅದು. ಮನೆಯು ನಮ್ಮ ಶರೀರವನ್ನು ಮಳೆ ಗಾಳಿ ಬಿಸಿಲುಗಳಿಂದ ರಕ್ಷಿಸುತ್ತದೆ. ಇದರಂತೆ ನಮ್ಮ ಶರೀರದಲ್ಲಿ ತೇಜೋ ಮಯವಾದ ಇಂದ್ರಿಯುಗಳುಂಟು. ಈ ಇಂದ್ರಿಯುಗಳಿಗೆ ಇರಲು ಸ್ಥಾನಾ ಪನ್ನವಾದ ಕಣ್ಣು, ಕಿವಿ, ಮೂಗು, ತ್ವಕ್, ರಸನ-ನಾಲಿಗೆ, ಬಾಯಿಯಲ್ಲಿಯ ಕಿರಿನಾಲಿಗೆ, ವಾಕ್, ಕೈಕಾಲು, ಗುದ ಉಪಸ್ಥಗಳು ಇವೆಲ್ಲ ಇಂದ್ರಿಯುಗಳು ಗೋಳಕಗಳೆಂದು ಕರೆಸುತ್ತವೆ. ಈ ಎಲ್ಲ ಗೋಳಕಗಳು, ರಮಾರಮಣ, ಶ್ರೀ ರಮಾ–ಲಕ್ಷ್ಮೀಪತಿಯಾದ ಶ್ರೀ ನಾರಾಯಣಗೆ ನಿಜಾಲಯುಗಳು, ಆವಾಸಕ್ಕೆ ಯೋಗ್ಯವಾದ (ನಿಜ=ಸತ್ಯ ಖರೆ) ಆಯಾ ಗೋಳಕದಲ್ಲಿಯೇ ಶ್ರೀಹರಿ ನಿಂತು, ಆಯಾ ಇಂದ್ರಿಯುಗಳ ಕಾರ್ಯ ಸತ್ಯವಾಗಿ ಮಾಡಿಸುತ್ತಾ ನಾದುದರಿಂದ ಇವೇ ನಿಜವಾದ ಮನೆಗಳು. ದಿನದಿನದಿ ಸಂಪ್ರಕ್ಷಾಲನೆಯೆ= ಪ್ರತಿನಿತ್ಯದಲ್ಲಿ ಗುದ ಪ್ರಕ್ಷಾಲನ ಮುಖ ಪ್ರಕ್ಷಾಲನ ಸ್ನಾನಾದಿಗಳಿಂದ ಸಂಪ್ರಕ್ಷಾಲನ=ಸಮೀಚೀನವಾಗಿ ನೀರಿನಿಂದ ತೊಳೆಯುವದೇ ಸಮ್ಮಾ ರ್ಜನ=ಮಾರ್ಜ್ಯತೇ ನೇನೇತಿ ಮಾರ್ಜನ, ಶುದ್ಧ ಮಾಡಲು ನೀರಿನಿಂದ ಸಿಂಪಡಿಸುವದು, ಮನೆಯು ಶುದ್ಧತೆಗೆ, "ಸಮ್ಮಾರ್ಜನೈ ರಂಗವಲ್ಲ್ಯಾದಿ"

ಎಂಬುವ ವಚನದಂತೆ. ಶರೀರಾದಿಗಳೇ ಶ್ರೀಹರಿಯ ಮಂದಿರಕ್ಕೆ ಸಾರಣಿ ರಂಗವಲ್ಲ್ಯಾದಿ ಅಲಂಕಾರಗಳು, ಕರಣಗಳೇ=ತೇಜೋಮಯವಾದ ಇಂದ್ರಿಯಗಳೇ ಮನೆಯನ್ನು ಪ್ರಕಾಶ ಮಾಡುವ ದೀಪಗಳು. ಶ್ರೋತ್ರಾದಿ ಇಂದ್ರಿಯಗಳಿಂದ ಪುಂಖಾನುಪುಂಖ, ಸಾಲುಸಾಲಾಗಿ, ಪುಟ್ಟುವ ವಿಷಯ ಗಳೇ ಶ್ರೀಹರಿಗೆ ಪರಿಯಂಕ, ಪಲ್ಲಂಗು, ಮಂಚ. ತತ್ಸುಖದೇಳಿಗೆ=ಆ ವಿಷಯಗಳ ಸುಖದ ಏಳಿಗೆ ಉನ್ನತಿ-ಅಭಿವೃದ್ಧಿಯೇ, ಸುಪ್ಪತ್ತಿಗೆ=ಮೆತ್ತ ನೆಯ ಗಾದಿ, ತಲೆಗಿಂಬು. ಆತ್ಮ ನಿವೇದನವೇ ವಸನ=ತನ್ನನ್ನೂ, ತನ್ನ ಶರೀರವನ್ನೂ ಶ್ರೀಹರಿಗೆ ನಿವೇದನ, ಸಮರ್ಪಣ ಮಾಡುವದೇ ಶ್ರೀಹರಿಗೆ ಹೊದ್ದುಕೊಳ್ಳಲು ವಸನ=ವಸ್ತ್ರ. ಈ ರೀತಿ ಜ್ಞಾನಿಗಳು ಇಂದ್ರಿಯಜ ದೇಹಜ ಸಕಲ ವ್ಯಾಪಾರಗಳನ್ನೂ ಶ್ರೀಹರಿಗೆ ಮನೆ, ಮನೆ ಶುದ್ಧತೆ, ದೀಪ, ಮಂಚ, ಗಾದಿ, ವಸನಾದಿಗಳೆಂದು ಸಮರ್ಪಿಸುವ ಕ್ರಮ.

**ಶ್ರೀ ಗುರು ಶ್ರೀಶವಿಠಲರ ಶಿಷ್ಯರು:** ಗೋಳಕಗಳೆ ರಮಾರಮಣನ ನಿಜಾಲಯಗಳು, ಶರೀರೆಂದ್ರಿಯಗಳೇ ರಮಾಧವ-ಓಂಕಾರ ಪ್ರತಿಪಾದ್ಯ ಶ್ರೀ ಆದಿನಾರಾಯಣನ ಅರಮನೆಗಳು. ಅನುದಿನ ಸಂಪ್ರಕ್ಷಾಲನೆಯೆ ಸಮ್ಮಾರ್ಜನ. ಪ್ರತಿಪ್ರತಿ ದಿನಗಳಲ್ಲಿ ಸಮೀಚೀನವಾಗಿ ಮುಖ ಪ್ರಕ್ಷಾಲನ ಹಸ್ತ ಪ್ರಕ್ಷಾಲನ ಸ್ನಾನಾದಿಗಳು, ಶ್ರೀ ನಾರಾಯಣನ ಮನೆಗೆ ಗೋಮಯ ಮಿಶ್ರವಾದ ಭಾಗೀರಥೀ ಜಲದಿಂದ ಸಮ್ಮಾರ್ಜನ. ಕರಣಗಳು ದೀಪಗಳ ಸಾಲು, ಜ್ಞಾನೇಂದ್ರಿಯ ಕರ್ಮೇಂದ್ರಿಯಃಗಳು ದೀಪಗಳ ಸಾಲುಗಳು. ತತ್ತದ್ವಿಷಯಗಳ ಸಮ್ಮೇಳನವೇ ಪರಿಯಂಕ. ತತು=ದಾವದಾವ ಇಂದ್ರಿಯಗಳಿಂದ ಅನುಭವಿಪ ವಿಷಯ, ಶ್ರೋತ್ರೇಂದ್ರಿಯಕ್ಕೆ ಶ್ರವಣ ವಿಷಯ. ಚಕ್ಷುರೇಂದ್ರಿಯಗಳಿಗೆ ರೂಪ ನೋಡೋಣ. ಘ್ರಾಣೇಂದ್ರಿ ಯಕ್ಕೆ ಸುವಾಸನಾದಿಗಳ ಆಘ್ರಾಣಿಸೋದು. ತ್ವಗೇಂದ್ರಿಯಕ್ಕೆ ಆಲಿಂಗನ ವಿಷಯ. ಜಿಹ್ವೇಂದ್ರಿಯಕ್ಕೆ ರಸಾದಿಗಳ ಆಸ್ವಾದಿಸೋಣ ವಿಷಯ. ಪಂಚಜ್ಞಾನೇಂದ್ರಿಯಗಳ ವಿಷಯ ಸಮ್ಮೇಳನವೇ ಶ್ರೀ ರಮಾ ಸಮೇತ ನಾಗಿ ಶೇಷ ಪರಿಯಂಕಶಯನ ಶ್ರೀ ಆದಿನಾರಾಯಣಗೆ ಪಟ್ಟೆ ಮಂಚ. ತತ್ಸುಖ ದೇಳಿಗೆಯೇ, ದಶೇಂದ್ರಿಯಗಳಿಂದ ತತ್ತತ್ಕಾಲದಲ್ಲಿ ವಿಷಯ ಭೋಗ ಸುಖ ಸುಪ್ಪತ್ತಿಗೆ, ಶ್ರೀ ಲಕ್ಷ್ಮೀಪತಿ ಶ್ರೀಕೃಷ್ಣನ ಶಯ್ಯಕ್ಕೆ ವಿಷಯ

ಭೋಗಸುಖ ಪರಮ ಮಂಗಳತರವಾದ ಸುಪ್ಪತ್ತಿಗೆ. ಆತ್ಮನಿವೇದನವೇ ವಸನ, ಆತ್ಮ=ಶರೀರ, ನಿವೇದನ=ಸಮರ್ಪಣ, ಚತುರ್ವಿಂಶತಿ ತತ್ವಾತ್ಮಕ ಶರೀರ, ಸ್ವಾಮಿ ಚರಣ ಕಮಲಗಳಿಗೆ ಸಮರ್ಪಣವೇ, ಶ್ರೀ ರಮಾವಲ್ಲಭ ನಾರಾಯಣಗೆ ಕೇವಲ ಸೂಕ್ಷ್ಮವಾದ ಶುಭ್ರ ವಸ್ತ್ರ ಸಮರ್ಪಣೆ ॥ ೧೪ ॥*

**ಭಾವಸೂಚನ :** ಗೋಳಕೇತಿ=ಏಳಿಗೆ ಅಭಿವೃದ್ಧಿ. ಸುಪ್ಪತ್ತಿಗೆ, ಲೇಪು. "ಸಮರ್ಪಿತ ಸರ್ವ ಕರ್ಮಾಣಾಂ ಭಗವತ್ಪರಿ ಗೃಹೀತತ್ವಾತ್ತ ಥ್ಯಾಪ್ತ್ಯೇತೀ ೭ಂ ವಸನತ್ವಂತಿ ॥ ೧೪ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಅಕ್ಷಿವಿದ್ಯಯಾ ಯತ್ ಸ್ಥಾನತ್ವಾದಿ ವಾಚಾ ಶ್ರೀ ವಾಮನೋಪಾಸಾಂ ಬ್ರೂತೇ "**ಗೋಲಕೇತಿ**" ॥

ನೇತ್ರಗೋಲಕಂ ವಾಮನಾಶ್ರಿತಂ ನೇತ್ರಂ ಚೋಚ್ಯತೇ ॥ ಏಳಿಗೆ= ವೃದ್ಧಿ । ಸುಪ್ಪತ್ತಿಗೆ=ಶಯ್ಯಾ. ಅನಾದ್ಯನಂತ ಕಾಲೇ ಮುಕ್ತಾ ಸಂಸಾರೇ ಚ ಸದೈವ ವಿಷ್ಣುಃ ಮಾಂ ಕರ್ಮಸು ಪ್ರೇರಯತೀತಿ ತಂತ್ರಮಾಲೋಕ್ತಾ ತ್ಮಾರ್ಪಣಮ್ ॥ ೧೪ ॥

## ಕನ್ನಡಾರ್ಥ

"ಯತ್ ಸ್ಥಾನತ್ವಾತ್" ಎಂಬ ಶೃತ್ಯನುಸಾರವಾಗಿ "ಶ್ರೀ ವಾಮನ ದೇವರ ಸ್ಥಾನವಾಗಿರುವದು" ಎಂದು ಅಕ್ಷಿಸ್ಥ ಭಗವದ್ವಿದ್ಯೆಯಿಂದ ನೇತ್ರ ಗೋಲಕಸ್ಥಿತನಾದ ಶ್ರೀಹರಿಯನ್ನು ಉಪಾಸಿಸಬೇಕು ಎಂದು ಹೇಳುತ್ತಾರೆ. "ಗೋಲಕಗಳು" ಎಂಬ ಪದ್ಯದಿಂದ ನೇತ್ರಗೋಲಕವೂ ವಾಮನದೇವರ ಆವಾಸಸ್ಥಾನವಾದ ನೇತ್ರೇಂದ್ರಿಯವೂ ನೇತ್ರವೆನಿಸುತ್ತದೆ. ಏಳಿಗೆ= ವೃದ್ಧಿ, ಸುಪ್ಪತ್ತಿಗೆ=ಹಾಸಿಗೆಯಲ್ಲಿಯ ಹೊದಿಕೆ. ಈ ಪದ್ಯದ ಕೊನೆಯಲ್ಲಿ ಹೇಳಿರುವ ಆತ್ಮ ನಿವೇದನವೆಂದರೆ "ಅನಾದಿ ಕಾಲದಿಂದಲೂ ನಿತ್ಯವೂ, ಶ್ರೀಹರಿಯು ಸಂಸಾರ-ಮುಕ್ತಿ ಎಂಬ ಎರಡೂ ಅವಸ್ಥೆಗಳಲ್ಲಿಯೂ ಯಾವಾ

ಇದೇ ವರ್ಷ ಕಂಪಲಿ ಗುರು ಶ್ರೀಶವಿಠಲರ ಮನೆಯಲ್ಲಿ ವೈ॥ ಶ್ರೀ ಪಾಂಡುರಂಗ ದಾಸರ ಧರ್ಮಪತ್ನಿಯವರು ಹಳೇ ಪುಸ್ತಕ ಸಂಶೋಧನಕ್ಕೆ ಅವಕಾಶ ಕೊಟ್ಟದು ಕ್ಕಾಗಿ ಈ ೫ನೇ ಸಂಧಿ ೧೪ ಪದ್ಯ ವ್ಯಾಖ್ಯಾನ ಬರೆದ ಒಂದು ಹಳೆ ಸಣ್ಣ ವಹಿ ದೊರಕಿದೆ. ಇಷ್ಟೆ ಇದೆ. ಮುಂದೆ ಬರೆದಿಲ್ಲ. ನಮ್ಮ ದುರ್ದೈವ.

ಗಲೂ ಶ್ರೀಹರಿಯು ನನ್ನನ್ನು ಕರ್ಮಗಳಲ್ಲಿ ಪ್ರೇರಿಸುತ್ತಾನೆ" ಎಂದು ತಂತ್ರ ಮಾಲಾದಲ್ಲಿ ಹೇಳಲ್ಪಟ್ಟಿರುವ "ಆತ್ಮಾರ್ಪಣ"ವೆಂದು ತಿಳಿಯಬೇಕು ||೧೪||

**ಅವತರಣಿಕಾ:** ಸಕಲ ಪಾಪ ಪುಣ್ಯ ಕರ್ಮಾದಿಗಳು ಬಿಂಬನಾದ ಶ್ರೀಹರಿಗೆ ಷೋಡಶೋಪಚಾರ ವಿಧಾನ ಧ್ಯಾನೋಪಾಸನಾ ವಿವರ ಕರುಣಾಳುಗಳಾದ ದಾಸಾರ್ಯರು ಅಧಿಕಾರ ಭೇಧದಿಂದ ಆಜ್ಞಾಪಿಸುತ್ತಾರೆ.




**ಮೂಲ:**

**ಪಾಪ ಕರ್ಮವು ಪಾದುಕೆಗಳನು ।**
**ಲೇಪನವು ಸತ್ಪುಣ್ಯ ಶಾಸ್ತ್ರಾ ।**
**ಲಾಪನವೆ ಶ್ರೀತುಳಸಿ ಸುಮನೋವೃತ್ತಿಗಳೆ ಸುಮನ ॥**
**ಕೋಪಧೂಪವು ಭಕ್ತಿ ಭೂಷಣ ।**
**ವ್ಯಾಪಿಸಿದ ಸದ್ಬುದ್ಧಿ ಛತ್ರವು ।**
**ದೀಪವೇ ಸುಜ್ಞಾನ ಆರಾರ್ತಿಗಳೆ ಗುಣಕಥನ ॥ ೧೫ ॥**

**ಪದ್ಯಾರ್ಥ:** ಪಾಪಕರ್ಮವು=ಕೆಟ್ಟಕೆಲಸಗಳು, ಪರವಿತ್ತ ಪರದಾರಾಪಹರಣ ಪರಹಿಂಸಾ ಸ್ವೋತ್ತಮರ ನಿಂದಾ, ಇತ್ಯಾದಿ ಜ್ಞಾತಾಜ್ಞಾತದಿಂದ ಮಾಡಿದ ಎಲ್ಲ ಕೆಲಸಗಳು, ಅಶುಭ ಕರ್ಮಗಳೇ ಪಾಪ ಕರ್ಮಗಳಲ್ಲ. ಪ್ರತಿಯೊಂದು ಶುಭ ಕರ್ಮಗಳು, ಹರಿ ವಿಸ್ಮರಣೆಯಿಂದ ನಾನೇ ಮಾಡುವನೆಂಬ ಅಹಂಕಾರದಿಂದ ಮಾಡಿದ ಪುಣ್ಯ ಕರ್ಮಗಳಾದರೂ ಪಾಪ ಕರ್ಮವೆನಿಸುವವು. "ಹರಿ ವಿಸ್ಮರಣೆಯೇ ಪಾಪ-ಹರಿಸ್ಮರಣೆಯೇ ಪುಣ್ಯ" ಎಂಬ ವಿಜಯರ ವಚನ. ಇಂಥ ಪಾಪಕರ್ಮಗಳು ತಿಳಿಯದೇ-ತಿಳಿದು ಮಾಡಿದ ಮೇಲೆ ಪಶ್ಚಾತ್ತಾಪದಿಂದ ಶ್ರೀಹರಿಗೆ ಪಾದುಕೆಗಳೆಂದರ್ಪಿಸಲು, ಶ್ರೀಹರಿಯು ತನ್ನ ವಜ್ರಾಂಕುಶ ರೇಖೆಗಳುಳ್ಳ ಪಾದದಿಂದ ಮೆಟ್ಟಿ ತುಳಿದು, ಪಾಪ ಕಳೆದು ಈ ಸಜ್ಜನರನ್ನು ಉದ್ಧರಿಸುವ. ಸತ್ಪುಣ್ಯ ಅನುಲೇಪನವು=ಹರಿಸ್ಮರಣ ಪೂರ್ವಕ ಮಾಡಿದ, ಎಲ್ಲ ವಿಹಿತ ಕರ್ಮಗಳು ಬಿಂಬಗೆ ಅನುಲೇಪನ=ಅನುಲಿಪ್ಯತೇ ನೇನೇತ್ಯನುಲೇಪನಂ" ಮೈಗೆ ಹಚ್ಚುವ ಸುಗಂಧ ಎಣ್ಣೆಗಳು, ಬುಕ್ಕಿಟ್ಟು ಮುಂತಾದ ಹಚ್ಚತಕ್ಕವು-ಸಮಾಚೀನವಾದ ಪುಣ್ಯ ಕರ್ಮಗಳು. ಶಾಸ್ತ್ರಾಲಾಪನ=ಪರಸ್ಪರ ಸಂಬೋಧನ ಪೂರ್ವಕ,

ಶಾಸ್ತ್ರಸಮ್ಮತವಾಗಿಪ್ಪ ಪ್ರಮಾಣ ಪ್ರಮೇಯೋಕ್ತ ಶ್ರೀ ಹರಿಗುಣ ಕಥನ ಮಾಡುವುದೇ, ಶ್ರೀಹರಿಗೆ ತುಲಸೀದಳ ಸಮರ್ಪಣ. ವೇದವಾಕ್ಯಗಳು ಶಾಸ್ತ್ರಗಳಿಗೂ ಶ್ರೀ ಲಕ್ಷ್ಮೀದೇವಿ ಅಭಿಮಾನಿ, ಶ್ರೀ ತುಳಸಿ ದಳಗಳಿಗೂ ಶ್ರೀ ಲಕ್ಷ್ಮೀದೇವಿಯ ಉಭಯ ರೂಪಕ್ಕೂ ಐಕ್ಯ. "ಹರಿಗೆ ಹರಿಗೆ ಐಕ್ಯ, ಸಿರಿಗೆ ಸಿರಿಗೆ ಐಕ್ಯ". ಸುಮನೋವೃತ್ತಿಗಳ=ಸಮೀಚೀನವಾದ ಒಳ್ಳೇ ಭಗವತ್ಪರ ಉದ್ಗಾರ ಮನೋಧರ್ಮ, ಮನಸ್ಸಿನ ರೀತಿನೀತಿಗಳು ಶ್ರೀಹರಿಗೆ ಸುಮನ=ಪುಷ್ಪವು, ಕೋಪಧೂಪವು=ಶಿಟ್ಟು ಕೆಟ್ಟದು ಇದು ಹೇಗೆ ಧೂಪವಾಗುವುದು? ಶಿಷ್ಯ ದಾರಾ ಪುತ್ರಾದಿಗಳ ಶಿಕ್ಷಾನುಕೂಲವಾದ ಕೋಪ, ನಿಗ್ರಹಿಸುವದು, ಅಷ್ಟಕ್ಕೆ ಶಾಂತಿಯಾಗುವ ಶಿಟ್ಟು. ಇದಕ್ಕೆ ನಿಋುರುತಿ ಜನಾರ್ದನ ಧೂಪಕ್ಕೂ, ನಿಋುರುತಿ ಅಭಿಮಾನಿ. ಈ ಎರಡೂ ರೂಪಗಳಿಗೂ ಐಕ್ಯ. ಭಕ್ತಿಭೂಷಣ=ಪರಮಾತ್ಮನಲ್ಲಿರುವ ನಿರವಧಿಕ ಸ್ನೇಹ ಪ್ರೀತಿಯೇ ಭಕ್ತಿ, ಶ್ರೀಹರಿಗೆ ಭೂಷಣ-ಅಲಂಕಾರ ನಾನಾಭರಣ ತೊಡಿಗೆಗಳು, ವ್ಯಾಪಿಸಿದ ಸದ್ಬುದ್ಧಿ ಛತ್ರವು=ಸಕಲ ಶಾಸ್ತ್ರ ವಿಮರ್ಶದಲ್ಲಿ ನಿಶ್ಚಯಾತ್ಮಕವಾದ ಜ್ಞಾನ ಸದ್ಬುದ್ಧಿಯೇ ಶ್ರೀ ಬಿಂಬನಿಗೆ ಛತ್ರವು-ಕೊಡೆ. ದೀಪವೇ ಸುಜ್ಞಾನ=ತೇಜೋಮಯವಾಗಿ ಪ್ರಕಾಶ ಗುಣವುಳ್ಳ ದೀಪವು, ಸುಸಮೀಚೀನವಾದ ತಿಳುವಳಿಕೆ ಜ್ಞಾನವು. ಆರಾರ್ತಿಗಳೇ ಗುಣ ಕಥನ-ಸಂತತ ಎಡೆಬಿಡದೆ, ಶ್ರೀಹರಿಯ ಗುಣಗಳನ್ನು ಕೀರ್ತನ ಮಾಡುವದೇ ಶ್ರೀಹರಿಗೆ ಮೇಲೆ ಮೇಲೆ ಎತ್ತುವ ಮಂಗಳಾರುತಿಗಳೆಂದು ತಿಳಿದು ಹರಿಗೆ ಸಮರ್ಪಿಸಬೇಕು. ಉಭಯ ಪ್ರವರ್ತಕ ಧರ್ಮನಿಯಾಮಕ ರೂಪಗಳಿಗೆ ಅಭೇದ ಚಿಂತನವೇ ಮಹಾ ಪೂಜಾ ಸಾಧನಗಳು.

ಭಾವಸೂಚನ : ಪಾಪೇತಿ=ಕೃಷ್ಣಸ್ಯೇಯ ಪಾಪಾನಿ ಕಾಳೀಯ ವನ್ಮರ್ದಯತೀತಿ ತೇಷಾಂ ಪಾದುಕತ್ವಂ। ಅರ್ಪಣೀಯಾನಾಂ ತುಲಸೀನಾಂ ಅನಂತತ್ವಾತ್ ಸಕೃತ್ ಶಾಸ್ತ್ರೀಯ ವಚನಾನಾಂ ನಾನಾತ್ವಂ। ಕೋಪಸ್ಯ ವಿನಶಿಷ್ಟತ್ವಾತ್ ಧೂಪತ್ವಂ ಬುಧೈಃ। ಛತ್ರವದ್ವ್ಯಾಪ್ತತ್ವಾತತ್ವಂ। ಆರಾರ್ತಿನಾಂ ಬಹುತ್ವಾತ್ ಗುಣಕಥನಸ್ಯ ತತ್ವಮಿತಿ ॥ ೧೫ ॥

ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಪಾಪೇತಿ ॥ ಮರ್ದನಾಭಿ ಪ್ರಾಯೇಣ ವೃತ್ತಯಃ ವಿಕಾರಾಃ ॥ ೧೫ ॥

## ಕನ್ನಡಾರ್ಥ

"ಪಾಪ ಕರ್ಮಗಳು ಪಾದುಕೆಗಳು" ಎಂದು ಮೂಲ ಪದ್ಯದಲ್ಲಿ ಹೇಳಲ್ಪಟ್ಟಿರುತ್ತದೆ. 'ಪಾದುಕೆಗಳನ್ನು ಮೆಟ್ಟಿ ಮರ್ದಿಸುವಂತೆ ಪಾಪ ಕರ್ಮಗಳು ಮರ್ದನ ಹೊಂದಲಿ" ಎಂಬ ಅಭಿಪ್ರಾಯದಿಂದ ಹೀಗೆ ಮೂಲದಲ್ಲಿ ಹೇಳಲಾಗಿರುತ್ತದೆ ಎಂದು ತಿಳಿಯಬೇಕು. ಮನೋವೃತ್ತಿಗಳೆಂದರೆ ಮನಸ್ಸಿನ ವಿವಿಧವಾದ ವಿಕಾರಗಳು. ಅವೇ ಕುಸುಮಗಳೆಂದು ಅರ್ಪಿಸಬೇಕು ||೧೫||

**ಅವತರಣಿಕಾ:** ಕಾಯಾ ವಾಚಾ ಮನಸಾ, ಆಗುವ ಎಲ್ಲ ವ್ಯಾಪಾರಗಳು ಶ್ರೀಹರಿಗೆ ಪ್ರದಕ್ಷಣೆಯು ಎಂಬೋ ಜ್ಞಾನಾನುಸಂಧಾನ ಪೂರ್ವಕ ಧ್ಯಾನೋಪಾಸನೆಯಲ್ಲಿ ಸಮರ್ಪಿಸುವ ಕ್ರಮ, ಈ ಪದ್ಯದಿಂದ ಹೇಳುತ್ತಾರೆ.

**ಮೂಲ :**

**ಮನವಚನ ಕಾಯಿಕ ಪ್ರದಕ್ಷಣೆ ।**
**ಅನುದಿನದಿ ಸರ್ವತ್ರ ವ್ಯಾಪಕ ।**
**ವನರುಹೇಕ್ಷಣಗರ್ಪಿಸುತ ಮೋದಿಸುತಲಿರು ಸತತ ॥**
**ಅನುಭವಕೆ ತಂದುಕೊ ಸಕಲ ಸಾ ।**
**ಧನದೊಳಗಿದೆ ಮುಖ್ಯ ಪಾಮರ ।**
**ಮನುಜರಿಗೆ ಪೇಳಿದರೆ ತಿಳಿಯದು ಬುಧರಿಗಲ್ಲದಲೆ ॥ ೧೬ ॥**

**ಪದ್ಯಾರ್ಥ :** ಮನ=ಮನಸ್ಸಿನಿಂದ ಆಗುವ ಸಕ್ರಿಯಾ ವ್ಯಾಪಾರಗಳು, ವಚನ=ವಾಚಾ ಮುಖದಿಂದ ಆಗುವ ಸಕಲ ಕರ್ಮ, ಭಗವನ್ನಾಮ ಮಾಡಿ ಸ್ತೋತ್ರ, ಇತರ ಸಕಲ ವ್ಯಾಪಾರಗಳು, ಕಾಯ=ದೇಹದಿಂದಾಗುವ ಸಕಲ ಕ್ರಿಯೆಗಳು, ಶ್ರೀಹರಿಗೆ ಪ್ರದಕ್ಷಣೆಯೆಂದು ಸಮರ್ಪಿಸಬೇಕು. ಶ್ರೀಹರಿಬಿಂಬನೆ ಸರ್ವತ್ರ ವ್ಯಾಪಕನಾಗಿರುವನು. ವನರುಹೇಕ್ಷಣ=ಕಮಲ ಪತ್ರಗಳಂತೆ ವಿಶಾಲವಾದ, ಈಕ್ಷಣ=ಕಣ್ಣಿನಿಂದ ಕರುಣಾಪೂರ್ಣ ದೃಷ್ಟಿಯಿಂದ ನೋಡುವ ಭಗವಂತನಿಗೆ ಸಮರ್ಪಣ ಮಾಡುತ್ತ, ಮೋದಿಸುತಲಿರು ಸತತ, ಸಂತತ ನಿರಂತರ ಆನಂದಪಡುತ್ತಲಿರು. ಅನುಭವಕೆ ತಂದುಕೋ= ಮನಸ್ಸಿನಿಂದ ಚನ್ನಾಗಿ ತಿಳಿದು, ಜ್ಞಾನಪೂರ್ವಕ ಆತ್ಮಾನುಭವ ಮಾಡಿಕೋ. ಸಕಲ ಸಾಧನದೊಳಗೆ ಇದೆ ಮುಖ್ಯವು, ಯಾವುದೆಂದರೆ ಸರ್ವಸಮರ್ಪಣೆಯೇ

ಎಲ್ಲ ಸಾಧನಗಳಲ್ಲಿಯೂ ಮುಖ್ಯ=ಶ್ರೇಷ್ಠವಾದದು. ಈ ಆತ್ಮಾನುಭವ ಜ್ಞಾನ ಸುಸಮರ್ಪಣೆ, ಪಾಮರ=ಮೂರ್ಖರು, ದುಷ್ಟ ಬುದ್ಧಿಯುಳ್ಳವರಿಗೆ ಎಂದಿಗೂ ತಿಳಿಯದು. ಇಂಥ ಸುಜ್ಞಾನೋಪದೇಶವು ಉತ್ತಮರಾದ ಜ್ಞಾನಿಗಳು ಅವರರಾದ, ಜ್ಞಾನ ಭಕ್ತಿ ವೈರಾಗ್ಯವುಳ್ಳ, ಬುಧ=ಶಾಸ್ತ್ರಾರ್ಥ ಮರ್ಮ ಬಲ್ಲ ಪಂಡಿತ ಜ್ಞಾನಿಗಳಿಗೆ ಉಪದೇಶಿಸಬೇಕಲ್ಲದೆ ಮಂದರಿಗೆ ಅಯೋಗ್ಯರಿಗೆ ಪೇಳಕೂಡದು.

**ಭಾವಸೂಚನ:** ಮನ ಇತಿ ॥ ೧೬ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಮನವೇತಿ ॥ ತ್ರಯಾಣಾಂ ಸದಾ ಸರ್ವತ್ರ ಅವರ್ತನಾತ್ ತತ್ತದ್ಗಸ್ಯ ಪ್ರದಕ್ಷಿಣತಾ ॥ ಬುಧರಿಗೆ ಅಧ್ಯಾತ್ಮ ರಸರಂಜನೀ ಸರ್ವಸಮರ್ಪಣಾಭಿ ಜ್ಞಾನಾಮ್ ॥ ೧೬ ॥

## ಕನ್ನಡಾರ್ಥ

ಕಾಯಿಕ, ವಾಚಿಕ, ಮಾನಸಿಕ ವ್ಯಾಪಾರಗಳು ಯಾವಾಗಲೂ ಇದೇ ಇರುವದರಿಂದ ಕಾಯಿಕ ಮಾನಸಿಕ ವಾಚಿಕ ವ್ಯಾಪಾರಗಳು ಆಯಾ ವ್ಯಾಪಾರ ಪ್ರವರ್ತಕ ಹರಿಗೆ ಪ್ರದಕ್ಷಿಣೆಗಳು. ಈ ಉಪಾಸನೆಯು "ಅಧ್ಯಾತ್ಮ ರಸರಂಜಿನಿಯಲ್ಲಿ ಹೇಳಿದ "ಸರ್ವ ಸಮರ್ಪಣ" ವಿಧಾನವನ್ನು ಬಲ್ಲವರಿಗೆ ತಿಳಿಯುವದು; ಅವರೇ ಬುಧರು. ॥ ೧೬ ॥

ಅವತರಣಿಕಾ: ಸಕಲ ವಿಷಯ ಇಂದ್ರಿಯ, ವಾಕ್, ಮನಸ್ಸು, ದೇಹಾದಿಗಳಿಂದ ಸಕಲ ಕ್ರಿಯೆಗಳು ಶ್ರೀಹರಿಗೆ ಸರ್ವ ಸಮರ್ಪಣೆ ಮಾಡುವ ಬಗೆಯನ್ನು ಕರುಣಾಳುಗಳಾದ ದಾಸರಾಯರು ಈ ಪದ್ಯದಿಂದ ಹೇಳುತ್ತಾರೆ.

**ಮೂಲ:**

ಚತುರವಿಧ ಪುರುಷಾರ್ಥ ಪಡೆವರೆ ।
ಚತುರದಶ ಲೋಕಗಳ ಮಧ್ಯದೊ ।
ಳಿತರುಪಾಯಗಳಿಲ್ಲ ನೋಡಲು ಸಕಲ ಶಾಸ್ತ್ರದಲಿ ॥
ಸತತ ವಿಷಯೇಂದ್ರಿಯಗಳಲಿ ಪ್ರವಿ ।
ತತನೆನೆಸಿ ರಾಜಿಸುವ ಲಕ್ಷ್ಮೀ ।
ಪತಿಗೆ ಸರ್ವಸಮರ್ಪಣೆಯೆ ಮಹಪೂಜೆ ಸದುಪಾಯ ॥ ೧೭ ॥

**ಪದ್ಯಾರ್ಥ :** ಚತುರವಿಧ ಪುರುಷಾರ್ಥ ಪಡೆವರೆ=ಧರ್ಮ ಅರ್ಥ ಕಾಮ ಮೋಕ್ಷ ನಾಲ್ಕು ವಿಧ ಪುರುಷಾರ್ಥ ಪಡೆವರೆ=ಹೊಂದಲಪೇಕ್ಷೆ ಯುಳ್ಳವರು, ಸತತ ವಿಷಯೇಂದ್ರಿಯಗಳಲಿ-ದೇಹೇಂದ್ರಿಯಗಳಲ್ಲಿ ತಜ್ಜನ್ಯ ವಿಷಯ=ಇಂದ್ರಿಯ ಗೋಚರವಾದ ಆಶಯ, ಬಯಕೆ, ಕಾಮ ಇವೆಲ್ಲವು ಗಳಲ್ಲಿ ಪ್ರವಿತತನೆನಿಪ-ಸಂತತ ವ್ಯಾಪ್ತನಾಗಿ, ತತ್ತದೇಹೆಂದ್ರಿಯ ಕಾರ್ಯ ವಿಷಯಗಳಲ್ಲಿ ನಿಂತು ಪ್ರೇರಕನಾಗಿ, ಸಕಲ ಕ್ರಿಯಾ ಮಾಡಿಸುವವನು, ಶ್ರೀ ಲಕ್ಷ್ಮೀಸಹಿತನಾಗಿ ಶ್ರೀ ರಮಾವಲ್ಲಭನಿಗೆ, ಶ್ರೀಹರಿಯೆ ನೀನು ಮಾಡಿ ಸಿದ ಸಕಲ ಕರ್ಮಗಳು ನಿನಗೆ ಸರ್ವವೂ ಸಮರ್ಪಣೆ ಎಂದು ಒಪ್ಪಿಸುವದು ಕಾಣಿಕೆ ಕೊಡುವುದು ನಿವೇದನ ಮಾಡುವದು ಇದೇ ಮಹಾ ಪೂಜೆ= ದೊಡ್ಡ ಪೂಜಾ ಅಂದರೆ ಅನಂತ ಅಸಾಧ್ಯವಾದ ಮಹಾ ಪೂಜಾ; ಸರ್ವ ಸೇವೆಗಳಿಂದಲೂ ಸರ್ವ ಸಮರ್ಪಣಾರೂಪ ಮಹಾ ಪೂಜೆ. ಇದಕ್ಕಿಂತಲೂ ಶ್ರೀಹರಿಗೆ ಹೆಚ್ಚಿನ ಪೂಜಾಗಳು ಚತುರದಶ ಲೋಕದಲಿ=ಹದಿನಾಲ್ಕು ಲೋಕಗಳಲ್ಲಿ ಸಕಲ ಶಾಸ್ತ್ರದಲ್ಲಿಯೂ ವಿಚಾರ ಮಾಡಲು ಇತರ ಉಪಾಯ= ಸುಲಭ ಸಾಧನ ತಂತ್ರಗಳೇ ಇಲ್ಲ. ಕಾರಣ ಶ್ರೀಹರಿಗೆ ಸರ್ವ ಸಮರ್ಪಣೆ ಮಹಾ ಪೂಜಾ. ಇದೇ ಮುಖ್ಯ.

**ಭಾವಸೂಚನ :** ಚತುರ ವಿಧೇತಿ ॥ ಸದಾಚಾರ ಚಂದ್ರಿಕಾಯಾಂ ॥ "ಧರ್ಮಾರ್ಥ ಕಾಮ ಮೋಕ್ಷಾಣಾಂ ನಾನ್ಯೋಪಾಯಸ್ತು ವಿದ್ಯತೇ ॥ ಸತ್ಯಂ ಬ್ರವೀಮಿದೇವೇಶ ಹೃಷಿಕೇಶಾರ್ಚನಾದೃತ ಇತಿ ॥ ೧೭ ॥

ವಿಶೇಷ ಸೂಚನೆ : ಸಮರ್ಪಣೆಪ್ರಕಾರ ಚನ್ನಾಗಿ ತಿಳಿವುದು. ಉಪಾ ಸನಾ ಭಾಗ ಸುಳಾದಿ ೪೪, ಪುಟ ೧೪೨ ಮತ್ತು ಸರ್ವ ಸುಸಮರ್ಪಣೆಮಾಡು, ಮುಕ್ತಿಯ ಬೇಡು. (ಸಾಧನ ಭಾಗ ೨, ಪುಟ ೨೪೬, ಸುಳಾದಿ ೧೦೮). ಶ್ರೀ ವಿಜಯದಾಸರ ಸುಳಾದಿಯಲ್ಲಿ ಸವಿಸ್ತರ ಪೇಳಿದ್ದನ್ನು ಚನ್ನಾಗಿ ಅರಿತು ಮನನ ಮಾಡಿ ಶ್ರೀಹರಿಗೆ ಸಮರ್ಪಿಸುವದು. ಎರಡು ಸುಳಾದಿಗಳ ವಿಷಯವೇ ಈ ಪದ್ಯದಲ್ಲಿ ಹೇಳಿದ್ದಾರೆ.

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಚತುರೇತಿ" ॥ ಪುರುಷಾರ್ಥ ಪ್ರಾಪ್ತ್ಯರ್ಥಮ್ ॥ "ಧರ್ಮಾರ್ಥ ಕಾಮ ಮೋಕ್ಷಾಣಾಮ್" ಇತಿ ಕೃಷ್ಣಾಮೃತ ಮಹಾರ್ಣವೇ ॥ ೧೭ ॥

## ಕನ್ನಡಾರ್ಥ

ನಾಲ್ಕು ವಿಧ ಪುರುಷಾರ್ಥಗಳು; ಧರ್ಮ, ಅರ್ಥ, ಕಾಮ, ಮೋಕ್ಷ ಎಂಬುದಾಗಿ. ಈ ನಾಲ್ಕು ಪುರುಷಾರ್ಥಗಳು ಶ್ರೀಹರಿಯ ಸರ್ವಸಮರ್ಪಣ ರೂಪ ಅರ್ಚನೆಯಿಂದ ದೊರೆಯುತ್ತವೆ. ಶ್ರೀಮದಾಚಾರ್ಯರು ಶ್ರೀ ಕೃಷ್ಣಾಮೃತ ಮಹಾರ್ಣವದಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷ; ಈ ನಾಲ್ಕು ಪುರುಷಾರ್ಥಗಳಿಗೆ ಶ್ರೀಹರಿಯ ಅರ್ಚನವೇ ಮುಖ್ಯ ಉಪಾಯ" ಎಂದು ಉಪದೇಶಿಸುತ್ತಾರೆ ॥ ೧೭ ॥

**ಅವತರಣಿಕಾ :** ಹಿಂದೆ ೧೫ನೇ ಪದ್ಯ ಗೋಳಕಗಳೆ ರಮಾರಮಣನ ನಿಜಾಲಯ ಗಳು, ಎಂಬುವ ಪದ್ಯಾರಂಭಿಸಿ ೧೭ ಪೂರ್ತಿ ಸರ್ವಸಮರ್ಪಣ ಬಗೆಯನ್ನು ವಿವರಿಸಿ ಆ ಎಲ್ಲ ವಿಷಯಗಳನ್ನೇ ಕ್ರೋಢೀಕರಿಸಿ, ಅಧ್ಯಾತ್ಮ ಯಜ್ಞ ರೂಪವಾಗಿ ಸಮರ್ಪಿ ಸುವ ಮಂತ್ರಾಧ್ಯಾತ್ಮ ಯಜ್ಞ ವಿವರ ಜ್ಞಾನಿಗಳಾಧಿಕಾರವೆಂದು ಅಪ್ಪಣೆ ಕೊಡಿಸು ತ್ತಾರೆ.

**ಮೂಲ :**

**ಗೋಳಕವೆ ಕುಂಡಾಗ್ನಿ ಕರಣವು ।**
**ಮೇಲೊದಗಿ ಬಹ ವಿಷಯ ।**
**ಸಮಿಧೆಯು ಗಾಳಿ ಯತ್ನವು ಕಾಮ ಧೂಮವು ಸನ್ನಿಧಾನಾರ್ಚಿ॥**
**ಮೇಳನವೆ ಪ್ರಜ್ವಾಲೆ ಕಿಡಿಗಳು ।**
**ತೂಳಿದಾನಂದಗಳು ತತ್ತ ।**
**ತ್ಕಾಲ ಮಾತುಗಳೆಲ್ಲ ಮಂತ್ರಾಧ್ಯಾತ್ಮ ಯಜ್ಞವಿದು ॥ ೧೮ ॥**

**ಪದ್ಯಾರ್ಥ :** ಯಜ್ಞಕ್ಕೆ ಅನುಕೂಲ ಕುಂಡ, ಅಗ್ನಿ, ಸಮಿಧೆ, ಯತ್ನ ಅಗ್ನಿ ಪುಟವಾಗಲು ಬೀಸುವಿಕೆ, ಧೂಮ, ಅರ್ಚಿ, ವಿಸ್ಫುಲಿಂಗ–ಕಿಡಿ, ಅವ ಧಾನಗಳು ಹಾಕಲಿಕ್ಕೆ ಮಂತ್ರಗಳು ಅವಶ್ಯ. ಋತ್ವಿಕ, ಹೋತಾ, ಹೋಮ ಸ್ವೀಕಾರ ಮಾಡುವ ಯಜ್ಞ ಭೋಕ್ತಾ ಇವೆಲ್ಲ, ಅಧ್ಯಾತ್ಮ ಯಜ್ಞದಲ್ಲಿ ಸಮನ್ವಯಿಸಿ ಬೃಹದಾರಣ್ಯ ಉಪನಿಷತ್ ರಹಸ್ಯವನ್ನು ದಾಸರಾಯರು ವಿವರಿಸುತ್ತಾರೆ.

ಗೋಳಕವೆ=ಕುಂಡ-ಆಯಾ ಇಂದ್ರಿಯಗಳಿಗೆ ಆಶ್ರಯವಾದ ಕಣ್ಣು,

ಕಿವಿ ಮೊದಲಾದವುಗಳೇ ಯಜ್ಞಕುಂಡ. ಅಗ್ನಿ=ಕರಣವು-ಇಂದ್ರಿಯಗಳೇ ತೇಜೋರೂಪ ಅಗ್ನಿ. ಮೇಲೊದಗಿ ಬಹ ವಿಷಯ ಸಮಿಧಿಯು=ಇಂದ್ರಿಯ ಜನ್ಯ ವಿಷಯ, ಶ್ರೋತ್ರ ರೂಪ, ಶಬ್ದಾದಿ ವಿಷಯಗಳೇ ಸಮಿಧೆ-ಕಟ್ಟಿಗೆ. ಗಾಳಿ=ಯತ್ನವು-ವಿಷಯೇಚ್ಛಾ ಪ್ರಯತ್ನವೇ ಗಾಳಿ. ಕಾಮ=ಧೂಮ-ವಿಷಯೇಚ್ಛಾ ಭೋಗ ಆಶೆಯೇ=ಹೊಗೆ. ಸನ್ನಿಧಾನವೆ=ಅರ್ಚಿ=ಕಾಮ ವಿಷಯುಕ್ಕೂ ಭೋಗ್ಯ ವಸ್ತು ಸನ್ನಿಧಾನ, ಬೆಂಕಿಯ ಉರಿಯು. ಮೇಳನವೆ=ಪ್ರಜ್ವಾಲೆ, ವಿಷಯಗಳಿಗೂ ಭೋಗ್ಯ ವಸ್ತುಗಳಿಗೂ ಸಮ್ಮೇಳ ಲನವೇ ವಿಶೇಷವಾದ ಅಗ್ನಿಜ್ವಾಲಾ. ತೂಳಿದಾನಂದಗಳು=ಕಿಡಿಗಳು= ವಿಷಯ ಭೋಗದಿಂದ ಆನಂದವಾಗುವಿಕೆ, ಬೆಂಕಿ ಕಿಡಿಗಳು. ತತ್ತತ್ಕಾಲ ಮಾತು ಮಂತ್ರಗಳೆಲ್ಲ=ಮಂತ್ರಗಳು=ವಿಷಯ ಸಂಭೋಗ ಕಾಲದಲ್ಲಿ ಆಡತಕ್ಕ ಮಾತುಗಳು ಮಂತ್ರ. ಇದೆ ಅಧ್ಯಾತ್ಮ ಯಜ್ಞ=ಇದೇ ಈ ಪ್ರಕಾರ ದೇಹೇಂದ್ರಿಯಾದಿ ವಿಷಯ ಭೋಗಗಳನ್ನು ಬಿಂಬನಾದ ಶ್ರೀಹರಿಗೆ ಅರ್ಪಿಸುವದೇ ಅಧ್ಯಾತ್ಮ ಯಜ್ಞವೆಂದು ಕರೆಸುತ್ತದೆ. ಇದು ಕುಂಡ ಅಗ್ನಿ ಮೊದಲಾದವು ಅಮುಖ್ಯ ಹೆಸರುಗಳುಳ್ಳವು. ಅಗ್ನಿ ಮೊದಲಾದವುಗಳ ಅಂತರ್ಗತ ಶ್ರೀಹರಿಯೇ ನಿಯಾಮಕನಾದುದರಿಂದ ಅಗ್ನ್ಯಾದಿಗಳ ಶಬ್ದಗಳು ಪರಮ ಮುಖ್ಯ ವೃತ್ತಿಯಿಂದ ಶ್ರೀಹರಿಯನ್ನೇ ಹೇಳುತ್ತವೆ. ಶ್ರೀಹರಿಯೂ ಸರ್ವರನ್ನೂ ಸಂಹರಿಸುವುದರಿಂದ ಅಗ್ನಿ ಎಂದೂ, ತಾನೇ ತನ್ನ ಅವಯವ ವಾಗಿ ಹೊಂದಲ್ಪಡುವದರಿಂದ ಅಂಗಾರ ಎಂದೂ, ಸರ್ವರಿಂದ ಪೂಜಿಸಿ ಕೊಳ್ಳುವದರಿಂದ ಅರ್ಚಿ ಎಂದೂ, ಬಹು ರೀತಿಯಾಗಿ ಪ್ರಕಾಶಿಸುವದರಿಂದ, ಅಥವಾ ಸರ್ವ ದೇಶಗಳಲ್ಲಿದ್ದ ಪ್ರಯುಕ್ತ, ವಿಸ್ಫುಲಿಂಗ ಎಂದೂ, ಚನ್ನಾಗಿ ಪ್ರಸನ್ನನಾದ ಪ್ರಯುಕ್ತ ಸರ್ವೋತ್ತಮನಾಗಿರುವದರಿಂದ **ಸಮಿಂಧ** ಎಂದೂ ಕರೆಸುತ್ತಾನೆ. ಹೀಗೆ ಬೃ. ಉ. ಅಧ್ಯಾಯ ೮, ಭಾಷ್ಯದಲ್ಲಿ ಶ್ರೀ ಸರ್ವಜ್ಞರ ಉಕ್ತಿಯಂತೆ ಸಕಲ ಶಬ್ದ ವಾಚ್ಯನಾದ ಶ್ರೀಹರಿಯಲ್ಲೇ ಯಜ್ಞತ್ವೇನ ಸಮರ್ಪಿಸುವುದೇ ಅಧ್ಯಾತ್ಮ ಯಜ್ಞ.

ಈ ಅಧ್ಯಾತ್ಮ ಯಜ್ಞಾಧಿಕಾರಿಗಳು, ಸ್ವರೂಪತಃ ಬ್ರಾಹ್ಮಣ ಸ್ವಭಾವ ಉಳ್ಳ ಬ್ರಹ್ಮನು, ಮರೀಚ್ಯಾದಿಗಳು ಅಧಿಕಾರಿಗಳು ಅಂದರೆ ಸಾಮಾನ್ಯ

ವಾಗಿ ಬ್ರಾಹ್ಮಣ ಧರ್ಮ ಪ್ರವರ್ತಕನಾದ ವಾಸುದೇವನ ವಿಭೂತಿಗಳನ್ನು ಹೇಳಿದ್ದಾರೆ. ನಿಜವಾದ ತತ್ವವಿದು.

ಭಾವಸೂಚನ : ಅಧ್ಯಾತ್ಮ ಯಜ್ಞಮಾಹ ॥ ಗೋಳಕೇತಿ, ಊಳಿಗಾ=ಸೇವಕ ॥ ೧೮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಗೋಲಕೇತಿ ॥ ಇಂದ್ರಿಯಾಣಾಂ ಕರಣಾನಿ ಅಗ್ನಯಃ ॥ ಸನ್ನಿಧಾನಂ ಸನ್ನಿಕರ್ಷಃ । ತೂಳಿದಾ=ತೂರಿಡ. ಮಾತು–ಹರಿವಾಚಕಾರ್ಣರೂಪತ್ವಾತ್ ॥ ೧೮ ॥

## ಕನ್ನಡಾರ್ಥ

ಕರಣಗಳು ಇಂದ್ರಿಯಗಳು ಅಗ್ನಿ; ಇಂದ್ರಿಯ ಗೋಲಕವು ಕುಂಡ; ಹೀಗೆ ವಿಭಜಿಸಿ ಅರ್ಥ ತಿಳಿಯಬೇಕು. ಸನ್ನಿಧಾನ ಅಂದರೆ ಸನ್ನಿಕರ್ಷ–ಅತಿಶಯ ನಿಕಟ ಸಂಬಂಧ ತೂಳಿದ=ತೂರಿದ, ವಿಷಯ ಭೋಗದಿಂದಾಗುವ ಆನಂದಗಳು ಕಿಡಿಗಳು. ತತ್ತತ್ಕಾಲದಲ್ಲಿ ನಡೆಯುವ ಮಾತುಗಳು ಮಂತ್ರಗಳು; ಯಾಕಂದರೆ ಅವು ಶ್ರೀ ಹರಿವಾಚಕಗಳೇ ಮುಖ್ಯತಃ ಆಗಿರುತ್ತವೆ ॥ ೧೮ ॥

**ಅವತರಣಿಕಾ :** ಈ ಶರೀರವೇ ಬಿಂಬನಾದ ಶ್ರೀ ರಾಜಾಧಿರಾಜಗೆ, ಪಟ್ಟಣ ರಾಜಧಾನಿ ಮುಖ್ಯ ನಗರ. ಆ ಪಟ್ಟಣದಲ್ಲಿದ್ದ ಎಲ್ಲ ಭಿನ್ನ ವಸ್ತುಗಳಿಗೂ ಶರೀರದಲ್ಲಿದ್ದ ಎಲ್ಲ ಅವಯವಗಳಿಗೂ, ಸಮನ್ವಯಿಸಿ ಹರಿಗೆ ಸಮರ್ಪಿಸುವ ಕ್ರಮವನ್ನು ಪದ್ಯ ೧೯ ರಿಂದ ೨೩ ಪದ್ಯದವರೆಗೆ ವಿವರಿಸುತ್ತಾರೆ.

ಮೂಲ :

**ಮಧುವಿರೋಧಿಯ ಪಟ್ಟಣಕೆ ಪೂ ।**
**ರ್ವದ ಕವಾಟಗಳಕ್ಷಿ ನಾಶಿಕ ।**
**ವದನ ಶ್ರೋತೃಗಳೆರಡು ದಕ್ಷಿಣ ಉತ್ತರ ದ್ವಾರ ॥**
**ಗುದ ಉಪಸ್ಥಗಳೆರಡು ಪಶ್ಚಿಮ ।**
**ಕದಗಳೆನಿಪವು ಷಟ್ಸರೋಜವೆ ।**
**ಸದನ ಹೃದಯವೆ ಮಂಟಪ ತ್ರಿಗುಣಂಗಳೇ ಕಲಶ ॥ ೧೯ ॥**

**ಪದ್ಯಾರ್ಥ:** ಮಧು ವಿರೋಧಿಯ ಪಟ್ಟಣಕೆ=ಮಧು ನಾಮಕ ದೈತ್ಯನನ್ನು ಸಂಹಾರ ಮಾಡಿದ, ಶ್ರೀ ಮಧು ಸೂದನನಾದ ಶ್ರೀಹರಿಯ ಪಟ್ಟಣವು, ಈ ದಿವ್ಯ ದೇಹ=ಈ ದೇಹಕ್ಕೆ, ಪೂರ್ವದ ಕವಾಟಗಳು=ಪೂರ್ವ ದಿಕ್ಕಿಗೆ ಇರುವ ಬಾಗಿಲುಗಳು, ಅಕ್ಷಿ=ಕಣ್ಣುಗಳು, ನಾಸಿಕ=ಮೂಗು, ವದನ=ಬಾಯಿ-ಮುಖ, ಇವು ಪಟ್ಟಣದ ಪೂರ್ವ ದ್ವಾರಗಳು. ಶ್ರೋತ್ರ ಗಳೆರಡು=ಎರಡು ಕಿವಿ. ಬಲ ಕಿವಿ=ದಕ್ಷಿಣ ಬಾಗಿಲು, ಎಡದ ಕಿವಿ= ಉತ್ತರಕ್ಕಿರುವ ದ್ವಾರಗಳು, ಗುದ ಉಪಸ್ಥಗಳೆರಡು=ಪಾಯ್ವೇಂದ್ರಿಯ, ಮಲದ್ವಾರ, ಉಪಸ್ಥ ಗುಹ್ಯೇಂದ್ರಿಯ. ಇವೆರಡು ಪಶ್ಚಿಮದಲ್ಲಿ ಇರುವ ಕದಗಳು=ಬಾಗಿಲುಗಳು ಎನಿಸುತ್ತವೆ. ಇಂಥ ಪಟ್ಟಣಾಖ್ಯ ದೇಹದಲ್ಲಿರುವ, ಷಟ್ ಸರೋಜ, ಆರು ಕಮಲಗಳು, ಶ್ರೀಹರಿಗೆ ಸದನ=ಆವಾಸಸ್ಥಾನ ಮನೆ, ಹೃದಯವೆ ಮಂಟಪ=ಹೃದಯಾಷ್ಟದಳ ಕಮಲವೆ ಶ್ರೀಹರಿಗೆ ಕೂಡಲು ಮಂಟಪ=ಅಲಂಕರಿಸಿದ ವೇದಿಕೆ ಗದ್ದುಗೆ, ತ್ರಿಗುಣಂಗಳೇ=ಸತ್ವ ರಜ ತಮೋ ಈ ಮೂರು ಗುಣಗಳು, ಕಲಶ-ಪಟ್ಟಣಕ್ಕೆ ಒಪ್ಪುವ ಗೋಪು ರದ ಮೇಲೆ ಇಡುವ ಕಳಸವು. ಈ ಪ್ರಕಾರ ಧ್ಯಾನೋಪಾಸನೆ ಮಾಡುವ ದೆಂದು ಶ್ರೀ ವಿಜಯರಾಯರು "ಹೃತ್ಕಮಲ ಮಧ್ಯದಲ್ಲಿ ಪೂಳೆವ ವೈಚಿತ್ರ್ಯ" ವೆಂಬ ಸುಳಾದಿ ೨೯ ತ್ರಿವಿಡಿತಾಳ "ತನುವೆ ನಿಕೇತನ. ಶಿರವೆ ಉತ್ತಮ ಕಳಸ । ಅನಿಲಾ ಬರುವ ರಂಧ್ರಯುಗಳ ಶ್ರವಣಗಳು । ಮಿನಗುತಿ ಮಿನ ಗುತಿಪ್ಪ ಪೂರ್ವ ದ್ವಾರ । ವದನವೆ ರ । ಕ್ಷಣ ದ್ವಯ ನಾಸ ರಂಧ್ರ ಲೋ । ಚನವೆರಡೆ ಸುರದೀಪ । ನಾಲಿಗೆಂಬುದು ಘಂಟೆ । ವನಜಕರಗಳೆ ಬೀಸುವ ಚಾಮರ ಚೌರ । ಅನುವಾದ ಹೃದಯವೇ ಮಂಟಪವನೆ ರಚಿಸಿ । ಘನ ಕಳೆಯು ಕಾಂತಿ-ಮಕರ ತೋರಣ ತಳಿಗೆ ಅನುಮಪ ಬುದ್ಧಿ ಎಂಬೋದೆ ಗದ್ದುಗೆ ಮಾಡಿ । ಎನ ಬಿಂಬ ಮೂರುತಿ ವಿಜಯ ವಿಠ್ಠಲರೇಯನ । ಮನ ವೆಂಬೋ ಭಟನಟ್ಟಿ ಕರೆಸಿ ನಿಲಿಸಿನೋಳ್ಪೆ ॥ ೫ ॥ ಉಪಾಸನಾಭಾಗ ಸು. ಪುಟ ೯೯.

**ಭಾವಾಸೂಚನ:** ಮಧುವಿರೋಧೇತಿ ಅತ್ರ ಪ್ರಮಾಣಂ। ಚತುರ್ಥ ಪುರಂಜನೋಪಾಖ್ಯಾನಮೇವ ॥ ತದುಕ್ತಮಧ್ಯಾತ್ಮ ಮಾಲಿಕಾಯಾಂ । ಪಟ್ಟಣಕೆ ನಾಲ್ಕು ದ್ವಾರಗಳು. ಪ್ರಥಮದ್ವಾರೇ ಮಹಾಲಕ್ಷ್ಮೀಃ ।

ದ್ವಿತೀಯೆ ಭಾರತೀ । ತೃತೀಯೇ ಸೂರ್ಯಃ । ಚತುರ್ಥೇ ಜಯವಿಜಯ ವಿತಿ ॥ ಷಟ್ ಸರೋಜೇತಿ ॥ ಉಕ್ತಂ ಚ ತಂತ್ರಸಾರ ಟೀಕಾಯಾಂ । ಮೂಲಾಧಾರೆ ಚತುರ್ದಳಂ । ನಾಭೌ ಷಟ್‌ದಳಂ । ಹೃದಯೇ ಅಷ್ಟದಳಂ। ಇಂದ್ರಯೋನಿ ನಾಮಕ ಕಂಠ ಪುರೋಭಾಗ ಪ್ರದೇಶ ॥ ಅಲ್ಲೆ ದ್ವಿದಳಂ । ಮೂರ್ಧ್ನಿ=ಭ್ರೂಮಧ್ಯೇ ಚತುರ್ದಳಂ ಮೂರ್ಧ್ನೀ ದ್ವಾದಶದಳಂ ಜ್ಞೇಯ ಮಿತಿ ॥ ೧೯ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಮಧು" ಇತಿ॥ ಏಕೋನ ತ್ರಿಂಶಾಧ್ಯಾಯ ಪುರಂಜನೋಪಾಖ್ಯಾನೇ। "ಅಕ್ಷಿಣೀ ನಾಸಿಕೇ ಅಸ್ಯಂ ಮುಖಂ ಶಿಶ್ನಗುದೌ" ಇತಿ ॥ ಅಕ್ಷಿಣೀ ನಾಸಿಕೇ ಆಸ್ಯಮ್ ಇತಿ ಪಂಚ ಪುರಸ್ಕೃತಾಃ ॥ ದಕ್ಷಿಣಾ ದಕ್ಷಿಣಃ ಕರ್ಣಃ ಉತ್ತರಾಚೋತ್ತರಃ ಸ್ಮೃತಃ ॥ ಪಶ್ಚಿಮೇ ಇತ್ಯಧೋ ದ್ವಾರೋ ಗುದಶಿಶ್ನಾ ವಿಹೋದಿತೇ॥ ದದರ್ಶ ನವಭಿಃ ದ್ವಾರೈಃ ಪುರೀಂ ಲಕ್ಷಿತ ಲಕ್ಷಣಾಮ್ ॥ ಪ್ರಾಕಾರೋಪವನಾಟ್ಟಾಲ ಪರಿಖೈರುಚ್ಚತೋರಣೈಃ ॥ ತಾತ್ಪರ್ಯೇ "ಪ್ರತ್ಯೇಕಂ ಯತ್ತು ಯುಜ್ಯೇತ ತದುನ್ನೇಯಮ್ ॥ ಇತಿ ಚೋಕ್ತಮ್ ॥ ೧೯ ॥

## ಕನ್ನಡಾರ್ಥ

"ಮಧು ವಿರೋಧಿಯ ಪಟ್ಟಣಕೆ" ಎಂದು ಮೂಲಕಾರರು ಹೇಳಿದುದಕ್ಕೆ ಶ್ರೀಮದ್ಭಾಗವತದ ಸಮ್ಮತಿಯನ್ನು ವ್ಯಾಖ್ಯಾನಕಾರರು ತೋರಿಸುತ್ತಾರೆ. ಭಾಗವತ ಚತುರ್ಥಸ್ಕಂಧ ೨೯ನೆಯ ಅಧ್ಯಾಯದಲ್ಲಿ ಪ್ರಾಚೀನ ಬರ್ಹಿ ಎಂದು ಬಿರುದು ಪಡೆದ, "ಬರ್ಹಿಷ್ಮಾನ್" ಎಂಬ ರಾಜನಿಗೆ ನಾರದರು ಪುರಂಜನನ ಉಪಾಖ್ಯಾನವನ್ನು ನಿರೂಪಿಸಿರುತ್ತಾರೆ. ಪುರಂಜನನು ಮನುಷ್ಯ ಜೀವಾಭಿಮಾನಿ ಮತ್ತು ಕ್ಷತ್ರಜಾತಿಯವನು. ಅವನದೂ ಇತಿಹಾಸ; ಮತ್ತು ಅಧ್ಯಾತ್ಮಕ್ಕೆ ಅನ್ವಯಿಸಿದರೆ ಜೀವನಿಗೂ ಅನ್ವಯಿಸುತ್ತದೆ. ಜೀವನೇ ಪುರಂಜನನು. ಅವನು ಸ್ರಕ್‌ಚಂದನ ವನಿತಾ ಮುಂತಾದ ವಿಷಯಗಳನ್ನು ಉಪಭೋಗಿಸಲು ಈ ಶರೀರವೆಂಬ ಪಟ್ಟಣಕ್ಕೆ ಬರುತ್ತಾನೆ. ಅದಕ್ಕೆ ೯ ದ್ವಾರಗಳು. ೨ ಕಣ್ಣು, ೨ ಮೂಗು, ಬಾಯಿ ೧. ಹೀಗೆ ೫ ಪೂರ್ವದ ಬಾಗಿಲುಗಳು. ಬಲಗಿವಿಯು ಬಲ ಬಾಗಿಲು-ಎಡಗಿವಿಯು ಎಡಬಾಗಿಲು ಆಗಿರುತ್ತದೆ. ಉಪಸ್ಥ ಮತ್ತು ಗುದಗಳು ಎರಡು ಪಶ್ಚಿಮ

(ಹಿಂದಿನ) ಬಾಗಿಲಗಳು. ಇಂಥ ಲಕ್ಷಣಗಳಿಂದ ಭೂಷಿತವಾದ ಪುರವನ್ನು ನೋಡಿದನು. ಪ್ರಾಕಾರ ಉಪವನ ಅಟ್ಟಾಲಿಕಾ ಪರಿಖ-ಉಚ್ಚತೋರಣ ಗಳಿಂದ ಅಲಂಕೃತವಾದುದು ಆ ಪುರವು" ಎಂದು ಮೂಲ ಭಾಗವತದಲ್ಲಿ ಹೇಳಲಾಗಿರುತ್ತದೆ. ತಾತ್ಪರ್ಯದಲ್ಲಿಯೂ ಶ್ರೀಮದಾಚಾರ್ಯರು "ಪ್ರತ್ಯೇಕ ವಾಗಿ ಅನ್ವಯಿಸುವದನ್ನು ಅವರವರು ತಮತಮಗೆ ಅನ್ವಯಿಸಿಕೊಳ್ಳಬೇಕು" ಎಂದು ಹೇಳಿರುತ್ತಾರೆ || ೧೯ ||

ಅವತರಣಿಕಾ : "ಸಪ್ತಾವರಣ ದೇಹ" ಎಂಬುವ ಶ್ರೀ ವಿಜಯದಾಸರ ಸುಳಾದಿ ಶರೀರವೆಂಬೊ ಪಟ್ಟಣಕೆ ಯೇಳು ಸುತ್ತಿನ ಕೋಟೆ, ಸಣ್ಣ ಪುಟ್ಟ ಮಾರ್ಗ, ರಾಜ ಬೀದಿ ಅಲ್ಲಲ್ಲಿ ಇರುವ ಮದ್ದಾನೆಗಳು. ವನಂಗಳು. ಪಟ್ಟಣ ರಕ್ಷಣ ಮಾಡುವ ಕಾವಲುಗಾರರು ದೇಹದಲ್ಲಿರುವರಾರೆಂಬುದನ್ನು ತಿಳಿಸುತ್ತಾರೆ.

ಮೂಲ :

**ಧಾತುಗಳೆ ಸಪ್ತಾವರಣ ಉಪ ।**
**ವೀಥಿಗಳೆ ನಾಡಿಗಳು ಮದಗಳು ।**
**ಯೂಥಪಗಳು ಸುಷುಮ್ನ ನಾಡಿಯೆ ರಾಜ ಪಂಥಾನ ॥**
**ಈತನೂರುಹಗಳೆ ವನಂಗಳು ।**
**ಮಾತರಿಶ್ವನು ಪಂಚರೂಪದಿ ।**
**ಪಾತಕಿಗಳೆಂಬರಿಗಳನು ಸಂಹರಿಪ ತಳವಾರ ॥ ೨೦ ॥**

**ಪದ್ಯಾರ್ಥ :** ಧಾತುಗಳೇ=ದೇಹಕ್ಕೆ ಸಪ್ತಧಾತುಗಳು. ತ್ವಕ್ ಚರ್ಮ ಮಾಂಸ ರುಧಿರ ಮೇದಸ್ಸು ಮಜ್ಜಾ ಅಸ್ಥಿ ಈ ಪ್ರಕಾರಗಳು. ಇಲ್ಲಿರುವ ಶ್ರೀಹರಿ ರೂಪಗಳಿಗೂ ಬಿಂಬೈಕ್ಯ, ಉಪವೀಥಿಗಳು=ಉಪ ಒಳ ದಾರಿ ಚಿಕ್ಕ ಸಮೀಪದ ದಾರಿಗಳೇ ದೇಹವೆಂಬ ಪಟ್ಟಣಕ್ಕೆ ನಾಡಿಗಳು. ಮದಗಳು=ಶರೀರದ ಅಷ್ಟಮದಗಳೇ ಪಟ್ಟಣದಲ್ಲಿಪ್ಪ ಯೂಥಪಗಳು. ಅಷ್ಟ ದಿಕ್ಕಿನಲ್ಲಿರುವ ಮದ್ದಾನೆಗಳು. ಮುಖ್ಯವಾದ ಸುಷುಮ್ನಾವೆಂಬುವ ನಾಡಿಯೇ, ರಾಜಪಂಥಾನ=ರಾಜಮಾರ್ಗ ದೊಡ್ಡ ಹಾದಿ. ದೇಹದಲ್ಲಿರುವ ತನುರುಹ=ಮೈಗೂದಲುಗಳೇ ಪಟ್ಟಣದಲ್ಲಿ ಅಲ್ಲಲ್ಲಿ ಶೃಂಗಾರವಾಗಿರುವ ವನಗಳು. ಪಟ್ಟಣದ ಕಾವುಲಗಾರರು ಇಪ್ಪಂತೆ, ಈ ದೇಹಾಖ್ಯ ಪಟ್ಟಣದಲ್ಲಿ

ರಾತ್ರಿ ಚೋರಾದಿ ಉಪದ್ರವಗಳಿಂದ ರಕ್ಷಿಸಲು, ಮಾತರಿಶ್ವ=ಮಾತರಿಶ್ವದಿತಿ ಮಾತರಿಶ್ವ=ಅಂತರಿಕ್ಷದಲ್ಲಿ ಚರಿಸುವ ಗಾಳಿ, ವಾಯು=ವಾಯುದೇವರು, ಪಂಚರೂಪದಿ ಪ್ರಾಣ ಅಪಾನ ವ್ಯಾನ ಉದಾನ ಸಮಾನ ಈ ಐದು ವಾಯು ರೂಪಗಳಿಂದ, ದೇಹಾಖ್ಯ=ಪಟ್ಟಣದಲ್ಲಿರುವ, ಪೂರ್ವ ದಕ್ಷಿಣ ಪಶ್ಚಿಮ ಉತ್ತರ ಊರ್ಧ್ವದ್ವಾರ ಮೇಲ್ಭಾಗದಿ ತಳವಾರ=ಕಾವುಲಗಾರನಾಗಿದ್ದು, ಪಾತಕಿಗಳೆಂಬ ಅರಿಗಳನ್ನು ದೇಹಕ್ಕೆ ಉಪದ್ರವವನ್ನು ಕೊಟ್ಟು ಬಾಧೆ ಬಡಿಪ, ದೈತ್ಯಾದಿಗಳನ್ನು ಸಂಹರಿಪ, ನಿಗ್ರಹ ಮಾಡುತ್ತ ರಕ್ಷಿಸುತ್ತಿರುವನು. ಸರ್ವದಾ ರಾಜ ಪಂಥಾನದಲ್ಲಿ ಚೋರರು ಬಾರದಂತೆ ಸುಷುಮ್ನಾ ನಾಡಿ ನಾಡಿಗತ ಕಮಲಗಳಲ್ಲಿ ಘಾತಕಿಗಳಾದ ದುಷ್ಟರಾದ ದೈತ್ಯರನ್ನು ಪ್ರವೇಶ ಮಾಡದಂತೆ ಆ ದುಷ್ಟರನ್ನು ನಿಗ್ರಹಿಸಿ ಧ್ಯಾನೋಪಾಸನಕ್ಕೆ ಮುಖ್ಯ ಪ್ರಾಣ ದೇವರ ಪ್ರಸಾದ ಬೇಕೆಂಬುದು ಕರುಣಾಳುಗಳಾದ ದಾಸಾರ್ಯರು ಸೂಚಿಸು ತ್ತಾರೆ. ಸುಷುಮ್ನಾ ನಾಡಿಯಲ್ಲಿ ದೈತ್ಯರ ಪ್ರವೇಶವಿಲ್ಲ.

**ಭಾವಸೂಚನ:** ಧಾತುಗಳೇತಿ=ತ್ವಗಾದಿಗಳು ಉಕ್ತ ಮಧ್ಯಾತ್ಮ ಮಾಲಿಕಾಯಾಂ ॥ ತ್ವಕ್ ಚರ್ಮ ಮಾಂಸ ರುಧಿರ ಮೇದೋ ಮಜ್ಜಾಸ್ಥಿ, ನಾಮಕ ಯೇಳು ಧಾತುಗಳು ಕ್ರಮದಿಂದ ಒಂದರೊಳು ಒಂದು ಅವೆ. ರೋಮ್ಣಿ=ಹಿಂಕಾರನಾಮಕ ಪ್ರದ್ಯುಮ್ನಃ। ತ್ವಚಿ ಪ್ರಸ್ತಾವಾಖ್ಯಾs ನಿರುದ್ಧಃ। ಚರ್ಮಣಿ ಪ್ರತಿಹಾರಾಖ್ಯ ಸಂಕರ್ಷಣಃ। ಮಾಂಸೇ ಲಕ್ಷ್ಮೀ ಪತಿಃ। ರುಧಿರೆ ನಿಧನಃ। ಮೇದಸಿ ವಷಟ್ಕಾರಃ। ಮಜ್ಜೇ ಮೂಲ ನಾರಾ ಯಣಃ। ಅಸ್ಥಿಃ ಉಪೇಂದ್ರ। ಅಸ್ಥಿಷು ರೂಪಾಣಾಂ ತ್ರಿಶತಂ ಮಧ್ಯೆ ಷಷ್ಟ್ಯುತ್ತರ ತ್ರಿಂಶತ ಮಿತಿ। ಉಪವೀಥಿ ಓಣಿಗಳು. ಪಂಚೇತಿ=ಪ್ರಾಣಾದಿ ಗಳು, ಏತತ್ ಪ್ರಪಂಚಿತಂ ಪೂರ್ವ ಗ್ರಂಥಾ ॥ ೨೦ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಪ್ರಾಕಾರೇತ್ಯಾದೀನಾಂ ಅಧ್ಯಾತ್ಮಾಂತೈಃ ಶಬ್ದೈಃ ಅಸ್ಥಿನಾಡ್ಯಾ ದಯಃ ಯಥಾನುಕೂಲಂ ಲಕ್ಷಣೀಯಾಃ ಇತಿ ವಿಜಯಧ್ವಜೋದಿತ ಮಾಹ ॥ ಧಾತು ॥ ಇತಿ ॥ ಆವರಣಾನಿ ಪ್ರಾಕಾರಾಃ। ಸಭಾ ಚತ್ವರ ರಥ್ಯಾಭಿಃ ಇತ್ಯುಕ್ತೇಃ ಉಪವೀಥಿಃ ॥ ಚತ್ವರಂ ನಾಡೀ ಸಂಧಿಃ। ಯೂಥಪಾಃ ಸೇನಾಪತಯಃ ॥ ರಾಜೇತಿ ॥ ರಥ್ಯಾ ಬ್ರಹ್ಮನಾಡೀ।

ಪುರ್ಯಾಸ್ತು ಬಾಹ್ಯೋಪವನೇ-ಉಪವನಂ ರೋಮಾದಿ । ತಳವಾರಃ ಖಡ್ಗ ಹಸ್ತಃ । ಪಂಚಶೀರ್ಷಾಹಿನಾ ಗುಪ್ತಾಂ ಪ್ರತೀಹಾರೇಣ ಸರ್ವತಃ ಇತಿ ॥ ಗುರು ಚರಣಾಸ್ತು ವೈಕುಂಠವರ್ಣನೇ ॥ "ಒಪ್ಪುವ ಮನುಷ್ಯ ಎಂಬೋ ಬ್ರಹ್ಮಪುರಕ್ಕೊಂಬತ್ತು ದ್ವಾರ ಗಡ ॥ ಆ ಪ್ರತಿ ಮಧ್ಯೇಕ ನಾಡೀ ರಾಜ ಬೀದೀ ಷಟ್ಪದ್ಮಾ ಆದರೋಳು, ಬಗೆಬಗೆಯ ಸರ್ಪಾಶಾಯಿಗೆ ವಾಲಗ ಸೇವೆ ಗಡಾ॥ ಅಪ್ರಿಯವಾದ ದುಃಖವೆಂಬೋ ಹುಲಿಯಾಹೇರು ಅಲ್ಪಜೀವರ ಪಸಾರಾ ಅಂಗಡಿ ಗಡಾ ॥ ಬೀದಿ ಬೀದಿಯಲ್ಲಿ ಇರಳು ಹಗಲು ಕಾದು ಕೊಂಡಿಪ್ಪರು ತಳವಾರ ರೈವರು ॥ ಮಾಧವಗತಿ ಪ್ರಿಯರು ಯಂದ್ಯೆಂದೂ ಹಾದಿಯಾಗೊಡರು ದೈತ್ಯಾಚೋರರಿಗೆ ॥ ಅಧಿಕಾರ ಮಂಡಲಕಗ್ರೇಸರರು ಈ ಧರೆಯೊಳು ಹಯವದನನಾಳುಗಳು" ಇತಿ ॥ ೨೦ ॥

## ಕನ್ನಡಾರ್ಥ

"ಪ್ರಾಕಾರ ಮುಂತಾದ ಶಬ್ದಗಳಿಗೆ ಅಧ್ಯಾತ್ಮದವರೆಗಿನ ಶಬ್ದಗಳಿಂದ ಅಸ್ಥಿ, ನಾಡಿ, ಮುಂತಾದ ಅರ್ಥಗಳನ್ನು ಆಯಾ ಶಬ್ದಗಳಿಗೆ ಸಲ್ಲುವಂತೆ ಲಕ್ಷಣಾ ಮಾಡಿ ಹೇಳಬೇಕು" ಎಂದು ಶ್ರೀ ವಿಜಯಧ್ವಜರು ಹೇಳಿದಂತೆ ಹೇಳುತ್ತಾರೆ "ಧಾತುಗಳೆ" ಎಂಬ ಪದ್ಯದಿಂದ. ಆವರಣಗಳು=ಪ್ರಾಕಾರ ಗಳು. "ಸಭಾ ಚತ್ವರಥ್ಯಾಭಿಃ" ಎಂದು ಭಾಗವತದಲ್ಲಿ ಹೇಳಿರುವದರಿಂದ "ಉಪವೀಥಿಗಳು-ನಾಡಿಗಳು. ನಾಡಿಗಳ ಸಂಧಿಯು "ಚತ್ವರ"ವೆನಿಸುತ್ತದೆ. ಮದಗಳು ಸೇನಾಪತಿಗಳು. ಸುಷುಮ್ನಾನಾಡಿ-ಬ್ರಹ್ಮನಾಡಿ; ಇದು ರಾಜ ಬೀದಿ (ರಥ್ಯಾ). ಪುರದ ಹೊರಗಿನ ವನದಲ್ಲಿ ರೋಮಗಳೇ ಉಪವನ. "ಪಂಚಶೀರ್ಷಾಹಿನಾ ಗುಪ್ತಂ" ಎಂದು ಮೂಲ ಭಾಗವತದಲ್ಲಿ ಹೇಳಿದಂತೆ. ಪ್ರಾಣಾದಿ ಪಂಚರೂಪೀ ಮುಖ್ಯ ಪ್ರಾಣನು ಖಡ್ಗ ಹಸ್ತದಿಂದ ಇರುವ ಪ್ರತಿಹಾರನು (ದ್ವಾರ ರಕ್ಷಕನು). ಇದನ್ನೇ ಶ್ರೀ ವಾದಿರಾಜ ಗುರುರಾಜ ಪೂಜ್ಯಪಾದರು ವೈಕುಂಠ ವರ್ಣನೆಯಲ್ಲಿ ವಿಶದಪಡಿಸಿರುತ್ತಾರೆ. ಅದರ ಅರ್ಥವು ಸ್ಫುಟವೇ ಇದೆ.

**ಅವತರಣಿಕಾ :** ಇನ್ನು ಪಟ್ಟಣದ ದ್ವಾರಪಾಲಕರು. ಪದಾತಿ ಕಾಲಾಳು ಸೇವಕರು. ಪಟ್ಟಣಕ್ಕೆ ಬರುವ ವ್ಯಾಪಾರಕ್ಕೆ ಅನುಕೂಲವಾದ ಮೂಟೆಗಳು.

ವರ್ತಕರು, ವ್ಯಾಪಾರದಿಂದಾಗುವ ಲಾಭಾಂಶವಾದ ಕಪ್ಪಗಳನ್ನು ಕೊಂಬ ರಾಜನು ದೇಹವೆಂಬ ಪಟ್ಟಣದಲ್ಲಾರು ಎಂಬುದನ್ನು ವಿವರಿಸುತ್ತಾರೆ.

**ಮೂಲ :**

**ಇನ ಶಶಾಂಕಾದಿಗಳು ಲಕ್ಷ್ಮೀ ।**
**ವನಿತೆಯರಸನ ದ್ವಾರಪಾಲಕ ।**
**ರೆನಿಸುತಿಪ್ಪರು ಮನದ ವೃತ್ತಿಗಳೇ ಪದಾತಿಗಳು ॥**
**ಅನುಭವಿಪ ವಿಷಯಂಗಳೇ ಪ ।**
**ಟ್ಟಣಕೆ ಬಪ್ಪ ಪಸಾರಗಳು ಜೀ ।**
**ವನೆ ಸುವರ್ತಕ ಕಪ್ಪಗಳ ಕೈಕೊಂಬ ಹರಿ ತಾನು ॥ ೨೧ ॥**

**ಪದ್ಯಾರ್ಥ :** ಇನ-ಶಶಾಂಕಾದಿಗಳು=ಇನ-ಸೂರ್ಯ, ಬಲಗಣ್ಣಿನಲ್ಲಿರತಕ್ಕ ದೇವತೆ, ಶಶಾಂಕ=ಮೊಲವೇ ಚಿನ್ಹವುಳ್ಳ ಚಂದ್ರಾದಿಗಳು ಶ್ರೋತ್ರಾಭಿಮಾನಿಗಳು. ಇವರೇ ದ್ವಾರವನ್ನು ಕಾಯುವವರು. ಪ್ರತಿಯೊಂದು ಸೂಕ್ಷ್ಮ ವಿಷಯಗಳು, ಕಣ್ಣಿನಿಂದ ನೋಡುವ ಮತ್ತು ಕಿವಿಯಿಂದ ಕೇಳುವ ದುರ್ವಿಷಯಗಳನ್ನು ಬಾರಗೊಡದಂತೆ ಭಗವಂತನ ಕಡೆಗೆ ನೋಡುವುದು, ಭಗವಂತನ ಕಥೆಗಳನ್ನು ಕೇಳಿಸಲು ಈ ದ್ವಾರಪಾಲಕರ ಪ್ರಸಾದವೇ ಮುಖ್ಯ. ಮನದ ವೃತ್ತಿ=ಮನಸ್ಸಿನಿಂದ ಪುಟ್ಟುವ, ಜ್ಞಾನೇಚ್ಛಾ ಕ್ರಿಯಾಗಳು, ಅಥವಾ ಹೊಟ್ಟೆ ತುಂಬಿಕೊಳ್ಳಲು ಮಾಡುವ ವೃತ್ತಿ ವ್ಯಾಪಾರವೇ ಮನೋವೃತ್ತಿಗಳೇ, ಪದಾತಿಗಳು=ನಡೆದು ಹೋಗುವ ಸೈನಿಕ ಕಾಲಾಳುಗಳು, ಇಲ್ಲಿ-ವಿಷಯಂಗಳೆಂಬ ಮೂಟೆಗಳನ್ನು ಹೊರುವ ಸೇವಕರು. ಅನುಭವಿಪ ವಿಷಯಗಳೇ=ಪಟ್ಟಣದಲ್ಲಿಪ್ಪ ಬಾಜಾರಕ್ಕೆ ಬರುವ ಪಸಾರಗಳು=ಅಂಗಡಿಗೆ ಬರುವ ಪದಾರ್ಥಗಳ ಗಂಟುಗಳು. ಜೀವನೆ ಸುವರ್ತಕ=ವಿಷಯಗಳುಂಬ ಜೀವನೇ ನಿಶ್ಚಯವಾಗಿ, ವ್ಯಾಪಾರ ಮಾಡುವ ವರ್ತಕ ವ್ಯಾಪಾರಿ—ಈ ಜೀವಿಗಳಾದ ಈ ವ್ಯಾಪಾರಿಗಳಿಂದ, ಕಪ್ಪಗಳನ್ನು=ಕಾಣಿಕೆಗಳನ್ನು, ಶ್ರೀಹರಿಯು ರಾಜನು. ತಾನೆ ಕೈಕೊಂಬ=ಜೀವರುಗಳಿಂದ ಫಲರಾಹಿತ್ಯರಾಗಿ ಅರ್ಪಿಸಲ್ಪಟ್ಟ ಪುಣ್ಯ ಪಾಪಾದಿಗಳನ್ನು, ಶ್ರೀಹರಿ ಕೈಕೊಂಡು ಪ್ರೀತನಾಗಿ ಅವರವರ ಯೋಗ್ಯತೆಯಂತೆ ಫಲವೀವ ॥ ೨೧ ॥

**ಭಾವಾಸೂಚನ :** ಇನೇತಿ=ಸೂರ್ಯ, ವೃತ್ತಿಜ್ಞಾನೇಚ್ಛಾದಿಗಳು ॥

ಔಷಧ ಮೊದಲಾದ ಸರ್ವ ಪದಾರ್ಥದ ಅಂಗಡಿ, ಬರೋ ಪಸಾರ ಅನಿಸಿಕೊಂಬುವದು. ವರ್ತಕ=ವಣಿಕ, ರಾಜಾಲಕ್ಷ್ಮೀ ಹೃತ್ಕುಮುದದ್ವಿಜರಾಜ ॥ ಇದಷ್ಟೂ ಶ್ರೀಹರಿ ಪಟ್ಟಣ ವರ್ಣನ ॥ ೨೧ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಇನೇತಿ" । ತೇಷಾಂ ದ್ವಾರಪತ್ವಂ ಉದಿತಂ ಪ್ರಾಕ್ ॥ ಪದಾತಿ ಇತಿ ॥ "ಏಕೈಕ ಶತನಾಯಕೈಃ" ಇತಿ ಭಾಗವತ ಟೀಕಾಯಾಂ "ಅನಂತಾಃ ಪ್ರತ್ತಯಃ" ಇತ್ಯುಕ್ತೇಃ ॥ ಪಸಾರಾ-ಅಂಗಡಿ. ವರ್ತಕ-ವ್ಯವಹಾರಸ್ಥ. ತಪ್ಪ-ತರಃ (ತರುವ) ॥ ೨೧ ॥

**ಕನ್ನಡಾರ್ಥ**

"ಸೂರ್ಯ ಚಂದ್ರ ಮುಂತಾದವರು ಕಣ್ಣು ಮುಂತಾದ ದ್ವಾರಗಳನ್ನು ಸಂರಕ್ಷಿಸುವವರು" ಎಂಬುದು ಮೊದಲೇ ಉಕ್ತವಾಗಿರುತ್ತದೆ. "ಪದಾತಿ" ಇಲ್ಲಿ ಮನದ ವಿವಿಧಗಳಾದ ವೃತ್ತಿಗಳು, ಪರಿಣಾಮಗಳು, ಬೇರೆಬೇರೆಯಾಗಿರುವ ಅವಸ್ಥೆಯಲ್ಲಿರುವ ವಿಕಾರಗಳು ಪದಾತಿಗಳು. "ಏಕೈಕ ಶತನಾಯಕಾಃ" ಎಂದು ಭಾಗವತವನ್ನು ವಿವರಿಸುವಾಗ ಟೀಕಾದಲ್ಲಿ "ಮನದ ವೃತ್ತಿಗಳು ಅನಂತ" ವೆಂದು ಹೇಳಲಾಗಿರುತ್ತದೆ. ಪಸಾರ=ಅಂಗಡಿ. ವರ್ತಕ=ವ್ಯಾಪಾರಿ. ಕಪ್ಪ=ಕರವ ॥ ೨೧ ॥

**ಅವತರಣಿಕಾ:** ಇನ್ನು ಪಟ್ಟಣದಲ್ಲಿರುವ, ರಾಜರ ಅರಮನೆ, ಶೃಂಗಾರ ಹೇಗಿರಬೇಕೋ ಹಾಗೆಯೇ ದೇಹವೆಂಬ ಪಟ್ಟಣದಲ್ಲಿ ಬಿಂಬನಾದ ರಾಜಾಧಿರಾಜನು ಇರುವ ಅರಮನೆಯನ್ನು ಆಧ್ಯಾತ್ಮೋಪಾಸನ ರೀತ್ಯಾ ಸಮರ್ಪಿಸುವ ಕ್ರಮವನ್ನು ವಿವರಿಸುತ್ತಾರೆ.

**ಮೂಲ:**

ಉರು ಪರಾಕ್ರಮನರಮನೆಗೆ ದಶ ।
ಕರಣಗಳೆ ಕನ್ನಡಿಯು ಸಾಲುಗ ।
ಳರವಿದೂರನ ಸದ್ವಿಹಾರಕೆ ಚಿತ್ತ ಮಂಟಪವು ॥
ಮುರಳಿ ಬೀಸುವ ಶ್ವಾಸಗಳು ಚಾ ।
ಮರ ವಿಲಾಸಿನಿ ಬುದ್ಧಿ ದಾಮೋ ।
ದರಗೆ ಸಾಷ್ಟಾಂಗ ಪ್ರಣಾಮಗಳೆ ಸುಶಯನಗಳು ॥ ೨೨ ॥



**ಪದಾರ್ಥ :** ಉರುಪರಾಕ್ರಮ=ಉತ್ಕೃಷ್ಟವಾದ ಶ್ರೇಷ್ಠವಾದ ಬಲ ಶಾಲಿ ಪರಾಕ್ರಮಶಾಲಿಯಾದ ಶ್ರೀ ಬಿಂಬನು ಇರಲಿಕ್ಕೆ ಈ ದೇಹವೆಂಬುದೆ ಅರಮನೆ=ರಾಜಗೃಹ. ರಾಜಗೃಹಕ್ಕೆ ಶೋಭಿಸುವ ಕನ್ನಡಿಯ ಸಾಲುಗಳು. ಕನ್ನಡಿಯ ಮಹಲಿಗೆ, ಕನ್ನಡಿಯ ಸಾಲುಗಳು. ದಶಕರಣಗಳು= ಹತ್ತು ಇಂದ್ರಿಯಗಳು, ಪಂಚ ಜ್ಞಾನೇಂದ್ರಿಯ ಪಂಚ ಕರ್ಮೇಂದ್ರಿಯಗಳು, ಅಘವಿದೂರ=ದೋಷದೂರನಾದ ಶ್ರೀಹರಿಯ ಸದ್ವಿಹಾರ=ಸಮಿಚೀನವಾದ ಕ್ರೀಡೆಗೆ, ಚಿತ್ತ=ಚೇತಯೇತೇನ ಯೇತಿ ಚಿತ್=ಜ್ಞಾನಾದಿಗಳನ್ನು ವಿಕಸಿತ ಮಾಡುವದು, ಇತರ ಇಂದ್ರಿಯಗಳಿಗೆ ಪ್ರೇರಿಸುವದು ಚಿತ್ತ. ಮಂಟಪವು=ಮನಃ ಪ್ರಭೇದವಾದ ಚಿತ್ತವೇ ಶ್ರೀ ಬಿಂಬನಿಗೆ ಮಂಟಪ. ಮರಳಿ ಬೀಸುವ ಶ್ವಾಸಗಳು=ಪುನಃ ಪುನಃ ಬಿಡುವ ತೆಗೆದುಕೊಳ್ಳುವ ಶ್ವಾಸೋಚ್ಛ್ವಾಸಗಳು, ಹರಿಗೆ ಚಾಮರಗಳು, ವಿಲಾಸಿನಿ ಬುದ್ಧಿ=ವಿಲಾಸ= ಕ್ರೀಡಾಕ್ಕೆ ಯೋಗ್ಯಳಾದ ಸ್ತ್ರೀಯೆ-ಬುದ್ಧಿಯು, ಸ್ತ್ರೀ ವಾಚಕ, ನಿಶ್ಚಿತ ಜ್ಞಾನೇ ಬುದ್ಧಿ. ಶಯನಗಳೇ=ಮಲಗಿ ನಿದ್ರೆ ಮಾಡುವುದೇ, ದಾಮೋದರ ನಾಮಕ ಹರಿಗೆ ಸಾಷ್ಟಾಂಗ ಪ್ರಣಾಮಗಳೆಂದು, ಸುಜ್ಞಾನದಿಂದ ತಿಳಿದು ರಾಜಗೃಹದಿ ಹೃದಯಾಖ್ಯ ಮಂಟಪದಲ್ಲಿ ವಿರಾಜಿಸುವ ಹರಿಗೆ ಸಕಲ ಕ್ರಿಯಾಗಳೂ ಪೂಜಾ ಎಂದು ಸಮರ್ಪಿಸುವದು.

**ಭಾವಸೂಚನ:** ಉರುಪರಾಕ್ರಮೇತಿ॥ ವಿಲಾಸಿನೀ=ಸ್ತ್ರೀ ಬುದ್ಧಿಯು ಭಗವದ್ವಿಷಯಕವಾದರೆ ॥ ೨೨ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಉರುಪರಾಕ್ರಮೇತಿ ॥ ಮರಳಿ=ಮತ್ತೆ

## ಕನ್ನಡಾರ್ಥ

ಇದರ ಅರ್ಥವು ಅತಿ ಸ್ಪಷ್ಟವಿರುವದರಿಂದ ವ್ಯಾಖ್ಯಾನಕಾರರು ವ್ಯಾಖ್ಯಾನಿಸಿರುವದಿಲ್ಲ. "ಮರಳಿ=ಮತ್ತೆ" ಎಂದು ಒಂದು ಪದದ ಅರ್ಥವನ್ನು ಬರೆದಿರುತ್ತಾರೆ ॥ ೨೨ ॥

**ಅವತರಣಿಕಾ :** ಪಟ್ಟಣದಲ್ಲಿಪ್ಪ ರಾಜನ ಗೃಹಕ್ಕೆ ತೋರಣಾದಿ ಶೃಂಗಾರಗಳು ಪತಾಕೆಗಳು, ಇತ್ಯಾದಿ ಮೇಲುಪ್ಪರಿಗೆಗಳು ಈ ದೇಹ ಹೃತ್ಕಮಲ ಶ್ರೀಹರಿಯ

ಅರಮನೆಗೆ, ತೋರಣಾದಿ ಶೃಂಗಾರಗಳಾವವು ಅವುಗಳನ್ನು ಶ್ರೀಹರಿಗೆ ಅರ್ಪಿಸುವ ಬಗೆ ಹೇಗೆ ಹೇಳುತ್ತಾರೆ.

**ಮೂಲ:**

**ಮಾರರಮಣನರಮನೆಗೆ ಸುಮಹಾ ।**
**ದ್ವಾರವೆನಿಸುವ ವದನಕೊಪ್ಪುವ ।**
**ತೋರಣಶ್ಮಶ್ರುಗಳು ಕೇಶಗಳೇ ಪತಾಕೆಗಳು ॥**
**ಊರಿನಡೆವಂಘ್ರಿಗಳು ಜಂಘೆಗ ।**
**ಳೂರು ಮಧ್ಯೋದರ ಶಿರಗಳಾ ।**
**ಗಾರದುಪ್ಪರಿಗೆಗಳು ಕೋಶಗಳೈದು ಕೋಣೆಗಳು ॥ ೨೩ ॥**

**ಪದ್ಯಾರ್ಥ :** ಮಾ=ಶ್ರೀ ಲಕ್ಷ್ಮೀ ರಮಣ=ಶ್ರೀಪತಿ ಶ್ರೀ ಲಕ್ಷ್ಮೀ ದೇವಿಗೆ ರಮಣದಿಂದ ಸುಖಪ್ರದಾತೃನಾದ ಶ್ರೀಹರಿ, ಬಿಂಬನಾದ ರಾಜನ ಅರಮನೆಗೆ=ದೇಹಾಖ್ಯ ರಾಜಗೃಹಕ್ಕೆ, ಸುಮಹಾದ್ವಾರ=ಒಳ್ಳೇ ಶೃಂಗಾರವುಳ್ಳ ತಲಬಾಗಿಲವೇ ವದನ=ಮುಖ, ಈ ಮುಖಕ್ಕೆ ಒಪ್ಪುವ=ಶೋಭಿಸುವ, ಶ್ಮಶ್ರುಗಳು=ಮೀಸೆಗಳು, ಮಹಾ ದ್ವಾರಕ್ಕೆ ತೋರಣಗಳು, ಕೇಶಗಳೇ=ಶಿರೋರ್ಧ್ವ ಕೂದಲಗಳೇ ಪತಾಕೆಗಳು=ನಿಶಾನಿಗಳು. ಊರಿ ನಡೆವ=ಭೂಮಿಯಲ್ಲಿ ಪಾದವಿಟ್ಟು ನೆಲೆಗೊಳಿಸಿ ತಿರುಗಾಡುವ, ಅಂಘ್ರಿಗಳು=ಪಾದಗಳು, ಜಂಘೆ=ಮೊಣಕಾಲುಗಳು, ಊರು=ತೊಡೆಗಳು ಮಧ್ಯೋದರ=ನಡು, ಹೊಟ್ಟೆ, ಶಿರ=ತಲೆ, ಈ ಪ್ರಕಾರ ಐದು ಅವಯವಗಳು ಶ್ರೀಹರಿಯ ಆಗಾರ, ಮನೆಗೆ ಉಪ್ಪರಿಗೆಗಳು=ಸೌಧ ಮೇಲ್ಮ ಮಹಲುಗಳು. ಶ್ರೀಹರಿಯ ಅರಮನೆ ಐದು ಅಂತಸ್ತುಗಳುಳ್ಳದೆಂದೂ, ಕೋಶಗಳು=ದೇಹದಲ್ಲಿರುವ, ೧) ಅನ್ನಮಯ, ೨) ಪ್ರಾಣಮಯ, ೩) ಮನೋಮಯ, ೪) ವಿಜ್ಞಾನಮಯ, ೫) ಆನಂದಮಯ ಐದು, ಕೋಣೆಗಳು=ಖೋಲಿಗಳು, ಶೃಂಗಾರವಾಗಿ ಶೋಭಿಸುವ ಐದು ಕೋಶಗಳು. ಹೀಗೆ ಅನುಸಂಧಾನ ಕ್ರಮದಿಂದ ಅಲ್ಲಲ್ಲಿಪ್ಪ ಶ್ರೀಹರಿಯ ರೂಪಗಳನ್ನು ಸಮನ್ವಯಿಸುತ್ತ ಧ್ಯಾನ ಮಾಡುವದೆಂದು ಆಜ್ಞೆ ಕೊಡಿಸಿದ್ದಾರೆ. ಇದು ಜ್ಞಾನಿಗಳ ಅಧಿಕಾರ.

**ಭಾವಸೂಚನ :** ಏತತ್ ಸರ್ವಂ ನಾರಸಿಂಹೇ ಸಮ್ಯಗ್ ವ್ಯಕ್ತಂ ತತ್ರೈವ ದ್ರಷ್ಟವ್ಯಂ ವಿಸ್ತರಭಯಾ ನೇಹಕಥ್ಯತೇ ॥ ಶಿಷ್ಟಂ ಸ್ಪಷ್ಟಂ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಮಾಗಮಣಿ" ಇತಿ ॥ ಚೈತ್ಯ "ಧ್ವಜಪತಾಕಾಭಿಃ" ಇತಿ ॥ ಧ್ವಜಃ ಕೇಶಪಾಶಃ ॥ ಉಪರ್ಯುಪರಿ ಸತ್ವಾತ್ ॥ "ಕ್ಲುಪ್ತ ಹರ್ಮ್ಯ ಸ್ಥಲೀಮ್" ಇತಿ ಚ ॥ ೨೩ ॥

## ಕನ್ನಡಾರ್ಥ

ಮೇಲ್ಭಾಗದಲ್ಲಿ ಇರುವದರಿಂದ ಕೇಶಪಾಶಗಳು ಧ್ವಜಗಳು. "ಅಲ್ಲಲ್ಲಿ ಕ್ರೀಡಾ ಸ್ಥಲಗಳುಳ್ಳದ್ದು" ಎಂದೂ ಹೇಳಲ್ಪಟ್ಟಿರುತ್ತದೆ. ಇವೇ ಸಂಗತಿಗಳನ್ನು ಭಾಗವತ ಚ. ಪುರಂಜನೋಪಾಖ್ಯಾನ ಟೀಕಾದ್ದು ವಿವರಿಸಲಾಗಿರುತ್ತದೆ. ಹೆಚ್ಚಿನ ವಿವರಗಳನ್ನು ಅಲ್ಲಿ ಕಾಣಬಹುದು ॥ ೨೩ ॥

**ಅವತರಣಿಕಾ:** ಬಿಂಬನಾದ ರಾಜರಾಜೇಶ್ವರನ ಭೂವಿಹಾರಕ್ಕೆ ಉತ್ತಮವಾದ ರಥ ಬೇಕು. ಪ್ರಸಿದ್ಧ ರಥ ಶೃಂಗಾರವಾದ ರಥವೇ ಈ ಸ್ಥೂಲ ದೇಹ. ದೇಹಕ್ಕೂ ರಥಕ್ಕೂ ಸಮನ್ವಯಿಸಿ ೨೪-೨೫ ಎರಡು ಪದ್ಯಗಳಿಂದ ಉಪದೇಶಿಸುತ್ತಾರೆ.

**ಮೂಲ:**

ಈ ಶರೀರವೆ ರಥ ಪತಾಕ ಸು ।
ವಾಸಗಳು ಪುಂಡ್ರಗಳು ಧ್ವಜ ಸಿಂ ।
ಹಾಸನವು ಚಿತ್ತವು ಸುಬುದ್ಧಿಯು ಕಲಶ ಸನ್ಮನವು ॥
ಪಾಶ ಗುಣದಂಡತ್ರಯಗಳು ಶು ।
ಭಾ ಶುಭದ್ವಯ ಕರ್ಮ ಚಕ್ರ ಮು ।
ಹಾ ಸಮರ್ಥಾಶ್ವಗಳು ದಶಕರಣಂಗಳೆನಿಸುವವು ॥ ೨೪ ॥

**ಪದ್ಯಾರ್ಥ:** ಈ ಶರೀರವೆ=ಈ ಸ್ಥೂಲ ಶರೀರವೆ ಬಿಂಬನಾದ ಶ್ರೀಹರಿಗೆ ರಥವು. ಪತಾಕೆಗಳು ರಥಕ್ಕೆ ಕಟ್ಟಿದ ನಿಶಾನಿಗಳಿಗೆ ದೇಹಕ್ಕೆ ಭೂಷಣವಾದ ವಾಸಗಳು=ವಸ್ತ್ರಗಳು, ಪುಂಡ್ರಗಳು=ದ್ವಾದಶ ನಾಮುಗಳೇ, ಧ್ವಜ=ದೊಡ್ಡದಾದ ನಿಶಾನೆ, ಕಲಶ ಮೇಲೇರಿಸುವ ಗರುಡಾದಿ ಚಿನ್ಹೆಯುಳ್ಳ ಎರಡು ತ್ರಿಕೋಣಾಕೃತಿಯ ಧ್ವಜ. ಚಿತ್ತವು=ಸುಜ್ಞಾನ ವಿಕಾಶಿಸುವ ಮನಃ ಪ್ರಭೇದವಾದ ಚಿತ್ತ ಸುಸಮಿಾಚೀನವಾದ ಸ್ಥಿರ ಮನಸ್ಸು ನಿಶ್ಚಯಾತ್ಮಕ ಜ್ಞಾನವುಳ್ಳ-ಶ್ರೀಹರಿಯೇ ಪರನೆಂಬ ಸ್ಥಿರ ಬುದ್ಧಿಯು,

ರಥದ ಮಧ್ಯದಲ್ಲಿರುವ ಸಿಂಹಾಸನ=ಬಿಂಬನಾದ ಶ್ರೀಹರಿಯು ಕುಳಿತು ಕೊಳ್ಳುವ ಪೀಠ–ಗದ್ದುಗೆ, ಸನ್ಮನವೇ–ಕಲಶ=ಕಳಸವು, ಶುಭ ಅಶುಭ ಕರ್ಮ=ಪುಣ್ಯ ಪಾಪಗಳೆಂಬ ಎರಡು ಕರ್ಮಗಳೇ ರಥದ ಚಕ್ರ=ಗಾಲಿ ಗಳು, ಪಾಶ=ಒಳ್ಳೇ ಮೂರು ಹುರಿ ನೂಲಿನ ಹಗ್ಗಗಳು, ರಥದ ಕುದುರೆ ಗಳಿಗೆ ಕಟ್ಟಿ ವಶದಲ್ಲಿರಿಸುವ ಪಾಶಗಳೇ, ಗುಣತ್ರಯಗಳು=ಸತ್ವ, ರಜ, ತಮಗುಣತ್ರಯಗಳು. "ಮೂರು ಹುರಿಯಾನಿಟ್ಟ ಪಾಶದಲ್ಲಿ" ಎಂದು ಶ್ರೀ ವಿಜಯರ ಸುಳಾದಿ (ಅಥವಾ ಇಲ್ಲಿ ಪ್ರಗ್ರಹ. ಲಗಾಮು ೩ ಹುರಿ ಇದ್ದುದು) ಗುಣತ್ರಯಗಳು. ಮತ್ತು ದಂಡ=ದಮ್ಯತೇಽನೇನ ದಂಡ= ಶಾಂತಿ ಮಾಡುವದು ಯಾವುದೋ ಅದು. ಇಲ್ಲಿ ಕುದುರೆಗಳನ್ನು ದಮನ ಮಾಡಲಿಕ್ಕೆ ಉಪಯೋಗಿಸುವ, ಚಬುಕ=ಚಾಬುಕ್, ಕಶ (ದಂಡವೆಂದು) ಅರ್ಥ. ಇಂಥ ದಂಡವಾದರೂ, ಗುಣತ್ರಯವುಳ್ಳ, ಮೂರು ನೂಲಿನ ಹುರಿ ಬಾರಕೋಲು. ಗುಣವೆಂದರೂ ಹಗ್ಗವೆಂತ ಅರ್ಥವಾಗುತ್ತದೆ. ಆದರೆ ಪಾಶವೆಂದರೂ ಹಗ್ಗ, ಪಾಶ–ದಂಡ ಎರಡೂ ಗುಣತ್ರಯವೇ ಉಳ್ಳದು ಶ್ರೀ ದಾಸರಾಯರ ಅಭಿಪ್ರಾಯ. ರಥಕ್ಕೆ ಕುದುರೆಗಳು ಯಾವವು ಮಹಾ ಸಮರ್ಥಾಶ್ವಗಳು, ದಶಕರಣಗಳೆನಿಸುವವು. ಬಲಾಢ್ಯವಾದ ಕುದುರೆಗಳು ದೇಹಾಖ್ಯ ರಥಕ್ಕೆ, ಹತ್ತು ಇಂದ್ರಿಯಗಳೆನಿಸುವವು. ಈ ದೇಹಾಖ್ಯ ರಥ ವಿಷಯವೂ ಕಾಠಕ, ಐತರೇಯ ಉಪನಿಷತ್ತುಗಳಲ್ಲಿಯೂ, ಭಾಗವತ ದಲ್ಲಿಯೂ, ಪ್ರಕಾಶ ಸಂಹಿತೆಯಲ್ಲಿಯೂ ವಿಶದವಾಗಿ ಹೇಳಿದೆ.

**ಭಾವಸೂಚನ :** ಈ ಶರೀರೇತಿ || ಅಥ ದೇಹ ರಥ ತಸ್ಯೇತಿ ಶ್ರುತೇಃ|| ಆತ್ಮಾನಾಂ ರಥಿನಂ ವಿದ್ಧಿ ಶರೀರಂ ರಥಮೇವ ಚ । ಇಂದ್ರಿಯಾಣಿ ಹಯಾ ನ್ಯಾಹು ರಿತಿ ಸ್ಮೃತೇಶ್ಚ || ಶುಭೇತಿ । ದ್ವಿಕರ್ಮ ಚಕ್ರ ಮೇಕಾಕ್ಷ ಮಿತಿ ಭಾಗವತೇ || ದಂಡನೇತಿ ಉಕ್ತಂ ಭಾಗವತೇ । ದಂಡೋ ವಾಗ್ದೇಹ ಚೇತ ಸಾಮಿತಿ || ೨೪ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಈ ಶರೀರ" ಇತಿ || ಅಥ ದೇಹ ರಥಃ । ತದ್ರಥೋ ದೇಹಃ । ದೇಹಾಖ್ಯೋ ರಥ ಉಚ್ಯತೇ || ಇತಿ ಚ || ಪಾಶ–ಮನಃ ಪ್ರಗ್ರಹಮೇವ

ಚ॥ ಗುಣ ತ್ರಿವೇಣುಂ। ಚಕ್ರ-ಚಕ್ರೇ ದ್ವೇ ಪುಣ್ಯ ದುಷ್ಕೃತೇ ॥ ಇಂದ್ರಿಯಾಣ್ಯಶ್ವ ಸಂಜ್ಞಾನಿ ॥ ೨೪ ॥

## ಕನ್ನಡಾರ್ಥ

"ಈ ಶರೀರ" ಇತಿ ॥ "ಅಥ ದೇಹ ರಥಃ" "ತದ್ರಥೋ ದೇಹಃ" ದೇಹಾಖ್ಯೋ ರಥ ಉಚ್ಯತೇ ॥ ಎಂದು ಪ್ರಮಾಣಗಳಿರುವದರಿಂದ "ಈ ಶರೀರವೇ ರಥ"ವೆಂದು ಶ್ರೀ ದಾಸರಾಯರು ಪದ್ಯದಲ್ಲಿ ನಿಬಂಧಿಸಿರುತ್ತಾರೆ. "ಮನಃ ಪ್ರಗ್ರಹಮೇವ ಚ" "ಮನಸ್ಸೇ ಪಾಶ"ವೆಂದು ಹೇಳಿರುವದರಿಂದ "ಸನ್ಮನವು ಪಾಶ"ವೆಂದು ದಾಸವರೇಣ್ಯರು ಉಪದೇಶಿಸಿರುತ್ತಾರೆ. ತ್ರಿವೇಣುಗಳು=ಮೂರು ದಂಡಗಳು-ಸತ್ವ ರಜ ತಮ ಗುಣಗಳು. "ಸುಕೃತ ದುಷ್ಕೃತಗಳು ಎರಡು ಚಕ್ರಗಳು" ಎಂದು ಹೇಳಿರುವದರಿಂದ "ಶುಭಾಶುಭ ಕರ್ಮದ್ವಯ ಚಕ್ರ"ವೆಂದು ಹೇಳಿರುತ್ತಾರೆ. "ಇಂದ್ರಿಯಾಣಿ ಅಶ್ವಸಂಜ್ಞಾನಿ" ಎಂದು ಪ್ರಮಾಣವಿದ್ದುದರಿಂದ "ಇಂದ್ರಿಯಗಳು-ದಶಕರಣಗಳು ಅಶ್ವಗಳೆನಿಸುವವು" ಎಂದು ಹೇಳಿರುತ್ತಾರೆ ॥ ೨೪ ॥

ಅವತರಣಿಕಾ: ಈ ಪದ್ಯದಲ್ಲಿ ದೇಹಾಖ್ಯ ರಥಕ್ಕೆ ವಾಯುದೇವರೇ ಸಾರಥಿ. ಬಿಂಬನಾದ ಶ್ರೀಹರಿಯೇ ರಥಿಕನು ಎಂದು ನಿಜವಾಗಿ ಅರಿತು ಇದು ನನ್ನ ದೇಹವಲ್ಲವೆಂದು ಮಮತಾಹಂಕಾರ ಬಿಟ್ಟು ಶ್ರೀಹರಿಯ ರಥವೆಂದು ಈ ದೇಹವನ್ನು ಪೋಷಿಸುವದೆಂದು ಉಪದೇಶಿಸುತ್ತಾರೆ.

ಮೂಲ:

ಮಾತರಿಶ್ವನು ದೇಹರಥದೊಳು ।
ಸೂತನಾಗಿಹ ಸರ್ವ ಕಾಲದಿ ।
ಶ್ರೀ ತರುಣಿವಲ್ಲಭ ರಥಿಕನೆಂದರಿದು ನಿತ್ಯದಲಿ ॥
ಪ್ರೀತಿಯಿಂದಲಿ ಪೋಷಿಸುತ ವಾ ।
ತಾ ತಪಾದಿಗಳಿಂದವಿರತ ।
ಈ ತನುವಿನೊಳು ಮಮತೆ ಬಿಟ್ಟವನೆ ಮಹಾಯೋಗಿ ॥೨೫॥

ಪದ್ಯಾರ್ಥ: ಮಾತರಿಶ್ವನು=ಶ್ರೀ ವಾಯುದೇವರು, ದೇಹಾಖ್ಯ ರಥದಲ್ಲಿ ಸರ್ವಕಾಲದಿ ಸೂತ ಸಾರಥಿಯಾಗಿರುವನು. ಶ್ರೀ ತರುಣಿವಲ್ಲಭ=

ಶ್ರೀ ಜ್ಞಾನ ಸಂಪತ್ಕರಳಾದ ಶ್ರೀ ಲಕ್ಷ್ಮೀಪತಿಯಾದ ಪ್ರಾಜ್ಞನಾಮಕ ಬಿಂಬ ನಾದ ಶ್ರೀಹರಿಯೇ ರಥಿಕ=ರಥದಲ್ಲಿ ಕೂಡುವವ-ರಥದ ಒಡೆಯನೆಂದು ಅರಿದು=ನಿಶ್ಚಯ ಜ್ಞಾನದಿಂದ ತಿಳಿದು, ನಿತ್ಯದಲ್ಲಿ ಅನುಭವಕ್ಕೆ ತಂದು ಕೊಂಡು, ಈ ತನುವಿನೊಳು ಮಮತೆ ಬಿಟ್ಟು=ಈ ದೇಹ ನಾನಲ್ಲ, ನನ್ನದಲ್ಲ ಶ್ರೀಹರಿಕೊಟ್ಟ "ಸಾಧನ ಶರೀರವಿದು ನೀ ದಯದಿ ಕೊಟ್ಟದ್ದು" ಎಂದು ಅತಿ ದಾರಢ್ಯದಿಂದ ತಿಳಿದು, ಮಮತಾಹಂಕಾರ ದೂರಮಾಡಿ, ನಿತ್ಯದಲ್ಲೂ ಶ್ರೀಹರಿಯ ರಥವೆಂದು ಭಾವಿಸುತ್ತ, ವಾತಾತಪಾದಿಗಳಿಂದ, ವಾತ=ಗಾಳಿ ಚಳಿ, ಆತಪ=ಬಿಸಲೂ, ಶೀತೋಷ್ಣಗಳಿಂದ ಅವಿರತ=ಯಾವಾಗಲೂ, ನಿರಂತರ ಪೋಷಿಸುತ=ರಕ್ಷಣ ಮಾಡುತ್ತಿರು. ಹೀಗೆ ಮಮತೆ ಬಿಟ್ಟವನೇ ಮಹಾ ದೊಡ್ಡ ಯೋಗಿ=ಸುಖದುಃಖಗಳನ್ನು ಸಮಾನ ಮಾಡುವ ತಪ ಸ್ವಿಯೇ ಅಲ್ಲ-ಸುಖದುಃಖಗಳನ್ನು ಕೊಡುವ ವಾತಾತಪಾದಿಗಳಲ್ಲಿ ನಿಯಾ ಮಕನಾದ ಶ್ರೀಹರಿಯೇ ಎನ್ನ ಬಿಂಬನೆಂದು ಭಗವತ್ಪರನಾಗಿರುವನೇ ಮಹಾ ಯೋಗಿ. ಪ್ರಕಾಶಸಂಹಿತೆ ದ್ವಿತೀಯ ಪರಿಚ್ಛೇದ ೧೨ನೇ ಅಧ್ಯಾಯ ದಲ್ಲಿ. "ಇದಂ ಶರೀರಂ ಶ್ರೀ ವಿಷ್ಣೋಃ ರಥಮಿತ್ಯನು ಚಿಂತಯೇತ್ ॥ ರಥಿಕಂ ಶ್ರೀಹರಿಧ್ಯಾಯೇದ್ಯಂತಾರಂ ಸೂತ್ರನಾಮಕಂ ॥ ಭೂತಾನಿ ಚಕ್ರ ಭೂತಾನಿ ಗಾತ್ರಂಧುರ ಯುಗಾಕ್ಷಗಾಃ ॥ ಹೃಷಿಕಾಣಿ ಹಯಾಶ್ಚಿತ್ತಂ ಪಾಶ ಮಾಹುರ್ಮನೀಷಿಣಃ ॥ ರಥಿಕಸ್ಯ ಸಖಾಜೀವಃ ರಥಮಾನ್ಯಖಿಳಾತ್ಮವಿತ್ ತದ್ವಿದ್ಯದಾರಥಮುಖಂ ಸುಮುಖಂ ಶ್ರೀಹರಿಂ ಸ್ಮರೇತ್ ॥

ಭಾವಸೂಚನ: ಮಾತರಿಶ್ವೇತಿ ॥ ಸೂತಸಾರಥಿ । ಯಥೋಕ್ತಂ ದಶಮೋತ್ತರಾರ್ಧೇ।। ಉದಾತ್ತಮಹಾತುರಗೈರಿತಿ॥ ರಥಿಕೇತಿ । ಸ್ಕಾಂದೇಚ॥ "ಸಏವ ಸರ್ವ ವೇದೋಕ್ತ ಸ್ತದ್ರಥೋ ದೇಹ ಉಚ್ಯತ ಇತಿ ॥ ಪ್ರೀತೀತಿ ॥ "ಪ್ರಿಯವದ್ದೇಹ ದೃಷ್ಟ್ಯ ಇತಿ ವಿಮದ ಶ್ರುತೌ॥ "ತ್ವದನು ಪಥಂ ಕುಲಾಯ ಮಿದ ಮಾತ್ಮಸುಹೃತ್ಪ್ರಿಯ ವಚ್ಚರಂ ಕ್ಷೀತಿ (ಜ್ಞಾತಿ) ಭಾಗವತೇ ॥ ತರ್ಹಿ ವಿರಕ್ತಿ ವಚಸಾಂ ಕಿಂಥನ್ಯೈರ್ಧನ ದೈರ್ವಾ ಕಿಮಿತ್ಯಾದಿನೀ ಕಾಗತಿರಿತಿಚೇತ್। ನ । ತೇಷಾಂದೇಹಸ್ಥಿತ್ಪತಿರಿಕ್ತ ಪರತ್ವೋಪಪತ್ತೇಃ ॥ ಉಕ್ತಂ ಚ ದ್ವಿತೀಯ ಸ್ಕಂಧೆ ॥ ಅಥಃ ಕವಿರ್ನಾಮ ಸುಯಾವದರ್ಥ ಇತಿ ॥ ಅನ್ಯತ್ರೇಚ ದೇಹೋ ವರ್ತೇತಯಾ ವರ್ತೇತಿ ಚ ॥ ಮಮೇತಿ ॥ ಇದು ಮುಖ್ಯ ಸಾಧನ ॥

ಉಕ್ತಂ ಭಾವದೀಪಿಕಾಯಾಂ ಚ ॥ ಪದಾರ್ಥ ಮಮತಾಯಾಃ ಸುಖ ದುಃಖಹೇತುತ್ವ ಮನ್ವಯ ವ್ಯತಿರೇಕಾಭ್ಯಾಂ ದೃಢ್ಯತಿ । ಮದೀಯೇತೀತಿ ॥ ಉಕ್ತಂ ಚ ಶಾಂಡಿಲ್ಲ್ಯ ತತ್ವೆ ॥ "ನಿತ್ಯಾನಿತ್ಯ ವಿವೇಕಜ್ಞೋ ಮಮತಾಂತು ಪರಿತ್ಯಜೇತ್ ॥ ಮಮತ್ವೈಕಾ ಭವತ್ಯೇಷಾ ನಿದಾನಂ ಸುಖದುಃಖಯೋಃ ॥ ಮದೀಯ ಮಿತ್ಯಭಿಮತೇ ಗವಿಪುಷ್ಟೇತು ಮೋದತೇ ॥ ಹಾಸೇ ದುಃಖ ಮವಾಪ್ನೋತಿ ಸ್ವಕೀಯಸ್ಯ ಜನೋಽಹ್ಯಯಂ ॥ ಕ್ರಯಾತ್ಪರ ವಂಶಯಾತೇ ಮದೀಯತ್ವಂ ಚ ಗಚ್ಛತಿ । ನ ತುಷ್ಯತಿ ಚ ಗೋ ವೃದ್ಧಾ ಹ್ರಾಸಾತ್ತಸ್ಯ ನ ಶುಷ್ಯತಿ ॥ ಯಥಾ ತಥಾ ಸಯತ್ತೇಷು ಮಮತಾಂತು ಪರಿತ್ಯಜೇತ್ । ಯೋಗೀವ ಮಮತಾಯುಕ್ತೋ ಮಹಾನರ್ಥಮವಾಪ್ನುಯಾತ್॥ ಮಮೇದ ಮಿತಿ ಬುಧ್ಯಾತು ಹರಿಣೇ ಭರತೋಮುನಿಃ । ಅನುಧ್ಯಾಯಸ್ತ ಮೇವಾಂತೆ ಹರಿಣತ್ವಮವಾಪ್ತವಾನಿತಿ ॥ ೨೫ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಮಾತರಿಶ್ವನು" ಇತಿ ॥ ಮಾತರಿ ವೇದೇ ಶ್ವಯತಿ ಗಚ್ಛತಿ ವಿಚಾರ ಯತಿ ಇತಿ ತಥೋಕ್ತಃ ॥ "ಹೃಷೀಕ ವಾಯುಭಿರುದಾತ್ತ ಮಹತ್ತುರಗೈಃ" ಇತಿ ಶ್ರುತಿಗೀತಾಯಾಮ್ । ಟೀಕಾಯಾಂ ಚ । "ಪೃಥಕ್‌ಪದತ್ವಂ ಛಾಂದ ಸಮ್ ॥ ರಥೋಪರಿ ಸ್ವೀಕರಣಾತ್ "ಉದಾತ್ತಃ ಸಾರಥಿರ್ಮತಃ" ಇತಿ ವಚನಾತ್ । ಹೃಷೀಕಾಣ್ಯೇವ ವಾಯುಃ ಉದಾತ್ತೋ ಏಷಾಂ ತೇ । ಹೃಷೀಕ ವಾಯುಭಿರುದಾತ್ತಾಃ । ತೇ ಚತೇ ಮಹತ್ತುರಗಾಃ ।" ಇತಿ ॥ ರಥೇ... "ಆತ್ಮಾನಂ ರಥಿನಂ ವಿದ್ಧಿ" ಇತ್ಯುಕ್ತೇಃ । ಅವಿರತ ಸರ್ವದಾ ॥ ಪ್ರವಚನೋ...ಪಯುಕ್ತತಯಾ ರಕ್ಷಣಮ್ ಅಭಿಪ್ರೈತಿ ॥ "ದೇಹೋ ವರ್ತೇತ ಯಾವತಾ" ಇತ್ಯುಕ್ತೇಃ ॥ "ಯಾವದ್ ಬ್ರಿಯೇತ ಜಠರಮ್" ಇತಿ ಚ ॥ "ಪ್ರಿಯವದ್ದೇಹ ದೃಷ್ಟ್ಯಯಃ" ॥ ಇತಿ ಚ ॥ ಪ್ರಿಯವತ್ ಚಿಚ್ಛರೀರವತ್ । ಇತಿ ॥ ಪ್ರಿಯವಚ್ಛರಂ...ೀತಿ ಚೋಕ್ತೇಃ ॥ ಮಮತೇ । ಶಾಂಡಿಲ್ಯಪಂಚಕೇ ಅಷ್ಟಾದಶಾಧ್ಯಾಯೇ "ನಿತ್ಯಾಽನಿತ್ಯ ವಿವೇಕಜ್ಞೋ ಮಮತಾಂ ತು ಪರಿತ್ಯ ಜೇತ್ ॥ ಮಮತ್ವೈವ ಭವತ್ಯೇಕಾ ನಿದಾನಂ ಸುಖದುಃಖಯೋಃ॥ ಮದೀಯ ಮಿತ್ಯಭಿಮತೇ ಗವಿ ಪುಷ್ಟೇ ತು ಮೋದತಿ ॥ ಹ್ರಾಸೇ ದುಃಖಮವಾಪ್ನೋತಿ ಸ್ವಕೀಯಸ್ಯ ಜನೋಽಹ್ಯಯಮ್ ॥ ಕ್ರಮಾತ್ ಪರವಶಂ ಯಾತೇ ಮದೀ

ಯತ್ವೇ ಚ ಗಚ್ಛತಿ॥ ನತುಷ್ಯತಿ ಚ ತದ್ವೃದ್ಧೌ ಹ್ರಾಸಾತ್ತಸ್ಯ ನ ದುಃಖತಿ॥ ತಥಾ ತಥಾ ಸಮಸ್ತಾಸು ಮಮತಾಂ ತು ಪರಿತ್ಯಜೇತ್ ॥ ಯೋಗೀ ವಾ ಮಮತಾಯುಕ್ತೋ ಮಹಾನರ್ಥಮವಾಪ್ನುಯಾತ್ ॥ ಮಮೇದಮಿತಿ ಬುದ್ಧ್ಯಾ ತು ಹರಿಣೇ ಭರತೋ ಮುನಿಃ ॥ ಅನುಧ್ಯಾಯಂ ಸ್ತಮೇವಾಂತೇ ಹರಿಣತ್ವಮವಾಪ್ತವಾನ್ ॥ ಇತಿ ॥ ೬೫ ॥

## ಕನ್ನಡಾರ್ಥ

ತತ್ವಜ್ಞಾನಕರಣ (ಸಾಧನ)ಗಳಾದ ವೇದಗಳಲ್ಲಿ ಸಂಚರಿಸುವರು. ವಿಚಾರಿಸುವವರು ; ಆದುದರಿಂದ ಶ್ರೀ ವಾಯುದೇವರಿಗೆ "ಮಾತರಿಶ್ವಾ" ಎಂದು ಕರೆಯುತ್ತಾರೆ. "ಹೃಷೀಕ ವಾಯುಭ" ಎಂದು ಮುಂತಾಗಿ ಶ್ರುತಿ ಗೀತೆಯಲ್ಲಿಯೂ ಈ ವಿಷಯವನ್ನು ನಿರೂಪಿಸಿರುತ್ತಾರೆ. ಶ್ರುತಿಗೀತೆಯ ವಿಜಯಧ್ವಜೀಯ ಟೀಕಾದಲ್ಲಿ "ಹೃಷೀಕ ವಾಯುಭ" ಎಂದು ಪ್ರತ್ಯೇಕ ಪದ ವಿಭಾಗ ಮಾಡಿದ್ದು ಛಾಂದಸವಾದುದರಿಂದ, ಉತ್=ರಥದ ಮೇಲೆ, ಆತ್ತಃ= ಸ್ವೀಕೃತನಾಗುವವನು–ಸ್ವೀಕರಿಸುವವನು ; ಆದುದರಿಂದ "ಉದಾತ್ತ" ಸಾರಥಿಯು. "ವಾಯುವೇ ಸಾರಥಿಯಾಗಿವುಳ್ಳ ಇಂದ್ರಿಯಗಳೆಂಬ ಸಮರ್ಥ ತುರಗಗಳು ಈ ದೇಹಕ್ಕೆ" ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಪರ ಮಾತ್ಮನು ರಥಿಕನೆಂದು "ರಥದಮೇಲೆ ಕುಳಿತಿರುವವನು" ಎಂದು ಪ್ರಮಾಣ ಗಳಿರುವದರಿಂದ "ಶ್ರೀ ತರುಣಿ ವಲ್ಲಭನು ರಥಿಕ" ಎಂದು ಹೇಳಿರುತ್ತಾರೆ. ಅವಿರತ=ಯಾವಾಗಲೂ. "ಪ್ರೀತಿಯಿಂದಲಿ ಪೋಷಿಸುತ" ಎಂದು "ಈ ದೇಹವನ್ನು ಪ್ರೀತಿಯಿಂದ ಪೋಷಿಸಬೇಕು" ಅಂತ ದಾಸವರ್ಯರು ನಿರೂ ಪಿಸಿರುತ್ತಾರೆ. ಶರೀರ ಪ್ರವಚನಕ್ಕೆ ಉಪಯುಕ್ತವಾದುದರಿಂದ ಭಗವದ್ಗುಣ ವಿವರಣ ರೂಪವಾದ ಪ್ರವಚನಕಾರ್ಯವು ದೇಹಪೋಷಣೆಯಿಂದ ಅಧಿಕಾಧಿಕ ವಾಗಿ ನಡೆಯುವದರಿಂದ ದಾಸವರ್ಯರು ಹಾಗೆ ಹೇಳಿದುದಾಗಿ ಅಭಿಪ್ರಾಯ ವನ್ನು ತಿಳಿಯಬೇಕು. "ದೇಹೋ ವರ್ತೇತ ಯಾವತಾ" "ದೇಹವು ಸಮರ್ಥವಾಗಿರುವ ಪುಟ್ಟಿಗೆ", "ಎಷ್ಟರಿಂದ ದೇಹವು ಪೂರ್ತಿಯಾಗುವದೋ" "ಚಿದಾನಂದ ರೂಪವಾದ ಸ್ವರೂಪ ಶರೀರದಂತೆ ಸಾಧನವಾದ ಈ ಶರೀರ ವನ್ನು ಕಾಣುವರು" ಎಂದು ಮುಂತಾಗಿರುವ ವಾಕ್ಯಗಳಿಂದ ಭಗವಂತನಿಂದ ಜ್ಞಾನಭಕ್ತಿ ವೈರಾಗ್ಯ ಪ್ರಸಾದಗಳಿಗೆ ಸಾಧನವಾದ ಈ ಶರೀರವನ್ನು ಪೋಷಿ

ಸುವದು ವಿಹಿತವೆಂದು ಗೊತ್ತಾಗುತ್ತದೆ. "ಮಮತೆಯನ್ನು ಬಿಟ್ಟಿರುವವನೆ ಮಹಾ ಯೋಗಿ" ಎಂದು ದಾಸವರ್ಯರು ನಿರೂಪಿಸಿರುತ್ತಾರೆ. ಶಾಂಡಿಲ್ಯ ಪಂಚಕದ ೧೮ನೆಯ ಅಧ್ಯಾಯದಲ್ಲಿ "ನಿತ್ಯಾನಿತ್ಯ ವಸ್ತುಗಳ ವಿವೇಕವುಳ್ಳವನು ಮಮತೆಯನ್ನು ಬಿಡಬೇಕು. ಮಮತೆಯು ("ನಾನು, ನನ್ನದು" ಎಂಬ ಅಭಿಮಾನವು) ಸುಖದುಃಖಗಳಿಗೆ ಮುಖ್ಯವಾದ ಮೂಲಕಾರಣವು. ಆಕಳು ಪುಷ್ಟವಾಗಿರುತ್ತದೆ. ಅದಕ್ಕೆ ಅಭಿಮಾನವನ್ನಿಟ್ಟಿರುವವನು ಅದನ್ನು ನೋಡಿ ಆನಂದವನ್ನು ಹೊಂದುತ್ತಾನೆ. ಅದು ತನ್ನದಾಗಿರುವಾಗ ಸೊರಗಿದರೆ ದುಃಖವನ್ನು ಹೊಂದುತ್ತಾನೆ. ಅದನ್ನೇ ಎರಡನೆಯವರಿಗೆ ಮಾರಿಬಿಡಲು ಕ್ರಮವಾಗಿ ಅಭಿಮಾನವು ("ನನ್ನದು" ಎಂಬ ಮಮತೆಯು) ಅಳಿದು ಹೋಗಲು ಆ ಆಕಳದ ವೃದ್ಧಿಹ್ರಾಸಗಳು ಅವನಿಗೆ ಯಾವ ತರಹದ ವಿಕಾರಗಳೂನೂ ಮನಸ್ಸಿನಲ್ಲಿ ಮೂಡುವದಿಲ್ಲ. ಇದರಂತೆ ಸಮಸ್ತ ವಸ್ತುಗಳಲ್ಲಿ ಮಮತೆಯನ್ನು ಬಿಡಬೇಕು. ಯೋಗಿಯು ಮಮತೆಯನ್ನು ಇಟ್ಟರೆ ಮಹಾ ಅನರ್ಥವು ಉಂಟಾಗುತ್ತದೆ. ಭರತ ಮುನಿಯು "ಇದು ನನ್ನದು" ಎಂಬ ಮಮತೆಯನ್ನು ಚಿಗರಿಯ ಮರಿಯಲ್ಲಿ ಮಾಡಿ ಅದನ್ನೇ ಧ್ಯಾನಿಸಿ ಧ್ಯಾನಿಸಿ ಕೊನೆಗೆ ಚಿಗರಿಯ ಜನ್ಮವನ್ನೇ ಹೊಂದಿದನು. ಆದುದರಿಂದ ಮಮತೆಯನ್ನು ಬಿಡಬೇಕು ಎಂದು ಹೇಳಿರುತ್ತಾರೆ ॥ ೨೫ ॥

**ಅವತರಣಿಕಾ:** ಭವವೆನಿಪ ಈ ಪದ್ಯದಿಂದ ಶ್ರೀ ದಾಸವರ್ಯರು ರಾಜಾಧಿರಾಜ ಬಿಂಬನಾದ ಶ್ರೀಹರಿಯ ಜಲವಿಹಾರಕ್ಕೆ ಈ ದೇಹವೇ ನಾವೆಯು-ಭವವೆಂಬುದೆ ಕಡಲು ದಾಟಲು ನೌಕಾ ರೂಪವಾದುದೆಂದು ಉಪದೇಶಿಸುತ್ತಾರೆ ಭಾಗವತೋಕ್ತಿಯಂತೆ.

ಮೂಲ :

> **ಭವವೆನಿಪ ವನಧಿಯೊಳು ಕರ್ಮ ।**
> **ಪ್ರವಹದೊಳು ಸಂಚರಿಸುತಿಹ ದೇ ।**
> **ಹವೆ ಸುನಾವೆಯುಮಾಡಿ ತನ್ನವರಿಂದ ಒಡಗೂಡಿ ॥**
> **ದಿವಸ ದಿವಸಗಳಲ್ಲಿ ಲಕ್ಷ್ಮೀ ।**
> **ಧವನು ಕ್ರೀಡಿಪನೆಂದು ಚಿಂತಿಸೆ ।**
> **ಪವನನಯ್ಯ ಭವಾಬ್ಧಿ ದಾಟಿಸಿ ಪರಮ ಸುಖವೀವ ॥ ೨೬ ॥**

**ಪದ್ಯಾರ್ಥ:** ಭವವೆನಿಪ ವನಧಿಯೊಳು=ಭವವೆನಿಪುದೆ ಸಂಸಾರ ಸಮುದ್ರ-ಕಡಲುತೆರೆ. ಪ್ರವಾಹವೇ=ಕರ್ಮಪ್ರವಾಹ, ಒಂದರಿಂದೊಂದು ಅನೇಕ ಕರ್ಮದ ಹರಿಯಲ್ಲಿ ಅಂದರೆ ಸಂಸಾರ ಸಮುದ್ರದಲ್ಲಿ ಅನೇಕ ಕರ್ಮ ವಶದಿಂದ ಬಂದ ಶರೀರಗಳು ಈ ಭವ ಸಮುದ್ರದಲ್ಲಿ ತೇಲು ಮುಳುಗು ಹಾಕಿ ಕೈ ಸೋತರೆ ದಾಟಲು ನಾವೆ ಬೇಕು. ಶ್ರೀಹರಿಯು ಇಂಥ ಸುಜ್ಞಾನ ಶರೀರ ಕೊಟ್ಟಾಗ್ಗೆ ಈ ಸ್ಥೂಲ ದೇಹವನ್ನೇ ಸು=ಸಮೀಚೀನವಾದ, ನಾವೆ= ಸಮುದ್ರ ದಾಟಲು ಹಡಗು, ನೌಕಾಮಾಡು. ತನ್ನವರಿಂದ ಒಡಗೂಡಿ= ಶ್ರೀಹರಿಯು, ರಮಾಬ್ರಹ್ಮಾದಿ ಸಕಲ ತತ್ವೇಶರಿಂದ ಕೂಡಿಕೊಂಡು, ದಿವಸ ದಿವಸಗಳಲ್ಲಿ=ಪ್ರತಿಕ್ಷಣ ಪ್ರತಿದಿನಗಳಲ್ಲಿ ಅಂದರೆ ಆರೆಲವ ಅಗಲದೇ ತತ್ವೇಶ ರಿಂದ ಸಕಲ ಕ್ರಿಯೆಗಳನ್ನೂ ಮಾಡಿಸುತ್ತಾ ದೇಹದಲ್ಲಿ ಶ್ವಾಸೋಚ್ಛ್ವಾಸ ಮೊದಲಾದ ಕಾರ್ಯಗಳನ್ನು ಮಾಡಿಸುತ್ತಾನೆ. ಅದರಂತೆ ಶ್ರೀಹರಿಯು ಭವ ಸಮುದ್ರದಲ್ಲಿ ನೌಕಾರೂಪ ದೇಹದಲ್ಲಿ ಕ್ರೀಡಿಸುತ್ತಾ ಜಲವಿಹಾರ ಮಾಡುವನೆಂದು, ಸಮುದ್ರ ನೌಕಾ, ಪ್ರವಾಹ, ಇವುಗಳಲ್ಲಿ ನಿಯಮನ ಮಾಡುವ ರೂಪಗಳಿಗೂ, ದೇಹಾಂತರ್ಗತ ರೂಪಗಳಿಗೂ, ಐಕ್ಯ ಚಿಂತಿಸಿ, ಶ್ರೀಹರೇ ನೀನಿತ್ತ ಸಾಧನ ಶರೀರವಿದು, ನಿನಗೆ ಭವಕಡಲು ದಾಟಿಸಲು ನೌಕಾ ರೂಪವಾದುದು ಎಂದು ಅರ್ಪಿಸಿದರೆ, ಪವನನಯ್ಯ=ಜೀವ ಸ್ವರೂಪ ದೇಹಸ್ಥ ಪವನ-ವಾಯುವಿನ ತಂದೆ, ಭವಾಬ್ಧಿ ದಾಟಿಸಿ=ಭವ, ಸಂಸಾರ ಸಮುದ್ರವನ್ನು ದಾಟಿಸಿ, ಪರಮ=ಉತ್ತಮವಾದ ಮೋಕ್ಷ ಸುಖವನ್ನು ಕೊಡುವನೆಂದು ಶ್ರೀ ದಾಸರಾಯರು ಧ್ಯಾನೋಪಾಸನ ವಿಧಿಯನ್ನು ಅಧಿಕಾರಿಗಳನ್ನು ಕುರಿತು ಉಪದೇಶಿಸಿದ್ದಾರೆ.

**ಭಾವಸೂಚನ:** ಭವೇತಿ || ಉಕ್ತಮೇಕಾದಶಸ್ಕಂಧೆ || ನೃದೇಹ ಮಾಸಾದ್ಯ ಸುದುರ್ಲಭಂ ಯಃ ಪ್ಲವಂ ಸುಕಲ್ಪ್ಯಂ ಗುರುಕರ್ಣಧಾರಂ ಮಾಯಾನು ಕೂಲೇನ ನಭಸ್ವ ತೇರಿತಂ | ಪುಮಾನ್ ಭವಾಬ್ಧಿಂ ನತರೇತ್ಸ ಮಾಣಂ ಇತಿ || ೨೬ ||

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಭವ" ಇತಿ || "ನೃದೇಹಮಾಸಾದ್ಯ ಸುದುರ್ಲಭಂ ಯಃ ಪ್ಲವಮ್||" ಇತ್ಯುಕ್ತೇಃ || ದುರ್ಲಭೋ ಮಾನುಷೋ ದೇಹಃ ಸಂಸಾರೇ ಭ್ರಮತಾಂ

ನೃಣಾಮ್ || ಜ್ಞೇಯೋಯಂ ಪರಮಃ ಪೋತಃ ಸಂಸಾರಾರ್ಣವ ತಾರಣೇ|| ಯದಿ ವಿಂದೇತ್ ಇಹ ಜ್ಞಾನಮ್ ತರ್ಹ್ಯೇವಾಮೃತ ತಾಂ ವ್ರಜೇತ್ || ಇತಿ ವಿಷ್ಣುರಹಸ್ಯೇ || ೨೬ ||

## ಕನ್ನಡಾರ್ಥ

"ಭವವೆನಿಪ ವನಧಿಯೊಳು" ಎಂಬ ಪದ್ಯದಲ್ಲಿ "ಸಂಸಾರವು ಸಮುದ್ರ. ಇದನ್ನು ದಾಟಲು-ದೇಹವು ಒಳ್ಳೆಯ ನಾವೆ" ಎಂದು ಹೇಳಿರುತ್ತಾರೆ. ದುರ್ಲಭವಾದ ಈ ಮನುಷ್ಯ ದೇಹವು ಒಂದು ಅಪೂರ್ವ ನಾವೆ" ಎಂದು ಒಂದು ಪ್ರಮಾಣದಲ್ಲಿ ಹೇಳಲ್ಪಟ್ಟಿರುತ್ತದೆ. "ಸಂಸಾರದಲ್ಲಿ ಅನೇಕ ಯೋನಿಗಳಲ್ಲಿ ತಿರುಗಿ ಬಳಲುವವರಿಗೆ ಮನುಷ್ಯ ದೇಹವು ಬಹಳ ದುರ್ಲಭ ವಾದುದು. ಸಂಸಾರ ಸಾಗರವನ್ನು ದಾಟುವುದಕ್ಕೆ ಇದು ಒಂದು ಶ್ರೇಷ್ಠ ನಾವೆಯು. ಈ ಮನುಷ್ಯ ದೇಹವು ದೊರೆತಿರುವಾಗ ಉತ್ತಮವಾದ ಶ್ರೀಮನ್ನಾರಾಯಣನ ಜ್ಞಾನವನ್ನು ಪಡೆದನೆಂದರೆ ಅದರಿಂದ ಅವನು ಮುಕ್ತನಾಗುತ್ತಾನೆ" ಎಂದು ಶ್ರೀ ವಿಷ್ಣು ರಹಸ್ಯದಲ್ಲಿ ನಿರೂಪಿತವಾಗಿರು ತ್ತದೆ || ೨೬ ||

**ಅವತರಣಿಕಾ :** ಅಂಗಡಿ ಮನೆ ಮುಂತಾದುವುಗಳಲ್ಲಿರುವ ಪದಾರ್ಥಗಳನ್ನು ದೀಪಗಳಿಗೆ ಉಪಯೋಗಿಸುವ ತುಪ್ಪ ಎಂಣೆ ಮುಂತಾದವುಗಳಂತೆ ಸ್ತ್ರೀ ಪುರುಷರ ಇಂದ್ರಿಯಗಳಲ್ಲಿ ತೇಜೋರೂಪ ದ್ರವ್ಯಗಳಿಗೆ ಸಮನ್ವಯಿಸಿ, ಶ್ರೀ ಪರಮಾತ್ಮಗೆ ಯಜ್ಞ ಆಹುತಿ ಕೊಡುವುದನ್ನು ವಿವರಿಸುತ್ತದೆ.

**ಮೂಲ :**

ಆಪಣಾಲಯಗತ ಪದಾರ್ಥವು ।
ಸ್ತ್ರೀ ಪುರುಷರಿಂದ್ರಿಯಗಳಲಿ ।
ದೀಪ ಪಾವಕರೊಳಗಿಡುವ ತೈಲಾದಿ ದ್ರವ್ಯಗಳ ॥
ಆ ಪರಮಗವದಾನವೆಂದು ಪ ।
ದೇ ಪದೇ ಮರೆಯದಲೆ ಸ್ಮರಿಸುತ ।
ಭೂಪನಂದದಿ ಸಂಚರಿಸು ನಿರ್ಭಯದಿ ಸರ್ವತ್ರ ॥ ೨೭ ॥

**ಪದ್ಯಾರ್ಥ :** ಆಪಣ=ಅಂಗಡಿ, ಆಲಯ=ಮನೆ, ಇವುಗಳಲ್ಲಿರುವ

ಸಕಲ ಹವಿರ್ಯೋಗ್ಯ ಪದಾರ್ಥಗಳು. ದೀಪಪಾವಕರೊಳಗಿಡುವ ತೈಲಾದಿ ದ್ರವ್ಯಗಳ=ದೀಪ-ಪ್ರಕಾಶಮಾನವಾಗಿ ದೀಪ ಉರಿಯಲಿಕ್ಕೆ ಎಣ್ಣೆ ತುಪ್ಪಗಳು ಬೇಕು. *ಅದರಂತೆ ಸ್ತ್ರೀ ಪುರುಷರ ಇಂದ್ರಿಯಗಳಲಿ ಇಡುವ ತೈಲಾದಿ ದ್ರವ್ಯಗಳ ಸ್ತ್ರೀ-ಸುವಾಸಿನಿ ಸ್ತ್ರೀ ಪುರುಷರ=ಗಂಡಸರುಗಳ ಇಂದ್ರಿಯಗಳಿಂದಾಗೋ ಪುಣ್ಯ ಪಾಪ ಕರ್ಮಗಳಿಗೆ ಇಂದ್ರಿಯ ತೇಜೋ ಶಕ್ತಿ ರೇತಸ್ಸಾದಿಗಳು ಇಂತಹ ಇಂದ್ರಿಯಗತ ತೇಜೋ ಪದಾರ್ಥವು ಉಪನಿಷತ್ತಿನಲ್ಲಿ ಹೇಳಿರುವಂತೆ ಗುರುಗಳಿಂದ ತಿಳಿದು, ಆ ಪರಮಗೆ=ದೂರಾದ್ದೂರತರಂ ಯತ್ತು ತದೇವಾಂತಿಕಮಂತಿಕಾತ್" ಎಂಬುವಂತೆ, ಆ ಎಂದರೆ ವೈಕುಂಠಾದಿ ಧಾಮತ್ರಯದಲ್ಲಿಪ್ಪ ಶ್ರೀಹರಿಯೇ ತನ್ನಂತರಂಗ ಬಿಂಬನೆಂದು, ಪರಮ=ಸರ್ವೋತ್ತಮನೆಂದು ತಿಳಿದು, ಆ ಹರಿಗೆ ಅವಧಾನ=ಪ್ರಶಸ್ತವಾದ ಕರ್ಮ ಕೆಲಸವೆಂದರೆ ಆ ಪರಮಾತ್ಮನಿಗೆ ಯಜ್ಞರೂಪ ಸಮರ್ಪಣೆಯಲ್ಲಿ ಆಹುತಿ ರೂಪವೆಂದು, ಪದೇ ಪದೇ=ಅಡಿಗಡಿಗೆ ಸ್ಮರಿಸುತ್ತಾ ಮರೆಯದಲೆ, ಒಂದು ಕ್ಷಣವಾದರೂ ವಿಸ್ಮೃತಿ ಇಲ್ಲದೆ ಸಕಲವೂ ಪರಮಾತ್ಮಗೆ ಆಹುತಿ ಎಂದು ಚಿಂತಿಸುತ್ತಾ, ಭೂಪನಂದದಿ=ರಾಜನಂತೆ ಏಕಛಕ್ರಾಧಿಪತಿಯಾದ ರಾಜನಿಗೆ ಹೇಗೆ ಯಾರಿಂದಲೂ, ಯಾವ ಭಯವಿಲ್ಲವೋ, ಅದರಂತೆ= ಸಕಲವೂ ಶ್ರೀಹರಿಗರ್ಪಿಸಿ ಹರಿಯ ಅಧೀನವಾದಮೇಲೆ-ನಿರ್ಭೀತನಾಗಿ ಇತರರ ಯಾವ ಭಯವಿಲ್ಲದೇ, ಸರ್ವತ್ರ=ಸರ್ವದೇಶ ಕಾಲಗಳಲ್ಲಿ ಸಂಚರಿಸು=ಒಳ್ಳೇ ರೀತಿಯಿಂದ ತಿರುಗಾಡು, ನಡೆದಾಡು-ಹರಿಯ ಪಾಡುತ್ತಿರು.

**ಭಾವಸೂಚನ :** ಆಪಣೇತಿ ॥ ಆಪಣಗತ ಧಾನ್ಯಾದಿಗಳು । ಆಲಯಗತ ಭಾರ್ಯಾದಿಗಳು, ಸ್ತ್ರೀಗತ ಶಿರೋಭೂಷಣ ಕಂಕಣಾದಿಗಳು ಪುರುಷಗತ ಸರ ಇತ್ಯಾದಿಗಳು, ಆದಿ । ಘೃತಾದಿ ಅವದಾನ ಆಹುತಿ ॥ ೨೭ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಆಪಣಾಲಯ" ಇತಿ ॥ ಅವದಾನಂ ಆಹುತಿಃ ।। ಪದೇ ಪದೇ ಪ್ರತಿ

---

*ಇಲ್ಲಿ ಕೆಲವರು ಸ್ತ್ರೀ ಪುರುಷರ ಅವಯವಗಳಲ್ಲಿಡತಕ್ಕ ಭೂಷಣಾದಿ ವಸ್ತುಗಳು ಹರಿಗೆ ಸಮರ್ಪಿಸು ಎಂದು ಬರೆದಿದ್ದಾರೆ. ವಿಚಾರಾಂಶ ಭೂಷಣ ವಸ್ತುಗಳು ಇಂದ್ರಿಯಕ್ಕಲ್ಲ ಕಿವಿ, ಮೂಗು, ಹಸ್ತ ಪಾದಾದಿ ಅವಯವ ಅಂಗಗಳಿಗೆ ಮಾತ್ರ ಇದೊಂದು ಅರ್ಥ.

ಕ್ಷಣ । "ಶ್ರೀಪತೇ ಕಶಿಪುಸ್ತವಾಸ್ತ್ವನು ದೇವತೇ ಹ್ಯುಪಬರ್ಹಣಮ್ । ಮಂಚಪೂರ್ವಕ ಭೋಗಸಾಧನ ಮಸ್ತು ಸರ್ವಮುಪೀಶ ತೇ ॥ ಕಂಕಣಾದಿ ವಿಭೂಷಣಂ ನವವಸ್ತ್ರಮಸ್ತು ಚ ಕಿಂ ಪುನಃ ॥ ಜಾಗರಸ್ಥ ಸಮಸ್ತ ವಸ್ತು ತವಾಸ್ತು ನಿಸ್ತುಲ ವಸ್ತು ಭೋಃ ।" ಇತಿ ರಸರಂಜನ್ಯಾಂ ಸರ್ವಸಮರ್ಪಣ ಪ್ರಕರಣೇ ॥ ೨೭ ॥

## ಕನ್ನಡಾರ್ಥ

18222

"ಆಪಣಾಲಯಗತ ಪದಾರ್ಥವು" ಎಂಬ ಪದ್ಯದಿಂದ "ಇಂದ್ರಿಯಗಳಲ್ಲಿ ಸಂಪರ್ಕಕ್ಕೆ ಬರುವ ವಿಷಯಗಳೂ, ಅಗ್ನಿ-ದೀಪ ಮುಂತಾದವುಗಳಲ್ಲಿ ಹಾಕುವ ತೈಲ ಮುಂತಾದ ಸಕಲ ವಸ್ತುಗಳು ಪರಮಾತ್ಮನಿಗೆ "ಅವದಾನ" ಎಂದು ಪದೇ ಪದೇ ಸ್ಮರಿಸುತ್ತ ಅರ್ಪಿಸು" ಎಂದು ದಾಸವರ್ಯರು ಬೋಧಿಸಿರುತ್ತಾರೆ. "ಅವದಾನ"ವೆಂದರೆ "ಯಜ್ಞ" ಅಂತಾ ಅರ್ಥ ತಿಳಿಯಬೇಕು. ಪದೇ ಪದೇ=ಪ್ರತಿಕ್ಷಣ. ಶ್ರೀ ವಿಷ್ಣುತೀರ್ಥರು ಅಧ್ಯಾತ್ಮ ರಸರಂಜನಿಯ ಸರ್ವ ಸಮರ್ಪಣ ಪ್ರಕರಣದಲ್ಲಿ "ಹೇ ಶ್ರೀಪತಿಯೇ ನಿನಗೆ ಮಂಚ ಮುಂತಾದ ಭೋಗ ಸಾಧನವಾದ ಸಕಲ ವಸ್ತುವು ನಿನಗೇ ಸಲ್ಲಲಿ. ಹಾಸಿಗೆ, ದಿಂಬು ಮುಂತಾದವುಗಳು ನಿನಗೆ ಇರಲಿ. ಜಾಗೃತಿಯಲ್ಲಿ ತೋರಿ ಬರುವ ಸಮಸ್ತ ವಸ್ತುಗಳೂ ನಿನ್ನವೇ; ನಿನಗೆ ಇರಲಿ. ನೀನು ಅಸದೃಶನು ಹಾಗೂ ಶಾಶ್ವತ ಅಮಿತ ಶಕ್ತಿ ಸಂಪನ್ನನಾದ ಪೂರ್ಣಾನಂದಾದಿ ಗುಣಪೂರ್ಣನಿರುತ್ತೀ !" ಎಂದು ಸ್ತುತಿಸಿರುತ್ತಾರೆ ॥ ೨೭ ॥

**ಅವತರಣಿಕಾ :** ಹಿಂದೆ ೧೮ ಪದ್ಯದಿಂದ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರಾದಿ ಸ್ವಭಾವಾನುಸಾರ ಅನುಸಂಧಾನ ವಿವರಿಸಿ, ಈಗ ವ್ಯಾಪ್ತ್ಯೋಪಾಸಕರ ಅಧಿಕಾರಾನುಸರಿಸಿ ಬ್ರಹ್ಮಾಂಡ, ತದ್ಗತ ವಸ್ತು ಸಮರ್ಪಿಸುವ ವಿಧಾನ ಆಜ್ಞಾಪಿಸುತ್ತಾರೆ.

**ಮೂಲ :**

**ವಾರಿಜ ಭವಾಂಡವೆ ಸುಮಂಟಪ ।**
**ಮೇರುಗಿರಿ ಸಿಂಹಾಸನವು ಭಾ ।**
**ಗೀರಥಿಯೆ ಮಜ್ಜನವು ದಿಗ್ವಸ್ತ್ರಗಳು ನುಡಿಮಂತ್ರ ॥**

**ಭೂರುಹಜ ಫಲಪುಷ್ಪ ಗಂಧ ಸ |**
**ಮೀರ ಶಶಿ ರವಿ ದೀಪ ಭೂಷಣ |**
**ತಾರಕೆಗಳೆಂದರ್ಪಿಸಲು ಕೈಕೊಂಡು ಮನ್ನಿಸುವ ‖ ೨೮ ‖**

**ಪದ್ಯಾರ್ಥ :** ವಾರಿಜ=ನೀರಿನಲ್ಲಿ ಪುಟ್ಟಿದ ಕಮಲ, ಭವ=ಕಮಲದಿಂದ ಪುಟ್ಟಿದ ಬ್ರಹ್ಮ, ಬ್ರಹ್ಮಾಂಡವೇ=ಹದಿನಾಲ್ಕು ಲೋಕ, ನವಾವರಣ ಕೂಡಿದ ಬ್ರಹ್ಮಾಂಡವೇ ಶ್ರೀಹರಿಗೆ ಸುಸಮೀಚೀನವಾದ, ಮಂಟಪ=ಅಲಂಕರಿಸಿದ ಒಳ್ಳೇ ಹಸರುವಾಣಿ ಚಪ್ಪರ, ಮೇರುಗಿರಿ ಸಿಂಹಾಸನ=ಬ್ರಹ್ಮಾಂಡ ಮಧ್ಯವರ್ತಿಯಾಗಿರುವ, ಮೇರು ಪರ್ವತವು ಸಿಂಹಾಸನ, ಶ್ರೀಹರಿಯು ಕುಳ್ಳಿರತಕ್ಕ ಗದ್ದುಗೆ, ಭಾಗೀರಥಿಯೇ ಮಜ್ಜನವು=ಭಾಗೀರಥ್ಯಾದಿ-ಗಂಗಾದಿ ನದಿಗಳೇ ಶ್ರೀಹರಿಗೆ ಅಭಿಷೇಕ ಉದಕಗಳು, ದಿಗ್‌ವಸ್ತ್ರ=ದಶದಿಕ್ಕುಗಳೇ ಶ್ರೀಹರಿಗೆ ಉಡುವ ಹೊದಿಯುವ ಪೀತಾಂಬರಾದಿ ವಸ್ತ್ರಗಳು. ಸಮಸ್ತ ಜನರಾಡತಕ್ಕ ನುಡಿಗಳೇ ವೇದಮಂತ್ರಗಳು, ಭೂರುಹಜ=ವೃಕ್ಷದಿಂದ ಉತ್ಪನ್ನವಾದ ನಾನಾ ಜಾತಿಯ ಸುಗಂಧ ಹೂವುಗಳೇ ಕುಸುಮ, ಸಮೀರ=ಗಾಳಿ ಗಂಧವಾಹನನೇ ಶ್ರೀಹರಿಗೆ ಪರಿಮಳ ಸುವಾಸನೆ ಗಂಧ. ರವಿ-ಸೂರ್ಯ, ಶಶಿ-ಚಂದ್ರಮ=ಜ್ಯೋತಿ ಪ್ರಕಾಶಮಾನವಾದ ದೀಪಗಳು. ತಾರಕೆಗಳು=ಸಾಲುಸಾಲಾಗಿ ಗುಂಪುಗುಂಪಾಗಿ ತೇಜೋ ರೂಪದಿಂದ ಶೋಭಿಸುವ, ನಕ್ಷತ್ರಗಳೇ ಶ್ರೀಹರಿಗೆ ಭೂಷಣಗಳು=ಆಭರಣಾದಿಗಳು ಎಂದು ಸಮರ್ಪಣೆ ಮಾಡಲು, ಬಿಂಬನಾದ ಶ್ರೀಹರಿಯು, ಕೈಕೊಂಡು=ಸ್ವೀಕರಿಸಿ, ಮನ್ನಿಸುವ=ಆದರಿಸುವ. ಶ್ರೀ ದಾಸಾರ್ಯರು ಕರ್ಮಜ ದೇವತೆಗಳು. ಬ್ರಹ್ಮಾಂಡದಲ್ಲಿರತಕ್ಕ ಎಲ್ಲಾ ಭಗವದ್ರೂಪೋಪಾಸಕರು. ಬಹು ಸುಲಭದಿಂದ ತಮ್ಮ ಬಿಂಬನಲ್ಲಿ ಅರ್ಪಿಸುವ ಬಗೆ ಆಜ್ಞಾಪಿಸಿದರು. ಆದರೆ ಮನುಜರಿಗೆ ಕರ್ಮಜ ದೇವತೆಗಳ ಜ್ಞಾನ ಧ್ಯಾನೋಪಾಸನವು ಇದೇ ಎಂದು ತಿಳಿದರೆ ಸಾಕು. ಅಧಿಕಾರದಂತೆ ಶ್ರೀಹರಿ ಒಲಿವ. ಎಲ್ಲಿ ನೋಡಿದರಲ್ಲಿ ಶ್ರೀಹರಿಯ ವಿಭೂತಿ ರೂಪಗಳು ಇರುವವು. ಶ್ರೀ ವಿಜಯದಾಸಾರ್ಯರು "ಧ್ಯಾನಾ ಮಾಡು ಮನವೆ ದೈನ್ಯವೃತ್ತಿ ಎಂಬ ಸುಳಾದಿ ೨೩, ಉಪಾಸನಾ ಭಾಗ, ಪುಟ ೭೭, ತಾಳ ೫-೬ ರೂಪ ಧ್ರುವದಲ್ಲಿ. ಮೇರು ಸಿಂಹಾಸನ

ಧಾರುಣಿ ಮಂಟಪ ತರಣಿ-ಚಂದ್ರಾಗ್ನಿ ದೀಪಗಳನೇ ಮಾಡು" ಇತ್ಯಾದಿ ವರ್ಣಿಸಿದಂತೆ ದಾಸಾರ್ಯರು ಅಪ್ಪಣೆ ಕೊಡಿಸಿದ್ದಾರೆ.

**ಭಾವಸೂಚನ :** ವಾರಿಜೇತಿ ॥ ಪದ್ಮ ॥ ಭೂರುಹ=ವೃಕ್ಷ ॥ ಇಯಂ ಚೇ ಕಾ ಕೃಷ್ಣ ಪೂಜಾ ॥ ೨೮ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

**ವಾರಿಜೇತಿ ॥ ಪದ್ಮಮ್ ॥**

**ಕನ್ನಡಾರ್ಥ**

ಈ ಪದ್ಯಾರ್ಥವು ಸುಲಭವಿರುವದರಿಂದ ಇಲ್ಲಿ ವ್ಯಾಖ್ಯಾನಿಸಿರುವದಿಲ್ಲ.

ಅವತರಣಿಕಾ : ೧೪ನೇ ಪದ್ಯದಿಂದ ಆರಂಭಿಸಿ ೧೮ ಪದ್ಯದವರೆಗೆ ೫ ಪದ್ಯಗಳಲ್ಲಿ ಮಂತ್ರಾಧ್ಯಾತ್ಮ ಯಜ್ಞತ್ವೇನ ಸಮರ್ಪಿಸುವದು ಬ್ರಾಹ್ಮಣ ಜಾತಿಯರ ಸ್ವಭಾವ ಗುಣಪ್ರವರ್ತಕ ಶ್ರೀ ವಾಸುದೇವ ನಾಮಕ ಹರಿಯು ವಿಭೂತಿಗಳೆಂದು, ಕ್ಷತ್ರಿಯ ಜೀವರಲ್ಲಿ ಸಂಕರುಷಣನೆಂದು ವರ್ಣಿಸುವರು.

ಮೂಲ :

**ಭೂಸುರರೊಳಿಪ್ಪಬ್ಜ ಭವನೊಳು ।**
**ವಾಸುದೇವನು ವಾಯು ಖಗಪ ಸ ।**
**ದಾಶಿವಹಿಪೇಂದ್ರನು ವಿವಸ್ವಾನ್ನಾಮಕ ಸ್ವೂರ್ಯ ॥**
**ಭೇಶಕಾಮುಮರಾಸ್ಯ ವರುಣಾ ।**
**ದೀ ಸುರರು ಕ್ಷತ್ರಿಯರೊಳಿಪ್ಪರು ।**
**ವಾಸವಾಗಿಹ ಸಂಕರುಷಣನ ನೋಡಿ ಮೋದಿಪರು ॥ ೨೯ ॥**

**ಪದ್ಯಾರ್ಥ :** ಭೂಸುರರೊಳಿಪ್ಪಬ್ಜ ಭವನೊಳು-ಭೂಸುರ-ಮಹೀಸುರ ಬ್ರಾಹ್ಮಣ ಶ್ರೇಷ್ಠರಲ್ಲಿ ಇರುವರ-ಬ್ರಾಹ್ಮಣ ಜಾತಿಗೆ ಅಭಿಮಾನಿಯಾದ ಅಬ್ಜ ಭವನೊಳು=ಕಮಲ ಸಂಭವನಾದ ಬ್ರಹ್ಮದೇವರಲ್ಲಿ, ವಾಸುದೇವ ನಾಮಕ ಪರಮಾತ್ಮನ ವಿಭೂತಿಯಿದ್ದುದರಿಂದಲೇ, ಅಧ್ಯಾತ್ಮ ಯಜ್ಞ, ಮಂತ್ರ ಯಜ್ಞ, ಜ್ಞಾನ ಧ್ಯಾನ ಯಜ್ಞಾದಿಗಳ ಕಾರ್ಯ ಪ್ರವರ್ತಿಸುವ ವಾಸುದೇವನಾಮಕ ಹರಿಗೆ ಇವುಗಳನ್ನು ಅರ್ಪಿಸುವದು. ಬ್ರಾಹ್ಮಣ ಜಾತಿಯ ಸ್ವಭಾವ, ದೇವತೆಗಳಲ್ಲಿ ಬ್ರಾಹ್ಮಣ ಜಾತಿಯವರಾರೆಂಬುದನ್ನು

ಈ ಸಂಧಿಯ ಸಾರದಲ್ಲಿ ಶ್ರೀ ವಿಜಯದಾಸರ ಸುಳಾದಿಯಂತೆ ವಿವರಿಸ ಲಾಗಿದೆ. ವಾಯು=ವಾಯುದೇವರು, ಖಗಪ=ಗರುಡದೇವರು, ಸದಾ ಶಿವ=ಸರ್ವದಾ ಮಂಗಳಪ್ರದವಾದ ಶ್ರೀರಾಮರೂಪಿ ಹರಿಯ ಧ್ಯಾನರತನಾದ ವೈಷ್ಣವೋತ್ತಮನಾದುದರಿಂದ ಸದಾಶಿವ ರುದ್ರದೇವರು, ಅಹಿಪ=ಶೇಷ ದೇವರು, ಇಂದ್ರದೇವರು. ವಿವಸ್ವಾನ್ನಾಮಕ ಸೂರ್ಯ, ಭೇಶ=ಚಂದ್ರ, ಕಾಮದೇವರು, ಅಮರಾಸ್ಯ=ದೇವತೆಗಳಿಗೆ ಮುಖವಾಗಿ ಸರ್ವ ಹವಿಸ್ಸನ್ನೂ ತನ್ನ ಮುಖದಿಂದ ಸ್ವೀಕರಿಸಿ, ಅವರವರ ಹವಿರ್ಭಾಗವನ್ನು ಅವರಿಗೆ ಕೊಡುವ ಅಗ್ನಿದೇವರು, ವರುಣದೇವರು, ಇವರೇ ಮೊದಲಾದ ಕ್ಷತ್ರಿಯ ಸ್ವಭಾವ ಜೀವರು–ಕ್ಷತ್ರಿಯ ಜಾತೀಯ ಸ್ವಭಾವ ಜೀವರಿಗೆ ಅಭಿಮಾನಿಗಳಾಗಿರು ವರು. ಇವರಲ್ಲಿ ಶ್ರೀ ಸಂಕರ್ಷಣರೂಪಿ ಹರಿಯನ್ನು ನೋಡಿ, ಮೋದಿಪರ– ಆನಂದಪಡುವರು. ಪದ್ಯ ೧೯ ಆರಂಭಿಸಿ ಪದ್ಯ ೨೩ ಶರೀರವೆ ಪಟ್ಟಣದಲ್ಲಿ ರುವ ನಾನಾ ವೈಭವಗಳನ್ನು, ಕೆಲವಿಭಾಗ ವೈಶ್ಯ ಗುಣಕರ್ಮಗಳನ್ನೂ ಅರ್ಪಿಸುವ ಬಗೆ, ಮತ್ತು ಈ ಶರೀರವೇ ರಥ, ರಥಿಕನಾದ ಹರಿಗೆ ಅರ್ಪಿಸುವ ಧ್ಯಾನೋಪಾಸನೆ ವಿಧಿಯನ್ನು ೨೪, ೨೫ ಪದ್ಯಗಳಿಂದ ವರ್ಣಿಸಿ, ಸಂಕರ್ಷ ಣನ ವಿಭೂತಿಯನ್ನು ವರ್ಣಿಸಿರುತ್ತಾರೆ.

**ಭಾವಸೂಚನ :** ಭೂಸುರೇತಿ=ವಿಪ್ರರು, ಸುರಾಸ್ಯ=ಅಗ್ನಿ ॥ ೨೯ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಭೂಸುರೇತಿ ॥ ಬೃಹದ್ ಭಾಷ್ಯೇ ತತ್ವ ನಿರ್ಣಯ ಗೀತಾಯಾಂ ಚ॥ ವಿಷ್ಣೋಃ ಬ್ರಾಹ್ಮಣ ಜಾತಿಃ ಸನ್ ಜಜ್ಞೇ ಬ್ರಹ್ಮಾ ಚತುರ್ಮುಖಃ ॥ ಇತೋಗ್ರೇ ಜಗತಃ ತಸ್ಮಾತ್ ಕ್ಷತ್ರಜಾತಿಃ ಅಜಾಯತ ॥ ವಾಯುಃ ಸದಾ ಶಿವೋನಂತೋ ಗರುಡಃ ಶಕ್ರ ಏವಚ ॥ ಕಾಮಶ್ಚ ವರುಣಶ್ಚೈವ ಸೋಮ ಸೂರ್ಯಾ ಯಮಸ್ತಥಾ ॥ ಏವಮಾದ್ಯಾಃ ಕ್ಷತ್ರಿಯಾಸ್ತು ದೇವಾನಾಂ ಬ್ರಹ್ಮನಿರ್ಮಿತಾಃ ॥ ಸೂರ್ಯೋ ವಿವಸ್ವಾನೇವ ಗ್ರಾಹ್ಯಃ ॥ ವಿವಸ್ವದಿಂದ್ರ ವರುಣ ವಿಷ್ಣುಭ್ಯೋನ್ಯೇಽದಿತೇಃ ಸುತಾಃ ॥ ರುದ್ರಾದನ್ಯೇ ತಥಾ ರುದ್ರಾಃ ವಾಯೋರನ್ಯೇ ಚ ವಾಯವಃ ॥ ಅಗ್ನೇರನ್ಯೇ ಚ ವಸವಃ ವೈಶ್ಯಾ ಇತ್ಯೇವ ಕೀರ್ತಿತಾಃ ॥ ಇತ್ಯುತ್ತರ ವಚನಾತ್ ॥ ೨೯ ॥

## ಕನ್ನಡಾರ್ಥ

"ಭೂಸುರರೊಳಿಪ್ಪಬ್ಜ ಭವನೊಳು" ಈ ಪದ್ಯದಲ್ಲಿ ಹೇಳಿರುವ ವರ್ಣಗಳ ವಿಷಯದಲ್ಲಿ ಬೃಹದಾರಣ್ಯ ಭಾಷ್ಯದಲ್ಲಿ "ತತ್ವನಿರ್ಣಯ ಗೀತಾ" ಎಂಬ ಪ್ರಮಾಣದ ವಚನಗಳನ್ನು ಉದಾಹರಿಸಿರುತ್ತಾರೆ. ಅವುಗಳನ್ನು ಇಲ್ಲಿ ತೋರಿಸುತ್ತೇವೆ. ಅವ್ಯಾಕೃತ ಬ್ರಾಹ್ಮಣದಲ್ಲಿ "ಬ್ರಹ್ಮಾವಾ ಇದಮಗ್ರ ಆಸೀತ್" ಎಂದು ಮುಂತಾಗಿ ಆರಂಭಿಸಿ ವರ್ಣ ಸೃಷ್ಟಿಯನ್ನು ನಿರೂಪಿಸ ಲಾಗಿರುತ್ತದೆ. ಈ ಜಗತ್ತಿಗೆ ಎಲ್ಲಕ್ಕೂ ಮೊದಲು "ಚತುರ್ಮುಖ"ನು ಇದ್ದನು. ಆವನು ಬ್ರಾಹ್ಮಣ ಜಾತಿಯಿಂದ ಯುಕ್ತನಾಗಿ ಶ್ರೀ ನಾರಾಯಣ ನಿಂದ ಎಲ್ಲಕ್ಕೂ ಪೂರ್ವದಲ್ಲಿ ಹುಟ್ಟಿದನು. ನಾರಾಯಣನಿಂದ ಬ್ರಾಹ್ಮಣ ವರ್ಣದಲ್ಲಿ ಜನಿಸಿದ ಚತುರ್ಮುಖ ಬ್ರಹ್ಮದೇವನಿಂದ ಕ್ಷತ್ರ ವರ್ಣವು ಉತ್ಪನ್ನವಾಯಿತು. ವಾಯು, ಗರುಡ, ಶೇಷ, ರುದ್ರ, ಇಂದ್ರ, ಕಾಮ, ವರುಣ, ಸೋಮ, ಸೂರ್ಯ, ಯಮ ಮುಂತಾದವರು ದೇವತೆಗಳಲ್ಲಿ ಕ್ಷತ್ರಿಯರು. ಇವರನ್ನು (ಈ ವರ್ಣಗಳನ್ನು) ಬ್ರಹ್ಮದೇವನು ಸೃಜಿಸಿದನು. ವಿವಸ್ವತ್ (ಸೂರ್ಯನು), ಇಂದ್ರ, ವರುಣ, ವಿಷ್ಣು ಇವರುಗಳಿಂದ ಭಿನ್ನ ರಾದ ದೇವತೆಗಳು, ಮುಖ್ಯ ರುದ್ರನನ್ನು ಬಿಟ್ಟು ಮಿಕ್ಕ ರುದ್ರರು, ಮುಖ್ಯ ವಾಯುವನ್ನು ಉಳಿದು ಇತರ ವಾಯುಗಳು, ಅಗ್ನಿಯನ್ನು ಉಳಿದು ಇತರ ವಸುಗಳು "ವೈಶ್ಯರು" ಎಂದು ಪ್ರಸಿದ್ಧರಾಗಿರುತ್ತಾರೆ ॥ ೨೯ ॥

ಅವತರಣಿಕಾ: ಇನ್ನು ವೈಶ್ಯಜಾತಿ "ಊರೂ ತದಸ್ಯ ಯದ್ವೈಶ್ಯಃ" ವೈಶ್ಯ ಜಾತೀಯ ಸ್ವಭಾವವುಳ್ಳ ಜೀವರಲ್ಲಿರುವ ಅಭಿಮಾನಿಗಳನ್ನು ತದ್ಗತ ಪ್ರದ್ಯುಮ್ನ ರೂಪಿ ಹರಿಯ ವಿಭೂತಿಯೆಂದು ವಿವರಿಸುತ್ತಾರೆ.

ಮೂಲ :

ಮೀನಕೇತನತನಯ ಪ್ರಾಣಾ ।
ಪಾನ ವ್ಯಾನೋದಾನ ಮುಖ್ಯೇ ।
ಕೋನ ಪಂಚಾಶ್ಮನರುದ್ಗಣ ರುದ್ರ ವಸುಗಣರು ॥
ಮೇನಕಾತ್ಮಜ ಕುವರ ವಿಷ್ವ ।
ಕ್ಸೇನ ಧನಪಾದ್ಯನಿಮಿಷರನು ಸ ।
ದಾನುರಾಗದಿ ಧೇನಿಪುದು ವೈಶ್ಯರೊಳು ಪ್ರದ್ಯುಮ್ನ ॥ ೩೦ ॥

**ಪದ್ಯಾರ್ಥ :** ಮೀನಕೇತನತನಯ=ಮೀನಚಿನ್ಹವೇ ಧ್ವಜವಾಗಿವುಳ್ಳ ಕಾಮದೇವರ ಮಗ ಅನಿರುದ್ಧದೇವನು, ಪ್ರಾಣ ಅಪಾನ ವ್ಯಾನ ಉದಾನ ಸಮಾನ ಈ ಐದು ಜನ ದಾಸ ಪ್ರಾಣರು, ಏಕೋನ ಪಂಚಾಶನ್ಮರುದ್ಗಣರು=೪೯ ಜನ ಮರುದ್ಗಣ ದೇವತೆಗಳು, ಇವರು (ಅಹಂಕಾರಿಕ ಪ್ರಾಣ=ಪ್ರವಾಹ ವಾಯುಗಳನ್ನು ಬಿಟ್ಟು) ೭ ಜನ ವಸುಗಣ ಮೇನಕಾತ್ಮಜ ಕುವರ=ಮೈನಾಕ ಪರ್ವತನ ಮಗಳಾದ ಪಾರ್ವತೀದೇವಿಯರ ಕುವರ ಗಣೇಶನು, ವಿಷ್ವಕ್‌ಸೇನ, ಕುಬೇರನೇ ಧನಪ, ಆದಿ ಮೊದಲಾದ ಅನಿಮಿಷರು=ನಿಮಿಷ ಎಂದರೆ ರೆಪ್ಪೆ. ರೆಪ್ಪೆಹಾಕದಿರುವ ದೇವತೆಗಳು, ವೈಶ್ಯಜಾತಿಗೆ ಅಭಿಮಾನಿಗಳು. ಇವರನ್ನು ಸದಾನುರಾಗದಿ=ಸರ್ವಕಾಲದಿ ಭಕ್ತಿಯಿಂದಾ ವೈಶ್ಯಜಾತೀಯ ಜೀವರೊಳು, ಶ್ರೀ ಪ್ರದ್ಯುಮ್ನದೇವರ ವಿಭೂತಿಯನ್ನು ಧೇನಿಸಬೇಕು. ಹಿಂದಿನ ಪದ್ಯ ೨೧ರಲ್ಲಿ ಅನುಭವಿಪ ವಿಷಯಗಳೆ, ಪಟ್ಟಣಕೆ, ಬಪ್ಪ ಪಸಾರಗಳು ಜೀವನು ಸುವರ್ತಕ, ಕಪ್ಪಗಳ ಕೈಕೊಂಬ ಹರಿ ತಾನು. ಇವೆಲ್ಲ ವೈಶ್ಯ ಜಾತೀಯ ಗುಣ ಸ್ವಭಾವ ಧರ್ಮಗಳು. ಮತ್ತು ಆಪಣಾಲಯವೆಂಬ ಪದ್ಯ (೨೭) ದಲ್ಲಿಯೂ, ವೈಶ್ಯ ಗುಣಧರ್ಮ ಪ್ರವರ್ತಕನಾದ ಪ್ರದ್ಯುಮ್ನನಿಗೆ ಧ್ಯಾನೋಪಾಸನ ರೂಪವಾಗಿ ಉಪದೇಶಿಸುವರು. ಇನ್ನು ಬ್ರಾಹ್ಮಣ ಕ್ಷತ್ರಿಯ ವೈಶ್ಯಜಾತಿ ಶೂದ್ರಜಾತಿ ದೇವತೆಗಳೇ ಆಯಾ ಜಾತಿಗಳಿಗೆ ಅಭಿಮಾನಿಗಳಾಗಿದ್ದರೂ, ದೇವತೆಗಳಲ್ಲಿ ಬ್ರಾಹ್ಮಣಾದಿ ಎಲ್ಲ ಜಾತೀಯ ಗುಣ ಧರ್ಮಗಳೂ ಸಮ್ಮಿಶ್ರವಾಗಿಪ್ಪವು. ಬೇರೆಬೇರೆಯಾಗಿಪ್ಪವು. "ವರ್ಣಾಶ್ರಮಗಳುಂಟು–ವರ್ಣ ಭೇದಗಳುಂಟು", ಇತ್ಯಾದಿ ಶ್ರೀ ವಿಜಯದಾಸರ ಭಾಗ್ಯವೇ ಸುಜ್ಞಾನ. ಅವರ ವಚನಗಳೇ ಶ್ರೀ ಹರಿಕಥಾಮೃತಸಾರಕ್ಕೆ ಪ್ರೋದ್ಬಲ. "ವಿಜಯರಾಯರ ಪಾದ ನಿಜವಾಗಿ ನಂಬಲು ಅಜನ ಪಿತ ತಾನೆ ಒಲಿವ."

**ಭಾವಸೂಚನ :** ಮೀನೇತಿ ॥ ಮೇನಕಾತ್ಮಜ ಕುವರ ಪಾರ್ವತೀ ಸುತ ಗಣೇಶ ॥ ೩೦ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಮೀನ" ಇತಿ ॥ ಇಚ್ಛನ್ ಬಹು ಪರೀವಾರವಾನ್ ವೈಶ್ಯಾನ್ ಜೀವಾನ್

ಸಸರ್ಜ ಹ॥ ಇತ್ಯುಕ್ತೇಃ ಅನಿರುದ್ಧಃ ॥ "ಏಕೋನ" ಇತಿ ॥ ರುದ್ರವಸುಷ್ವಪಿ ಅನ್ವೇತಿ ॥ ಕುವರಃ ಗಣೇಶಃ ॥ ೩೦ ॥

## ಕನ್ನಡಾರ್ಥ

"ಬಹು ಪರಿವಾರವನ್ನು ಇಚ್ಛಿಸುವ ಬ್ರಹ್ಮದೇವರು ವೈಶ್ಯದೇವತೆಗಳನ್ನು ಸೃಷ್ಟಿಮಾಡಿದರು" ಎಂದು ಶ್ರೀ ಬೃಹದ್ಭಾಷ್ಯದಲ್ಲಿ ಶ್ರೀಮದಾಚಾರ್ಯರು ಹೇಳಿರುವುದರಿಂದ ವೈಶ್ಯರಲ್ಲಿರುವ ಈ ದೇವತೆಗಳನ್ನು ಧ್ಯಾನಿಸಬೇಕು. ಮೀನಕೇತನ=ಪ್ರದ್ಯುಮ್ನ-ಕಾಮ. ಅವನ ತನಯಃ=ಅನಿರುದ್ಧ. ಮೇನಕಾತ್ಮಜೆ ಕುವರ=ಗಣೇಶ. ಮೇನಕಾತ್ಮಜೆ=ಮೇನಕಾ (ಪರ್ವತರಾಜನ ಹೆಂಡತಿ) ದೇವಿಯ ಮಗಳು ಪಾರ್ವತಿ. ಅವಳ ಮಗ=ಗಣೇಶ ॥ ೩೦ ॥

**ಅವತರಣಿಕಾ:** ಇನ್ನು ಶೂದ್ರಜಾತೀಯ ಜೀವರಲ್ಲಿಪ್ಪ ಅಭಿಮಾನಿ ದೇವತೆ ತಜ್ಜಾತೀಯ ಗುಣಕರ್ಮ ಪ್ರವರ್ತಕ, ಶ್ರೀ ಅನಿರುದ್ಧ ರೂಪಿ ಹರಿಯ ವಿಭೂತಿಯನ್ನು ಹೇಳುತ್ತಾರೆ.

**ಮೂಲ:**

> **ಇರುತಿಹರು ನಾಸತ್ಯದಸ್ರರು ।**
> **ನಿರುಋುತಿಯು ಯಮಧರ್ಮ ಕಿಂ ।**
> **ಕರರು ಮೇದಿನಿ ಕಾಲಮೃತ್ಯುಶನೇಶ್ಚರಾದಿಗಳು ॥**
> **ಕರೆಸಿಕೊಂಬರು ಶೂದ್ರರೆಂದನ ।**
> **ವರತ ಶೂದ್ರರೊಳಿಪ್ಪರಿವರೊಳ ।**
> **ಗರವಿದೂರನಿರುದ್ಧನಿಹನೆಂದರಿದು ಮನ್ನಿಪದು ॥ ೩೧ ॥**

**ಪದ್ಯಾರ್ಥ:** ನಾಸತ್ಯದಸ್ರರು-ನಾಸತ್ಯದಸ್ರುನಾಮಕ ಅಶ್ವಿನೀ ದೇವತೆಗಳು, ನಿರಃಋುತಿದೇವ, ಯಮಧರ್ಮರಾಜ, ಯಮ ಕಿಂಕರರು-ಯಮದೇವರ ಭೃತ್ಯರು, ಮೇದಿನಿ-ಭೂಮಿಗೆ ಅಮುಖ್ಯಾಭಿಮಾನಿ ಧರಾದೇವಿ, ಕಾಲ (ಯಮನ ಎರಡನೇ ರೂಪ) ಮೃತ್ಯುದೇವತೆ, ಶನೇಶ್ಚರಾದಿಗಳು=ಶನೇಶ್ಚರನೇ ಮೊದಲಾದ ದೇವತೆಗಳು. ಇವರು ಶೂದ್ರ ಜಾತಿಯವರೆಂದು ಕರೆಸಿಕೊಳ್ಳುವರು. ಅನವರತ ಇವರೆಲ್ಲರೂ ಶೂದ್ರ ಜಾತೀಯರಿಗೆ ಅಭಿಮಾನಿಗಳಾಗಿ ಶೂದ್ರ ಜಾತೀಯರಲ್ಲಿ ಇರುತಿಪ್ಪರು=ಇರುವರು.

ಇವರೊಳಗೆ ಅರವಿದೂರ=ದೋಷದೂರನಾದ, ಅನಿರುದ್ಧನಾಮಕ ಹರಿಯ ವಿಭೂತಿಗಳಿವೆಂದು, ಅರಿದು=ತಿಳಿದು, ಮನ್ನಿಪುದು=ಗೌರವಿಸುವುದು ಮರ್ಯಾದೆ ಮಾಡುವದು, ಭಕ್ತಿ ಪುರಸ್ಸರ ಶ್ರೀ ಅನಿರುದ್ಧನಾಮಕ ಹರಿಗೆ ವಂದನೆ ಮಾಡುವುದು.

**ಸೂಚನೆ:** ಶೂದ್ರ ಜಾತೀಯ ಗುಣಧರ್ಮ ಸೇವೆ ಮಾಡುವದು, ನಾವೆ ನಡೆಸುವ ಅಂಬಿಗರು, ಗುಹಾದಿಗಳು ಶೂದ್ರಜಾತೀಯರು. ರಾಜನಿಗೆ ನೌಕಾ ವಿಹಾರ ಸಮಯದಿ ರಾಜಸೇವಕರಾಗಿ, ನಾವೆ ನಡೆಸುವ ಧರ್ಮ ಗುಣಾದಿ ಪ್ರವರ್ತಕನು ಅನಿರುದ್ಧ ದೇವನೆಂದು ಭಾವಿಸಿ ದೇಹವೇ ಸುನಾವೆಯ ಮಾಡಿ, ಅರ್ಪಿಸು. ಪದ್ಯ ೨೬ರಲ್ಲಿ ಭವವೆನಿಪ ಕರ್ಮಪ್ರವಹದೊಳು, ದೇಹವೆ ಸುನಾವೆಯ ಹೂಡಿ, ಎಂಬುವಂತೆ ಶೂದ್ರಾದಿ ಜಾತಿಯ ಗುಣ ಧರ್ಮಗಳನ್ನು ಅರ್ಪಿಸುವ ಬಗೆ ಧ್ಯಾನೋಪಾಸನ ವಿಧಿ ಬಣ್ಣಿಸಿರುತ್ತಾರೆ.

ಜೀವರಿಗೆ ನಾನಾ ಯೋನಿ ಬರುತ್ತಲಿವೆ. ಬ್ರಾಹ್ಮಣಾದಿ ಯೋನಿ ಗಳಲ್ಲಿ ಚರಿಸುವಾಗ್ಗೆ, ಆಯಾ ಧ್ಯಾನ ಬಗೆ ವಿಚಾರಾಂಶವನ್ನು ಪೇಳಿದ ಸದ್ಗುರು ಗಳ ಕರುಣಾ ಮುಖ್ಯವಾದ ಇಂಥ ತಿಳುವಳಿಕೆ ಪುಟ್ಟಬೇಕಾದುದು ಭೂಸುರ ಜನ್ಮ ಸದ್ಗುರುಗಳ ಕೃಪೆಯಿಂದ ದೊರೆತಾಗ್ಗೆ ಬರುವದು.

**ಭಾವಸೂಚನ:** ಇರುತೇತಿ ॥ ನಾ ಸತ್ಯದಸ್ರರು ಅಶ್ವಿನೀ ದೇವತೆಗಳು॥ ವೈಶ್ಯರಲಿ ಇತಿ ಪೂರ್ವೇಣಾನ್ವಯಃ

**ಸೂಚನೆ :** ಈ ಕೆಳಗಿನ ಪ್ರಮಾಣಗಳನ್ನು ಹಿಂದಿನ ಪದ್ಯ ೨೯ ರಿಂದ ೩೧ರವರೆಗೆ ಪೂರ್ವದಿಂದ ಅನ್ವಯ ಹಚ್ಚಿಕೊಳ್ಳುವದೆಂದು ಟೀಕಾಕಾರರು ಹೇಳುತ್ತಾರೆ.

ಉಕ್ತಂ ಚ ವಿಷ್ಣು ರಹಸ್ಯೆ ॥ ಪಂಚತ್ರಿಂಶಾಧ್ಯಾಯೇ ॥ ಜಾತಿ ಭೇದಸ್ತು ದೇವೇಷು ಈಶ್ವರೇಚ್ಛಾ ನಿಬಂಧನಃ ॥ ಬ್ರಹ್ಮವರ್ಣ ಪತಿ ಬ್ರಹ್ಮಾಃ ನಾರದೋ ದೇವಲೋಸಿತಃ ॥ ಬ್ರಹಸ್ಪತಿ ರ್ಭೃಗುರ್ವಹ್ನಿರ್ಮರೀ ಚಾದ್ಯಾಃ ಸನಾದಯಃ ॥ ಋಷಯಃ ಪಿತರಃ ಸರ್ವೇ ಬ್ರಹ್ಮವರ್ಣ ಪ್ರಕೀ ರ್ತಿತಾಃ ॥ **ಕ್ಷತ್ರವರ್ಣಪತಿ** ರ್ವಾಯುಃ ಪ್ರಾಣಸ್ಸೂತ್ರಂ ಯ ಈರಿತಃ ॥ ರುದ್ರಾದ್ಯಾ ಪ್ರಾಯಕೋ ದೇವಾ ಕ್ಷತ್ರವರ್ಣ ಉದೀರಿತಾಃ ॥ ೨೯ ॥

ಅಶ್ವಿನೀ ಧನದೋ ವಿಶ್ವಕರ್ಮಾ ವಿದ್ಯಾಧರಾದಯಾಃ । ವೈಶ್ಯವರ್ಣಾ ಪತಿಂತೇಷಾಂ ಧನದಂ ವ್ಯಧದಾದ್ಧರಿಃ ॥ ೩೦ ॥

ಏವಮೇವ (ಷ)ಯಮೋದೇವೋ ಧರ್ಮ-ಕಾಲ ಇತಿದ್ವಿಧಾ ॥ ಧರ್ಮೋ ವಿಪ್ರ ಕಲೋ ಶೂದ್ರ ವರ್ಣಾಧ್ಯಕ್ಷೋಥ ದೂತಕಾಃ ॥ ಯಕ್ಷಾಶ್ಚ ಗುಹ್ಯಕಾಃಶ್ಚಾಪಿ ಶೂದ್ರವರ್ಣಾ ಪ್ರಕೀರ್ತಿತಾಃ ಇತಿ ॥ ೩೧ ॥ ರುದ್ರರು ಮಹೇಶ ರೈವತ ಭೀಮ ಘೋರ ತತ್ಪುರುಷ ಭವ ಅಜೈಕಪಾದ ಅಹಿರ್ಬುಧ್ನಿ ವಿರೂಪಾಕ್ಷ ಮೂಲ ರುದ್ರಾಯಂತ ॥ ಪ್ರಾಣೇತಿ । ಪ್ರಾಣಾಪಾನವ್ಯಾನೋದಾನ ಸಮಾನ ನಾಗ ಕೃಕಳ ಕೂರ್ಮ ದೇವದತ್ತ ಧನಂಜಯ ಪ್ರವಹ ವಿವಹ ಶಂಭು ಸಂವಹ ಪರಾವಹ ಉದ್ವಹ ಆವಹ ಶಂಕು ಕಿಲ ಶ್ವಾಸ ಅನಿಳ ನಿಳ ಪ್ರತಿಭ ಕುಮುದ ಕಾಂತಿ ಶುಚಿ ಶ್ವೇತ ಜಿತ ಗುರು ಸಂಜ್ಞ ಪ್ರವರ್ತಕ ಕಾಲ ದ್ವಿತ ಸಾಮ್ಯ ಕಪಿ ಜಡ ಮಂಡೂಕ ಸಂತತ ಸಿದ್ಧ ರಕ್ತ ಕೃಷ್ಣ ಪಿಕ ಶುಕ ಯತಿ ಭೀಮರನುಪಿಂಗಾ ಅಹಂಪ್ರಾಣ ಕಂಪನರು ಇವು ಈ ಮಹಾತ್ಮ ಮರುತರ ಸುನಾಮಗಳು ವಿಷ್ಣು ರಹಸ್ಯೋಕ್ತಗಳು ॥ ೩೧ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಇರುತಿಹರು" ಇತಿ ॥ ತತೋ ಬಹುತರಾನ್ ಇಚ್ಛನ್ ಶೂದ್ರಾನ್ ದೇವಾನ್ ಸಸರ್ಜ ಹ ॥ ಅಶ್ವಿನಾ ಪೃಥಿವೀ ಚೈವ ಕಾಲಮೃತ್ಯವ ಏವಚ ॥ ಶೂದ್ರವರ್ಣಾಃ ಸಮುದ್ದಿಷ್ಟಾಃ ದೇವವರ್ಣಾಃ ಇತಿ ಸ್ಮೃತಾಃ ॥ ಇತಿ ॥ ಧನದಸ್ಯ ವೈಶ್ಯತ್ವೇ ತತ್ಸಮಾನಾಶ್ವಿನೋರಪಿ ತತ್ವಂ ನ್ಯಾಯ್ಯಮ್ ॥ ಕಥಂ ಶೂದ್ರತಾ ? ಇತಿ ಚೇತ್ ಉಚ್ಯತೇ ॥ ಉಭಯ ಜಾತಿತ್ವಮಪಿ ತೇಷಾಂ ಅಸ್ತಿ ॥ ನನು ಕುತ ಏತತ್ । ಮೂಲೇ ಅಶ್ವಿನೋಃ ನಾಮತೋ ಗ್ರಹಣಾತ್ ॥ ಸಾಮ್ಯೇಪಿ ಬೃಹದ್‌ಭಾಷ್ಯಬಲಾತ್ ಶೂದ್ರತ್ವೈವ (ಏ) ಇಷ್ಟವ್ಯಾ॥ ನ ಉಭಯ ನಿವೇಶಃ ಇತಿ ಚೇತ್ ನ ॥ ಅನ್ಯತ್ರ ನಿರ್ದಿಶ್ಯ ವೈಶ್ಯತೋಕ್ತ್ಯಾ ಉಭಯ ವಿಧವಾಕ್ಯ ಶಾಬಲ್ಯಾನ್ಯಥಾನುಪಪತ್ತ್ಯೈವ ಇತ್ಥಮಿತಿ ನಿರ್ಣಯೋಪಪತ್ತೇಃ ॥ ಪಂಚವಿಂಶಾಧ್ಯಾಯ ವಿಷ್ಣುರಹಸ್ಯೇ ಚ ಜಾತಿಭೇದಶ್ಚ ದೇವೇಷು ಈಶ್ವರೇಚ್ಛಾ ನಿಬಂಧನಃ ॥ ಬ್ರಹ್ಮವರ್ಣಪತಿಃ ಬ್ರಹ್ಮಾ ನಾರದೋ ದೇವ ಲೋಕಿತಃ ॥ ಬೃಹಸ್ಪತಿ ರ್ಭೃಗುರ್ವಹ್ನಿಃ ಮರೀಚ್ಯಾದ್ಯಾಃ ಸನಾದಯಾಃ ॥ ಋಷಯಃ ಪಿತರಃ ಸರ್ವೇ ಬ್ರಾಹ್ಮಣಾಃ ಪರಿಕೀರ್ತಿತಾಃ ॥ ಇತಿ ॥ ಕ್ಷತ್ರವರ್ಣ

ಪತಿಃ ವಾಯುಃ ಪ್ರಾಣಃ ಸೂತ್ರಂ ಯ ಈರಿತಃ॥ ರುದ್ರಾದ್ಯಾಃ ಪ್ರಾಯಶೋ ದೇವಾಃ ಕ್ಷತ್ರವರ್ಣಾ ಉದೀರಿತಾಃ ॥ ಅಶ್ವಿನೌ ಧನದೋ ವಿಶ್ವಕರ್ಮಾ ವಿದ್ಯಾಧರಾದಯಃ ॥ ವೈಶ್ಯವರ್ಣಾಃ ಪತಿಂ ತೇಷಾಂ ಧನದಂ ವ್ಯದಧಾತ್ ಹರಿಃ ॥ ಏವಮೇವ ಯಮೋ ದೇವೋ ಧರ್ಮಃ ಕಾಲಃ ಇತಿದ್ವಿಧಾ ॥ ಧರ್ಮೋ ವಿಪ್ರಃ ಕಾಲಃ ಶೂದ್ರಃ ಶೂದ್ರವರ್ಣಾಧ್ಯಕ್ಷೋಽಥ ದೂತಕಾಃ ॥ ಯಕ್ಷಾಶ್ಚ ಗುಹ್ಯಕಾಶ್ಚಾಪಿ ಶೂದ್ರವರ್ಣಾಃ ಪ್ರಕೀರ್ತಿತಾಃ ॥ ವಿಶ್ವಾವಸುಃ ಚಿತ್ರರಥಃ ತಥಾ ಚಿತ್ರಾಂಗದಾದಯಃ॥ ಅಷ್ಟೌ ಗಂಧರ್ವಪತಯಃ ಪ್ರೋಕ್ತಾ ಮೂರ್ಧಾನ ಸಿಕ್ತಕಾಃ ॥ ಇತಿ ॥

## ಕನ್ನಡಾರ್ಥ

"ಅತ್ಯಧಿಕತರ ಸಂಖ್ಯೆಯಲ್ಲಿ ಪರಿವಾರವನ್ನು ಇಚ್ಛಿಸುವವನಾಗಿ ಬ್ರಹ್ಮ ದೇವನು ಶೂದ್ರವರ್ಣದ ದೇವತೆಗಳನ್ನು ಸೃಜಿಸಿದನು. ಅಶ್ವಿನೀ ದೇವತೆಗಳು, ಧರಾ (ಭೂಮಿ) ಕಾಲಮೃತ್ಯು ಇವರು ಶೂದ್ರರು" ಎಂದು ಬೃಹದಾರಣ್ಯ ಭಾಷ್ಯದಲ್ಲಿ ಹೇಳಲ್ಪಟ್ಟಿರುವದರಿಂದ "ಇರುತಿಹರು" ಎಂದು ಮೂಲ ಪದ್ಯದಲ್ಲಿ ಹೇಳಿದ ಶೂದ್ರವರ್ಣದ ದೇವತೆಗಳ ನಿರೂಪಣವು ಸಪ್ರಮಾಣವಾಗಿರುತ್ತದೆ. ಕುಬೇರನು ವೈಶ್ಯನು. ಅವನಿಗೆ ಸಮಾನರಾದ ಅಶ್ವಿನೀ ದೇವತೆಗಳೂ ವೈಶ್ಯರೇ ಅಗಬೇಕು-ಇದು ನ್ಯಾಯಸಿದ್ಧವಾದುದು. ಆದರೆ ಅಶ್ವಿನೀ ದೇವತೆಗಳು ಶೂದ್ರರು ಹೇಗೆ ? ಯಾಕೆ ? ಎಂದು ಆಕ್ಷೇಪವು ಬರಬಹುದು. ಆದರೆ ಇದಕ್ಕೆ ಸಮಾಧಾನವಿಷ್ಟೆ. ಅಶ್ವಿನೀ ದೇವತೆಗಳಿಗೆ ಎರಡೂ ಜಾತಿ ಗಳಿರುತ್ತವೆ. ಮೂಲ (ಉಪನಿಷತ್ತು)ದಲ್ಲಿ ಅಶ್ವಿನೀ ದೇವತೆಗಳನ್ನು ಪರಿ ಗಣಿಸಿಲ್ಲವಾದುದರಿಂದ ಹೇಗೆ ಹೇಳಬಹುದು? ಆದರೆ ಶ್ರೀಮದ್ಭಾಷ್ಯದಲ್ಲಿ ಸ್ಪಷ್ಟವಾಗಿ ಹೇಳಿರುವದರಿಂದ ಅಶ್ವಿನೀ ದೇವತೆಗಳು ಕುಬೇರನಿಂದ ಸಮ ರಾದರೂ ಶೂದ್ರರೇ ಇರುವರು ಎಂದು ಒಪ್ಪಬೇಕಾಗುತ್ತದೆ. ಹಾಗಾದರೆ ಅವರಿಗೆ "ವೈಶ್ಯ-ಶೂದ್ರ" ಉಭಯ ಜಾತಿಗಳನ್ನು ಹೇಳಿದಂತಾಗಲಿಲ್ಲವೇ ಎಂದು ಸಂಶಯ ಬರಬಹುದು. ಆದರೆ ಬೇರೆ ಬೇರೆ ಸ್ಥಳಗಳಲ್ಲಿ ಸ್ಪಷ್ಟವಾಗಿ "ವೈಶ್ಯ"ರೆಂದು ನಿರ್ದೇಶದಿಂದ ಹೇಳಿರುತ್ತಾರೆ. ಈಗ ಉಭಯ ವಿಧ ವಾಕ್ಯಗಳಿಗೆ ಗತಿಯನ್ನು (ಏಕಾರ್ಥವನ್ನು) ಕಲ್ಪಿಸಿ-ವಿರೋಧ ಪರಿಹಾರ ಮಾಡಲು ಹೀಗೆ ಹೇಳಬೇಕಾಗುತ್ತದೆ. ವಿಷ್ಣು ರಹಸ್ಯದ ಇಪ್ಪತ್ತೈದನೆಯ

ಅಧ್ಯಾಯದಲ್ಲಿ "ದೇವತೆಗಳಲ್ಲಿ ಜಾತಿಭೇದವು ಭಗವದಿಚ್ಛೆಯಿಂದ ಉಂಟಾಗಿರುತ್ತದೆ. ಬ್ರಾಹ್ಮಣ ವರ್ಣಕ್ಕೆ ಪತಿಯು (ಅಭಿಮಾನಿಯು) ಚತುರ್ಮುಖನು. ಬ್ರಹ್ಮ, ನಾರದ, ದೇವಲ, ಅಸಿತ, ಬೃಹಸ್ಪತಿ, ಭೃಗು, ಅಗ್ನಿ, ಮರೀಚಿ ಮುಂತಾದ ಸನಕಾದಿ ಋಷಿಗಳು, ಪಿತೃಗಳು. ಇವರೆಲ್ಲರೂ "ಬ್ರಾಹ್ಮಣರು" ಎಂದು ಪ್ರಸಿದ್ಧರಾಗಿಗುತ್ತಾರೆ. ಕ್ಷತ್ರವರ್ಣ ನಿಯಾಮಕ (ಅಭಿಮಾನಿ) ವಾಯು, ಪ್ರಾಣ, ಸೂತ್ರ ಎಂದು ಹೇಳಿಸಿಕೊಳ್ಳುವವನು. ರುದ್ರ ಮುಂತಾದ ದೇವತೆಗಳು ಪ್ರಾಯಶಃ ಕ್ಷತ್ರಿಯ ವರ್ಣದವರು. ಅಶ್ವಿನೀ ದೇವತೆಗಳು, ಕುಬೇರ, ವಿಶ್ವಕರ್ಮ, ವಿದ್ಯಾಧರ ಮುಂತಾದವರು ವೈಶ್ಯ ವರ್ಣದವರು. ಇವರಿಗೆ ಕುಬೇರನನ್ನು ಪತಿಯನ್ನಾಗಿ ಶ್ರೀಹರಿಯು ನಿಯೋಜಿಸಿದನು. ಹೀಗೆಯೇ ಯಮನು "ಧರ್ಮ, ಕಾಲ" ಎಂದು ಎರಡು ರೂಪಗಳುಳ್ಳವನು. ಧರ್ಮನು ವಿಪ್ರನು. ಕಾಲನು ಶೂದ್ರನು. ಕಾಲನು ಶೂದ್ರವರ್ಣಕ್ಕೆ ಸ್ವಾಮಿಯು. ಯಮದೂತರೂ, ಯಕ್ಷರೂ-ಗುಹ್ಯಕರೂ, ಶೂದ್ರವರ್ಣಕ್ಕೆ ಸೇರಿದವರು. ವಿಶ್ವಾವಸು-ಚಿತ್ರರಥ, ಚಿತ್ರಾಂಗದ ಮುಂತಾದ ಎಂಟು ಗಂಧರ್ವ ಪತಿಗಳು, "ಮೂರ್ಧಾವಸಿಕ್ತರು" "ಕ್ಷತ್ರಿಯರು" ಎಂದು ಪ್ರಸಿದ್ಧರಾಗಿರುತ್ತಾರೆ ಎಂದು ವರ್ಣಗಳನ್ನು ವಿಭಜಿಸಿ ವಿವರಿಸಿ ನಿರೂಪಿಸುವಾಗ "ಅಶ್ವಿನೀ ದೇವತೆಗಳನ್ನು ವೈಶ್ಯರೆಂದು" ಪರಿಗ್ರಹಿಸಿ ನಿರೂಪಿಸಿರುತ್ತಾರೆ.

ಅವತರಣಿಕಾ: ಮೂಲರೂಪಿ ನಾರಾಯಣನು ಬ್ರಾಹ್ಮ ಕ್ಷತ್ರ ವೈಶ್ಯ ಶೂದ್ರ ನಾಲ್ಕು ವರ್ಣ ರಕ್ಷಕನು. ತತ್ತಜ್ಜಾತಿ ಧರ್ಮ ಕರ್ಮ ಪ್ರವರ್ತಕ ಅಂತಃಪ್ರೇರಕನೆಂದೂ ಈ ಪದ್ಯದಿಂದ ಹೇಳುತ್ತಾರೆ.

ಮೂಲ:

**ವೀತಭಯ ನಾರಾಯಣ ಚತುಃ ।**
**ಪಾತು ತಾನೆಂದೆನಿಸಿ ತತ್ತ ।**
**ಜ್ಜಾತಿ ಧರ್ಮ ಸುಕರ್ಮಗಳ ತಾ ಮಾಡಿ ಮಾಡಿಸುತ ॥**
**ಚೇತನರ ಒಳಹೊರಗೆ ಓತ ।**
**ಪ್ರೋತನಾಗಿದ್ದೆಲ್ಲರಿಗೆ ಸಂ ।**
**ಪ್ರೀತಿಯಲಿ ಧರ್ಮಾರ್ಥ ಕಾಮಾದಿಗಳ ಕೊಡುತಿಹನು ॥೩೨॥**

**ಪದ್ಯಾರ್ಥ :** ವಿತಭಯ=ಹೋಗಲ್ಪಟ್ಟ ಭಯವುಳ್ಳವನೆಂದರೆ, ಸರ್ವತಂತ್ರ ಸ್ವತಂತ್ರ. ಮಹಾ ಪ್ರಳಯೋದಕದಲ್ಲಿ ವಟಪತ್ರಶಾಯಿಯಾದ ಶೂನ್ಯನಾಮಕ ಹರಿಗೆ ಆವ ಭಯ. ಈ ನಾರಾಯಣನೇ ಮುಕ್ತಾಶ್ರಯ. ಉದಕಗಳಿಗೆ ಆಶ್ರಯನಾದ ಮೂಲ ನಾರಾಯಣ ನಾಮಕ ಶ್ರೀಹರಿಯು, ಚತುಃಪಾತು ತಾನೆಂದೆನಿಸಿ=ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಈ ನಾಲ್ಕು ಜಾತೀಯ ಗುಣಸ್ವಭಾವವುಳ್ಳ ನಾಲ್ಕು ಜಾತಿಯರಿಗೆ ಸಂರಕ್ಷಕನು ಎನಿಸುತ್ತಾನೆ. ತತ್ತಜ್ಜಾತಿ ಧರ್ಮ ಸುಕರ್ಮಗಳ ತಾ ಮಾಡಿ ಮಾಡಿಸುತ= ಆಯಾ ಜಾತಿಗಳ ಧರ್ಮ=ಸ್ವಭಾವ ಗುಣಪ್ರವರ್ತಕನೂ, ಸುಕರ್ಮಗಳ= ವೇದವಿಹಿತವಾದ ಒಳ್ಳೇ ಕರ್ಮಗಳನ್ನೂ ಆಯಾ ಜಾತಿಯರಿಗೆ ಅನುಕೂಲವಾದ ಕ್ರಿಯೆಗಳನ್ನೂ ಮಾಡಿಸುತ್ತಾ, ಚೇತನರ ಒಳಹೊರಗೆ=ಸಕಲ ಜೀವಿಗಳೊಳಗೆ ಅಂತರ್ನಿಯಾಮಕನಾಗಿ, ಹೊರಗೆ=ಬಹಿಃಕಾಲ ರೂಪದಿಂದ ಸಕಲ ಧರ್ಮ ಕರ್ಮಾಚರಣೆಗಳನ್ನೂ ತನ್ನ ವಿಭೂತಿ ರೂಪಗಳಿಂದಲೇ ಮಾಡಿಸುತ್ತಾ, ಓತಪ್ರೋತನಾಗಿ=ಉದ್ದ ಅಗಲ ಅಡ್ಡನೆಯ್ದ ವಸ್ತ್ರದಂತೆ ಸುತ್ತಲೂ ಒಂದೇ ಸಮವ್ಯಾಪ್ತನಾಗಿದ್ದು, ಎಲ್ಲರಿಗೆ ಸಕಲ ಜಾತಿಯ ಚೇತನರಿಗೆ, ಸಂಪ್ರೀತಿ ಯಲಿ=ತಾಯಿಯು ಮಕ್ಕಳ ಮೇಲಿನ ಪ್ರೀತಿಯಿಂದ ರಕ್ಷಿಸುವಂತೆ, ಆಯಾ ಜಾತಿ ಧರ್ಮ ಕರ್ಮಾನುಸಾರ ಅವರವರಿಗೆ ಧರ್ಮ ಅರ್ಥ ಕಾಮ ಮೋಕ್ಷಾದಿ ಚತುರವಿಧ ಪುರುಷಾರ್ಥಗಳನ್ನು ಕೊಡುತಿಹ ನಾರಾಯಣನೇ ಎನ್ನ ಬಿಂಬ ನೆಂದು ತಿಳಿದು ಧ್ಯಾನಿಸು.

**ಭಾವಸೂಚನ :** ವೀತಭಯೇತಿ । ವಿದ್ವತ್ತಮೋವೀತ ಭಯ ಇತಿ ನಾಮ ಸುಪಾಠಾತ್ ॥ ಚತುಷ್ಪಾತ್ ॥ ಶ್ವೇತದ್ವೀಪಾದಿ ಲೋಕತ್ರಯ ಸರ್ವರಂತರ್ಗತ ರೂಪಗಳು ॥ ೩೨ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ವೀತೇತಿ ॥ "ವಿದ್ವತ್ತಮೋ ವೀತಭಯಃ" ಇತ್ಯುಕ್ತೇಃ ॥* ಓಂ ಜನಾ ಇಮೇ ವಿಹ್ವಯಂತೇ ತನಾ ಗಿರಾ ॥ ಅಸ್ಮಾಕೇಭಿರ್ನೃಭಿರ್ವಯಂ ಸಾಸ ಹ್ಯಾಮ ಪೃತನ್ಯತೋ ವನುಯಾಮ ವನುಷ್ಯತಃ* ॥ ಓಂ ॥ ಭಕ್ತೇಭ್ಯಃ

* ಈ ಚಿಹ್ನೆಗಳ ನಡುವೆ ಇರುವ ಋಕ್ಕುಗಳು ಬೃಹತೀ ಸಹಸ್ರದೊಳಗಿನವು. "ಬೃಹತೀ ಸಹಸ್ರ" ಗ್ರಂಥವು ಅತಿ ಅಪೂರ್ವವಿದ್ದು, ಅದು ಅಮುದ್ರಿತವೂ ದುರ್ಲಭವೂ

ವೀತಂ ವಿಗತಂ ಭಯಂ ಯಸ್ಮಾತ್ ಸಃ ತಥೋಕ್ತಃ ॥ ಚತುಷ್ಪಾತ್ "ಪಾದೋಽಸ್ಯ" ಇತಿ ಶ್ರುತೇಃ ॥ ೩೨ ॥

### ಕನ್ನಡಾರ್ಥ

"ವೀತಭಯ" ಇದು ವಿಷ್ಣು ಸಹಸ್ರನಾಮದೊಳಗಿರುವ ಒಂದು ನಾಮ. ಬೃಹತೀ ಸಹಸ್ರ ಋಕ್ಕು ಇದರ ಅರ್ಥವನ್ನು ವಿವರಿಸುತ್ತದೆ. ಬೃಹತೀ ಋಗರ್ಥವನ್ನು ಒಟ್ಟಿಗೇ ಕೊಡಲಾಗುತ್ತದೆ.

ಭಕ್ತರಿಗೆ (ಬರುವ) ಭಯಗಳು ಯಾವನಿಂದ ಅಳಿದು ಹೋಗುವವೋ ಅವನು "ವೀತಭಯ"=ನಾರಾಯಣ. ಚತುಷ್ಪಾತ್ "ಪಾದೋಽಸ್ಯ ವಿಶ್ವಾ ಭೂತಾನಿ" ಎಂದು ಪುರುಷ ಸೂಕ್ತದಲ್ಲಿ ಹೇಳಿದಂತೆ ಶ್ರೀಮನ್ನಾರಾಯಣನು ಚತುಷ್ಪಾತ್ ಒಂದು ಪಾದ ಪರಿಮಿತವಾದ ಅಂಶದಿಂದ ವಿಶ್ವವು ತುಂಬಿ ಹೋಗಿರುತ್ತದೆ. ಮಿಕ್ಕ ಮೂರು ಪಾದಗಳು ಅವನ "ಸ್ವರೂಪಾಂಶಗಳು" ಎಂದು ಶ್ರುತಿಯ ಅರ್ಥ ॥ ೩೨ ॥

**ಅವತರಣಿಕಾ :** ಶ್ರೀ ನಾರಾಯಣನ ಅನಂತ ಶುಭನಾಮಗಳನ್ನು ತತ್ತನ್ನಾಮ ಗುಣೋಪಸಂಹಾರಪೂರ್ವಕ ಸ್ತೋತ್ರಗೈಯ್ಯುತ್ತಾ ಬ್ರಹ್ಮಾಂಡ ಬಹಿ ಅಂತಃ ಸರ್ವ ಪದಾರ್ಥಗಳಲ್ಲಿ ವ್ಯಾಪ್ತನಾಗಿರುವ ವಿಭೂತಿ ಗುಣ ನಾಮಗಳನ್ನು ವೈಮರೆದು ಸ್ತೋತ್ರಗೈಯ್ಯುತ್ತಾರೆ.

ಮೂಲ :

**ನಿಧನ ಧನದ ವಿಧಾತ ವಿಗತಾ ।**
**ಭ್ಯಧಿಕ ಸಮ ಸಮವರ್ತಿ ಸಾಮಗ ।**
**ತ್ರಿದಶಗಣ ಸಂಪೂಜ್ಯ ತ್ರಿಕಕುದ್ಧಾಮ ಶುಭನಾಮ ॥**

---

ಆಗಿರುತ್ತದೆ. ಆ ಗ್ರಂಥವನ್ನು ಸಂಗ್ರಹಿಸಿ ಈ ವ್ಯಾಖ್ಯಾನಕಾರರು ಅಲ್ಲಲ್ಲಿ ಉದಾಹರಿಸಿರುವ ಋಕ್ಕುಗಳ ಅರ್ಥವನ್ನು ಒಂದೇ ಕಡೆಗೆ ಸೇರಿಸಿ ಬರೆಯುವ ವಿಚಾರವಿರುತ್ತದೆ. ಗ್ರಂಥವು ದೊರೆತ ನಂತರ ವಿಷ್ಣು ಸಹಸ್ರನಾಮಗಳ ಋಗ್ವಿವರಣವನ್ನು ಕನ್ನಡದಲ್ಲಿ ಬರೆಯುತ್ತೇವೆ. ಕಾರಣ, ವಾಚಕರು ಇಲ್ಲಿ ಈ ಋಗರ್ಥವನ್ನು ಬರೆಯದಿರುವದರಿಂದ ಅನುವಾದಕರಲ್ಲಿ ಕ್ಷಮೆಯನ್ನು ತೋರಿಸಲಿ.

—**ಅನುವಾದಕರು.**

**ಮಧುಮಥನ ಭೃಗುರಾಮ ಘೋಟಕ ।**
**ವದನ ಸರ್ವ ಪದಾರ್ಥದೊಳು ।**
**ತುದಿಮೊದಲು ತುಂಬಿಹನೆಂದು ಚಿಂತಿಸು ಬಿಂಬರೂಪದಲಿ**
**॥ ೩೩ ॥**

**ಪದ್ಯಾರ್ಥ :** ನಿಧನ=ಆದಿರುತ್ಪತ್ತಿ-ರ್ನಿಧನಂ ನಾಶಾಸ್ತಯೋರಭಾವಾಃ ಬಂಧಯಸ್ಯಾ ನಿಧನಃ=ಉತ್ಪತ್ತಿ, ನಾಶ ಬಂಧ ಯಾರಿಗೆ ಇಲ್ಲವೋ ಅವನು=ನಿಧನನೆಂದು ಶ್ರೀಹರಿಗೆ ಹೆಸರು. ಅನಾದಿ ನಿಧನಃ ಎಂದು ವಿಷ್ಣು ಸಹಸ್ರನಾಮ. ಧನದ=ಬ್ರಹ್ಮಾದೀನಾಂ ಅವ್ಯಯ ಧನದ=ಬ್ರಹ್ಮಾದಿಗಳಿಗೆ ವ್ಯಯ ರಹಿತವಾದ ಜ್ಞಾನಧನ ಸಂಪತ್ತು ಕೊಡುವವನು. ವಿಧಾತ=ಸಾಮಾನ್ಯೇನ ಧಾರಣ ಪೋಷಣಕರ್ತಾ, ವಿಶೇಷೇಣ ಪೋಷಣಕರ್ತಾ ವಿಧಾತ, ವಿಶೇಷವಾಗಿ ಅಂದರೆ ಅನ್ಯಾಪೇಕ್ಷಾರಹಿತನಾಗಿ ಸಕಲ ಜಗತ್ತನ್ನೂ ಸಂರಕ್ಷಣ ಮಾಡುವವನು ಶ್ರೀಹರಿ. "ವಿಧಾತಾ ಧಾತುರುತ್ತಮಃ ಎಂದು ಸಹಸ್ರನಾಮ. ವಿಗತಾಭ್ಯಧಿಕಮ. ವಿಗತ+ಅಭಿ+ಅಧಿಕ=ಹೋಗಲ್ಪಟ್ಟ, ಅಧಿಕ ಶ್ರೀಹರಿಗೆ ಅಧಿಕರು ಸಮಾನರೂ ಯಾರೂ ಇಲ್ಲ. ಸಮವರ್ತೀ=ಎಲ್ಲ ಪ್ರಾಣಿಗಳಲ್ಲಿ ಎಲ್ಲ ದೇಶಕಾಲಗಳಲ್ಲಿ ಒಂದೇ ರೀತಿಯಾಗಿ ಇರುವ "ಶುನಿಚೈವಶ್ವಪಾಕೇಚ ಪಂಡಿತಾಃ ಸ್ಸಮದರ್ಶಿನಃ" ಅಥವಾ ಸಂಸಾರ ಚಕ್ರ ಸಮ್ಯಗಾವರ್ತಯತಿ ಸಮವರ್ತಿ ಅಥವಾ ಸಮವರ್ತಿ=ಯಮ, ಕ್ರೂರ ದೈತ್ಯ ಸ್ವಭಾವವುಳ್ಳವರನ್ನು ದಂಡಿಸುವ ಯಮ. ಸಾಮಗ=ಸಾಮಗಾಯತೀತಿ ಸಾಮಗಃ-ಸಾಮ ವೇದಗಳಿಂದ ಗಾನ ಮಾಡಿಸಿಕೊಳ್ಳುವವ. ತ್ರಿದಶಗಣ ಸಂಪೂಜ್ಯ=ದೇವತೆಗಳ ಸಮೂಹದಿಂದ ಸಮ್ಯಕ್ ಪೂಜೆಗೊಳ್ಳುವವ. ತ್ರಿಕ್‌ಕುದ್ಧಾಮ=ತ್ರಿಸ್ರಃಕಕುಭಃ ವೈಕುಂಠಾದಯೋಲೋಕಾ ತ್ರಿಕ್‌ಕುಪ್, ತ್ರೀಣಿಧಾಮಾನಿವೈ ವಿಷ್ಣೋಃ ಶ್ವೇತದ್ವೀಪ ಅನಂತಾಸನ, ವೈಕುಂಠ ನಿತ್ಯಧಾಮವುಳ್ಳ ಹರಿ. ಶುಭನಾಮ=ಕಲ್ಯಾಣ ಮಂಗಳಕರವಾದ ಅನಂತ ನಾಮವುಳ್ಳವ, ಮಧುಮಥನ=ಮಧುನಾಮಕ ದೈತ್ಯರನ್ನು ಸಂಹರಿಸಿದ ಮಧುಸೂದನ ನಾಮಕ ಹರಿ. ಭೃಗುರಾಮ=ಭೃಗುಕುಲೋತ್ಪನ್ನ ಪರಶುರಾಮ. ಘೋಟಕ ವದನ=ಹಯವದನ ನಾಮಕ ಹರಿಯು, ತನ್ನ ವಿಭೂತಿ ರೂಪಗಳಿಂದ ಬ್ರಹ್ಮಾಂಡ ಬಹಿಸ್ಸರ್ವ ವಸ್ತುಗಳಲಿ, ತುದಿ=

ಅಂತ್ಯ ಕೊನೆ ಮೊದಲು ಸರ್ವತ್ರ ತುಂಬಿಹ=ವ್ಯಾಪ್ತನೂ, ಅಂತಃ ನಿಯಾಮಕನೂ, ಎನ್ನ ಬಿಂಬನೇ ಸರ್ವಬಿಂಬನೆಂದು ಚಿಂತಿಸು. ಇದು ನಾಮೋಪಾಸನೆ ಕ್ರಮ.

**ಭಾವಸೂಚನ :** ನಿಧನೇತಿ ಉಕ್ತಂ ಚ॥ ಅನಾದಿನಿಧನೋ ಧಾತೇತಿ॥ ಸಾಮಗ ॥ ತ್ರಿಸಾಮಾ ಸಾಮಗ ಇತಿ ವಚನಾತ್ ॥ ತ್ರಿಕ್‌ಕುಪ್‌ಧಾಮಾ= ಪ್ರಭೂತಃ ಸ್ತ್ರಿಕ್ ಕುಬ್ಧಾಮೇತಿ ಚ ॥ ೩೩ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ನಿಧನೇತಿ ॥ "ಅನಾದಿ ನಿಧನೋ ಧಾತಾ ವಿಧಾತಾ ಧಾತುರುತ್ತಮಃ" ಇತ್ಯುಕ್ತೇಃ ಓಂ* ನೃಣಾಮು ತ್ವಾ ನೃತಮಂ ಗೀರ್ಭಿರುಕ್ಥೈರ್ನದಂ ವ ಓದತೀನಾಮ್ ॥ ಅಭಿಪ್ರವರ ವೀರ ಮರ್ಚತಾ ಸಬಾಧೋ ಯೋ ಯುವತೀನಾಮ್ ॥ ನೊವ್ ॥* (ಬೃ. ಸ. ಋ.) ವಿ, ವಿಶಿಷ್ಟ ಉತ್ಥಾದಿಸ್ತೋತ್ರ ಗಣಾನ್ ಸ್ವಪ್ರತಿಪಾದಕತ್ವೇನ ಧತ್ತೇ ಇತಿ ನಿರುಕ್ತೇಃ ಸ ತಥಾ ॥ ಸಾಮಗೇತಿ ॥ ಸಹಸ್ರಗವ್ ॥ ಓಂ । ಯಂ ತೇ ಸ್ವದಾ(ಧಾ)ವನ್ ಸ್ವದಯಂತಿ ಗೂರ್ತಯಃ ಪೌರೈಶ್ಛಂದಯಸೇ ಹವಮ್ ॥ ಪ್ರವೀರಮುಗ್ರಂ ವಿವಿ(ರಿ)ಚಿಂ ಧನಸ್ಪೃ(ಸ್ಮೃ)ತಂ ವಿಭೂತಿಂ ರಾಧಸೋ ಮಹಃ ॥ ಓಂ ॥ ಅನೇನ ಸ್ಯತೀತಿ ಸಾಮಸ್ತುತಿಃ ॥ ತದ್ ಗಚ್ಛತಿ ಅಂಗೀಕರೋತಿ ಇತಿ "ಛಂದಸೇ ಹವಮ್" ಇತಿ ಸೂಚನಾತ್ ॥ "ತ್ರಿಕಕುದ್ಧಾಮ" ಇತಿ ॥ ಚ ॥ ಓಂ ॥ ಗೃಣದ್ಧೈಶಿಲ ಸಸಾಹತುರ್ವೃತ್ರ ಹತ್ಯೇಷು (ಶತ್ರೂನ್) ಭುವಿ ಗಾಹ ಏಷಃ (ನೃಭಿರ್ಗಾಹ ಏಷಃ) ॥ ಸನೋನೇತಾರಂ ಮಹಯಾಮ ಇಂದ್ರಂ ಇನೋವಸು ॥ ಓಂ ॥ (ಬೃ. ಸ. ಋ.)ಅನೇನ ತ್ರೀನ್ ಆಧ್ಯಾತ್ಮಿಕಾದಿ ಶತ್ರೂನ್, ಕಕುತ್-ಕಶಬ್ದಃ ಕುತ್ಸನೇ । ಕಕುತ್ಸಿತಾನ್ ಕೃತ್ ಧಾಮ ಸ್ವರೂಪಂ ಯಸ್ಯ ಸ ತಥೋಕ್ತಃ ॥ ಘೋಟಕಃ ಹಯಃ ॥ ಇಹ=ಇರುವ ॥ ೩೩ ॥

## ಕನ್ನಡಾರ್ಥ

"ಅನಾದಿ ನಿಧನೋ ಧಾತಾ ವಿಧಾತಾ ಧಾತುರುತ್ತಮಃ" ಎಂದು ಶ್ರೀ ವಿಷ್ಣು ಸಹಸ್ರನಾಮದಲ್ಲಿ "ಅನಾದಿ ನಿಧನ" "ವಿಧಾತ" ನಾಮಗಳನ್ನು ಉಲ್ಲೇಖಿಸಲಾಗಿರುತ್ತದೆ. ಓಂ "ನೃಣಾಮು" ಎಂದು ಆರಂಭವಾಗಿರುವ ಮಂತ್ರವು "ವಿಧಾತ" ಶಬ್ದಾರ್ಥ ವಿವರಣವಾಗಿರುತ್ತದೆ. "ವಿ"=ಶ್ರೇಷ್ಠವಾದ

"ಉತ್ಥ" ಮುಂತಾದ ಸ್ತೋತ್ರ ಸಮುದಾಯವನ್ನು ತನ್ನನ್ನೇ ಹೊಗಳುವಂತೆ ಮಾಡುವನು (ಧರಿಸುವನು) ಆದುದರಿಂದ "ವಿಧಾತ" ಎಂದು ನಾಮವು ಬಂದಿರುತ್ತದೆ. "ಸಾಮಗ" ಇದೂ ಶ್ರೀ ವಿಷ್ಣು ಸಹಸ್ರನಾಮದಲ್ಲಿಯೇ ಬಂದಿರುವ ಒಂದು ನಾಮ. ಬೃಹತೀ ಋಕ್ಕು ಈ ನಾಮವನ್ನು ವಿವರಿಸುತ್ತದೆ. ಸಾಮ="ಸ್ತುತಿ". ಅದನ್ನು ಹೊಂದುವವನು=ಸ್ವೀಕರಿಸುವವನು, ಸಾಮ. "ಛಂದಸೇಹವವ್" ಎಂಬ ಚರಣದಿಂದ ಈ ಅರ್ಥವು ಸೂಚಿತವಾಗಿರುತ್ತದೆ. "ತ್ರಿಕಕುದ್ಧಾಮ" ಇದೂ ಸಹ ವಿಷ್ಣು ಸಹಸ್ರ ನಾಮಗಳಲ್ಲಿಯ ನಾಮವೇ. "ಗೃಣದ್ಧೆ ಶಿಟ" ಎಂಬ ಮಂತ್ರವು "ತ್ರಿಕಕುದ್ಧಾಮ" ಎಂಬ ನಾಮವನ್ನು ವಿವರಿಸುತ್ತದೆ. ತ್ರಿ=ಅಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ" ಎಂದು ಮೂರು ವಿಧವಾದ ಶತ್ರುಗಳನ್ನು (ತಾಪಗಳನ್ನು) ಕಕುತ್= ಕುತ್ಸಿತಗೊಳಿಸುವ ಅಂದರೆ-ನಿವಾರಿಸಿ ಉಪಮರ್ದನ ಮಾಡುವ (ಬಾರದಂತೆ ದೂರಗೊಳಿಸಿ ಪರಾಭವ ಮಾಡುವ) ಧಾಮ-ಸ್ವರೂಪವುಳ್ಳವನು "ತ್ರಿಕಕುದ್ಧಾಮ" ಎಂದು ಮಂತ್ರ ಸೂಚಿತವಾದ ಅರ್ಥ. ಘೋಟಕ=ಹಯ-ಕುದುರೆ (ಹಯಗ್ರೀವ) ಇಹ=ಇರುವ || ೩೩ ||

ಅವತರಣಿಕಾ: ಶ್ರೀಹರಿಯು ತುದಿ ಮೊದಲು ಬ್ರಹ್ಮಾಂಡದಲ್ಲೆಲ್ಲಾ ತುಂಬಿಕೊಂಡಿರುವನಾದರೂ, ಜಗತ್ತಿನಿಂದ ಭಿನ್ನನು. ಜಗದಾಕಾರ ಪರಿಣಮಿಸಿದವನಲ್ಲ. ಪರಿಣಾಮವಾದಿಗಳ ಮತ ನಿರಾಕರಿಸುತ್ತ, ದೃಷ್ಟಾಂತದಿಂದ, ಶ್ರೀಹರಿಯೇ ಜಗದ್ಬಿಂಬ-ಜಗತ್ತಿನಿಂದ ಅತ್ಯಂತ ಭಿನ್ನನೆಂದು ಹೇಳುತ್ತಾರೆ.

ಮೂಲ :

ಕನ್ನಡಿಯು ಕೈವಿಡಿದು ನೋಡಲು ।
ತನ್ನಿರವು ಸವ್ಯಾಪ ಸವ್ಯದಿ ।
ಕಣ್ಣಿಗೊಪ್ಪುವ ತೆರದಿ ಅನಿರುದ್ಧನಿಗೆ ಈ ಜಗವು ॥
ಭಿನ್ನ ಭಿನ್ನವೆ ತೋರುತಿಪ್ಪುದು ।
ಜನ್ಯವಾದುದರಿಂದ ಪ್ರತಿ ಬಿಂ ।
ಬನ್ನ ಮಯುಗಾನೆಂದರಿದು ಪೂಜಿಸಲು ಕೈಕೊಂಬಾ ॥ ೩೪ ॥

ಪದ್ಯಾರ್ಥ: ಕನ್ನಡಿಯ ಕೈವಿಡಿದು ನೋಡಲು=ಕನ್ನಡಿಯನ್ನು

ತನ್ನ ಕೈಯೊಳಗೆ ಹಿಡಿದುಕೊಂಡು ತನ್ನ ಮುಖಾಲಂಕಾರವನ್ನು ನೋಡಿದರೆ, ತನ್ನಿರವು=ತನ್ನ ನಿಜವಾದ ಸ್ಥಿತಿ ಮುಖವು ಸವ್ಯ=ಬಲಕ್ಕಾಗಿ ಇದ್ದುದು, ಅಪಸವ್ಯ=ಎಡಕ್ಕೆ ತೋರುವಂತೆ, ಶ್ರೀ ಅನಿರುದ್ಧಗೆ=ಅನಿರುದ್ಧ ನಾಮಕ ಪರಮಾತ್ಮನು ಸೂಕ್ಷ್ಮ ಸೃಷ್ಟಿಯಲ್ಲಿ ದೇಹನಿರ್ಮಾಣ ಕರ್ತನು. ಪಿಂಡಾಂಡ ರಕ್ಷಕನು. ಬಹಿರ್ಬ್ರಹ್ಮಾಂಡ ಸ್ಥೂಲ ಬ್ರಹ್ಮಾಂಡ ನಿರ್ಮಿತನಾದ ಕಾರಣ ಈ ಅನಿರುದ್ಧ ನಾಮಕ ಹರಿಗೆ ಈ ಜಗತ್ತು ಭಿನ್ನವಾಗಿರುವದಲ್ಲದೇ ಭಿನ್ನವೆ-ಬೇರೆಯಾಗಿ ಅಪಸವ್ಯದಿಂದ ತೋರುತಿಪ್ಪದು-ಕಾಣಿಸುವದು. ಈ ಸ್ಥೂಲ ಬ್ರಹ್ಮಾಂಡ ಅನಿರುದ್ಧನಿಂದ ಜನ್ಯವಾದುದರಿಂದ=ಹುಟ್ಟಿದುದರಿಂದ ಈ ಜಗತ್ತು ಶ್ರೀಹರಿಗೆ ಪ್ರತಿಬಿಂಬಮಯಗ=ಪ್ರಾಚುರ್ಯದಿಂದ ಪ್ರತಿಬಿಂಬ=ಸಮಾನವಾದ ಬಿಂಬರೂಪವು ತಿರುಗಿ ತೋರುವಿಕೆ, ಪ್ರತಿರೂಪ, ನೆಳಲಿನಂತೆ ತೋರುವುದು. ನೆಳಲು ದೇಹದಿಂದ ಭಿನ್ನವಾದದು ಎಂದು ತಿಳಿದು, ಪೂಜಿಸಲು=ಪೂಜೆ ಮಾಡಲು, ಸತ್ಕರಿಸಿ ಆದರ ಭಕ್ತಿಯಿಂದ ಅರ್ಚನೆ ಮಾಡಲು, ಕೈಕೊಂಬ=ಭಕ್ತಿಯುಳ್ಳ ಭಕ್ತನ ಪೂಜಾ ಸ್ವೀಕರಿಸುವನು ||೩೪||

**ಭಾವಸೂಚನ :** ಕನ್ನಡೀತಿ ||

**ದ್ರಾಪದೀಶಪತಿ ವಿಠಲರು :** ಕನ್ನಡಿಯ ಕೈವಿಡಿದು ನೋಡಲು ಪುರುಷಗೆ ತನ್ನಿರವ ಸವ್ಯಾಪಸವ್ಯ ಹೇಗೆ ಕಾಣುತದೋ ಹಾಗೆ, ಪರಮಾತ್ಮಗೆ ಜೀವರು ಭಿನ್ನಾಂಶರು. ಅಂತರ್ಗತ ರೂಪಕ್ಕೂ ಮೂಲರೂಪಕ್ಕೂ ಭೇದ ವಿಲ್ಲ || ೩೪ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಕನ್ನಡಿಯು" ಇತಿ || ಇರುವ ಆಕಾರ. ಅನ್ನಮಯಗ ಆನು-ನಾನು|

## ಕನ್ನಡಾರ್ಥ

"ಕನ್ನಡಿಯ ಕೈವಿಡಿದು" ಎಂಬ ಪದ್ಯದಲ್ಲಿ "ಇರುವ=ಆಕಾರ. ಅನ್ನಮಯದ=ಅನ್ನಮಯ ಶಬ್ದ ವಾಚ್ಯನಾಗಿ ಕೋಶಗತನಾದ ಶ್ರೀ ಅನಿರುದ್ಧ ನಾಮಕ ಹರಿಗೆ "ಆನು=ನಾನು" "ಪ್ರತಿಬಿಂಬ" ಎಂದು ಪೂಜಿಸಲು ಅದನ್ನು ಶ್ರೀ ಅನಿರುದ್ಧರೂಪೀ ಹರಿಯು ಸ್ವೀಕರಿಸುವನು" ಎಂದು ಅರ್ಥವನ್ನು ತಿಳಿಯಬೇಕು || ೩೪ ||

**ಅವತರಣಿಕಾ:** ಇನ್ನು ಜಗತ್ತು ಜೀವರುಗಳಿಗೆ ಬಿಂಬರು ಯಾರು ? ಅವರ ಜೀವರುಗಳಿಗೆ ಉತ್ತಮ ಜೀವರು ಬಿಂಬರು, ಕೇವಲ ಮುಖ್ಯ ಬಿಂಬನು ಶ್ರೀಹರಿಯು ಎಂಬುದು ಶ್ರೀ ಅನುವ್ಯಾಖ್ಯಾನಾದಿಯಲ್ಲಿ ಹೇಳಿದಂತೆ ಶ್ರೀ ವಿಜಯದಾಸಾರ್ಯರ ಸುಳಾದಿಗನುಕೂಲವಾಗಿ ಶ್ರೀಹರಿಯೇ ಎಲ್ಲರಿಗೆ ಮುಖ್ಯ ಬಿಂಬನೆಂದು ತಿಳಿದು ಉಪಾಶಿಸಲು ಉಪದೇಶ ಮಾಡುತ್ತಾರೆ.

**ಮೂಲ :**

**ಬಿಂಬರೆನಿಪರು ಸ್ವೋತ್ತಮರು ಪ್ರತಿ ।**
**ಬಿಂಬರೆನಿಪರು ಸ್ವಾವರರು ಪ್ರತಿ ।**
**ಬಿಂಬ ಬಿಂಬಗಳೊಳಗೆ ಕೇವಲ ಬಿಂಬಹರಿಯೆಂದು ॥**
**ಸಂಭ್ರಮದಿ ಪಾಡುತಲಿ ನೋಡುತ ।**
**ಉಂಬುಡುವದಿಡುವದು ಕೊಡುವದೆ ।**
**ಲ್ಲಂಬುಜಾಂಬಕನಂಘ್ರಿ ಪೂಜೆಗಳೆಂದು ನಲಿದಾಡು　॥ ೩೫ ॥**

**ಪದ್ಯಾರ್ಥ :** ಬಿಂಬ=ಯಾವನ ಅಧೀನವಾಗಿಯೂ, ಯಾವಾತನ ಸತ್ತಾದಲ್ಲಿ ಇರುವರೊ ಆ ಉತ್ತಮರು ಬಿಂಬರೆಂದು. ಸ್ವಾವರರು=ಅಧಮರು ಪ್ರತಿಬಿಂಬರೆಂದೂ ಶಾಸ್ತ್ರ ನಿಯಮದಂತೆ. ಬಿಂಬಬಿಂಬರೊಳಗೆ= ತನಗಿಂತಲೂ ಎರಡು ಗುಣಾರಂಭಿಸಿ ಉತ್ತಮರು ತನ್ನ ಬಿಂಬರು. ಇದೇ ಪ್ರಕಾರ ಶ್ರೀಹರಿಯೇ ಸರ್ವೋತ್ತಮ ಎಲ್ಲರಿಗೂ, ಕೇವಲ–ಮುಖ್ಯ ಜೀವಾಂತರ್ಗತ ಹರಿಯೇ ಬಿಂಬ–ಸರ್ವರೂ ಶ್ರೀಹರಿಯ ಅಧೀನರಾಗಿರುವರು. ಈ ಸುಜ್ಞಾನದಿಂದ ಮುಖ್ಯ ಬಿಂಬನು ಹರಿಯೆಂದು ಧ್ಯಾನಿಸುತ್ತಾ, ಸಂಭ್ರಮದಿ=ಒಳ್ಳೇ ಉತ್ಸಾಹದಿಂದ ಶ್ರೀಹರಿಯೇ ಬಿಂಬ ಸರ್ವಕರ್ತಾ ಕಾರಯಿತಾ ಎಂಬ ಉತ್ಸಾಹದೊಡನೆ, ಶ್ರೀಹರಿಯನ್ನೇ ಪಾಡುತ್ತಾ, ಶ್ರೀಹರಿಯಾದ ಬಿಂಬಮೂರ್ತಿಯನ್ನೇ ನೋಡುತ್ತಾ, ಉಂಬುವದು=ಶ್ರೀಹರಿಯ ನೈವೇದ್ಯ ಭುಂಜಿಸುವದು, ಉಡುವದು=ಶ್ರೀಹರಿಗೆ ಅಲಂಕಾರವೆಂದು ವಸ್ತ್ರಾದಿಗಳನ್ನು ಉಡುವುದು, ಇಡುವದು=ಆಭರಣಾದಿಗಳನ್ನು ಇಡುವದು. ಕೊಡುವದು=ಕ್ಷುಧಿತರಿಗೆ ಅನ್ನದಾನ ಮಾಡುವುದು–ಕೊಡುವುದು=ಪಾತ್ರರಿಗೆ ದ್ರವ್ಯದಾನ ಕೊಡುವದು, ಕೊಡುವುದು=ಸಚ್ಛಿಷ್ಯರಿಗೆ ವಿದ್ಯಾ ಪ್ರದಾನ ಮಾಡುವದು. ಇವೆಲ್ಲ ಅಂಬುಜಾಂಬಕ=ಫುಲ್ಲಲೋಚನ ವಿಶಾಲಾಕ್ಷ,

ಕರುಣಾರಸ ಪೂರ್ಣಲೋಚನ ಬಿಂಬನಾದ ಶ್ರೀಹರಿಯ ಅಂಘ್ರಿ ಪೂಜೆಗಳಿಂದು ಬಿಂಬನ ಪಾದಕ್ಕೆ ಶ್ರೀ ಮಧ್ವೇಶ ಕೃಷ್ಣಾರ್ಪಣವೆಂದು ಸಮರ್ಪಿಸಿ, ನಲಿದಾಡು=ಆನಂದಪಡು, ಆನಂದೋದ್ರೇಕದಿಂದ ಕುಣಿದಾಡು-ಪಾರವಶ್ಯದಿಂದ ಹರಿಯ ಪಾಡು ಎಂದು ದಾಸಾರ್ಯರ ಉಪದೇಶವು ಮರೆಯುವಂತಿಲ್ಲ.

**ಶ್ರೀ ವಿಜಯದಾಸರು** "ಆಪ್ತ ಅಖಿಳ ಮುಕ್ತಿ ಯೋಗ್ಯ" ಸುಳಾದಿ ೩೬ ತಾಳ-ಆದಿ, ಉಪಾನಭಾಗ ಪುಟ ೧೧೮ರಲ್ಲಿ ಅಪ್ಪಣೆ ಇತ್ತಿರುವರು. "ಬಿಂಬ ಪ್ರತಿಬಿಂಬ ಭಿಂಬಭಾವದಲ್ಲಿ ಹರಿಯಾ । ಬಿಂಬವೆ ಕಾಂಬುವರು ಮುಕ್ತಿ ಯೋಗ್ಯರು ಎಲ್ಲಾ । ವೆಂಬೋದೆ ಸಿದ್ಧವೆನ್ನಿ ಸ್ಪಷ್ಟತ್ವದಲಿ ಭೇದ । ಕುಂಭಿನಿ ವಿಡಿದು ಅಧಿಕಾರಿಗಳ ವ್ಯಾಪ್ತಿ । ತುಂಬಿಕೊಂಡಿಪ್ಪದು ನೋಡುವದು ತಿಳಿವುದು । ಹಂಬಲಿಸುವದು. ಉನ್ನತ ಉನ್ನತ ಮನಸು । ಅಂಬುಜಾಕ್ಷಗೆ ಅಜನು-ಅಜಗೆ ಶಿವ-ಶಿವಗೆ ಇಂದ್ರ । ಬಿಂಬ ಪ್ರತಿಬಿಂಬ-ಇದೆ ತಳಿಗಿಯೊಳಗೆ ಉದಕ । ತುಂಬಿರಲದರೊಳಗೆ ಸೂರ್ಯನ ಬಿಂಬವಿರಲಾ । ಬಿಂಬಪ್ರಕಾಶ ಮತ್ತೊಂದರಲಿ ಪ್ರತಿಬಿಂಬ ತೋರಿದಂತೆ ಈ ತೆರದಲಿ ಹರಿಯ । ಬಿಂಬವೆ ಕಾಂಬುವರು ಸ್ವಯೋಗ ತಪ್ಪದಲೆ । ಬೆಂಬಲವಾಗಿಪ್ಪ ವಿಜಯ ವಿಠ್ಠಲಸ್ವಾಮಿ । ನಂಬಿದ ಮಾನವರ ಬಳಿಯ ಕುಣಿದಾಡುವಾ ॥೫॥ ಸ್ಪಷ್ಟವಾದ ದಾಸಾರ್ಯರ ಈ ಉಕ್ತಿಯಂತೆ ಬಿಂಬ ಪ್ರತಿಬಿಂಬ ಭಾವ ಲಕ್ಷಣ ತಿಳಿಯುವದು.

**ಭಾವಸೂಚನ:** ಬಿಂಬೇತಿ । ಪ್ರತಿಬಿಂಬ ತದಧೀನ ಅಥವಾ ತತ್ಸಮ ॥ ಉಕ್ತಮನು ವ್ಯಾಕೃತೌ ॥ ತತ ಆಭಾಸತೇ ನಿತ್ಯಂ ತದ್ವದಾಭಾಸ ತೇಪಿ ಚೇತಿ ॥ ಉತ್ತಮಾನಾಂ ಅಧಮಾಃ ಪ್ರತಿಬಿಂಬಾಃ ॥ ಭಕ್ತಿಪಾದೀಯಾನು ವ್ಯಾಕೃತೆತಾ ॥ ಛಾಯಾ ವಿಷ್ಣೋ ರಮಾತಸ್ಯಾಃ ಛಾಯಾಧಾತಾ ವಿಶೇಷಕೌ॥ ತಸ್ಯೇಂದ್ರ ಕಾಮೌ ಚ ತಯೋಸ್ತಯೋರನ್ಯೈಖಿಳಾ ಅಪಿಇತಿ॥ ಅಂಬಕ=ನೇತ್ರ ॥ ೩೫ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಬಿಂಬ" ಇತಿ ॥ ಛಾಯಾ ವಿಷ್ಣೋಃ ರಮಾ ತಸ್ಯಾಃ ಛಾಯಾ ಧಾತಾ ವಿಶೇಷತಾ ವಿತ್ಯುಕ್ತೇಃ ॥ ಅಂಬಕ=ನೇತ್ರ ॥ ೩೫ ||

## ಕನ್ನಡಾರ್ಥ

ಉತ್ತಮರು ಅವರರಿಗೆ (ಅಧಮರಿಗೆ) ಬಿಂಬರೂ-ಅಧಮರು ಪ್ರತಿ ಬಿಂಬರೂ ಎಂದು ತಿಳಿಯಬೇಕು. ಈ ವಿಷಯದಲ್ಲಿ "ಶ್ರೀ ವಿಷ್ಣುವಿಗೆ ಮುಖ್ಯವಾಗಿ ಛಾಯಾ-ಪ್ರತಿಬಿಂಬಳು ರಮಾದೇವಿ. ಅವರಿಗೆ ಬ್ರಹ್ಮ ದೇವನು" ಎಂದು ಪ್ರಮಾಣಗಳಿಗನುಸಾರವಾಗಿ ಬಿಂಬ-ಪ್ರತಿಬಿಂಬ ಭಾವ ವನ್ನು ತಿಳಿಯಬೇಕು. ಅಂಬಕ=ನೇತ್ರ; 'ಕಣ್ಣು ॥ ೩೫ ॥

**ಅವತರಣಿಕಾ :** ಶ್ರೀ ಬಿಂಬನಾದ ಹರಿಗೆ ಸಕಲ ಕರ್ಮಗಳನ್ನೂ ಅರ್ಪಿಸುವ ಸುಲಭೋಪಾಯಗಳನ್ನು ದೃಷ್ಟಾಂತ ಪೂರ್ವಕವಾಗಿ ದಾಸಾರ್ಯರು ಉಪದೇಶಿಸು ತ್ತಾರೆ.




**ಮೂಲ :**

**ನದಿಯ ಜಲ ನದಿಗೆರೆವ ತೆರದಂ ।**
**ದದಲಿ ಭಗವದ್ದತ್ತ ಧರ್ಮಗಳು ।**
**ದಧಿಶಯನನಿಗರ್ಪಿಸುತ ವ್ಯಾವೃತ್ತ ನೀನಾಗಿ ॥**
**ವಿಧಿ ನಿಷೇಧಾದಿಗಳಿಗೊಳಗಾ ।**
**ಗದಲೆ ಮಾಡುತ ದರ್ವಿಯುಂದದಿ ।**
**ಪದುಮನಾಭನ ಸಕಲ ಕರ್ಮಗಳಲ್ಲಿ ನೆನೆವುತಿರು ॥ ೩೬ ॥**

**ಪದ್ಯಾರ್ಥ :** ನದಿಯ ಜಲ=ನದ್ಯಾದಿಗಳಲ್ಲಿ ಸ್ನಾನಮಾಡುವ ಕಾಲ ದಲ್ಲಿ ಆ ನದಿಯ ಉದಕಗಳಿಂದಲೇ ನದಿಗೆರವ ನದ್ಯಾಂತರ್ಗತ ಹರಿಗೆ ಅರ್ಘ್ಯ ಗಳನ್ನು ಕೊಡುವಂತೆ, ಭಗವದತ್ತ ಧರ್ಮಗಳು—ಭಗ=ಸಮಗ್ರ ಐಶ್ವರ್ಯ ಜ್ಞಾನಾನಂದಾದಿ ಪೂರ್ಣನಿಂದ, ದತ್ತ=ಕೊಡಲ್ಪಟ್ಟ, ಧರ್ಮಗಳ=ಜೀವರ ಸ್ವಭಾವಾನುಸಾರವಾಗಿ ಆಚರಣೆಮಾಡಿ ಮಾಡಿಸತಕ್ಕ ಸಕಲ ಕರ್ಮಗಳನ್ನೂ, ಉದಧಿ ಶಯನ=ಪಾಲಸಾಗರಶಾಯಿ-ಶ್ವೇತ ದ್ವೀಪಗತನಾದ ಹರಿಗೆ ಸಮ ರ್ಪಣೆ ಮಾಡು. ವ್ಯಾವೃತ್ತ ನೀನಾಗಿ=ನಾನು ಸದಾ ಹರಿಗೆ ಭಿನ್ನನು, ಪ್ರತಿ ಬಿಂಬನು ದಾಸನು. ಶ್ರೀಹರಿ ಮಾಡಿಸಿದಂತೆ ಸಕಲ ಕರ್ತೃನು ಶ್ರೀಹರಿಯೇ ಎಂದು ದಾಸ್ಯಭಾವದಿಂದ ಸಮರ್ಪಿಸುತ್ತ ಇರು. ವಿಧಿನಿಷೇಧಾದಿಗಳಿಗೊಳ ಗಾಗದಲೆ ಮಾಡುತ=ಶ್ರೀಹರಿಯು ಸಕಲ ಪುಣ್ಯ ಪಾಪಗಳನ್ನೂ ಎನ್ನ ಯೋಗ್ಯತೆಯಂತೆ ಹೇಗೆ ಮಾಡಿಸುವನೋ ಅದರಂತೆ ಮಾಡುವೆ. ನಾನು

ಸ್ವತಂತ್ರದಿಂದ ಯಾವ ಕರ್ಮಗಳನ್ನೂ ಮಾಡವನಲ್ಲ ಎಂಬ ತಿಳುವಳಿಕೆಯಿಂದ ಸಕಲ ಕರ್ಮಗಳನ್ನೂ ಮಾಡುತ್ತಾ, ದರ್ವಿಯಂದದಿ=ಪಾಚಕನ ಕೈಲಿ ಇದ್ದ ಸೌಟು ಯಾವ ಪದಾರ್ಥದಲ್ಲಿ ಹಾಕಿದರೂ, ಕಲೆಸುವ ಧರ್ಮವಿದೆಯೋ ಅದರಂತೆ, ಪದುಮನಾಭನ=ಕಮಲವೇ ಹೊಕ್ಕಳಾಗಿವುಳ್ಳ, ವಿರಾಟ್ ಸ್ವರೂಪಿ ಹರಿಯನ್ನು, ಸಕಲ ಕರ್ಮಗಳಲ್ಲಿ ನೆನವುತಿರು=ಸಕಲ ಪುಣ್ಯ ಪಾಪಾದಿ ಕರ್ಮಗಳು ಶ್ರೀ ಹರಿ ಪ್ರೇರಿಸಿದಂತೆ ಆಗುವವೆಂದು ನೆನೆವುತಿರು, ಚಿಂತಿಸುತ್ತಲಿರು.

**ಸೂಚನೆ:** ಮುಂದೆ ದತ್ತ ಸ್ವಾತಂತ್ರ್ಯ ಸಂಧಿಯಲ್ಲಿ ಜೀವ ಕರ್ತೃತ್ವ ವಿಚಾರವನ್ನು ಶಾಸ್ತ್ರಕ್ಕೆ ವಿರೋಧ ಬಾರದಂತೆ ಶ್ರೀ ವಿಜಯ ಗೋಪಾಲ ದಾಸಾರ್ಯರ ಸುಳಾದಿಗಳನುಸರಿಸಿ ವಿವರಿಸುತ್ತದೆ.

**ಭಾವಸೂಚನ:** ನದೀತಿ ॥ ದರ್ವೀ=ಸೌಟು ॥ ೩೬ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಮೋಘೇನ ಪೂರ್ಣಯತಿ" ಇತ್ಯುಕ್ತಮಾಹ "ನದೀತಿ ॥" ಸಿದ್ಧಮೇವಾನ್ನ ವಸ್ತ್ರಾದ್ಯಂ ವಿಷ್ಣೋಃ ಸ್ವಾತಂತ್ರ್ಯತಃ ಸದಾ ॥ ಸ್ವಾರ್ಥಂ ಸಮರ್ಪಯೇತ್ ವಿಷ್ಣೌ ಯಥಾ ಪ್ರಾಣೇ ಸುರಾಃ ಪುರಾ ॥" ಇತಿ ಕರ್ಮಾನುಪೂರ್ವ್ಯಾಪ್ ॥ ದರ್ವೀ-ಸೌಟು ॥ "ಸ್ವಭಾವತೋ ಧರ್ಮಪರೋ ನವಿಧೇಶ್ಚಕಿತಃ ಚರೇತ್॥ ಅಲ್ಪಂ ಫಲಂ ಚ ಚಕಿತೇ ಸ್ವಭಾವೇ ಫಲಮುತ್ತಮಮ್॥ ಇತಿ ಚ ವಿನಿರ್ಣಯೇ ಏಕಾದಶ ಭಾಗವತ ತಾತ್ಪರ್ಯೇ ॥ ೩೬ ॥

**ಕನ್ನಡಾರ್ಥ**

"ಮೋಘದಿಂದ ಪೂರ್ಣಗೊಳಿಸುತ್ತಾನೆ" ಎಂದು ಹೇಳಿದುದನ್ನು ಹೇಳುತ್ತಾರೆ "ನದಿ" ಎಂಬುದಾಗಿ. "ಶ್ರೀ ವಿಷ್ಣುವು ಸ್ವತಂತ್ರನಾದುದರಿಂದ ಅವನಿಗೆ ಅನ್ನ-ವಸ್ತ್ರ ಮುಂತಾದವುಗಳೆಲ್ಲವೂ ಸಿದ್ಧವೇ ಆಗಿರುತ್ತವೆ. ಎಲ್ಲವೂ ಅವನದೇ-ಅವನ ಅಧೀನವೇ ಆಗಿರುತ್ತದೆ. ಶ್ರೀಹರಿಗೆ ಸಮರ್ಪಿಸುವುದರಿಂದ ಶ್ರೀಹರಿಗೆ ಯಾವ ಪ್ರಯೋಜನವೂ ಆಗುವುದಿಲ್ಲ. ತಮ್ಮ ತಮ್ಮ ಇಷ್ಟ ಪ್ರಾಪ್ತಿಗಾಗಿಯೇ ಶ್ರೀಹರಿಗೆ ಸಮರ್ಪಿಸುವುದರಿಂದ ಶ್ರೀಹರಿಗೆ ಮಾಡುವ ಪೂಜಾ ಸಮರ್ಪಣವು ಸ್ವಾರ್ಥಕ್ಕಾಗಿ. ಆದುದರಿಂದ ಹಿಂದೆ ದೇವತೆಗಳು ಪ್ರಾಣನಲ್ಲಿ ಸರ್ವಸಮರ್ಪಣ ಮಾಡಿದಂತೆ ಶ್ರೀಹರಿಯಲ್ಲಿ ಪ್ರಾಣಮುಖಾಂ

ತರ ಸರ್ವವನ್ನೂ ಸಮರ್ಪಿಸಬೇಕು" ಎಂದು "ಕರ್ಮಾನುಪೂರ್ವೀ" ಎಂಬ ಗ್ರಂಥದಲ್ಲಿ ಹೇಳಲಾಗಿರುತ್ತದೆ. "ದರ್ವೀ" ಎಂದರೆ ಸೌಟು. "ಸ್ವಾಭಾವಿಕವಾಗಿ ಧರ್ಮವನ್ನು ಆಚರಿಸಬೇಕು ; ವಿಧಿಯಿಂದ ಹೆದರಿ ಧರ್ಮವನ್ನಾಚರಿಸುವುದು ಅಧಮರ ಲಕ್ಷಣ. ತಮ್ಮ ಸ್ವಭಾವದಿಂದ ಅನುಷ್ಠಿತವಾಗುವ ಧರ್ಮದ ಫಲವು ಉತ್ತಮವಾಗುತ್ತದೆ. ವಿಧಿಗಂಜಿ ಮಾತ್ರ ಮಾಡುವ ಧರ್ಮಾಚರಣೆಗೆ ಅತ್ಯಲ್ಪ ಫಲವು ಬರುತ್ತದೆ. ಆದುದರಿಂದ ಸ್ವಾಭಾವಿಕವಾದ ಆದರದಿಂದ ಧರ್ಮವನ್ನು ಆಚರಿಸಬೇಕು" ಹೀಗೆ ಏಕಾದಶ ಸ್ಕಂಧ ಭಾಗವತ ತಾತ್ಪರ್ಯದಲ್ಲಿ ಶ್ರೀಮಧ್ವಾಚಾರ್ಯರು ನಿರ್ಣಯಿಸಿರುತ್ತಾರೆ ||೩೬||

**ಅವತರಣಿಕಾ :** ಅರಿಯದೇ ಮಾಡಿದ ಕರ್ಮಗಳು ಅರಿತು ತಿಳಿದು ಜ್ಞಾನೋತ್ತರದಿ ಮಾಡಿದ ಸಕಲ ಕರ್ಮಗಳು, ಶ್ರೀಹರಿಗೆ ಸಮರ್ಪಣೆ ಮಾಡಲು, ಚಿತ್ಸುಖವಿತ್ತು ಸಂತೈಪನೆಂದು ದೃಷ್ಟಾಂತ ಪೂರ್ವಕವಾಗಿ ಹೇಳುತ್ತಾರೆ.

**ಮೂಲ :**

**ಅರಿಯದಿರ್ದರು ಎಮ್ಮೊಳಿದ್ದನ ।**
**ವರತ ವಿಷಯಗಳುಂಬ ಜ್ಞಾನೋ ।**
**ತ್ತರದಿ ತನಗರ್ಪಿಸಲು ಚಿತ್ಸುಖವಿತ್ತು ಸಂತೈಪ ॥**
**ಸ್ಮರಿತು ಕಾಲ ಪ್ರವಹಗಳು ಕಂ ।**
**ಡರೆಯು ಸರಿ ಕಾಣದಿರೆ ಪರಿವುವು ।**
**ಮರಳಿ ಮಜ್ಜನ ಪಾನಕರ್ಮಗಳಿಂದ ಸುಖವಿಹವೂ ॥ ೩೭ ॥**

**ಪದ್ಯಾರ್ಥ :** ಅರಿಯದಿರ್ದರು=ನಾವು ಮಾಡತಕ್ಕ ಸಕಲ ಕರ್ಮಗಳನ್ನೂ ಶ್ರೀಹರಿಯೇ ಮಾಡಿಸುವನೆಂದು ತಿಳಿಯದಲೇ ಮಾಡಿದರೂ, ಎಮ್ಮೊಳಿದ್ದು, ಅನವರತ=ನಮ್ಮ ಅಂತರಂಗದಲ್ಲಿದ್ದು ಮಾಡಿಸಿ, ವಿಷಯಗಳುಂಬ=ಸುಕರ್ಮ-ದುಷ್ಕರ್ಮ ಕ್ರೀಯಮಾಣ-ವಿಷಯ ಸುಖದುಃಖ ಸಮ್ಮಿಶ್ರವಲ್ಲದ, ಶುಭಸಾರ ರಸವನ್ನು ಸ್ವೀಕಾರ ಮಾಡುತ್ತಲೇ ಇರುವನು. ಹೇಗಂದರೆ, ಸರಿತು=ನದ್ಯಾದಿ ಪ್ರವಾಹಗಳು. ಕಾಲಪ್ರವಾಹವೂ=ಕಾಲಗತಿಯೂ ಕಂಡರೆಯು ಸರಿ=ನಾವು ನದ್ಯಾದಿ ಪ್ರವಾಹಗಳು ಕಂಡರಂತೂ ಸರಿಯೇ, ಆದರೆ, ನಾವು ಸರಿತು ಕಾಲ ಪ್ರವಾಹ ಗತಿಯನ್ನು ಕಾಣದಿದ್ದರೂ

ತಾವೇ ಪರಿವವು=ಹರಿಯುತ್ತಲಿವೆ. ಮರಳಿ=ಪುನಹ, ತಿಳಿದು ಮಜ್ಜನ=ಸ್ನಾನ-ಪಾನ=ಉದಕ ಪ್ರಾಶನಾದಿ ಕರ್ಮಗಳಿಂದ, ಸುಖವೀವವು=ಸಂತೋಷ ಕೊಡುವವು. ಅದರಂತೇ ಶ್ರೀಹರಿಯು, ಸರ್ವಕರ್ತಾನೆಂಬ ಜ್ಞಾನ ಪುಟ್ಟಿದ ನಂತರ ನೀನಿತ್ತ ಕರ್ಮಗಳು ನಿನಗೆ ಅರ್ಪಿತವಾಗಲಿ (ನದಿಯ ಜಲ ನದಿಗೆ ಈವಂದದಲಿ) ಎಂದು ಸಮರ್ಪಣೆ ಮಾಡಲು, ಚಿತ್ಸುಖವಿತ್ತು=ಸ್ವರೂಪಾನಂದಾಭಿರ್ವ ಆನಂದವಿತ್ತು, ಸಂತೈಪ=ಮೋಕ್ಷದಲ್ಲಿ ಅನುದಿನದಲ್ಲಿ ರಕ್ಷಿಸುತ್ತಾನೆ. ಇದು ಶ್ರೀಹರಿಗೆ ಸರ್ವಾರ್ಪಣೆಯ ಫಲ.

**ಭಾವಸೂಚನ :** ಆ ರೀತಿ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಅರಿಯದಿರ್ದವು" ಇತಿ ॥ ಪರಿವವು=ಹರಿಯುವವು. ಮರಳಿ=ಮತ್ತೆ. ಜ್ಞಾತ್ವಾ ಇತಿ ಶೇಷಃ ॥ ೩೭ ॥

**ಕನ್ನಡಾರ್ಥ**

ಪದ್ಯವು ಸುಗಮವಿದ್ದುದರಿಂದ ಕೆಲ ಶಬ್ದಾರ್ಥಗಳನ್ನು ಮಾತ್ರ ನಿರೂಪಿಸಿರುತ್ತಾರೆ. ಪರಿವವು=ಹರಿಯುತ್ತಿರುವವು. ಮರಳಿ=ಮತ್ತೆ. ಅಜ್ಞಾತವಾಗಿ ಪರಮಾತ್ಮನು ನಾವು ಮಾಡುವ ಸುಕೃತ ಫಲಗಳನ್ನು ಸ್ವೀಕರಿಸುತ್ತಲೇ ಇರುತ್ತಾನೆ. ನಾವು ತಿಳಿದು ಆಯಾ ವಿಷಯ ಭೋಗಗಳನ್ನು ಸಮರ್ಪಿಸಿದರೆ "ಚಿತ್ಸುಖ"ವನ್ನು ಅನುಗ್ರಹಿಸುತ್ತಾನೆ ಎಂದು ಭಾವವನ್ನು ತಿಳಿಯಬೇಕು ॥ ೩೭ ॥

**ಅವತರಣಿಕಾ :** ಸಕಲ ಕರ್ಮಗಳನ್ನೂ ಅನುಸಂಧಾನ ಪೂರ್ವಕವಾಗಿ ಅರ್ಪಿಸಲು ಸುಖವಿತ್ತು ಸಂತೈಪನೆಂದು ಧೇನುವಿನ ದೃಷ್ಟಾಂತದಿಂದ ಉಪದೇಶಿಸುತ್ತಾರೆ.

**ಮೂಲ :**

**ಏನು ಮಾಡುವ ಕರ್ಮಗಳು ಲ ।**
**ಕ್ಷ್ಮೀ ನಿವಾಸನಿಗರ್ಪಿಸನುಸಂ ।**
**ಧಾನ ಪೂರ್ವಕದಿಂದ ಸಂದೇಹಿಸದೆ ದಿನದಿನದಿ ॥**
**ಮಾನನಿಧಿ ಕೈಕೊಂಡು ಸುಖ ವಿ ।**
**ತ್ತಾನತರ ಸಂತೈಪ ತೃಣಜಲ ।**
**ಧೇನು ತಾನುಂಡನವರತ ಪಾಲ್ಗರೆವ ತೆರದಂತೆ ॥ ೩೮ ॥**

**ಪದ್ಯಾರ್ಥ:** ಏನು ಮಾಡುವ ಕರ್ಮಗಳು=ಕಾಯಿಕ-ವಾಚಿಕ-ಮಾನಸೀಕ ಈ ಮೂರು ಬಗೆಯಿಂದ ಮಾಡುವ ಸಕಲ ಪುಣ್ಯ ಪಾಪ ಕರ್ಮಗಳನ್ನೂ ಅನುಸಂಧಾನ ಪೂರ್ವಕದಿಂದ=ಶ್ರೀಹರಿಯು ಸಕಲ ಪುಣ್ಯ ಕರ್ಮಗಳನ್ನು ತಾತ್ವಿಕ ದೇವತೆಗಳಿಂದ ಮಾಡಿ ಮಾಡಿಸುವನು, ಸಕಲ ಪಾಪ ಕರ್ಮಗಳು, ತತ್ವಾಭಿಮಾನಿ ದೇವತೆಗಳಿಂದ ಪ್ರೇರಿಸಿ-ತತ್ವಮಾನಿ ದೈತ್ಯಾದಿಗಳಿಗೆ ಚೋದನಮಾಡಿ ಕುಕರ್ಮಗಳನ್ನು ಮಾಡಿ ಮಾಡಿಸುವನು ಎಂಬ ಅನುಸಂಧಾನ ನಿಶ್ಚಯವಾದ ತಿಳುವಳಿಕೆಯಿಂದ ಶ್ರೀಹರಿಯೇ ಸ್ವತಂತ್ರ ಕರ್ತಾ. ಎರಡೂ ಕರ್ಮಗಳನ್ನು ಜೀವನ ಯೋಗ್ಯತೆಯಂತೆ ಮಾಡಿ ಮಾಡಿಸುತ್ತಾನೆ ಎಂಬ ಸುಜ್ಞಾನದಿಂದ ಲಕ್ಷ್ಮೀನಿವಾಸನಿಗರ್ಪಿಸು=ಯಾವ ಪರಮಾತ್ಮನು ಸಂತತವಾಗಿ, ರಮೆಯಿಂದೊಡಗೂಡಿ, ರಮೆಯಲ್ಲಿ ತಾ ನಿಂತು ಸಕಲ ಬ್ರಹ್ಮಾಂಡ ಕಾರ್ಯ ಮಾಡಿಸುವನೋ ಆ ಶ್ರೀ ಲಕ್ಷ್ಮೀ ವಕ್ಷನಾದ ಶ್ರೀ ನಾರಾಯಣನಿಗೆ ಸಂದೇಹಿಸದಲೇ=ಸ್ವಲ್ಪಾದರೂ ಸಂದೇಹ ಮಾಡದಲೆ, ಪುಣ್ಯ ಪಾಪಗಳನ್ನು, ದಿನದಿನದಿ=ಪ್ರತಿಕ್ಷಣ ಬಿಡದಲೇ ಅರ್ಪಿಸುವ ಜ್ಞಾನವಿರಬೇಕು. (ಇದು ಜ್ಞಾನಿಗಳ ಅನುಸಂಧಾನ ವಿನಾ ಸಕಲರಿಂದ ಸಾಧ್ಯವಲ್ಲ). ಈ ಪ್ರಕಾರ, ಸರ್ವ ಕರ್ಮಗಳನ್ನೂ ಅರ್ಪಿಸಲು, ಮಾನನಿಧಿ=ಸಕಲರ ಯೋಗ್ಯತೆ ಅಳತೆಯಂತೆ ಕರ್ಮ ಮಾಡಿಸಲು, ಮರ್ಯಾದಿಗೆ ಕಡಲ ಸದೃಶನಾದ ಹರಿಯು, ಕೈಕೊಂಡು=ಸ್ವೀಕರಿಸುವನು, ಪಾಪ ಭಸ್ಮ ಮಾಡಿ, ಕೆಲವು ದೈತ್ಯಾದಿಗಳಿಗೆ ಕೊಟ್ಟು, ಪುಣ್ಯಾಭಿವೃದ್ಧಿಯಿಂದ ತತ್ವೇಶರಿಗೆ ಮುಖ್ಯ ಫಲವನ್ನು ಇತ್ತು, ಜೀವರ ಯೋಗ್ಯತೆಯಂತೆ, ನಿಜಾನಂದವಾದ ಸುಖವಿತ್ತು, ಆನತರ=ನಮಸ್ಕರಿಸಿದ-ಶರಣಾಗತರನ್ನು, ಸಂತೈಪ=ಸಂರಕ್ಷಿಸುವನು. ಹೇಗಂದರೆ ಧೇನು=ಆಕಳು, ತೃಣ=ಹುಲ್ಲು ಮೇಯಿದು, ನೀರು ಕುಡಿದು, ಪಾಲ್ಗರೆವ ತೆರ=ಹಾಲು ಕೊಡುವಂತೆ, ಶ್ರೀಹರಿಯು, ಹುಲ್ಲು ನೀರು ಸಮವಾದ ಲಘು ಕರ್ಮಗಳನ್ನು ಸ್ವೀಕರಿಸಿ, ಅಮೃತಮಯವಾದ ಹಾಲು ಕುಡಿಸಿ, ಆನಂದವೀವನು ॥ ೩೮ ॥

**ಭಾವಸೂಚನ:** ಯೇನೇತಿ ॥ ೩೮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಏನು" ಇತಿ ॥ ಮಾನ-ಜ್ಞಾನ. ಆನತಃ ಭಕ್ತ್ಯಾ ನಮಸ್ಕೃತಾಃ । ಪಾಲು=ಹಾಲು, ತೆರದಂತೆ=ಅದರಂತೆ ॥ ೩೮ ॥

## ಕನ್ನಡಾರ್ಥ

ಪದ್ಯದಲ್ಲಿ ಕಠಿಣ ಭಾಗವಿಲ್ಲ. ಮಾನ=ಜ್ಞಾನ, ಭಕ್ತಿಯಿಂದ ನಮಸ್ಕರಿಸಿರುವವರು ಆನತರು. ಪಾಲು=ಹಾಲು. ತೆರದಂತೆ=ಅದರಂತೆ ॥೩೮॥

ಅವತರಣಿಕಾ : ಈವರೆಗೆ ದಾಸವರ್ಯರು, ಜೀವ ಜಡ ಕರ್ಮಾದಿಗಳಲ್ಲಿಪ್ಪ ಶ್ರೀಹರಿಯ ವಿಭೂತಿಯನ್ನು ವಿವರಿಸಿ ಈ ಪದ್ಯದಿಂದ ದೇಶಗತ (ದಿಶಾಗತ) ವಿಭೂತಿ ರೂಪವನ್ನು ಹೇಳುತ್ತಾರೆ.

ಮೂಲ :

**ಪೂರ್ವ ದಕ್ಷಿಣ ಪಶ್ಚಿಮೋತ್ತರ ।**
**ಪಾರ್ವತೀ ಪತಿ ಅಗ್ನಿ ವಾಯು ಸು ।**
**ಶಾರ್ವರೀ ಚರ ದಿಗ್ವಲಯದೊಳು ಹಂಸನಾಮಕನು ॥**
**ಸರ್ವ ಕಾಲದಿ ಸರ್ವರೊಳು ಸುರ ।**
**ಸಾರ್ವಭೌಮನು ಸ್ವೇಚ್ಛೆಯಲಿ ಮು ।**
**ತ್ರ್ಯೋರ್ವರಿಗೆ ಗೋಚರಿಸದ ವ್ಯಕ್ತಾತ್ಮನೆಂದೆನಿಪ ॥ ೩೯ ॥**

**ಪದ್ಯಾರ್ಥ :** ಪೂರ್ವ ದಕ್ಷಿಣ ಪಶ್ಚಿಮ ಉತ್ತರ ದಿಕ್ಕುಗಳಲ್ಲಿ ಕ್ರಮವಾಗಿ ಇಂದ್ರ ಯಮ ವರುಣ ಕುಬೇರ ವಿದಿಕ್ಕುಗಳು ನಾಲ್ಕು, ಈಶಾನ್ಯದಲ್ಲಿ ಪಾರ್ವತೀಪತಿ ಮಹದೇವರು, ಅಗ್ನಿಕೋಣೆಯಲ್ಲಿ ಅಗ್ನಿದೇವರು, ವಾಯುವ್ಯಕ್ಕೆ ಪ್ರವಾಹ ವಾಯುದೇವರು, ಸುಶಾರ್ವರೀಚರ=ಶಾರ್ವರೀ-ರಾತ್ರಿ ಸಂಚಾರ ಮಾಳ್ಪರು ರಾಕ್ಷಸರು. ಇವರು ಸುಸಮಿಾಚೀನರಾದ ದೇವಗಣದಲ್ಲಿ ಸೇರಿದ ನಿಋುಋುತಿ ದೇವ, (೧೭ನೇ ಕಕ್ಷದಲ್ಲಿ ಸೇರಿದ ತಾರಾದೇವಿ-ಪ್ರಾವಹಿದೇವಿಗೆ ಸಮನು) ಕಿನ್ನರರು ಗುಹ್ಯಕರು ರಾಕ್ಷಸ-ಪನ್ನಗರು ಪಿತೃಗಳು ಸಾಧ್ಯರು, ವಿದ್ಯಾಧರರು ಮುಂತಾದ ದೇವಭೃತ್ಯರಲ್ಲಿ ರಾಕ್ಷಸಗಣ ಉಂಟು. ಆ ಗಣಕ್ಕೆ ನಿಋುಋುತಿ ದೇವನು ಮುಖ್ಯ ಒಡೆಯನು. ಈ ಮರ್ಮವನ್ನರಿಯದ ಕೆಲ ಹಿಂದಿನ ವ್ಯಾಖ್ಯಾನಕಾರರು, ನಿಋುಋುತಿ ರಾಕ್ಷಸನೆಂದು ಬರೆ

ದಿರುವರು. ಇದು ಸರಿಯಲ್ಲ. ಈ ಅಷ್ಟ ದಿಕ್ಪಾಲಕರಲ್ಲಿ ದಿಕ್ಕು-ವಿದಿಕ್ಕುಗಳಲ್ಲಿ ಹಂಸನಾಮಕ ಹರಿಯು ವಿಭೂತಿಯಲಿ, "ಹಂಸಶ್ಶುಚಿಷತ್ ಇತಿ ಶ್ರುತಿ "ನಿತ್ಯ ಹೀನೋಽಖಿಳೈರ್ದೋಷೈಃ ಸಾರಭೂತೋಯತೋ ಹರಿ, ಹಂಸ ಇತ್ಯುಚ್ಯತೆ" ವಿಷ್ಣು ಸಹಸ್ರನಾಮ ಮರೀಚಿರ್ದಮನೋಹಂಸಃ ॥ ದುಃಖಾದಿ ದೋಷಹೀನ ಸಾರಭೂತ ಶ್ವೇತಿವಾಹಂಸ ॥ ಇಂಥ ಹಂಸನಾಮಕ ಹರಿಯು, ಸರ್ವಕಾಲದಿ=ಸದಾ ನಿತ್ಯದಲ್ಲಿ-ಸರ್ವರೊಳು=ಸರ್ವ ಪ್ರಾಣಿಗಳಲ್ಲಿ ಅಂದರೆ ದೇಶಕಾಲವು ಪೂವಿನಲ್ಲಿ ಪರಿಮಳವಿದ್ದಂತೆ. ಒಂದಕ್ಕೊಂದು ದೇಶಕಾಲಗಳಿಗೆ ಸಂಬಂಧ, ಇಂಥ ದೇಶ ಕಾಲಗಳು ಜೀವರ ಸಾಧನ ಬಂಧ ನಿವೃತ್ತಿಗೆ ಕಾರಣ, ಸುರಸಾರ್ವಭೌಮನು=ದೇವತೆಗಳ ರಾಜಾಧಿರಾಜನು, ಸ್ವೇಚ್ಛೆಯಲಿ=ತನ್ನ ಸತ್ಯ ಸಂಕಲ್ಪಾನುಸರಿಸಿ, ಸರ್ವ ದೇಶಕಾಲ ಜೀವರಲ್ಲಿ ವ್ಯಾಪಿಸಿ, ಮತ್ತೊರ್ವರಿಗೆ ಸಾಧನ ಹೀನರಾದ ಒಬ್ಬರಿಗೂ ಗೋಚರಿಸದೆ=ತೋರದೇ ಅವ್ಯಕ್ತಾತ್ಮನೆಂದಿನಿಪ ॥ "ಅದೃಶೋ ಅವ್ಯಕ್ತ ರೂಪಶ್ಚ" ಸಹಸ್ರನಾಮ "ನಿಜಶಕ್ತ್ಯಾ ವ್ಯಕ್ತರೂಪ ಮಸ್ಯೇತಿ ವ್ಯಕ್ತಃ ರೂಪಃ ॥ ನಿತ್ಯಾ ಅವ್ಯಕ್ತೋಽಪಿ ಭಗವಾನೀಕ್ಷತೇ ನಿಜಶಕ್ತಿತಃ ॥ ತಮೃತೇ ಪರಮಾತ್ಮಾನಂ ಕಃ ಪಶ್ಯೇತಮೃತಂ ಪ್ರಭುಮಿತಿ ನಾರಾಯಣಾಧ್ಯಾತ್ಮೆ ॥ ಎಂದು ಶ್ರೀ ವಿದ್ಯಾಧಿರಾಜೀಯ ವ್ಯಾಖ್ಯಾನ ॥ ತನ್ನ ಸ್ವಶಕ್ತಿಯಿಂದ ಇತರರಿಗೆ ತೋರದೆ ಇರುವ ಅವ್ಯಕ್ತ ಶರೀರ ರೂಪವುಳ್ಳ ಮಹಾಮಹಿಮ.

**ಭಾವಸೂಚನ :** ಪೂರ್ವೇತಿ ॥ ಓರ್ವ=ಒಬ್ಬ ॥ ೩೯ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಪೂರ್ವೇತಿ॥ ಶಾರ್ವರೀಕರ ಚಂದ್ರಃ । ಹಂಸಃ-ಓಂ । ವೃತ್ರತೂರ್ಯೇ ಸತೋಕಸಾತಾ ತನಯೇ ಸ ವಜ್ರೀ ವಿತಂತ ಸಾಯ್ಯೋ ಅಭವತ್ ಸಮತ್ಸು॥ ಸ ಮಜ್ಮ(ಜ್ಞ)ನಾ ಜನಿಮ ಮಾನುಷಾಣಾಮ್ ॥ ಓಂ ॥ (ಬೃ. ಸ. ಖ.) ಅನೇನ ಶತ್ರುಹನನಂ ಸಾರಯತಿ ಪ್ರಾಪಯತಿ ಇತ್ಯುಕ್ತೇ ॥ ಸ ತಥೋಕ್ತಃ॥ ಅವ್ಯಕ್ತ-ಓಂ ॥ ನ ಯಂ ವಿವಿಕ್ತೋ ರೋದಸೀ ನಾಂತರಿಕ್ಷಾಣಿ ವಜ್ರಿಣಮ್ ॥ ಅಮಾದಿದಸ್ಯ ತಿತ್ವಿಷೇ ಸಮೋಜಸಃ ಯದಿಂದ್ರ ಪೃತನಾಜ್ಯೇ ದೇವಾಃ ॥ ಓಂ ॥ (ಬೃ. ಸ. ಖ.) ನ ಅತ್ತೋವ್ಯತ್ತಃ ಸನಭವತೀತಿ

ಅವ್ಯಕ್ತಃ । ಸರ್ವೇಷಾಂ ಅಪಿ ಸಂಬದ್ಧ ಏವ । ನ ಪೃಥಕ್ ಕರ್ತುಂ ಅರ್ಹತೀತಿ ಸ ತಥೋಕ್ತಃ ॥ ೩೯ ॥

ಕನ್ನಡಾರ್ಥ

ಶಾರ್ವರೀಕರ=ಚಂದ್ರ-ಹಂಸ. ಇದು ವಿಷ್ಣು ಸಹಸ್ರನಾಮದಲ್ಲಿ ಸೇರಿದ ನಾಮ. "ವೃತ್ರತೂರ್ಯೇ" ಎಂಬ ಬೃಹತೀ ಛಂದಸ್ಸಿನ ಋಙ್ಮಂತ್ರವು ಇದರ ಅರ್ಥವನ್ನು ವಿವರಿಸುತ್ತದೆ. ಶತ್ರುಗಳ ನಾಶವನ್ನು (ಸಂಹಾರವನ್ನು) ಉಂಟುಮಾಡುವದರಿಂದ (ಸಾಧಿಸಿಕೊಡುವದರಿಂದ) "ಹಂಸ" ಎಂದು ನಾಮವನ್ನು ನಿರ್ವಚನ ಮಾಡುತ್ತದೆ. ಅವ್ಯಕ್ತಃ ಇದೂ ಸಹಸ್ರನಾಮದಲ್ಲಿಯ ನಾಮವೇ. "ನಯಂ" ಎಂಬ ಬೃಹತೀ ಋಙ್ಮಂತ್ರವು ಈ ನಾಮಾರ್ಥವನ್ನು ನಿರೂಪಿಸುತ್ತದೆ. ನ+ವಿ+ಅಕ್ತ="ಅವ್ಯಕ್ತ" ಎಂದು ಪದಚ್ಛೇದಮಾಡಿ ಅರ್ಥ ಮಾಡಬೇಕು. ಅಂದರೆ ಎಲ್ಲರಿಗೂ ಸಂಬದ್ಧನಾಗಿಯೇ ಇರುತ್ತಾನೆ-ಯಾವ ವಸ್ತುವಿನಿಂದಲೂ ಪರಮಾತ್ಮನ ಸಂಬಂಧವನ್ನು ಬಿಡಿಸಲಿಕ್ಕೆ-ತಪ್ಪಿಸಲಿಕ್ಕೆ ಆಗುವುದಿಲ್ಲ ಮತ್ತು ಪರಮಾತ್ಮನನ್ನು ಬಿಟ್ಟು ಯಾವ ವಸ್ತುವನ್ನೂ ಪೃಥಕ್ಕರಿಸಿ ತೋರಿಸಲಾಗುವದಿಲ್ಲ; ಆದುದರಿಂದ "ಅವ್ಯಕ್ತ" ಎಂದು ಹೇಳುತ್ತಾರೆ. ಹೀಗೆ ಈ ಮಂತ್ರಾರ್ಥವಿರುತ್ತದೆ ॥ ೩೯ ॥

ಅವತರಣಿಕಾ: ಈ ಪದ್ಯದಿಂದ ಕಾಲ ವಿವರ ಕಾಲಗತಿ ಮುಂತಾದುವುಗಳಿಗೆ ಕಾಲಪ್ರವರ್ತಕನಾದ ಕಾಲರೂಪೀ ಹರಿಯ ವಿಭೂತಿ ರೂಪಗಳನ್ನುಪದೇಶಿಸಿ ಸಂಧಿ ಸಮಾಪ್ತಿ ಮಾಡುತ್ತಾರೆ.

ಮೂಲ:

ಪರಿ ಇಡಾವತ್ಸರನು (ಸು) ಸಂವ ।
ತ್ಸರದೊಳನಿರುದ್ಧಾದಿ ರೂಪವ ।
ಧರಿಸಿ ಬಾರ್ಹಸ್ಪತ್ಯ ಸೌರಭ ಚಾಂದ್ರಮನು ಯೆನಿಸಿ ॥
ಇರುತಿಹ ಜಗನ್ನಾಥ ವಿಟ್ಠಲ ।
ಸ್ಮರಿಸುವವರನು ಸಂತಯಿಪನೆಂ ।
ದುರುಪರಾಕ್ರಮ ಉಚಿತ ಸಾಧನ ಯೋಗ್ಯತೆಯನರಿತು ॥೪೦॥

ಅಂತು ಸಂಧಿ ೫ಕ್ಕೆ ಪದ್ಯ ೧೪೬ಕ್ಕೆ ವಿಭೂತಿ ಸಂಧಿ ಸಮಾಪ್ತ

॥ ಮಂಗಳ ಮಹಾ—ಶ್ರೀ ಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು ॥

**ಪದ್ಯಾರ್ಥ :** ೧) **ಪರಿ=ಪರಿವತ್ಸರ,** ಗುರೋರ್ಬೃಹಸ್ಪತೇ ರ್ಮೇಷಾದಿರಾಶಿಷ್ವಾವರ್ತ ಆವೃತ್ತಿರ್ಯಸ್ಮಿನ್ನ ದ್ವಾದಶ ವತ್ಸರಾತ್ಮಕೇ ಕಾಲೇ ಸಗುರ್ವಾವೃತ್ತೌ ಯಸ್ಮಾತ್ ದ್ವಾದಶೇ ದ್ವಾದಶಮೇಂsಶೇ ಭಾಗಸ್ಥ ಸ್ಥಿತಃ। ಸ ಪರಿವತ್ಸ ಪರಿವತ್ಸರ ತನ್ನಾಮಾ ॥ ಭಾಗವತ ಸ್ಕಂಧ ೩, ಅಧ್ಯಾಯ ೧೨, ಶ್ಲೋಕ ೧೪ ಯಾದುಪತ್ಯ (ಅನಿರುದ್ಧ).

ಪರಿವತ್ಸರವೆಂಬರೆ, ಬೃಹಸ್ಪತಿಯು ಮೇಷಾದಿ ಹನ್ನೆರಡು ರಾಶಿಗಳಲ್ಲಿ ಸಂಚರಿಸುತ್ತ ದ್ವಾದಶ ರಾಶಿಗಳಲ್ಲಿ ಇರುವ ಕಾಲ (ಒಂದು ವರ್ಷ) ಪರಿವತ್ಸರ ವೆಂದು ಹೆಸರು.

೨) **ಇಡಾವತ್ಸರ=ಯಾದುಪತ್ಯ=**ಅಸೌ ಹರಿ ರಶ್ವಿನ್ಯಾದಿ ಸಪ್ತ ವಿಂಶತಿ ನಕ್ಷತ್ರಾಣಾಂ ದ್ವಾದಶವಾರ ಮಾವೃತ್ತೌ ಯಾವನ್ಕಾಲ ತಸ್ಮಿನ್ ಕಾಲೇ ನಿಯಾಮಕತ್ವೇನ ಸ್ಥಿತ ಇತ್ಯರ್ಥಃ (ಪ್ರದ್ಯುಮ್ನ).

ಇಡಾವತ್ಸರವೆಂದರೆ, ಆ ಸೂರ್ಯದೇವನು ಅಶ್ವಿನ್ಯಾದಿ ರೇವತಿ ಅಂತ ವಾಗಿ ಇಪ್ಪತ್ತೇಳು ನಕ್ಷತ್ರಗಳನ್ನು ಹನ್ನೆರಡು ಬಾರಿ, ಈ ೨೭ ನಕ್ಷತ್ರಗಳಲ್ಲಿ ಸಂಚರಿಸುವ ಕಾಲನಿಯಾಮಕನಾಗಿಪ್ಪನೆಂದು ತಿಳಿಯಬೇಕು. ಈ ಕಾಲ ನಾಮಕ ಹರಿಗೆ ಇಡ ಎಂದು ಹೆಸರು.

೩) **ವತ್ಸರ=**ವತ್ಸರೋಽಯಸ್ಥಿತಸ್ತ್ವನ್ಹಾಂ ಷಷ್ಟ್ಯುತ್ತರಶತತ್ರಯೇ ಭಾಗವತ ॥ ಯಂ ಕಂಚಿನದಿವಸ ಮಾರಭ್ಯ ಗಣನಾಯಾಂ ಯಾವತಾ ಕಾಲೇನಾನ್ಹಾಂ ಷಷ್ಟ್ಯುತ್ತರತ್ರಯಂ ಭವತಿ ತಾವತಿಕಾಲೇಸ್ಥಿತಿ ಇತ್ಯರ್ಥಃ (ಸಂಕರ್ಷಣ). ಮುನ್ನೂರಾ ಅರವತ್ತು ದಿವಸಗಳಲ್ಲಿ ಸೂರ್ಯನು ಚರಿಸುವ ಕಾಲನಾಮ ವತ್ಸರ.

೪) **ಅನುವತ್ಸರ=**ತಿಥೀನಾಂ ಶುಕ್ಲ ಪ್ರತಿ ಪದಾ ಮಾರಭ್ಯಾಮಾ ವಾಸ್ಯಾದಿ ಪರ್ಯಂತಾನಾಂ ತ್ರಿಂಶ ಸಂಖ್ಯಾಕಾನಾಂ ದ್ವಾದಶವಾರ ಮಾವೃತ್ತಿಯಸ್ಮಿನ್ ಸ್ತದ್ವಾದಶಾವೃತ್ತ ಸ್ತಸ್ಮಿನ್ ಕಾಲೇಸ್ಥಿತ ಇತ್ಯನು ವರ್ತತೇ। ಅನುವತ್ಸರೋ ಅನುವತ್ಸರ ನಾಮಾ ॥ (ವಾಸುದೇವ) ಅನು ವತ್ಸರವೆಂದರೆ, ಪ್ರತಿ ತಿಂಗಳು, ಶುದ್ಧ ಪ್ರತಿಪದಾ (ಪಾಡ್ಯ) ಆರಂಭಿಸಿ ಅಮಾವಾಸ್ಯಾ ಪೂರ್ಣವಾದ ೩೦ ಸಂಖ್ಯೆಯುಳ್ಳ ತಿಥಿಗಳನ್ನು ಹನ್ನೆರಡು

ಆವರ್ತಿ ಸೂರ್ಯನು ತಿರುಗುವ ಕಾಲ ಇದಕ್ಕೆ ಅನುವತ್ಸರವೆಂದು ಕಾಲ ನಿಯಾಮಕನ ಹೆಸರು.

೫) ಸಂವತ್ಸರ=ಸೌರೇಃ ಸೂರ್ಯ ಸಂಬಂಧೀನಿ ದ್ವಾದಶಕೇ ಸಂಕ್ರಮಣ ಭೇದೇನ ದ್ವಾದಶ ಸಂಖ್ಯಾಕೆ ಮಾಸೆ-ಮಾಸ ಸಮುದಾಯೇ ಸಂವತ್ಸರಸ್ತನ್ನಾಮಾ (ನಾರಾಯಣ). ಸಂವತ್ಸರವೆಂದರೆ,=ಸೂರ್ಯದೇವನು-- ಹನ್ನೆರಡು ಸಂಕ್ರಮಣ ಭೇದದಿಂದ ಹನ್ನೆರಡು ಸಂಖ್ಯಾವುಳ್ಳ ಮಾಸ (ತಿಂಗಳು) ಸಮುದಾಯಗಳಲ್ಲಿ ಸಂಚರಿಸುವ ಕಾಲ, ಸಂವತ್ಸರವೆಂದು ಕಾಲ ನಾಮಕನ ರೂಪ.

ಈ ಪ್ರಕಾರ ಪರಿ ಬಾರ್ಹಸ್ಪತ್ಯಮಾನ ೨) ಇಡಾ ನಕ್ಷತ್ರಮಾನ ಚಂದ್ರಮಾನ, ೩) ವತ್ಸರ-೩೬೦ ದಿವಸಗಳಿಂದ ಪೂರಿತವಾದ ದಿನಮಾನ, ೪) ಅನುವತ್ಸರ-೩೦ ತಿಥಿಗಳು ೧೨ ಆವೃತ್ತಿ ತಿರುಗಿದದು ವರ್ಷ. ೫) ಸಂವತ್ಸರ-ಸೂರ್ಯನು ೧೨ ಸಂಕ್ರಮಣಗಳಲ್ಲಿ ಚರಿಸುವ ೧ ವರ್ಷ ಸಂವತ್ಸರ. ಗುರು ಚರಿಸುವ ಕಾಲ ನಕ್ಷತ್ರ ಚರಿಸುವ ಕಾಲ-೩೬೦ ದಿನದ ಕಾಲ-೩೦ ತಿಥಿಗಳು ೧೨ ಆವೃತ್ತಿ ತಿರುಗುವ ಕಾಲ-ಸೂರ್ಯ ೧೨ ಸಂಕ್ರಮಣಗಳಲ್ಲಿ ಚರಿಸುವ ಕಾಲ ೫ ಕಾಲ ವಿಭಾಗಗಳಲ್ಲಿ ಕ್ರಮೇಣ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣನ ವಿಭೂತಿ ರೂಪಗಳು ಬಾರ್ಹಸ್ಪತ್ಯಮಾನ-ಚಾಂದ್ರಮಾನ-ಸೌರಮಾನಗಳಲ್ಲಿ ಆಯಾ ನಾಮಗಳಲ್ಲಿ ಶ್ರೀಹರಿಯೇ ತತ್ತತ್ ಶಬ್ದವಾಚ್ಯನಾಗಿ ಇರುತಿಹನು. ಜಗನ್ನಾಥ ವಿಠಲನು ಜಗತ್ತಿನಲ್ಲಿ ವ್ಯಾಪ್ತ ಜಗತ್ತಿಗೆ ಸ್ವಾಮಿಯಾದ ವಿಠ್ಠಲನಾಮಕ ಹರಿಯು ಸಂತತವಾಗಿ ಇರುತಿಹನೆಂದು, ಸಂತತ ಸ್ಮರಿಸುವವರನ್ನ ಸಂತೈಪ=ರಕ್ಷಿಸುವನು. ಶ್ರೀ ಜಗನ್ನಾಥ ವಿಠ್ಠಲನು, ಎಂಥ ಮಹಾಮಹಿಮನೆಂದರೆ, ಉರು ಪರಾಕ್ರಮ=ಉತ್ಕೃಷ್ಟ ಶ್ರೇಷ್ಠ ಪೂರ್ಣ ಬಲಶಾಲಿಯಾದ ಹರಿಯು ಉಚಿತ ಸಾಧನ ಯೋಗ್ಯತೆಯನರಿತು=ಆಯಾ ಜೀವರ ಯೋಗ್ಯತೆಗೆ ತಕ್ಕ, ಸಾಧನ ಮಾಡಿಸಿ, ತನ್ನ ಕಾಲಜ್ಞಾನವನಿತ್ತು ಸಂರಕ್ಷಿಸುವನು.

**ವಿಶೇಷಾಂಶ :** ವಿಚಾರಾರ್ಹವಾಗಿದೆ. ಅನಿರುದ್ಧಾದಿ ಪಂಚ ವಿಭೂತಿ ರೂಪಗಳಿಂದ ಕಾಲ ನಿಯಾಮಕನು ಕಾಲ ಪ್ರವೃರ್ತಕನು ಎಂದು ಹೇಳುವುದು ಮುಖ್ಯ.

ಆದಿತ್ಯಾದಿ ಜ್ಯೋತಿಶ್ಚಕ್ರ ಪರಮಾಣ್ವಾದಿ ಕಾಲಗಳಾದರೂ, ಸ್ವಪರಿಭ್ರಮಣ ತಮ್ಮ ತಿರುಗುವಿಕೆಯಿಂದ ಮನುಷ್ಯರ ಆಯುಸ್ಸು ಪ್ರವೃತ್ತಿಗೈಸುತ್ತವೆ. ಆದರೆ ಗ್ರಹಾಃ ಸೂರ್ಯಾದಿ ಗ್ರಹಗಳು ಅಶ್ವಿನ್ಯಾದಿ ನಕ್ಷತ್ರಗಳು. ತಾರಾ ಧ್ರುವಾದಿಗಳು, ಗ್ರಹ ನಕ್ಷತ್ರ ತಾರ ಚಕ್ರ ಮಂಡಲ ಇರುವುದು. ಯಾರ ಅಸ್ತಿತ್ವದಿಂದ? ಪರಮಾಣ್ವಾದಿ ಸಂವತ್ಸರ ಕೊನೆ ಪರಿಯಂತ ಕಾಲ ಜಗತ್ತಿನಲ್ಲಿರುವ ಮನುಷ್ಯಾದಿಗಳ ಆಯುರ್ಮರ್ಯಾದಾ ಶತಾಯು ಪರಿಯಂತ್ರ ತೋರುವವು. ಇಲ್ಲಿ ಸೂರ್ಯಾದಿ ಮಂಡಲದಲ್ಲಿ ಸ್ವಯಂ ಹರಿಯೇ ಆಯಾ ಮಂಡಲಗಳಲ್ಲಿದ್ದು ಪರಮಾಣ್ವಾದಿ ಕಾಲ ವಿಶೇಷಗಳನ್ನು ಸೃಷ್ಟಿಸಿ ತನ್ನಿಯಾಮಕನಾಗಿ ತತ್ತನ್ನಾಮಕನಾಗಿ ತನ್ನ ಸ್ವರೂಪ ವಿಶೇಷಗಳಿಂದ ಕೂಡಿಕೊಂಡು ಶ್ರೀಹರಿಯೇ ಮನುಷ್ಯನ ಆಯುಷ್ಯವನ್ನು ಪ್ರವರ್ತಿಸುತ್ತಾನೆ. ಹೊರತಾಗಿ ಸೂರ್ಯಾದಿಗಳಲ್ಲಿ ಸೂರ್ಯಾದಿಗಳು ಅಸ್ವತಂತ್ರರೆಂಬುದು ನಿಶ್ಚಯ. ಹೀಗೆ ಯಾದುಪತ್ಯರ ಸವಿಸ್ತರ ಟಿಪ್ಪಣಿ.

ಮನುಜನ ೧೦೦ ವರ್ಷ ಆಯುಸ್ಸು-ಇದರಲ್ಲಿ ದಿನದಲ್ಲಿ ಪ್ರಾತಃ ಸಂಗಮ ಮಧ್ಯಾಹ್ನ ಅಪರಾಹ್ಣ ಸಾಯಾಹ್ನವೆಂತ ಐದು ಕಾಲಗಳ ಪ್ರವರ್ತಿಗೂ ಈ ಅನಿರುದ್ಧಾದಿ ರೂಪಗಳು ನಿಯಾಮಕವಾಗಿರುವಂತೆ ನೂರು ವರ್ಷಗಳಲ್ಲಿ ೫ ವಿಭಾಗ ೨೦-೨೦ ವರ್ಷಕ್ಕೂ ಇವೇ ಅನಿರುದ್ಧಾದಿ ರೂಪಗಳು. ಇಡಾ=ನಕ್ಷತ್ರ, ಪರಿವತ್ಸರ=ಗುರು, ಅನುವತ್ಸರ=೩೬೦ ದಿವಸ ಸೂರ್ಯ-ಸಂಕ್ರಮಣ ರೂಪಗಳು. ತಿಥ್ಯಾದಿಗಳ ಶಬ್ದ, ನಾಮ ರೂಪಗಳಿಗೆಲ್ಲ ಶ್ರೀಹರಿಯೇ ಮುಖ್ಯ ನಾಮರೂಪವುಳ್ಳವನು. ಅದು ಹೇಗಂದರೆ:

ವತ್ಸರ=ವಸತ್ಯೇವಾಖಿಲಂ ಯಸ್ಮಿನ್ ಇತಿ ವತ್ಸರ=ಯಾವಾತನಲ್ಲಿ ಅಖಿಲವೂ ಇರುವವೋ ಆತನಿಗೆ ವತ್ಸರವೆಂತಲೂ,

ಸಂವತ್ಸರ=ಸಂವಸಂತಿ ಭೂತಾನ್ಯಸ್ಮಿನ್ನಿತಿ ಸಂವತ್ಸರಃ। ಸರಣಾತ್ ಸರ್ವಗತತ್ವೇನ ಸರ್ವಜ್ಞೋ ವತ್ಸರೋ ಹರಿಃ" ಎಂದು, ವಿದ್ಯಾಧಿ ರಾಜರ ವಿಷ್ಣು ಸಹಸ್ರನಾಮ ವ್ಯಾಖ್ಯಾನ ಇತ್ಯಾದಿ.

ಇದರಂತೆ, ನಕ್ಷರತಿ ಹಿನಸ್ತಿ ತನ್ನಕ್ಷತ್ರಂ-ನಾಶವಾಗದಿರುವದು-ಯಾವಾಗಲೂ ಯಾರಿಂದಲೂ ಹಿಂಸೆಗೊಳ್ಳದಿರುವದು ನಕ್ಷತ್ರ-ಹರಿ.

ಚಂದ್ರ=ಚಂದಯತೀತಿ ಚಂದ್ರ-ಆಲ್ಹಾದ ಮಾಡುವನು ಮುಖ್ಯ ಹರಿ.

ದಿನಂ=ತಮೋದ್ಯತೀತಿ ದಿನಂ ॥ ತಮ-ಕತ್ತಲೆ ನಾಶ ಮಾಡುವದು ದಿನ. ದಿವಸ.

ತಿಥಿ=ತನುತೇ ಷಷ್ಟಿ ಘಟಿಕಾ ಇತಿ ತಿಥಿಃ=೬೦ ಘಟಿಕಾಗಳಿಗೆ ವಿಸ್ತಾರ ಮಾಡುವದು ಯಾವದೋ ಅದು ತಿಥಿ.

ಸಂಕ್ರಮಣಂ=ಸಂಕ್ರಮಃ=ದುರ್ಗದೇಶ ಕ್ರಮಣ ಯಾವನು ಮಾಡುತ್ತಾನೋ ಅವನು.

ಸೂರ್ಯ=ಸರತ್ಯಾಕಾಶೋ ಸುವತಿ=ಆಕಾಶದಲ್ಲಿ ಗಮನ ಮಾಡುವವನು ಯಾವನೋ ಅಥವಾ ಕರ್ಮಣಿ ಲೋಕಂ ಪ್ರವೇಶಯತಿ ಸೂರ್ಯಃ ॥

ಗುರು=ಗೃಣಾತಿ ಧರ್ಮೇಗಿರತಿ-ಅಜ್ಞಾನಂ ವಾಂ ಗುರುಃ ಧರ್ಮವನ್ನು ಹೇಳುವವನು ಅಥವಾ ಅಜ್ಞಾನ ನಾಶ ಮಾಡುವವನು.

ಬೃಹಸ್ಪತಿ=ಬೃಹತಾಂ ಪತಿ=ಬೃಹಸ್ಪತಿ=ದೇವತೆಗಳ ಪತಿ-ಗುರು. ಮುಖ್ಯಪತಿ ಬೃಹಸ್ಪತಿ ನಾಮಕ ಹರಿ.

ಇಂತು ಎಲ್ಲ ಶಬ್ದಗಳಿಂದಲೂ, ಎಲ್ಲ ನಾಮಗಳಿಂದಲೂ ಶ್ರೀಹರಿಯೇ ಮುಖ್ಯವಾಚ್ಯನು. ಕಾಲ ಪ್ರವರ್ತಕನೆಂದು ಕಾಲ ವಿಭೂತಿ ರೂಪಗಳನ್ನರಿಯಬೇಕು.

॥ ಇನೇ ವಿಭೂತಿ ಸಂಧಿ ಪದ್ಯಾರ್ಥ ಸಮಾಪ್ತ ॥

**ಭಾವಸೂಚನ :** ಪರೀತಿ ॥ ೪೦ ॥ ಓಂ ಇತಿ ಶ್ರೀಮಜ್ಜಗನ್ನಾಥದಾಸರಾಜ ವಿರಚಿತ ಹರಿಕಥಾಮೃತಸಾರ ಭಾವಸೂಚನೇ ಜಂಬುಖಂಡೀ ಶ್ರೀನಿವಾಸಾಚಾರ್ಯ ಸೂನು ವಾದಿರಾಜಕೃತೇ ವಿಭೂತಿ ಸಂಧಿಸ್ಸಮಾಪ್ತಃ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಉಪಸಂಹರತಿ-"ಪರೀತಿ ॥" "ತತ್ತತ್ಸಂಜ್ಞ ಕಾಲಸ್ಥಿತತ್ವೇನ ತನ್ನಿಯಂತೃತ್ವೇನ ತನ್ನಾಮವಾನ್" ಇತ್ಯಾಹ "ಸಂವತ್ಸರ" ಇತಿ ॥ ತೃತೀಯ ಭಾಗವತೇ ಚ ॥ "ಸಂವತ್ಸರಃ ಪರಿವತ್ಸರ ಇಡಾವತ್ಸರ ಏವ ಚ ॥ ಅನುವತ್ಸರೋ ವತ್ಸರಶ್ಚ ವಿದುರೈವಂ ಪ್ರಭಾಷ್ಯತೇ ॥" ಇತಿ ॥ ಸೌರ ದ್ವಾದಶ

ಮಾಸಾಃ ಸಂಕ್ರಮಣಾವಸಾನಾಃ । ದ್ವಾದಶಮಾಸೇ ಸ್ಥಿತಃ ಸಂವತ್ಸರಃ ॥೧॥ ದ್ವಾದಶರಾಶಿಷು ಬೃಹಸ್ಪತೇಃ ಆವೃತ್ತ್ಯಾ ಯಃ ತಿಷ್ಠತಿ ಸಃ ಪರಿವತ್ಸರಾಖ್ಯಃ ॥ ೨ ॥ ಸಪ್ತವಿಂಶತಿ(ತ್) ನಕ್ಷತ್ರಾಣಿ (ಮಾಸಃ) ತದ್ದ್ವಾದಶ ಮಾಸೇಷು ಸ್ಥಿತಃ ಇಡಾವತ್ಸರ ನಾಮಾ ॥ ೩ ॥ ತಿಥೀನಾಂ ದ್ವಾದಶಾವರ್ತೇ ದ್ವಾದಶ ಮಾಸ ರೂಪಃ । ತತ್ರ ಸ್ಥಿತೋ ಹರಿಃ-ಅನುವತ್ಸರಃ ॥ ೪ ॥ ಅಹ್ನಾಂ ಷಷ್ಟ್ಯುತ್ತರ ಶತತ್ರಯಾತ್ಮ ದ್ವಾದಶಮಾಸೇಷು ಸ್ಥಿತೋ ಹರಿಃ ವತ್ಸರ ನಾಮಾ ॥ ೫ ॥ ಕಾಲಾಂತರ್ಯಾಮೀ ಹರಿಃ ಏವಂ ಸ್ವರೂಪೋ ಭಾವ್ಯತೇ ॥ ಇತ್ಯನ್ವಯಃ ॥ ಭಗವತ್ಪಾದಾಸ್ತು "ಇಡಾ ವತ್ಸರ ನಾಮಾ ಸೌ ನಕ್ಷತ್ರ ದ್ವಾದಶ ಸ್ಥಿತಃ ॥ ತಿಥೀನಾಂ ದ್ವಾದಶಾವರ್ತೇ ಯೋ ಹರಿಃ ಸೋಽನು ವತ್ಸರಃ ॥ ವತ್ಸರೋ ಯಃ ಸ್ಥಿತಃ ಸ್ತ್ವಹ್ನಾಂ ಷಷ್ಟ್ಯುತ್ತರ ಶತತ್ರಯೇ ॥ ಗುರ್ವಾವೃತ್ತ ದ್ವಾದಶಾಂತೇ ಸ್ಥಿತಃ ಸ ಪರಿವತ್ಸರಃ ॥ ಸೌರ ದ್ವಾದಶ ಮಾಸೇಷು ಯಃ ಸ್ಥಃ ಸಂವತ್ಸರೋ ಹರಿಃ ॥ ಏವಂ ಸಕಾಲನಾಮಾಪಿ ಕಾಲಸ್ಥಃ ಪರಮೇಶ್ವರಃ ॥ ಇತಿ ಬ್ರಹ್ಮತರ್ಕೇ" ಇತಿ ॥ ಗುರು ಸೂರ್ಯ ನಕ್ಷತ್ರ ಚಂದ್ರಗಃ ॥

ಇತಿ ಶ್ರೀಮದ್ಧರಿಕಥಾಮೃತಸಾರ ಟೀಕಾಯಾಂ ವ್ಯಾಸದಾಸ ಸಿದ್ಧಾಂತ ಕೌಮುದೀ ನಾಮ್ನ್ಯಾಂ ಕಾಲೀಯ ಮರ್ದನಾರಾಧಕ ಶ್ರೀಮದ್ವಿದ್ಯಾಧೀಶ ವಿನೇಯ ವಾದಿರಾಜ ರಚಿತಾಯಾಂ ವಿಭೂತಿ ಸಂಧಿಃ ಸಮಾಪ್ತಃ ॥ ೫ ॥

॥ ಶ್ರೀ ಮಧ್ವೇಶಾರ್ಪಣಮಸ್ತು ॥

## ಕನ್ನಡಾರ್ಥ

ಸಂಧಿಯನ್ನು ಉಪಸಂಹರಿಸುತ್ತಾರೆ "ಪರಿ ಇಡಾವತ್ಸರ" ಎಂಬ ಪದ್ಯ ದಿಂದ "ಪರಿವತ್ಸರ" ಎಂದು ಮುಂತಾದ ಹೆಸರಿನ ಕಾಲಗಳಲ್ಲಿ ಇರುವದ ರಿಂದಲೂ ಆಯಾ ಕಾಲಗಳನ್ನು ನಿಯಂತ್ರಿಸುವದರಿಂದಲೂ, ಶ್ರೀಹರಿಯು "ಪರಿವತ್ಸರ" ಮುಂತಾದ ನಾಮಗಳಿಂದ ಕರೆಯಿಸಿಕೊಳ್ಳುತ್ತಾನೆ; ಎಂದು ಹೇಳುತ್ತಾರೆ "ಸಂವತ್ಸರ" ಎಂಬ ಪದಗಳಿಂದ.

ಭಾಗವತ ತೃತೀಯ ಸ್ಕಂಧದಲ್ಲಿ "ಸಂವತ್ಸರ, ಪರಿವತ್ಸರ, ಇಡಾವತ್ಸರ, ಅನುವತ್ಸರ, ವತ್ಸರ ಎಂದು ಕಾಲದ ಐದು ರೂಪಗಳು ಶ್ರೀಹರಿಗೇ ಹೇಳು ತ್ತಾರೆ" ಎಂದು ಮೈತ್ರೇಯರು ವಿದುರನಿಗೆ ಹೇಳಿರುತ್ತಾರೆ. ಸಂಕ್ರಮಣ

ದಿಂದ ಸಂಕ್ರಮಣದವರೆಗೆ ಸೂರ್ಯನ ಮಾಸ. ಈ ಹನ್ನೆರಡು ಸೌರಮಾಸಗಳಲ್ಲಿ ನಿಯಾಮಕವಾಗಿರುವ ಶ್ರೀಹರಿಯ ರೂಪವು "ಸಂವತ್ಸರ" ಎನ್ನಿಸಿಕೊಳ್ಳುತ್ತದೆ. ||೧|| ಬೃಹಸ್ಪತಿಯು (ಗುರು) ಹನ್ನೆರಡು ರಾಶಿಗಳಲ್ಲಿ ತಿರುಗಿ ಕೊನೆಯ ರಾಶಿಯಲ್ಲಿರುವಾಗ ಶ್ರೀಹರಿಯು "ಪರಿವತ್ಸರ" ಎನ್ನಿಸಿಕೊಳ್ಳುತ್ತಾನೆ ॥ ೨ ॥ ಇಪ್ಪತ್ತೇಳು (೨೭) ನಕ್ಷತ್ರಗಳ ತಿಂಗಳುಗಳು ಹನ್ನೆರಡು ಗಣಿಸಲು ಆಗುವ ವರ್ಷಕ್ಕೆ ಇಡಾವತ್ಸರವೆಂತಲೂ ಅಲ್ಲಿರುವ ಶ್ರೀಹರಿಗೂ "ಇಡಾವತ್ಸರ"ವೆಂತಲೂ ಕರೆಯುತ್ತಾರೆ ॥ ೩ ॥ ಪ್ರತಿಪದದಿಂದ ಆರಂಭಿಸಿ ಅಮಾವಾಸ್ಯೆಯವರೆಗಿನ ಮೂವತ್ತು ತಿಥಿಗಳಿಗೆ ಒಂದರಂತೆ ಆಗುವ ಹನ್ನೆರಡು ಮಾಸಗಳ ಒಂದು ವರ್ಷಕ್ಕೆ "ಅನುವತ್ಸರ"ವೆಂತಲೂ ಅಲ್ಲಿರುವ ಶ್ರೀಹರಿಯ ರೂಪಕ್ಕೆ "ಅನುವತ್ಸರ"ವೆಂತಲೂ ಕರೆಯುತ್ತಾರೆ. ||೪|| ೩೬೦ ದಿವಸಗಳ ಹನ್ನೆರಡು ಮಾಸದ ವರ್ಷಕ್ಕೆ ವತ್ಸರವೆಂತಲೂ, ಅಲ್ಲಿ ನಿಯಾಮಕವಾಗಿರುವ ಭಗವಂತನ ಕಾಲರೂಪಕ್ಕೆ "ವತ್ಸರ"ವೆಂತಲೂ ಕರೆಯುತ್ತಾರೆ. ||೫|| ಕಾಲಾಂತರ್ಯಾಮಿಯಾದ ಶ್ರೀಹರಿಯು ತನ್ನ ಈ ರೂಪಗಳಿಂದ "ಪರಿವತ್ಸರ" ಮುಂತಾದ ಕಾಲಗಳನ್ನು ಪ್ರವರ್ತಿಸಿ ಆಯಾ ನಾಮಗಳಿಂದ ಕರೆಯಿಸಿಕೊಳ್ಳುತ್ತಾನೆ. ಶ್ರೀಮದಾನಂದತೀರ್ಥ ಭಗವತ್ಪಾದರೂ ಸಹ ತಾತ್ಪರ್ಯದಲ್ಲಿ ಇದೇ ವಿಷಯವನ್ನು "ಇಡಾವತ್ಸರ ನಾಮಾಸೌ" ಎಂದು ಪ್ರಾರಂಭಿಸಿ, "ಕಾಲಸ್ಥಃ ಪರಮೇಶ್ವರಃ" ಎಂದು ಮುಗಿದಿರುವ ಶ್ಲೋಕಗಳಿಂದ ನಿರೂಪಿಸಿರುತ್ತಾರೆ. ಅವರು ನಿರೂಪಿಸಿರುವ ಸಂಗತಿಯನ್ನು ಅನುಸರಿಸಿಯೇ ಈ ವಿಷಯವು ಬರೆಯಲ್ಪಟ್ಟಿರುತ್ತದೆ. ಬ್ರಹ್ಮತರ್ಕದಲ್ಲಿ ಹೀಗೆ ಈ ವಿಷಯವು ಹೇಳಲಾಗಿರುತ್ತದೆ. ಹೀಗೆ "ಪರಮಾತ್ಮನು ಕಾಲವಾಚಕ ಶಬ್ದಗಳಿಂದ ವಾಚ್ಯನು" ಎಂದು ಪ್ರಮಾಣಗಳಿಂದ ಸಿದ್ಧಪಡಿಸಿರುತ್ತಾರೆ. ಅವನೇ "ಬಾರ್ಹಸ್ಪತ್ಯ ಸೌರ ಚಾಂದ್ರ ನಾಕ್ಷತ್ರ" ಮಾನಗಳಿಂದ ಮುಖ್ಯವಾಗಿ ಕರೆಯಲ್ಪಡುತ್ತಾನೆ ||೪೦|| ಇಂತು ಶ್ರೀ ಹರಿಕಥಾಮೃತಸಾರ ಟೀಕಾ ವ್ಯಾಸದಾಸ ಸಿದ್ಧಾಂತ ಕೌಮುದಿಯಲ್ಲಿ ವಿಭೂತಿ ಸಂಧಿಯ ಕನ್ನಡಾರ್ಥಾನುವಾದವು ಮುಗಿದುದು.

॥ ಶ್ರೀ ಮಧ್ವೇಶ ಕೃಷ್ಣಾರ್ಪಿತವಾಗಲಿ ॥

॥ ಶ್ರೀ ಗುರುರಾಜೋ ವಿಜಯತೇ ॥

# ೬. ಪಂಚಮಹಾಯಜ್ಞ ಸಂಧಿಯ ಸಾರ

ಶ್ರೀಮಜ್ಜಗನ್ನಾಥದಾಸರಾಯರು, ಶ್ರೀ ಹರಿಕಥಾಮೃತಸಾರ ಶ್ರೀಹರಿಯ ಲೀಲಾ ಸೃಷ್ಟ್ಯಾದಿ ವ್ಯಾಪಾರ ಮುಂದರಿಗೆ ತಿಳಿಸುವ ನಿಮಿತ್ಯ ಹಿಂದಿನ ಸಂಧಿಯಲ್ಲಿ ಶ್ರೀಹರಿಯು ತನ್ನ ವಿಭೂತಿ ರೂಪಗಳನ್ನಿಟ್ಟು, ಜೀವರ ಸ್ವಭಾವ ಗುಣಾನುಸಾರ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಜೀವರಿಗೆ ಅನಿರುದ್ಧ ಶರೀರ ನಿರ್ಮಾಣ ತದ್ಗುಣವನನುಸರಿಸಿ ಕಾರ್ಯ ಪ್ರವರ್ತಿಸಿ, ಆಯಾ ಸೂಕ್ಷ್ಮ ಕಾರ್ಯಗಳನ್ನು, ಭಗವಂತನಾದ ಬಿಂಬರೂಪಿ ಹರಿಗೆ ನಾನಾ ಬಗೆಯ ಯಜ್ಞತ್ವೇನ ಸಮರ್ಪಣ ಜ್ಞಾನಿಗಳು ಮಾಡುವ ಧ್ಯಾನೋಪಾಸನೆ ಮುಂತಾದವಗಳನ್ನು ಸವಿಸ್ತರಿಸಿ, ಮಹಾ ಕರುಣಾಳುಗಳಾದ ದಾಸಾರ್ಯರು ಜೀವರಿಗೆ ಸ್ಥೂಲದೇಹ ಹೇಗೆ ಪ್ರಾಪ್ತಿಯಾಗುವದು; ಅದರ ಕ್ರಮ ಹೇಗೆ! ಶ್ರೀಹರಿಯು ಸಮಸ್ತ ಬ್ರಹ್ಮಾಂಡವನ್ನು ನಿರ್ಮಿಸಿದಂತೆ, ಈ ಪಿಂಡಾಂಡವಾದ ಸ್ಥೂಲದೇಹ ನಿರ್ಮಾತೃನು ಶ್ರೀಹರಿಯೇ ಅನಿರುದ್ಧಾದಿ ರೂಪಗಳಿಂದ ಮಾಡುತ್ತಾನೆ. ಪ್ರಕಾಶ ಸಂಹಿತೆ ಭಾಗವತ, ವಿಷ್ಣು ರಹಸ್ಯಾದಿ ಗ್ರಂಥಗಳಲ್ಲಿ ಶ್ರೀ ವ್ಯಾಸರು ಆಜ್ಞೆಯಿತ್ತಂತೆ ಶ್ರೀಮದಾಚಾರ್ಯರ ಉಕ್ತ್ಯನುಸಾರ ಶ್ರೀ ವಿಜಯದಾಸರು ಸೃಷ್ಟಿ ಪ್ರಕರ್ಣ ಸುಳಾದಿಗಳು ಇನ್ನಿತರ ಸುಳಾದಿಗಳಲ್ಲಿ ಆಜ್ಞೆಯಿತ್ತಂತೆ ಶ್ರೀ ದಾಸಾರ್ಯರು ಜೀವರಿಗೆ ಶ್ರೀಹರಿಯು ಸ್ಥೂಲದೇಹ ಕೊಡುವ ಕ್ರಮವನ್ನು ವಿಸ್ತಾರಗೈಸುತ್ತಾರೆ. ಇದೇ ಸಂಧಿಯ ಸಂಬಂಧ.

ಅನಿರುದ್ಧಾದಿ ಶರೀರಯುಕ್ತ ಜೀವರುಗಳಿಗೆ ಸ್ಥೂಲ ಶರೀರಗಳು ಕೊಡಬೇಕಾದರೆ ಆ ಜೀವರನ್ನು, ಗಗನ=ಆಕಾಶದಲ್ಲಿ ಇರಿಸುತ್ತಾನೆ. ನಂತರ ಮೇಘ ಮಂಡಲದಲ್ಲಿರಿಸಿ, ವೃಷ್ಟಿದ್ವಾರಾ, ಭೂಮಿಯಲ್ಲಿ ಬೆಳೆಯುವ ಧಾನ್ಯಾದಿಗಳಲ್ಲಿಡುವನು. ಆ ಧಾನ್ಯಾದಿಗಳನ್ನು ಪುರುಷರು ಭಕ್ಷಿಸುವರು. ಪುರುಷರಲ್ಲಿ ತೇಜೋಮಯವಾದ ರೇತಸ್ಸಿನಲ್ಲಿ ಕೆಲವು ದಿನವಿದ್ದು, ಪುರುಷ ರೇತೋದ್ವಾರಾ ಸ್ತ್ರೀ ಗರ್ಭದಲ್ಲಿ ನವಮಾಸವಿದ್ದು ಜನಿಸುವ ಆ ಜೀವನಿಗೆ ಸ್ಥೂಲ ಶರೀರವನ್ನು ಶ್ರೀಹರಿಯು ಅನಿರುದ್ಧಾದಿ ಪಂಚರೂಪಗಳಿಂದಲೇ

ನಿರ್ಮಿಸುವನು. ಸ್ತ್ರೀ ಯೋನಿಯಲ್ಲಿ ಅವಕಾಶ ಮಾಡಿಕೊಡುವನು. ವಾಸುದೇವನು ಪುರುಷ ರೇತೋಸಿಂಚಿಸಿ ಸ್ತ್ರೀ ಶೋಣಿತದಲ್ಲಿ ಕಲಿತ ಮಾಡುವನು. ಪ್ರದ್ಯುಮ್ನದೇವನು "ಸಂಕರ್ಷಣಾಭಿದೋತ್ವಷ್ಟಾ ಗರ್ಭೇ ರೂಪ ವಿಧಾಯಕಃ||" ತ್ವಷ್ಟ್ರ ದೇವತೆಗಳ ಬಡಿಗನು ಪ್ರತಿಮಾರೂಪ ಹೇಗೆ ನಿರ್ಮಾಣ ಮಾಡುವನೋ ಹಾಗೆ ಕಲಿಲ ಬುದ್ಬುದಾದಿ ಪಿಂಡವು ತ್ವಚರೋಮ ಮುಖ ನಖಾದಿಗಳನ್ನು ಹೊಂದುವಂತೆ ಸಂಕರ್ಷಣನೆಂಬುವ ಬಡಿಗನು ಸ್ಥೂಲರೂಪ ನಿರ್ಮಾಣ ಮಾಡುವನು. ಅನಿರುದ್ಧ ನಾರಾಯಣರು ಸ್ಥೂಲ ಶರೀರ ಅಭಿವೃದ್ಧಿಸಿ ರಕ್ಷಿಸುವರೆಂದು ಉಪನಿಷತ್ತುಗಳ ವಾಕ್ಯ. ಸ್ತ್ರೀ ಗರ್ಭವಾಸ ದಲ್ಲಿರುವಾಗ್ಗೆ ಸ್ತ್ರೀ ಗರ್ಭವಾಸ ದುಃಖ ಜ್ಞಾನಿಗಳಿಗೆ ಇಲ್ಲ. ಕೆಲವು ದೇವತೆ ಗಳಿಗೆ ಕಿಂಚಿತ ದುಃಖ ಕೆಲಕಾಲ ಮಾತ್ರವಾದರೂ ಶ್ರೀಹರಿಯ ಅನುಗ್ರಹ ದಿಂದ ಪುನಃ ಜ್ಞಾನದಿಂದ ಸಕಲ ವಿಚಾರ ಮನಕೆ ಕೊಟ್ಟು ಪೂಜೆಗೊಳ್ಳು ವನು. ಇದು ಜ್ಞಾನಿಗಳು ಯಜ್ಞತ್ವೇನ ಸಮರ್ಪಿಸುವ ಕಾರ್ಯ.

ಅಜ್ಞಾನಿಗಳಾದ ಜೀವರುಗಳಿಗೆ, ಸ್ಥೂಲ ದೇಹವನ್ನು ಕೊಟ್ಟು ನಂತರ ೨೪ ತತ್ವ ವಿಭಾಗ ತತ್ವ ದೇವತೆಗಳ ಕಾರ್ಯ ಭಗವಂತನು ೨೪ ಕೇಶವಾದಿ ರೂಪಗಳಿಂದ ಕಾರ್ಯ ನಡೆಸುವ ಬಗೆ ಸ್ಥೂಲ ದೇಹದ ಎಲ್ಲ ವಿಚಾರ ಸಾಧನಾನಂತರ, ಗುರುಗಳಿಂದ ತಿಳಿದು ಯಜ್ಞತ್ವೇನ ಸಮರ್ಪಿಸುವ ಕ್ರಮ ವನ್ನು, ಗಗನ ವಾರಿದ ಭೂ ಪುರುಷ ಸ್ತ್ರೀ ಈ ಐದು ಸ್ಥಾನಗಳಲ್ಲಿದ್ದು ಕ್ರಮಾನುಸಾರ ಜೀವನು ಸ್ಥೂಲ ಶರೀರವನ್ನು ಧರಿಸುವಾಗ್ಗೆ ಯಜ್ಞಕ್ರಮ ಹೇಳುತ್ತಾರೆ. ಗಗನ ಮೇಘ ಭೂಮಿ ಪುರುಷ ಸ್ತ್ರೀ ಎಂಬುದೇ ಐದು ಅಗ್ನಿಗಳು. ಈ ಐದು ಅಗ್ನಿಗಳಲ್ಲಿ ಮರೆಯದೇ ಜೀವನನ್ನು ಶ್ರೀಹರಿಯಲ್ಲಿ ಹೋಮಿಸುವ ಕ್ರಮ ಸವಿಸ್ತಾರವಾಗಿ ಬೃಹದಾರಣ್ಯ ಉಪನಿಷತ ಕಿಂಚಿತ ಛಾಂದೋಗ್ಯ ತದ್ಭಾಷ್ಯದಲ್ಲಿ ವರ್ಣಿಸಿರುವಂತೆ ಈ ಐದು ಸ್ಥಾನಗಳಲ್ಲಿ ಯಜ್ಞತ್ವೇನ ಸಮರ್ಪಿಸಲು ಇದಕ್ಕೆ **ಪಂಚಮಹಾಯಜ್ಞ ಸಂಧಿಯೆಂದು ದಾಸಾರ್ಯರು** ಪೆಸರಿಟ್ಟದ್ದು ಬಹು ಸಾರ್ಥಕವಾದುದು. ಮುಂದೆ ಈ ಸ್ಥೂಲ ದೇಹದಲ್ಲಿ ಪಂಚತನ್ಮಾತ್ರಾ ತತ್ಕಾರ್ಯ, ಪರಮಾತ್ಮನು ಮಾತೃಕಾ ವರಣಗಳಿಂದ ಹರಿಯ ವಿಲಾಸ ತತ್ತನ್ಮೂರ್ತಿಗಳ ಧ್ಯಾನ ಉಪಾಸನೆ ಜೀವನ ಸ್ವರೂಪ ಲಿಂಗ ದೇಹ, ವಿಚಾರ ಸರ್ವದೇಹಗತವಾದ ಸರ್ವ ಕರ್ಮ ಬಿಂಬಾ

ರ್ಪಣೆ ದ್ವಾರಾ ಜೀವರುಗಳಿಗೆ ಲಿಂಗನೋಚಕ, ಸ್ವರೂಪಾನಂದಾವಿರ್ಭಾವ ಅಭಿವ್ಯಕ್ತಿ ಸಂಧಿ ೭, ೮, ೯, ೧೦ ರಲ್ಲಿ ಶ್ರೀಹರಿಯ ಲೀಲಾ ವ್ಯಾಪಾರಗಳನ್ನು ವಿಸ್ತರಿಸಿರುವರು. ಇದೇ ಹರಿಯ ಲೀಲಾ, ಇದೇ ಹರಿಕಥಾಮೃತಸಾರ.

ದೇವಾಂಶರೂ ಅಪರೋಕ್ಷ ಜ್ಞಾನಿಗಳೂ ಆದ ದಾಸಾರ್ಯರು, ಕೆರೆಯ ನೀರು ಕೆರೆಗೆ ಚೆಲ್ಲಿ ವರವ ಪಡೆದಂತೆ ಶ್ರೀಹರಿಯ ಸಕಲ ಕ್ರಿಯಗಳನ್ನೂ ಭಗವಂತನಲ್ಲೇ ಯಜ್ಞತ್ವೇನ ಸಮರ್ಪಿಸುವರು. ಇದೆ ಮುಖ್ಯ ಕಾರಣ.

ಮೊದಲಿಗೆ ಈ ಸಂಧಿ ಪ್ರಾರಂಭಕ್ಕೆ ಜನನಿ, ಪಿತ, ಭೂ, ವಾರಿದ, ಅಂಬರವೆನಿಪ ಪಂಚಾಗ್ನಿಯಲ್ಲಿ ಜೀವನನ್ನು ಹೋಮಿಸುವ ಕ್ರಮ ಸವಿಸ್ತರ, ಬೃಹದಾರಣ್ಯ ಉಪನಿಷತ್ ಎಂಟನೇ ಅಧ್ಯಾಯ ಎರಡನೇ ಬ್ರಾಹ್ಮಣ ಮಂತ್ರ (೯) ಆರಂಭಿಸಿ ೧೪ನೇ ಮಂತ್ರ ಪೂರ್ತಿಯಾಗಿ ಪಂಚಾಗ್ನಿಗಳಲ್ಲಿ ಹೋಮಿಸುವ ಕ್ರಮ ಯಜ್ಞಕ್ಕೆ ಬೇಕಾದ ವಸ್ತು ಅಗ್ನಿಗೆ ಸಮಿಧ ಧೂಮ ಅರ್ಚಿ ಅಂಗಾರ ವಿಸ್ಫುಲಿಂಗ ಈ ರೀತಿ ಐದು ವಿಧಾನ, ಛಾಂದೋಗ್ಯ ಉಪ ನಿಷತ್ತಿನಲ್ಲಿಯೂ ಹೇಳಿದ್ದಾರೆ.

೧) **ಗಗನ=ದ್ಯುಲೋಕದಲ್ಲಿದ್ದ ನಾರಾಯಣನು,** ಸರ್ವಭಕ್ಷಕ ನಾದುದರಿಂದ ಅಗ್ನಿ ಎನಿಸುತ್ತಾನೆ. ಆ ನಾರಾಯಣನೇ ಆದಿತ್ಯ ಮೊದಲಾದ ಐವರಲ್ಲಿ ಆಯಾ ನಾಮಗಳಿಂದ ಕರೆಸುತ್ತ ನಾರಾಯಣ ಮೊದಲಾದ ಐದು ರೂಪಗಳುಳ್ಳವನಾಗಿರುವನು. ೧) ದ್ಯುಲೋಕದಲ್ಲಿದ್ದ ಪ್ರಕಾಶಮಾನವಾದ ನಾರಾಯಣನೆಂಬ ಅಗ್ನಿಗೆ ಆದಿತ್ಯನಲ್ಲಿರತಕ್ಕ ಆದಿತ್ಯ ಎನಿಸಿಕೊಳ್ಳುವ ನಾರಾಯಣ, ನಾರಾಯಣನು ಸಮಿಥೆ (ಕಾಷ್ಟ) ಸ್ಥಾನನು. ಚನ್ನಾಗಿ ಪ್ರಕಾಶಿಸುವ ಕಾರಣ **ಸಮಿತ್** ಎನಿಸಿಕೊಂಡವನು ಸಮಿಧೆಯಲ್ಲಿರುವನು. ೨) ಕ್ರೀಡಿಸುವದರಿಂದಲೂ ಇತರರಿಗೆ ಸುಖ ಕೊಡುವದರಿಂದಲೂ ರಶ್ಮಿ ಎಂದು ಹೆಸರುಳ್ಳ, ರಶ್ಮಿಗಳಲ್ಲಿರತಕ್ಕ **ನಾರಾಯಣ ವಾಸುದೇವನು** ಧೂಮ ಸ್ಥಾನೀಯನು, "ಧೂತ್ಕಾರೋ ಧೂಮ ಉದ್ದಿಷ್ಟ ಶತ್ರೂಣಾಂ ಪುರು ಷೋತ್ತಮ" ಶತ್ರುಗಳನ್ನು, ತಿರಸ್ಕರಿಸುವುದರಿಂದ ಧೂಮ ಎನಿಸಿಕೊಳ್ಳು ವನು ಧೂಮ ಸ್ಥಾನೀಯನು.

೩) **ಅರ್ಚಿ**=ನಿಕೃಷ್ಟನಾಗದಿರುವುದರಿಂದ ಅಂದರೆ ಸರ್ವೋತ್ತಮ ನಾದುದರಿಂದ ಅಹಃ ಎನಿಸಿಕೊಂಡು ಹಗಲಿನಲ್ಲಿರುವ ನಾರಾಯಣ

**ಸಂಕರ್ಷಣನು** ಪ್ರಕಾಶ ಸ್ಥಾನನು. ಸರ್ವರಿಂದ ಪೂಜಿಸಿಕೊಳ್ಳುವದರಿಂದ ಅರ್ಚಿ ಎನಿಸುವನು. ಅಗ್ನಿಜ್ವಾಲೆ ಎನಿಸುವನು.

೪) **ಅಂಗಾರ**=ಆಯಾ ಕಾರ್ಯಗಳನ್ನು ಮಾಡಲಿಕ್ಕೆ ಆಜ್ಞೆ ಕೊಡುವದರಿಂದ ದಿಕ್ ಎನಿಸಿಕೊಂಡ **ನಾರಾಯಣ ಪ್ರದ್ಯುಮ್ನನು** ಅಂಗಾರ-ಕೆಂಡಸ್ಥಾನನು. ತನ್ನ ಅಂಗಳಲ್ಲಿಯೇ ಕ್ರೀಡಿಸುವದರಿಂದ ಅಂಗಾರ ಎಂದು ಹೆಸರುಳ್ಳವನು, ಅಂಗಾರಗಳಲ್ಲಿರುವನು.

೫) **ವಿಸ್ಫುಲಿಂಗಾ**=ಮಧ್ಯದಲ್ಲಿ ಆಜ್ಞೆ ಕೊಡುವುದರಿಂದ ಅವಾಂತರ ದಿಕ್ ಎನಿಸಿಕೊಂಡ, ಅವಾಂತರ ದಿಕ್ಕಿನಲ್ಲಿರತಕ್ಕ **ನಾರಾಯಣ ಅನಿರುದ್ಧನು** ಅಗ್ನಿಗೆ ಕಿಡಿಸ್ಥಾನನು, ಬಹು ಪ್ರಕಾಶಿಸುವದರಿಂದ ವಿಸ್ಫುಲಿಂಗ ಎನಿಸಿಕೊಂಡು ವಿಸ್ಫುಲಿಂಗದಲ್ಲಿರುವನು ಮತ್ತು ಮತ್ಸ್ಯಾದಿ ಅವತಾರನೇ ವಿಸ್ಫುಲಿಂಗನು.

ಹೀಗೆ ಆದಿತ್ಯ ಮೊದಲಾದ ಐದು ರೂಪಗಳಿಂದಿರತಕ್ಕ ಅಗ್ನಿ ಎನಿಸಿಕೊಂಡ **ಗಗನ**=ದ್ಯುಲೋಕದಲ್ಲಿರತಕ್ಕ ಶ್ರೀ ನಾರಾಯಣನಲ್ಲಿ ತತ್ವಾಭಿಮಾನಿ ದೇವತೆಗಳು, ಶ್ರದ್ಧೆಯಿಂದ ಯಜ್ಞಾದಿಗಳನ್ನು ಮಾಡಿದ ಜೀವನನ್ನು ದ್ಯುಲೋಕಕ್ಕೆ ಕಳಿಸಿ ಕೊಡುವರು. ದ್ಯುಲೋಕದಲ್ಲಿ ಕೆಲವು ಕಾಲವಿದ್ದು, ಪುಣ್ಯವು ಕ್ಷೀಣವಾಗೋಣ ಜೀವನು ಹೋಮಕ್ಕೆ ಆಧಾರ ಸ್ಥಾನವಾದ ದ್ಯುಲೋಕದಿಂದ ಚಂದ್ರ ಮಂಡಲದಲ್ಲಿರುತ್ತಾನೆ. ಅಂದರೆ ದೇವತೆಗಳು ದ್ಯುಲೋಕದಿಂದ ಜೀವನನ್ನು ಚಂದ್ರಲೋಕಕ್ಕೆ ಕಳುಹಿಸಿ ಚಂದ್ರನ ವಶ ಮಾಡುತ್ತಾರೆ.

೨) **ಪರ್ಜನ್ಯೋವಾ** ಅಗ್ನಿ ಎಂಬ ಹತ್ತನೆ ಮಂತ್ರ ಉತ್ತಮವಾದ ಚತುರ್ಮುಖನನ್ನು ಹುಟ್ಟಿಸುವದರಿಂದ ಮೇಘ ಚಕ್ರದಲ್ಲಿದ್ದ **ವಾಸುದೇವನು** ಅಗ್ನಿ ಎಂದು ಹೆಸರುಳ್ಳವನು. ಈ ವಾಸುದೇವನಲ್ಲಿಯೂ, ನಾರಾಯಣಾದಿ ಐದು ರೂಪಗಳು.

(೧) ಮೇಘ ಚಕ್ರದಲ್ಲಿರುವ ವಾಸುದೇವನೆಂಬ ಅಗ್ನಿಗೆ ಮಕ್ಕಳಾದ ಬ್ರಹ್ಮಾದಿಗಳನ್ನು ಸಂತೋಷಪಡಿಸುವದರಿಂದ **ಸಂವತ್ಸರ**-ಎನಿಸಿಕೊಂಡ, ಸಂವತ್ಸರದಲ್ಲಿರತಕ್ಕ ವಾಸುದೇವ ನಾರಾಯಣನು ಸಮಿಧೆಯ ಸ್ಥಾನನು. "ಸರ್ವೇಂಧನಾಚ್ಚ ಸಮಿಧ" ಎಂಬ ಭಾಷ್ಯ ವಚನದಂತೆ ಸಮಿಧೆಯಲ್ಲಿ ಅಂತರ್ಗತನು, ಸಮಿತ್ ಎಂದು ಹೆಸರುಳ್ಳವನು.

(೨) ಬೇರೆಯವರಿಂದ ಪೋಷ್ಯನಾಗದಿರುವುದರಿಂದ ಅಭ್ರ ಎನಿಸಿಕೊಂಡು ಅಭ್ರ (ಮೇಘ)ದಲ್ಲಿರತಕ್ಕ ವಾಸುದೇವ-ವಾಸುದೇವನು ಧೂಮಸ್ಥಾನನು-ಧೂಮ ಎನಿಸುವನು.

(೩) ವಿಶೇಷವಾಗಿ ಪ್ರಕಾಶಿಸುವದರಿಂದ "ವಿದ್ಯುತ್" ಮಿಂಚಿನಲ್ಲಿರತಕ್ಕ ವಾಸುದೇವ ಸಂಕರ್ಷಣನು ಅರ್ಚಿ ಎನ್ನಿಸಿಕೊಳ್ಳುತ್ತಾನೆ.

(೪) ಜಗತ್ತನ್ನು ಭಕ್ಷಿಸುವದರಿಂದ ಅಶನಿ ಎಂದು ಹೆಸರುಳ್ಳ ಅಶನಿಯಲ್ಲಿರತಕ್ಕ ವಾಸುದೇವ ಪ್ರದ್ಯುಮ್ನನು, ಅಂಗಾರ ಎಂದು ಹೆಸರುಳ್ಳವನು.

(೫) ಗರ್ಜನ ಮಾಡುವದರಿಂದ 'ಹ್ರಾದುನಿ' ಎಂದು ಹೆಸರುಳ್ಳ ಮೇಘ ಗರ್ಜನೆಯಲ್ಲಿರತಕ್ಕ ವಾಸುದೇವಾ ಅನಿರುದ್ಧನು ಅಗ್ನಿ ಕಿಡಿಗಳಲ್ಲಿರತಕ್ಕವನು, ಹೀಗೆ ವಾಸುದೇವಾದಿ ವ್ಯೂಹ ರೂಪ ಐದು ಪ್ರಕಾರದಿಂದ, ಪರ್ಜನ್ಯ ಎನಿಸಿಕೊಂಡ ವಾಸುದೇವ ಅಗ್ನಿಯಲ್ಲಿ, ಚಂದ್ರಲೋಕದಲ್ಲಿರತಕ್ಕ ಪುಣ್ಯ ಮಾಡಿದ ಜೀವನನ್ನು ತತ್ವಾಭಿಮಾನಿ ದೇವತೆಗಳು ಚಂದ್ರಲೋಕದಿಂದ ಪರ್ಜನ್ಯಲೋಕಕ್ಕೆ ಕಳುಹಿಸುತ್ತಾರೆ. ಹೀಗೆ ಪರ್ಜನ್ಯನಿಂದ ಅಧೀನವಾದ ಜೀವನು ಹೋಮಾಧಾರ ಸ್ಥಾನವಾದ ಪರ್ಜನ್ಯ ಲೋಕದಿಂದ ವೃಷ್ಟಿ-ಮಳೆಯಲ್ಲಿ ಸೇರುತ್ತಾನೆ. ಅಂದರೆ ದೇವತೆಗಳು ಅವನನ್ನು ಮಳೆಯಲ್ಲಿ ಸೇರಿಸಿದ ಮೇಲೆ, ಮಳೆಯ ಹನಿಯ ದ್ವಾರಾ, ಪೃಥಿವಿಗೆ ಬರುತ್ತಾನೆ.

೩) ಅಯಂ ವೈಲೋಕೋಗ್ನಿರ್ಗೌತಮ, ತಸ್ಯ ಪೃಥಿವ್ಯೇವ ಸಮಿಧಗ್ನಿ ॥ ಈ ಮಂತ್ರದಲ್ಲಿ ಪೃಥಿವಿ ಲೋಕದಲ್ಲಿದ್ದ ಪೃಥಿವಿ ಎಂಬ ಸಂಕರ್ಷಣನು ಅಗ್ನಿಯು, ಆ ಸಂಕರ್ಷಣನು ನಾರಾಯಣ ಮೊದಲಾದ ಐದು ರೂಪಗಳುಳ್ಳವನು. ಭೂಲೋಕ=ಪೃಥಿವಿಯಲ್ಲಿದ್ದ ಸಂಕರ್ಷಣನೆಂಬ ಅಗ್ನಿಗೆ (೧) "ಸರ್ವರಲ್ಲಿ ಪ್ರಸಿದ್ಧನಾಗಿರುವದರಿಂದ, ಪೃಥಿವಿ ಎನಿಸಿಕೊಂಡ ಪೃಥಿವಿಯಲ್ಲಿರತಕ್ಕ ಸಂಕರ್ಷಣ ನಾರಾಯಣನು ಸಮಿತ್ ಎಂದು ಹೆಸರುಳ್ಳವನು. ಅಗ್ನಿಯಲ್ಲಿರತಕ್ಕ ಸಂಕರ್ಷಣ ವಾಸುದೇವನು ಧೂಮದಲ್ಲಿರತಕ್ಕವನು ಧೂಮ ಎನಿಸಿಕೊಳ್ಳುತ್ತಾನೆ. (೩) ಸಂತೋಷವನ್ನು ಕೊಡುವದರಿಂದ ರಾತ್ರಿ ಎಂದು ಹೆಸರುಳ್ಳ, ರಾತ್ರಿಯಲ್ಲಿರತಕ್ಕ ಸಂಕರ್ಷಣ-ಸಂಕರ್ಷಣನು, ಅರ್ಚಿ=ಜ್ವಾಲೆಯಲ್ಲಿರತಕ್ಕವನು. (೪) ಸಂತೋಷವನ್ನುಂಟು ಮಾಡುವದರಿಂದ ಚಂದ್ರಮಾ ಎಂದು ಹೆಸರುಳ್ಳ ಚಂದ್ರನಲ್ಲಿ ಅಂತರ್ಗತನಾದ

ಸಂಕರ್ಷಣ ಪ್ರದ್ಯುಮ್ನ ಅಂಗಾರ ಕೆಂಡದಲ್ಲಿರುವನು. (೫) ಶ್ರೀಹರಿ ಇವನನ್ನು ರಕ್ಷಿಸುವವನು, ಮತ್ತೊಬ್ಬನಿಲ್ಲದಿರುವದರಿಂದ **ನಕ್ಷತ್ರ** ಎಂದು ಹೆಸರುಳ್ಳ ನಕ್ಷತ್ರಗಳಲ್ಲಿರತಕ್ಕ ಸಂಕರ್ಷಣ ಅನಿರುದ್ಧನು. ಅಗ್ನಿಕಿಡಿಗಳು ವಿಸ್ಫುಲಿಂಗದಲ್ಲಿರತಕ್ಕವನು. ಈ ಸಂಕರ್ಷಣ ನಾರಾಯಣ ಮೊದಲಾದ ಐದು ರೂಪಗಳುಳ್ಳ ಹೋಮಾಧಾರನಾಗಿ ಅಗ್ನಿ ಎಂದು ಹೆಸರುಳ್ಳ ಭೂಲೋಕದಲ್ಲಿದ್ದ ಸಂಕರ್ಷಣನಲ್ಲಿ ವೃಷ್ಟಿಯಲ್ಲಿ ಅಡಗಿದ ಜೀವನನ್ನು ದೇವತೆಗಳು ಭೂಲೋಕಕ್ಕೆ ಕಳುಹಿಸುತ್ತಾರೆ. ಜೀವನು ಹೋಮಾಧಾರ ಸ್ಥಾನವಾದ ವೃಷ್ಟಿಯಿಂದ ಅನ್ನದಲ್ಲಿ ಸೇರುತ್ತಾನೆ. ಅಂದರೆ ಜೀವನನ್ನು ಪಕ್ವ ಫಲಗಳಲ್ಲಿ-ಬೇಯಿಸಿ ತಿನ್ನುವ ಧಾನ್ಯಾದಿ ಪದಾರ್ಥಗಳಲ್ಲಿ ದೇವತೆಗಳು ಸೇರಿಸುತ್ತಾರೆ.

೪) **ಪುರುಷೋವಾ ಅಗ್ನಿ** ಎಂಬ ಮಂತ್ರದಲ್ಲಿ ತಂದೆ ಎಂಬ ಪುರುಷ ನಲ್ಲಿರುವ, ಜಗತ್ತನ್ನು ತುಂಬಿಸುವದರಿಂದ ಪುರುಷನೆಂದು ಹೆಸರುಳ್ಳ, ಪ್ರದ್ಯುಮ್ನನು ಅಗ್ನಿಯೆನಿಸುತ್ತಾನೆ. ಹೋಮಾಧಾರಭೂತನು ಆ ಪ್ರದ್ಯು ಮ್ನನು ನಾರಾಯಣಾದಿ ಐದು ರೂಪಗಳುಳ್ಳವನು (೧) ಪುರುಷನೆಂದು ಹೆಸರುಳ್ಳ ಪುರುಷನಲ್ಲಿರುವ ಪ್ರದ್ಯುಮ್ನನೆಂಬ ಅಗ್ನಿಗೆ, ವಾಗೇವ ಸಮಿತ್= (ವ್ಯಾತ್ತಮೇವ) ಮುಖ ತೆರೆಯುವದರಲ್ಲಿ ವಾಕ್ (ವ್ಯಾತ್ಯ) ಎಂದು ಹೆಸರುಳ್ಳ ಪ್ರದ್ಯುಮ್ನ ನಾರಾಯಣನು ಸಮಿತ್, (೨) ಕಾರ್ಯಗಳಲ್ಲಿ, ಪ್ರೇರಿಸುವದರಿಂದ ಪ್ರಾಣನೆಂದು ಹೆಸರುಳ್ಳ ಪ್ರಾಣನಲ್ಲಿರತಕ್ಕ ಪ್ರದ್ಯುಮ್ನ ವಾಸುದೇವನು ಧೂಮನು. (೩) ಹೇಳುವದು, ಮಾತಾಡಲಿಕ್ಕೆ ಯೋಗ್ಯ ಜಿಹ್ವೆಯಲ್ಲಿರುವ ವಾಕ್ ಜಿಹ್ವೇಂದ್ರಿಯದಲ್ಲಿರತಕ್ಕ ಪ್ರದ್ಯುಮ್ನ ಸಂಕರ್ಷಣನು ಅರ್ಚಿಃ ॥ (೪) ನೋಡುವದರಿಂದ ಚಕ್ಷು ಎಂಬ ಹೆಸರುಳ್ಳ ಕಣ್ಣಿನಲ್ಲಿರತಕ್ಕ ಪ್ರದ್ಯುಮ್ನ-ಪ್ರದ್ಯುಮ್ನನು ಅಂಗಾರಾಃ ॥ (೫) ಕೇಳುವುದರಿಂದ ಶ್ರೋತ್ರ ವೆಂದು ಹೆಸರುಳ್ಳ ಕಿವಿಯಲ್ಲಿರತಕ್ಕ ಪ್ರದ್ಯುಮ್ನ ಅನಿರುದ್ಧನು ವಿಸ್ಫುಲಿಂಗಾಃ ಹೀಗೆ ಆ ಪಿತೃ ಜೀವನೆಂಬ ಪುರುಷಾಗ್ನಿಯಲ್ಲಿ ದೇವತೆಗಳು ಅನ್ನದಲ್ಲಿ ಅಡಗಿದ ಜೀವನನ್ನು ಹೋಮಿಸುತ್ತಾರೆ. ಅಂದರೆ ತಂದೆಯು ತೆರದ ಮುಖ ದಲ್ಲಿ ಅನ್ನ ನೀಡುತ್ತಾರೆ. ಹೀಗೆ ಪುರುಷಾಗ್ನಿಯಲ್ಲಿ ಹೋಮಿಸಲ್ಪಟ್ಟ ಜೀವನನ್ನು, ದೇವತೆಗಳು ತಂದೆಯು ರೇತಸ್ಸಿನಲ್ಲಿಡುತ್ತಾರೆ.

೫) **ಯೋಷಾವಾ** ಅಗ್ನಿ ಎಂಬ ೧೩ನೇ ಮಂತ್ರದಲ್ಲಿ ಎಲ್ಲರೂ ಪ್ರೀತಿಯಿಂದ ಸೇವಿಸುವದರಿಂದ ಯೋಷಾ ಎನಿಸಿಕೊಂಡ ಸ್ತ್ರೀಯಲ್ಲಿರತಕ್ಕ ಅನಿರುದ್ಧನು ಅಗ್ನಿಯು. ಸ್ತ್ರೀಯಲ್ಲಿರತಕ್ಕ ಅಗ್ನಿಯೆಂದು ಪೆಸರುಳ್ಳ ಅನಿರುದ್ಧನಿಗೆ (೧) ಸಮೀಪದಲ್ಲಿದ್ದುದರಿಂದ ಉಪಸ್ಥ ಎಂದು ಹೆಸರುಳ್ಳ ಉಪಸ್ಥದೊಳಗಿರುವ ಅನಿರುದ್ಧ ನಾರಾಯಣನು ಸಮಿತ್ (೨) ವಿನಾಶ ಪಡಿಸುವದರಿಂದ ಲೋಮವೆಂದು ಪೆಸರುವುಳ್ಳ (ರೋಮ) ಲೋಮದಲ್ಲಿರ ತಕ್ಕ ಅನಿರುದ್ಧ ವಾಸುದೇವನು ಧೂಮನು. (೩) ಸಂತೋಷವನ್ನು ಹೊಂದಿಸಿಕೊಡುವುದು, ಸಂತೋಷವನ್ನು ಹೊಂದುವುದು ಆದುದರಿಂದ ಯೋನಿಯೆಂದು ಹೆಸರುಳ್ಳ ಯೋನಿಯಲ್ಲಿರುವ ಅನಿರುದ್ಧ ಸಂಕರ್ಷಣನು ಅರ್ಚಿಃ ಎನಿಸುತ್ತಾನೆ. (೪) ಯೋನಿಯೊಳಗೆ ಸುರತ ಕ್ರೀಡಾ ನಡೆಸುವ ಅನಿರುದ್ಧ ಪ್ರದ್ಯುಮ್ನನು ಅಂಗಾರ ಎನ್ನಿಸಿಕೊಳ್ಳುತ್ತಾನೆ. (೫) ಸಂತೋಷ ಗೊಳಿಸುವದರಿಂದ ಅಭಿನಂದ ಎಂದು ಹೆಸರುಳ್ಳ ಸ್ತ್ರೀ ಪುರುಷರ ಸಂಯೋಗ ದಿಂದ ಉಂಟಾಗತಕ್ಕ ಸಂತೋಷದಲ್ಲಿರುವ ಅನಿರುದ್ಧ-ಅನಿರುದ್ಧನು, ವಿಸ್ಫುಲಿಂಗ (ಕಿಡಿಗಳು) ಎನಿಸುತ್ತಾನೆ. ಯೋಷಾ ಎನಿಸಿಕೊಂಡ ಅನಿರುದ್ಧ ನೆಂಬ ಅಗ್ನಿಯಲ್ಲಿ ದೇವತೆಗಳು ಪಿತೃಜೀವನ ರೇತಸ್ಸಿನಲ್ಲಿ ಅಡಗಿದ ಜೀವನನ್ನು ಇರಿಸುತ್ತಾರೆ. ಹೀಗೆ ಸ್ತ್ರೀ ಎಂಬ ಅಗ್ನಿಯಲ್ಲಿ ಇರಿಸಿದ ಜೀವನು, ಸ್ತ್ರೀ ಯಿಂದ ಪುಟ್ಟುತ್ತಾನೆ. ರೇತಸ್ಸಿನಲ್ಲಿ ಅಡಗಿದ ಜೀವನು, ಪುರುಷ ಮೊದ ಲಾದ ನಾಮದಿಂದ ಹೇಳಲ್ಪಡುವನಾಗಿ ಭೂಮಿಯಲ್ಲಿ ಪುಟ್ಟುತ್ತಾನೆ. ಅಂದರೆ, ಜೀವನಿಗೆ ತಕ್ಕವಾದ ಪಂಚಭೂತ ಶರೀರದಿಂದ ಜನಿಸುತ್ತಾನೆ. “ಸಜೀವತಿ ಯಾವಜ್ಜೀವ ತ್ಯಥಯಃದಾಮ್ರಿಯತೆ ||” ಜೀವನ ಕರ್ಮಾನು ಸಾರ ಎಷ್ಟು ಕಾಲ ಜೀವಿಸಿರುತ್ತಾನೆ ಅಷ್ಟು ಜೀವಿತ ಕ್ಲುಪ್ತಕಾಲವು ಮುಗಿದ ಮೇಲೆ ಮರಣ ಹೊಂದುತ್ತಾನೆ.

ಮರಣವಾದ ಮೇಲೆ ಮೃತ ದೇಹವನ್ನು ಪ್ರಸಿದ್ಧಾಗ್ನಿಯಲ್ಲಿ ಹೋಮಿ ಸುವರು. ಇಂಥ ಪಂಚಾಗ್ನಿಗತವಾದ ಹೋಮವನ್ನು ಯಾರು ಯಜ್ಞತ್ವೇನ ಸಮರ್ಪಿಸುತ್ತಾರೋ ವಾಯುದೇವರು, ವಿದ್ಯುಲ್ಲೋಕ ದ್ವಾರಾ ಪುನರಾ ವರ್ತಿ ಇಲ್ಲದ ಶಾಶ್ವತವಾದ ವಿಷ್ಣು ಲೋಕವನ್ನು ಐದಿಸುತ್ತಾರೆ. ಕಾರಣ ಈ ಪಂಚಾಗ್ನಿ ಹೋಮಕ್ರಮ ನಿತ್ಯ ಅನುಸಂಧಾನ ಮಾಡಲು ದೇವತೆಗಳು

ತುಷ್ಟರಾಗಿ ತದ್ದ್ವಾರಾ ವಾಯುದೇವರು ಭಗವಂತನಲ್ಲಿ ಪ್ರಾರ್ಥಿಸಿ ಜೀವನಿಗೆ ಮೋಕ್ಷವನ್ನು ಕೊಡಿಸುತ್ತಾರೆ.

ಕಾರಣ ಮೇಲೆ ಹೇಳಿದಂತೆ ಐದು ಅಗ್ನಿಗಳಲ್ಲಿ ಮರೆಯದಲೇ ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧನ ೫ × ೫=೨೫ ಒಂದರೊಳಗೆ ಐದರಂತೆ ಇಪ್ಪತ್ತೈದು ರೂಪಗಳನ್ನು ನಿತ್ಯದಲ್ಲಿ ನೆನೆಯುವವರಿಗೆ ಪುನಃ ಜನ್ಮಗಳನ್ನು ಕೊಡುವುದಿಲ್ಲ. ಇಂಥ ನಾರಾಯಣಾದಿ ಪಂಚರೂಪಾತ್ಮಕನಾದ ಶ್ರೀಕೃಷ್ಣನೇ ವಿಶಾಲ ನೇತ್ರವುಳ್ಳವನಾಗಿ ಕರುಣೆಯಿಂದ ಕುರುಪಾಂಡುವರ ಯುದ್ಧದಲ್ಲಿ ಉಪದೇಶಿಸಿ ಸೃಷ್ಟಿ ಸ್ಥಿತಿ ಲಯ ವ್ಯಾಪಾರಾದಿಗಳನ್ನು ಮಾಡುವ ಶ್ರೀಹರಿಯೇ ಸ್ವತಂತ್ರನೆಂದು ತೋರಿ ಯುದ್ಧ ಮಾಡಿಸಿ ವಿಜಯ ಪ್ರದಾತೃನಾಗಿ ಮೈದುನ-ತನ್ನ ತಂಗಿಯ ಗಂಡನಾದ ಅರ್ಜುನನ್ನು ಕಾಯ್ದಂತೆ ಸಲಹಿ ರಕ್ಷಿಸುವನು. ಕರುಣಾಶಾಲಿಯಾದ ಹರಿಯು, ತನ್ನನ್ನು ಬೈದ ಶಿಶುಪಾಲನಿಗೆ ಜೀವದ್ವಯಾವೇಶನಾದ ಜಯನೆಂಬುವ ಪಾರ್ಷದಗೆ ಗತಿ–ಯೋಗ್ಯಸ್ಥಾನವನ್ನು ಕೊಟ್ಟನು. ಸಮಸ್ತ ಭಯಗಳನ್ನು ಪರಿಹರಿಸಿ ಭಕ್ತರನ್ನು ರಕ್ಷಿಸುವ ಭಕ್ತವತ್ಸಲನ ಕಾರ್ಯ ಕಾರಣ ರೂಪಗಳನ್ನು ಅನುದಿನ ನೆನೆಯಿರಿ. ಹೀಗೆ ಓತಪ್ರೋತವಾಗಿ ಜಗತ್ತಿನಲ್ಲಿ, ಶ್ರೀಕೃಷ್ಣನು ಗೋಪಿಕಾ ಸ್ತ್ರೀ ೫ ಜನರನ್ನು ಕುದುರೆ ಆಕೃತಿ ಮಾಡಿ ವಿಹರಿಸಿದಂತೆ ಚಿತ್ರಕಲೆಗಾರರು ಒಂದು ತುರಗ ಕುದುರೆಯಲ್ಲಿ ಐದು ಜನ ನಾರಿಯರಿಂದ ಕೂಡಿದ ನಾರಿಯರ ಅವಯವಗಳಿಂದಲೇ ಕುದುರೆಯ ಅವಯವಗಳು ಪೂರ್ತಿ ಕಾಣುವ ಕಲೆ ಸ್ತ್ರೀಯರಿಂದ ಓತಪ್ರೋತವಾಗಿರುತ್ತದೆ*. ಅದರಂತೆ ಶ್ರೀ ನಾರಾಯಾಣಾದಿ ಐದು ಮೂಲ ರೂಪ. ಪುನಃ ಒಂದೊಂದು ರೂಪಗಳಲ್ಲಿ ಐದು (೫) ಅಂಶ ರೂಪಗಳು ೨೫. ಒಟ್ಟಿಗೆ ೩೦ ರೂಪಗಳನ್ನು ಧರಿಸಿ ಆಯಾ ನಾಮಗಳಿಂದ ಕರೆಸುತ್ತ ಪಂಚಪಾವಕ ಐದು ಅಗ್ನಿಗಳೇ ಮೊದಲಾಗಿ ಗುಣಗಳಿಂದ ಯುಕ್ತವಾದ ಪಂಚಭೂತಗಳಿಂದ ಕೂಡಿದ ಈ ಸ್ಥೂಲ ಶರೀರವನ್ನು, ಪಂಚ ವಿಧರಾದ ದೇವ ಋಷಿ ಪಿತೃ

---

*೧) ಶ್ರೀ ನಾರಾಯಣ ಮುಖದಲ್ಲಿ, ೨) ವಾಸುದೇವ ಮಧ್ಯಾಂಗನು, ೩) ಸಂಕರ್ಷಣ ಪುಚ್ಛ ಪಾದಗಳಲ್ಲಿ, ೪) ದಕ್ಷಿಣ ಭಾಗ ಪ್ರದ್ಯುಮ್ನ, ೫) ವಾಮಭಾಗ ಅನಿರುದ್ಧ ಇದೆ. ಪಂಚಾತ್ಮಕನೆಂದು ಉಪನಿಷತ್ ವಾಕ್ಯ.

ದಾನವ ನರ ಹೀಗೆ ಐದು ಬಗೆಯಾದ ಮುಕ್ತಿಯೋಗ್ಯಾದಿ ಜೀವರಿಗೆ ಕೊಟ್ಟು ಸಕಲ ಸ್ಥೂಲ ಶರೀರಾದಿಗಳ ಕಾರ್ಯ ನಡೆಸುತ್ತ ಶ್ರೀ ನಾರಾಯಣಾದಿ ರೂಪಗಳಿಂದ ಕ್ರೀಡಿಸುತ್ತಾನೆ. ಹೀಗೆ ಬ್ರಹ್ಮದೇವರಾರಂಭಿಸಿ ಸಮಸ್ತ ಜೀವರ ಹೃದಯದೊಳಗೆ ಏಕಾತ್ಮನು, ಒಬ್ಬನೇ ಬಿಂಬರೂಪ–ಈ ಒಬ್ಬನೇ ಅನಂತ–ಅನಂತ ಒಬ್ಬ, ಹೇಗೋ ಹಾಗೇ ಒಂದು ಶರೀರದಲ್ಲಿ ಅನೇಕ ಅವಯವಗಳು. ಇಲ್ಲಿ ಅನಂತ ಶರೀರ ಪೂರ್ಣದಲ್ಲಿ ಏಕಾತ್ಮ=ಒಬ್ಬನೆಂದು ಕರೆಸುತ್ತಾನೆ. ಸ್ಥೂಲ ಶರೀರವಾದ ಅಧಿಭೂತ, ಅಧ್ಯಾತ್ಮ ಜೀವ-ಅಧಿದೈವ ದೇವತೆಗಳಾದ ತತ್ವಾಭಿಮಾನಿಗಳಲ್ಲಿ ಅಚ್ಯುತ ಅನಂತ ಗೋವಿಂದನೆಂದು ಕರೆಸುತ್ತಾನೆ. ಇನ್ನು ದೇಹದಲ್ಲಿ ೧೦ ವಿಧ ಪ್ರಾಣರೂಪ. ಪ್ರಾಣಾಪಾನ ವ್ಯಾನೋದಾನ ಉದಾನ ಸಮಾನ ನಾಗ ಕೂರ್ಮ ಕೃಕಳ ದೇವದತ್ತ ಧನಂಜಯ. ಇವರಲ್ಲಿ ಇದೇ ನಾಮದಿಂದ ಶ್ರೀಹರಿಯಿದ್ದು ಕರೆಸುತ್ತ ತತ್ತತ್ಕಾರ್ಯ ಮಾಡುತ್ತಾನೆ. ಇಂತು ಪ್ರಕೃತಿ ಪರಮಾಣುಗಳಂತೆ ಈರೆರಡು ದೇಹ= ನಾಲ್ಕು ದೇಹ, ಜೀವ ಲಿಂಗ ಅನಿರುದ್ಧ ಸ್ಥೂಲ ದೇಹದಲ್ಲಿ ೧೦೩೬ ರೂಪಗಳು ಮತ್ತು ದಶ ಪ್ರಾಣರಲ್ಲಿ ಶ್ರೀಹರಿಯು ತಾನು ನಿಂತು, ಕಾರ್ಯ ಮಾಡಿಸುವ ಪ್ರಕೃತಿ ಪರಮಾಣುಗಳ ಸಂಖ್ಯಾನುಸರಿಸಿ. ಪ್ರಾಣಾದಿ ನಾಮಗಳಿಂದ ೧೮೧೨ ರೂಪಗಳು, ಒಟ್ಟಿಗೆ ಹತ್ತುನಾಲ್ಕು=ಅಂದರೆ ನಾಲ್ಕು ದೇಹಗತ ರೂಪಗಳು ಹತ್ತು ಪ್ರಾಣಾದಿ ಹೀಗೆ ೧೪ ರೂಪಗಳ ಕೂಡಿಸಿದರೆ, ೨೮೪೫೩ ರೂಪಗಳನ್ನು ಪ್ರಾಣಾಪಾನಾದಿ ದಶಮಾರುತರು ದೇಹದಲ್ಲಿದ್ದು ಕಾರ್ಯ ಮಾಡುವ ವಿವರವನ್ನು ಚನ್ನಾಗಿ ತಿಳಿದು ಶ್ರೀಹರಿಯ ಇಷ್ಟು ರೂಪಗಳನ್ನು ಚಿಂತಿಸುತ್ತ, ಪುರುಷ ಶ್ರೇಷ್ಠನಾದ ಶ್ರೀಹರಿಯ ಪೂಜಾ ಮಾಡಬೇಕು. ಅಂದರೆ ಜ್ಞಾನಾಭಿವೃದ್ಧಿ.

ಇನ್ನು ದೇಹದಲ್ಲಿ ಅವಿದ್ಯಾಪಟಲ ಜೀವಾಚ್ಛಾದಿಕ ಪರಮಾಚ್ಛಾದಿಕ, ತಮ ಮೋಹ ಮಹಾಮೋಹ ತಾಮಿಸ್ರ ಅಂಧ ತಾಮಿಸ್ರ, ಶಬ್ದ ಸ್ಪರುಶ ರೂಪ ರಸ ಗಂಧ ಈ ಪಂಚ ತನ್ಮಾತ್ರಗಳಲ್ಲಿರುವವು. ಇವುಗಳಿಗೆ ನಾಗ ಕೂರ್ಮ ಕೃಕಳ ದೇವದತ್ತ ಧನಂಜಯ ಇವರು ಪ್ರೇರಕರು. ಇವರಿಗೆ ದುರ್ಗಾದೇವಿ; ಈ ದುರ್ಗಾರಮಣ ಲಕ್ಷ್ಮೀನರಸಿಂಹ, ಈ ಐದು ಅವಿದ್ಯಾ ಕುಮೋಹ= ಅಜ್ಞಾನಗಳನ್ನು ಪುಟ್ಟಿಸುವನು, ಸ್ವತಂತ್ರನಾದ ಹರಿಯೆ ಎಂದು ನಿಶ್ಚಯ

ಜ್ಞಾನವಿರಬೇಕು. ಇಲ್ಲಿ ತತ್ತ್ವನ್ನಾಮದಿಂದ ೧೬೪೦೮ ರೂಪಗಳನ್ನು ಧರಿಸಿ, ಅವಿದ್ಯಾ ಕುಮೋಹ ಅಜ್ಞಾನವನ್ನು ಇಂದ್ರಿಯಗಳಿಗೆ ಕೊಡುವನು.

ಮೇಲೆ ವಿವರಿಸಿದ ೫ ಅವಿದ್ಯಾಗಳೊಳಗೆ, ಕೃದ್ಧೋಲ್ಕ ಮಹೋಲ್ಕ ವೀರೋಲ್ಕ, ದುಲ್ಕ, ಸಹಸ್ರೋಲ್ಕ ಈ ಐದುರೂಪಗಳಿಂದ ಇದ್ದು ಸಜ್ಜನರ ಅವಿದ್ಯಾ ಅಜ್ಞಾನಾದಿಗಳನ್ನು ಛೇದಿಸುವನು. ತಮೋಯೋಗ್ಯರಾದ ತಾಮಸ ಜೀವರಿಗೆ, ಅಜ್ಞಾನ-ಮದಗಳನ್ನು ಕೊಟ್ಟು, ಅವರವರ ಸಾಧನವನ್ನು ಮಾಡಿಸುವನು.

ಈ ಅವಿದ್ಯಾ ಕುಮೋಹ ಪರಿಹಾರ ಮಾಡುವದಕ್ಕೆ ಸಾಧನವಾದ ಸಮಸ್ತ ಪ್ರಾಣಿಗಳಲ್ಲಿ ಸಾಮದಿಂದ ಇರುವ ಭಗವದ್ರೂಪ ಸಾಮೋಪಾಸನೆ ಮಾಡಲು, ಕರುಣಾಳುಗಳಾದ ದಾಸಾರ್ಯರು ಛಾಂದೋಗ್ಯ ಉಪನಿಷತ್ತು ಎರಡನೇ ಅಧ್ಯಾಯ, ಖಂಡ ೬-೭ರಲ್ಲಿ ವಿಸ್ತರಿಸಿದಂತೆ ಶ್ರೀ ವಿಜಯದಾಸಾರ್ಯರು "ಸಾಮೋಪಾಸನೆ ಮಾಡು, ಶುದ್ಧಾಂತಃಕರಣದಲ್ಲಿ ಸಮಸ್ತ ಬೊಮ್ಮಾಂಡವನ್ನೆ ತಿಳಿದು" ಎಂಬ ಸುಳಾದಿ (೮) ಉಪಾಸನಾಭಾಗ ಪಾನು ೧೪-೧೯-೨೦ರಲ್ಲಿ "ಶ್ಯಾಮಶಬಲ ವರ್ಣದೇವನೆ ಅತ್ಯಣು ನಿ। ಸ್ಸೀಮ ಇಂದ್ರಿಯಗಳಿಗಾಗೋಚರ ಪುರುಷ। ವ್ಯಾಮೋಹ ಪುಟ್ಟಿಸುವ ಈತನೆ ಇಷ್ಟ ವೈವ। (ಸಾಮದಿಂದಲಿ) ವ್ಯೋಮಕಾಲ ವೇದ ಗುಣ ಜೀವರಾಶಿ ತ್ರಿವಿಧ। ಈ ಮಾತಿನಂತೆ ಸರ್ವದಾ ಎಣಿಸು। ಸಾಮೋಪಾಸನೆ ಇದೆ ಮಾಡೋ ಮನುಜಾ। ಸಾಮವಂದಿತ ನಮ್ಮ ವಿಜಯ ವಿಠ್ಠಲರೇಯಾ। ಕಾಮಿಸಿದಂತೆ ಫಲ ಕೊಡುತಿಪ್ಪನು" ॥ ೧ ॥

ಮುಂದೆ ತ್ರಿವಿಡಿ ತಾಳದಲ್ಲಿ ಪಂಚ ತನ್ಮಾತ್ರಾದಿ ಇಪ್ಪತ್ತು ನಾಲ್ಕು ತತ್ವಗಳ ತುಂಬಿದ ಚಿತ್ತದಲ್ಲಿ ವಿಚಾರಿಸೆಂದು ಆಜ್ಞಾ ಕೊಡಿಸಿದಂತೆ। ಶ್ರೀ ದಾಸಾರ್ಯರು ಅವಿದ್ಯಾ ಕುಮೋಹ ದೂರಮಾಡಿ ನಾಶಗೈಸಲು ಸಾಮೋಪಾಸನೆ ಮಾಡಬೇಕೆಂದು ಆಜ್ಞಾಪಿಸಿದ ನಿಜವಾದ ಕಾರಣವನ್ನು ತಿಳಿಯದೇ ಹಿಂದಿನ ೩-೪ ವ್ಯಾಖ್ಯಾನಕಾರರು ಮನಬಂದಂತೆ ಬರೆದಿರುವರು. ದೇವರು ಅವರಿಗೆ ಅಷ್ಟೇ ಪ್ರೇರಿಸಿರುವ. ಸಜ್ಜನರಾದ ಸನ್ಮಾರ್ಗಗಾಮಿಗಳಿಗೆ ಶ್ರೀ ವಿಜಯದಾಸರ ಪಾದವೇ ಗತಿ. ಅವರೆ ಸುಜ್ಞಾ

ಪ್ರದರೆಂದು ಪುನಃ ಪುನಃ ವಿಜಯದಾಸರೇ ಜ್ಞಾನಭಕುತಿ ಕೊಡಿರೆಂದು ನುತಿಸಿ ನುತಿಸಿ ಮುಂದೆ ಸಾಗುವ.

ಗೋವುಗಳೊಳುದ್ಗೀಥ ಎಂಬುವ ಪದ್ಯದಲ್ಲಿ ದಾಸಾರ್ಯರು ಛಾಂದೋಗ್ಯ ಶ್ರುತಿ ವರ್ಣಿಸಿರುವರು. **ಸಾಮೋಪಾಸನೆ ಎಂದರೇನು ?** "ಸಮಸ್ತ ಸ್ಯಖಲು ಸಾಮ್ನ ಉಪಾಸನ್ನ ಸಾಧುಯತ್ ಖಲುಸಾಧು ತತ್ಸಮಾ ಮೇತ್ಯಾ ಚಕ್ಷತೇ ಯದ ಸಾಧು ತದ ಸಾಮೇತಿ-"ಇತ್ಯಾದಿ ಉಪ ನಿಷತ್ (೩) ಮಂತ್ರಗಳಿಗೆ ಶ್ರೀ ಸರ್ವಜ್ಞರ ಭಾಷ್ಯ="(೧) ಸಮಸ್ತ ಗುಣ ಪೂರ್ಣಸ್ಯ ಸಾಧುತ್ವಾ ತ್ಸಾಮನಾಮ್ನೋ ವಿಷ್ಣೋ ರುಪಾಸನಂ ಸಾಧು (೨) ಸಾರತ್ವೇನ ಮೇಯಂ ಸಾಮ। ಸಾರತ್ವೇನಧಾರ್ಯ ಸಾಧ್ವಿಕ್ತೇನ ಏವಾರ್ಥ ॥ ೩ ಸಾಧುತ್ವಾತ್ಸಾಮ ಸಾಮಾನಂ ಸಮಸ್ತಗುಣ ಪೂರ್ತಿತಃ। ಸಮಸ್ತಂ ಯ ಉಪಾಸೀತ ನಾರಾಯಣ ಮನಾಮಯಂ ಸರ್ವಸಾಮ್ನಾ ದೇವತೇತಿ ಸಮುಕ್ತ ಸಾಧುಧರ್ಮಭಾಕ್ ಇತಿ ಸಾಮಸಂಹಿತಾಯಾಂ ॥

ಅರ್ಥ : ಸರ್ವೋತ್ತಮನೂ ಸರ್ವಗುಣ ಪರಿಪೂರ್ಣನೂ ಆದುದರಿಂದ **ಸಾಮ** ಎಂದು ಹೆಸರುಳ್ಳ ಶ್ರೀ ವಿಷ್ಣುವಿನ ಉಪಾಸನೆಯು ಶ್ರೇಷ್ಠವು. ೨) ಸರ್ವ ಶ್ರೇಷ್ಠನೆಂದು ತಿಳಿಯಲರ್ಹನು ಸಾಮನು-ಸರ್ವ ಶ್ರೇಷ್ಠನೆಂದು ನಿರ್ಧರಿಸಿಕೊಳ್ಳಲ್ಪಡುವವನು ಸಾಧುವು ಹೀಗೆ ಸಾಮ ಸಾಧು ಶಬ್ದಗಳಿಗೆ ಒಂದೇ ಅರ್ಥವು. ೩) ಸರ್ವ ಗುಣಗಳಿಂದ ಪೂರ್ಣನಾದುದರಿಂದ ಸಮಸ್ತ ನೆನಿಸಿಕೊಂಡವನೂ, ಸರ್ವೋತ್ತಮನಾದುದರಿಂದ ಎಲ್ಲಾ ಸಾಮಗಳಿಗೆ ದೇವತೆಯಾದುದರಿಂದಲೂ ಸಾಮನೆನಿಸಿಕೊಂಡವನೂ ದೋಷವಿಲ್ಲದವನೂ ಆದ ಶ್ರೀ ನಾರಾಯಣನನ್ನು ಉಪಾಸನೆ ಮಾಡಿದವನು ಸಾಧು ಧರ್ಮಗಳನ್ನು ಹೊಂದಿದವನಾಗಿ ಮುಕ್ತನಾಗುವನೆಂದು ಸಾಮ ಸಂಹಿತೆಯಲ್ಲಿ ಹೇಳಿದೆ ಎಂತ ಶ್ರೀ ಸರ್ವಜ್ಞರ ಭಾಷ್ಯ ಛಾ. ಉ. ಅ. ೨ ಖಂಡ ೧, ಹೀಗೆ ಸಾಮೋ ಪಾಸನೆ. ಲೋಕ ಪರ್ಜನ್ಯ ಅಪ್ಪು ಋತು ಪಶುಗಳಲ್ಲಿ ಸಾಮೋಪಾಸನೆ ಕ್ರಮ ಅಂದರೆ ಸರ್ವ ಪ್ರಾಣಿಗಳಲ್ಲಿ ಸಂಸ್ಥಿತನಾದ ಶ್ರೀಹರಿಯ ಉಪಾಸನೆ ಮಾಡು ವದರಿಂದ ಅವಿದ್ಯಾ ಪರಿಹಾರವಾಗುತ್ತದೆ. ಛಾ. ಅ. ೨, ಖಂಡ ೬ರಲ್ಲಿ ಉಪನಿಷತ್ "ಪಶುಷು ಪಂಚವಿಧ್ಧ ಸಾಮೋಪಾಸೀತಾಜಾ ಹಿಂಕಾರೋಽ ವಯಃ ಪ್ರಸ್ತಾವೋ ಗಾವ ಉದ್ಗೀಥೋಽಶ್ವಾ ಪ್ರತಿಹಾರಃ ಪುರುಷೋ

ನಿಧನಂ ಭವಂತಿ ಹಾಸ್ಯ ಪಶವಃ ಪಶುಮಾನ್ ಭವಂತಿ ॥ ೧ ॥ **ಉ.** ಯ ಏತದೇವಂ ವಿದ್ವಾನ್ ಪಶುಷು ಪಂಚವಿಧೇ ಸಾಮೋಪಾಸ್ತೇ ॥ ಇತಿ ಷಷ್ಠಃ ಖಂಡಃ ॥ ಅಂದರೆ ಐದು ವಿಧಪಶುಗಳಲ್ಲಿರತಕ್ಕ ಐದು ಸಾಮಗಳಿಂದ ವರ್ಣಿಸಲ್ಪಡತಕ್ಕ ಐದು ರೂಪಗಳುಳ್ಳ ಶ್ರೀಹರಿಯನ್ನು ಉಪಾಸನೆ ಮಾಡಬೇಕು. ಅಜ=ಆಡುಗಳಲ್ಲಿ ಹಿಂಕಾರ, *ಅವಿ=ಕುರಿಗಳಲ್ಲಿ ಪ್ರಸ್ತಾವ, ಗೋವುಗಳಲ್ಲಿ ಉದ್ಗೀಥ, ಕುದುರೆಗಳಲ್ಲಿ ಪ್ರತಿಹಾರ-ಪುರುಷ ನಿಧನ, ಹೀಗೆ ಐದು ವಿಧ. ಹೀಗೆ ತಿಳಿದವನಲ್ಲಿ ಪಶುಗಳಲ್ಲಿ ಅಂತರ್ಗತನಾದ ಹರಿಯು, ಪಶುಗಳ ಸಮೃದ್ಧಿ ಮಾಡಿ ಪೂರ್ಣಾನುಗ್ರಹಿಸುತ್ತಾನೆ. ಇದೇ ಅರ್ಥವನ್ನೇ ಶ್ರೀ ದಾಸರಾಯರು ಪದ್ಯ ೧ಳರಲ್ಲಿ ಪೇಳಿದ್ದಾರೆ. "ಗೋವುಗಳೊಳುದ್ಗೀಥನಿಹ ಪ್ರ। ಸ್ಥಾವ ಹಿಂಕಾರೆರಡು ರೂಪದಿ। ಆವಿ (ಅವಿ) ಅಜ. ಅಜಗಳೊಳಿಹನು ಪ್ರತಿಹಾರಾಹ್ವ ಹಯಗಳೊಳು ॥ ಜೀವನ ಪ್ರದ ನಿಧನ ಮನುಜರೊಳೀವಿಧದೊಳಿಹ ಪಂಚ ಸಾಮವ। ಝಾವ ಝಾವಕೆ ನೆನೆವರಿಗೆ ಐದಿಸನು ಜನ್ಮಗಳ ॥ ಎಂದು ಹೇಳಿದ್ದಾರೆ.

ಹರಿಕಥಾಮೃತ ಮೂಲ ಪ್ರತಿಗಳಲ್ಲಿ **ಆವಿ ಅಜ** ಎಂದು ಶಬ್ದ ಪ್ರಯೋಗ ಮಾಡಿದ್ದಾರೆ. ಉಪನಿಷತ್ತಿನಲ್ಲಿ ಅವಿ ಎಂದು ಇದೆ. ಭಾಮಿನಿ ಮಾತ್ರಾಗಣ ಪ್ರಯೋಗದಲ್ಲಿ ಹೃಸ್ವದೀರ್ಘ-ದೀರ್ಘಹೃಸ್ವ ಪ್ರಯೋಗ ದೋಷವಿಲ್ಲ. ಕಾವ್ಯ ಲಕ್ಷಣ.

ಇದಕ್ಕೆ ಶ್ರೀ ಸರ್ವಜ್ಞರ ಭಾಷ್ಯವಿನಾ ಗತ್ಯಂತರವಿಲ್ಲ. ಭಾಷ್ಯ (೧) ಪಾಲನಾತ್ಸುಖ ರೂಪತ್ವಾತ್ಪಶುನಾಮಾ ಜನಾರ್ದನಃ ॥ ಮುಕ್ತಸ್ತದ್ವಾನ್ ಭವತ್ಯೇವ ಪಶುಷೂಪಾಸ ಕೋಹರೇಃ ಇತಿ ಚ ॥ (೨) ಯಜ್ಞೇನಾಂಚನ ಹೇತುತ್ವಾದಜಸ್ಥೋ ಭಗವಾನಜಃ ಅವಿಸ್ಥಸ್ತ್ವವಿರೇವೋಕ್ತ ಊರ್ಣಯಾ ಶೀತತೋವನಾತ್ ॥ ಗೌಶ್ಚ ಸದ್ಗತಿ ಹೇತುತ್ವಾದ್ಗೋಸ್ಥ ಸಪುರುಷೋತ್ತಮಃ। ಅಶ್ವಶ್ಚೈವಾಶು ಗಂತೃತ್ವಾತ್ಪುರುಷಃ ಪೂರ್ತಿಹೇತುಃ ತಃ ಇತಿ ಚ॥ ಭವಂತಿ ಹಾಸ್ಯ ಪಶವ। ಇತಿ ಪ್ರಸಿದ್ಧ ಪಶವಃ ಏವ ॥ ಅಜಾ ಇತ್ಯಾದಿ ಬಹುವಚನಂ ಬಹುರೂಪತ್ವಾದ್ಭಾಗವತಃ ॥

---

ಅವತಿ ಲಜ್ಜ್ಯಾಯಾಂ ಇತಿ ಅವಿ=ಲಜ್ಜಾದಿಂದ ರಕ್ಷಣೆ ಮಾಡುತ್ತದೆ. ಕುರಿಯಿಂದ ಉಣ್ಣೆ ಶಾಲು ಕಂಬಳಿಯಿಂದ ಮಾನಸಂರಕ್ಷಣೆ.

ಇದರ ಅರ್ಥ: ೧) ಶ್ರೀಹರಿಯು ಜಗತ್ತನ್ನು ರಕ್ಷಿಸುವವನೂ ಸುಖ ರೂಪನೂ ಆದುದರಿಂದ **ಪಶು** ಎಂದು ಎನಿಸುತ್ತಾನೆ. ಪಶುಗಳಲ್ಲಿ ಶ್ರೀಹರಿಯ ಉಪಾಸನೆ ಮಾಡಿದವನು, ಪಶುಗಳಲ್ಲಿ ಅಂತರ್ಗತನಾದ ಶ್ರೀಹರಿಯ ಪೂರ್ಣಾನುಗ್ರಹಕ್ಕೆ ಪಾತ್ರನಾಗಿ ಮುಕ್ತನಾಗುತ್ತಾನೆ.

೨) ಯಾಗ ಯಜ್ಞದಿಂದ ಶ್ರೀಹರಿಯನ್ನು ಪೂಜಿಸಿದರೆ ಸದ್ಗತಿಯನ್ನು ಕೊಡುವದರಿಂದ ಆಡಿನಲ್ಲಿದ್ದ ಶ್ರೀಹರಿಯು, ಅಜ ಎಂತಲೂ, ಉಣ್ಣೆ ವಸ್ತ್ರ ಕಂಬಳ ಮೊದಲಾದವುಗಳಿಂದ ಶೀತದಿಂದ ಸರ್ವರನ್ನೂ ಕಾಪಾಡುವ ಕಾರಣ ಕುರಿಯಲ್ಲಿದ್ದ ಶ್ರೀಹರಿಯು ಅವಿಃ ಎಂತಲೂ, ಸದ್ಗತಿಗೆ ಕಾರಣನಾದುದರಿಂದ ಗೋವುಗಳಲ್ಲಿದ್ದ ಶ್ರೀಹರಿಯು ಗೌಃ ಎಂತಲೂ, ಶೀಘ್ರ ಗಮನ ಶಕ್ತಿಯುಳ್ಳ ವನಾದುದರಿಂದ ಕುದುರೆಯೊಳಗೆ ಇದ್ದ ಶ್ರೀಹರಿಯು ಅಶ್ವಃ ಎಂತಲೂ, ಇಷ್ಟ ಸಮೃದ್ಧಿಗೆ ಕಾರಣನಾದುದರಿಂದ ಪುರುಷರಲ್ಲಿದ್ದ ಹರಿಯು, ಪುರುಷ ನೆಂದೂ ಅನ್ನಿಸುತ್ತಾನೆ. ಹೀಗೆ ತಿಳಿದು ಉಪಾಸನೆ ಮಾಡಬೇಕು. ಪಶು ಗಳಲ್ಲಿ ಮನುಷ್ಯನ ಗಣನೆ ಏಕೆಂದರೆ, ಯಜ್ಞದಲ್ಲಿ ಯಾಗ ವಿಶೇಷದಲ್ಲಿ ಮನುಷ್ಯನನ್ನು ಪಶುವನ್ನಾಗಿ ಮಾಡುವದರಿಂದ. ಪುರುಷರಲ್ಲಿ ನಿಧನನೆಂದು ಉಪಾಸನಾ ಮಾಡಿದರೆ, ಅವಿದ್ಯಾ ಮೋಹ ಬಂಧ ನಿವೃತ್ತಿ. ಇನ್ನು ಉದ್ಗೀಥ ಹಿಂಕಾರ ಪ್ರಸ್ತಾವ ಪ್ರತಿಹಾರ ನಿಧನ ರೂಪಗಳ ಅರ್ಥವು ಪದ್ಯದಲ್ಲಿ ಸವಿಸ್ತರಿ ಸುತ್ತದೆ. ಇಂತು ಪಂಚ ಸಾಮಗಳಲ್ಲಿ ಅನಿರುದ್ಧಾದಿ ಪಂಚ ರೂಪಗಳು. ಇದರಂತೆ ಸಕಲ ಇಂದ್ರಿಯ ತತ್ವಗಳಲ್ಲಿ ಉಪಾಸನೆ, "ಗುಣ ಕಾಲ ದೇಶವು ಕರ್ಮ ನಾನಾ ಜೀವನೆನಿಸೋದು ಅನಾದಿಯಿಂದ ಸಿದ್ಧವೆಂದು। ಎಣಿಸಿ ಕಾರ್ಯಗಳೆಲ್ಲ ಸೂಕ್ಷ್ಮ ಸ್ಥೂಲ ಬಹು। ಗಣನೆ ಇಲ್ಲದೆ ಬೊಮ್ಮಾಂಡ ಬಾಹ್ಯಾಂತರ ಕ್ಷಣ ಬಿಡದಲೆ **ಸಾಮ ವಿದ್ಯವನು ಗ್ರಹಿಸಿ**" ಎಂದು ಶ್ರೀ ವಿಜಯದಾಸರ ವಚನದಂತೆ ಕಾಲನಿಯಾಮಕ ಭಗವಂತನ ಉಪಾಸನೆ, ನಾಲ್ಕು ಯುಗಗಳಲ್ಲಿ ಶ್ರೀಹರಿಯು ತಾನಿದ್ದು ಯುಗ ಪ್ರವರ್ತಕ ಧರ್ಮ ಕರ್ಮಗಳಿಗೆ ತಾನೆ ಆಗಿ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ರೂಪದಿಂದ ಯುಗಗಳನ್ನು ಪುಟ್ಟಿಸುವ. ಯುಗ ಪ್ರವರ್ತಕನೂ, ಯುಗ ಧರ್ಮ ಘಟಕನೂ ತಾನೇ ಆಗಿ ಭಕ್ತರಿಗೆ ಸಂಪದವೀವನೆಂದು ಸಾಮೋ ಪಾಸನೆ ಕ್ರಮ ಹೇಳಿ.—

ಮುಂದೆ ೧೬ನೇ ಪದ್ಯದಲ್ಲಿ ಮನುಜರ ಶರೀರದಲ್ಲಿ ನಾರಾಯಣಾದಿ ೫ ರೂಪದಿಂದ ಪಂಚನಾರೀ ತುರಗದಿಂದ ಇರುವ ಬಗೆ ಮತ್ತು ಈ ಪಂಚ ರೂಪಗಳೇ ಶರೀರದ ಮೇಲೆ ಕವಚಾಕೃತಿ ಇರುವದನ್ನು ಪೇಳುತ್ತಾರೆ. ತಲೆಯಲ್ಲಿ ನಾರಾಯಣ, ಗಂಟಲೆಡೆ ಕುತ್ತಿಗೆಯಲ್ಲಿ ವಾಸುದೇವ, ಶರೀರ ಬಲ ಭಾಗದಿ ಪ್ರದ್ಯುಮ್ನ-ಎಡದಲ್ಲಿ ಅನಿರುದ್ಧ, ಕೆಳಗಿನಂಗದಿ ಸಂಕರ್ಷಣ ಈ ವಿಧದಿಂದ ಐದು ರೂಪಗಳನ್ನು, ಅಮೌಳಿ ಪಾದಾಂತ ಸ್ಮರಿಸಬೇಕು. ಮತ್ತು ದೇಹ ವಿಶಿಷ್ಟ ಎಲ್ಲ ದೇಹದಿ ನಾರಾಯಣ ರೂಪ, ಕಟಿಯಿಂದಾರಂಭಿಸಿ ಪಾದದವರೆಗೆ ಸಂಕರ್ಷಣ ರೂಪ, ಶಿರವು ಆರಂಭಿಸಿ-ಜಘನ=ಕಟಿ ಪರಿಯಂತ ವಾಸುದೇವ ರೂಪ, ಎಡಭಾಗದಿ ಅನಿರುದ್ಧ ರೂಪ, ಬಲ ಭಾಗದಲ್ಲಿ ಪ್ರದ್ಯುಮ್ನ ರೂಪ, ಈ ಪ್ರಕಾರ ಕವಚ ರೂಪಗಳನ್ನು ಚಿಂತನೆಯು ಮಾಡು ವವರಿಗೆ ಮೈಲಿಗೆ, ಸ್ಪೃಷ್ಟಾಸ್ಪೃಷ್ಟ ದೋಷಗಳು, ವಿಧಿ ನಿಷೇಧ ಶೌಚಾ ಶೌಚ ದೋಷಗಳೂ ಇಲ್ಲ.

ಇನ್ನು ದೇಹದಲ್ಲಿಪ್ಪ ಇಪ್ಪತ್ತು ನಾಲ್ಕು ತತ್ವಗಳನ್ನೂ ತತ್ವ ಪತಿ ಗಳನ್ನೂ, ತನ್ನಿಯಾಮಕ ಕೇಶವಾದಿ ೨೪ ಭಗವದ್ರೂಪ ಕಾರ್ಯ ಪೇಳು ತ್ತಾರೆ. ಇಲ್ಲಿ ಮೊದಲಿಗೆ ಪಾಣಿತತ್ವಾರಂಭಿಸಿ ವ್ಯುತ್ಕ್ರಮದಿಂದ ಅವ್ಯಕ್ತ ತತ್ವದವರೆಗೆ ಮತ್ತು ಮುಂದೆ ಪೃಥ್ವಿತತ್ವಾರಂಭಿಸಿ ವ್ಯುತ್ಕ್ರಮದಿಂದ ಪಾದ ತತ್ವದವರೆಗೆ ಚಿಂತನೆಯು ಮಾಡುವ ಕ್ರಮ ವಿಚಾರಾರ್ಹವಾಗಿದೆ. ಇದು ಸ್ಥೂಲ ದೇಹಸೃಷ್ಟಿ ಆದನಂತರ ಸ್ಥಿತಿ ನ್ಯಾಸ ಹೇಳುತ್ತಾರೆ. ಈ ಕ್ರಮ ಜ್ಞಾನಿಗಳಿಗೆ ದೃಗ್ಗೋಚರ. ಪಂಚ ಜ್ಞಾನೇಂದ್ರಿಯಗಳಿಂದ ಬಾಹಿರದಿಂದಾ ಆಗುವ ಕಾರ್ಯ ಗೃಹಿಸುವದು. ಇದು ಮನಃತತ್ವದಾರಾ ಅಹಂಕಾರ ಮಹತ್ತತ್ವ ಅವ್ಯಕ್ತವರೆಗೆ ಅಂತರಂಗ ಗ್ರಹಿಸುವ ಕಾರ್ಯ-ಇದೊಂದು ರೀತಿ. ಇನ್ನು ಪಂಚ ಕರ್ಮೇಂದ್ರಿಯಗಳು ತತ್ತತ್ ಗೋಳಕ ದ್ವಾರಾ ದೇಹ ಅಂತ ರಂಗದಿಂದ ಬಾಹಿರಕ್ಕೆ ಹಾಕಿ ವ್ಯಾಪಾರ ಮಾಡುವದು. ಪಂಚತನ್ಮಾತ್ರಾ ಗಣ ಪಂಚಭೂತಗಣ ಉಭಯ ಕಾರ್ಯಪ್ರವರ್ತಿ. ಇದರ ವಿಚಾರ ಬಹು ಸೂಕ್ಷ್ಮ. ಶ್ರೀ ವಿಜಯದಾಸರ ಸುಳಾದಿಯಿಂದ ಅರಿವುದು. ಪಾಣಿಯಿಂದ ಕೊಡುವುದು-ತೆಕ್ಕೊಳ್ಳುವದು-ವಾಕ್‌ದಿಂದ ಮಾತಾಡುವುದು ಬಾಹಿರ ವ್ಯಾಪಾರ ತುತ್ತು ತಕ್ಕೊಳ್ಳುವದು. ಎರಡೂ ಅಂತರಂಗ ಬಹಿರಂಗ ಕ್ರಿಯೆ

ಗಳೆರಡು ಆಗುವವು. ಈ ನಿಮಿತ್ಯದಿಂದ ಪಾಣಿ ತತ್ವದಿಂದ ಶ್ರೀ ದಾಸಾರ್ಯರು ಪ್ರಾರಂಭಿಸಿ ಜ್ಞಾನ ಕರ್ಮೇಂದ್ರಿಯ ತತ್ವಗಳನ್ನು ವಿವರಿಸಿದ್ದಾರೆ. ಅಂದರೆ ಅನಿರುದ್ಧಾದಿ ೪ ರೂಪದಂತೆ ೪ ವಿಭಾಗ ತತ್ವಗಳಲ್ಲಿ ಮಾಡಿದ್ದಾರೆ. ೧) ಪಾಣಿತತ್ವಾಭಿಮಾನಿ ದಕ್ಷ ಪ್ರಜೇಶ್ವರ, ತನ್ನಿಯಾಮಕ ಪದ್ಮನಾಭ, ವದನ ವಾಕ್ ತತ್ವದಲ್ಲಿ ವಹ್ನಿ ಹೃಷಿಕೇಶ, ನಾಸಿಕ ಸದನ-ಘ್ರಾಣ ತತ್ವದಲ್ಲಿ ಅಶ್ವಿನಿ ದೇವತೆಗಳು ಶ್ರೀಧರ, ಜಿಹ್ವಾ ತತ್ವದಲ್ಲಿ ವರುಣ ವಾಮನ, ನೇತ್ರಚಕ್ಷು ತತ್ವದಲ್ಲಿ ಸೂರ್ಯ ತ್ರಿವಿಕ್ರಮದೇವ, ತ್ವಕ್ ತತ್ವದಿ ಅಹಂಕಾರಿಕ ಪ್ರಾಣ ಮಧುಸೂದನ, ಕರ್ಣ ಶ್ರೋತ್ರ ತತ್ವದಿ ಚಂದ್ರಾದಿ ದಿಗ್ ದೇವತೆಗಳು ವಿಷ್ಣು. ೨) ಮನಸ್ಸು ತತ್ವದಲ್ಲಿ ಇಂದ್ರ ಕಾಮಾದಿಗಳು, ಗೋವಿಂದ, ಧನಪಸಖ ರುದ್ರ-ಅಹಂಕಾರ ತತ್ವದಲ್ಲಿ ಮಹರುದ್ರ, ಮಹತ್ತತ್ವದಲ್ಲಿ ಬ್ರಹ್ಮವಾಯು ನಾರಾಯಣ, ಅವ್ಯಕ್ತ ತತ್ವದಲ್ಲಿ ಮುಖ್ಯ ಶ್ರೀ ರಮಾದೇವಿ ಕೇಶವ, ಈ ಪ್ರಕಾರ ದೇಹದೊಳಗೆ ತತ್ವ-ತತ್ವಪತಿ ತನ್ನಿಯಾಮಕ ರೂಪಗಳನ್ನು ಪ್ರತಿನಿತ್ಯ ಚಿಂತನೆ ಮಾಡುವ ಮಹಾತ್ಮರು, ಮನುಜರಲ್ಲ. ಅವರು ಅಮರರೇ-ದೇವತೆಗಳಿಗೆ ಸರಿಯಾದವರು. ಕಾರಣವೇನೆಂದರೆ ಶ್ರೀಹರಿ ಕೃಪಾಬಲವಿರಬೇಕು. ಸದಾ ಸರ್ವ ಕ್ರಿಯೆಗಳಲ್ಲಿ ಈ ಅನುಸಂಧಾನಪೂರ್ವಕ ಚಿಂತನಾ ತಪ್ಪದೇ ಮಾಡುವರು ಅಮರರೇ ಸರಿ.

ಇಲ್ಲಿ ಪರಿಯಂತವಾಗಿ ಪಂಚ ಭೂತಗಳ ಸೂಕ್ಷ್ಮ ಸಾತ್ವಿಕ ಗುಣವಾದ ಪಂಚ ಜ್ಞಾನೇಂದ್ರಿಯ ಮನ ವಿಭಾಗ ತತ್ವಗಳನ್ನು ಉದಾಹರಿಸಿದರು.

ಇನ್ನು ಮಧ್ಯದಲ್ಲಿ ಜ್ಞಾನ ಕರ್ಮೇಂದ್ರಿಯಗಳಿಗೆ ಕಾರಣವಾದ ಪೃಥಿವ್ಯಾದಿ ಪಂಚಭೂತ ತತ್ವಗಳನ್ನು ವಿಸ್ತರಿಸಿ, ಪಂಚಭೂತ ರಜೋಗುಣದಿಂದ ಪಂಚ ಕರ್ಮೇಂದ್ರಿಯ ಮತ್ತು ಪಂಚಭೂತ ತಮೋಗುಣದಿಂದ ಉತ್ಪತ್ತಿಯಾದ ಪಂಚತನ್ಮಾತ್ರಾ ತತ್ವಗಳನ್ನು ವಿವರಿಸಿರುವದು ಬಹು ಸಮಂಜಸವಾಗಿ ತೋರುತ್ತದೆ. ಈ ತತ್ವಗಳ ಉತ್ಪತ್ತಿ ಕ್ರಮ ಸೃಷ್ಟಿ ಉಪಾಸನಾ ಪ್ರಕರಣ ಸುಳಾದಿ ತಾರತಮ್ಯ ಸು॥ ಆಧ್ಯಾತ್ಮ ಮಾಲಾಗಳಲ್ಲಿ ವಿವರಿಸಿದ್ದು ಚನ್ನಾಗಿ ವಿಚಾರಮಾಡಿ ಅರಿವುದು.

೪) ನೆಲದೊಳು ಪೃಥ್ವಿ ತತ್ವಕ್ಕೆ ಅಭಿಮಾನಿ ಧರಾಶನೇಶ್ಚರ ಕೃಷ್ಣ ರೂಪ, ಜಲ ಅಪ್ಪು ತತ್ವದಲ್ಲಿ ವರುಣ ಹರಿರೂಪ, ಶಿಖಿ=ತೇಜ ತತ್ವದಲ್ಲಿ ಅಗ್ನಿ

ಈತನಿಗೆ ಪರಶುರಾಮ ಉಪಾಸ್ಯ ಮೂರುತಿ, ತತ್ವನಿಯಾಮಕ ಉಪೇಂದ್ರ, ಎಲರು=ವಾಯು ತತ್ವಕ್ಕೆ ಅಭಿಮಾನಿ ಪ್ರವಾಹ ವಾಯು-ಜನಾರ್ದನ, ಬಾಂದಳ=ಆಕಾಶಗತ ತತ್ವಾಭಿಮಾನಿ ಗಣೇಶ-ಅಚ್ಯುತ ಹರಿ. ಈ ಪ್ರಕಾರ ರೂಪಗಳನ್ನು ಚಿಂತಿಸಬೇಕು.

೪) ಇನ್ನು ಪಂಚಭೂತ ತಮೋ ಅಂಶದಿಂದ ಪಂಚತನ್ಮಾತ್ರಾ ತತ್ವಗಳ ಉತ್ಪತ್ತಿ ಕಾರಣ ಕೊನೆಗೆ ಪೇಳಿದ್ದಾರೆ. ಗಂಧತತ್ವದಲ್ಲಿ ಬೃಹಸ್ಪತಿ ಸಮಾನ ನರಸಿಂಹ, ರಸತತ್ವದಲ್ಲಿ ಬೃಹಸ್ಪತಿ=ಉದಾನ ಅಧೋಕ್ಷಜ ರಸ ರೂಪ ತಾನಾಗಿರುವನು. ರೂಪ ತತ್ವದಲ್ಲಿ ಬೃಹಸ್ಪತಿ ಅಪಾನ, ಪುರುಷೋತ್ತಮ ರೂಪ, ಸ್ಪರ್ಶ ತತ್ವದಲ್ಲಿ ಬೃಹಸ್ಪತಿ ವ್ಯಾನ-ಅನಿರುದ್ಧ ರೂಪ. ಶಬ್ದ ತತ್ವದಲ್ಲಿ ಬೃಹಸ್ಪತಿ ಪ್ರಾಣ (ಇವೆಲ್ಲ ದಾಸ ಪ್ರಾಣ ರೂಪಗಳು) ಪ್ರದ್ಯುಮ್ನ ರೂಪ. ಹೀಗೆ ೫ ಪಂಚ ತನ್ಮಾತ್ರಾಗಳು, ಉಪಸ್ಥ ತತ್ವದಿ ಸ್ವಾಯಂಭುವ ಮನು, ವಾಸುದೇವ. ವಾಯು ತತ್ವದಿ ಮಿತ್ರನಾಮಕ ಸೂರ್ಯ, ಜಯಾಪತಿ ಸಂಕರ್ಷಣ. ಪಾದ ತತ್ವದಲ್ಲಿ ಜಯಂತ ದಾಮೋದರ. ಇಂತು ೨೪ ತತ್ವಗಳ ವಿವರ. ೨೪ ಕೇಶವಾದಿ ಭಗವದ್ರೂಪಗಳ ವಿಚಾರ ಹೇಳಿದರು. ಈ ಇಪ್ಪತ್ತು ನಾಲ್ಕು ತತ್ವಗಳೊಳಗೆ ಶ್ರೀಪತಿಯಾದ ಅನಿರುದ್ಧಾದಿ ಐದು ರೂಪದಿಂದಲೇ ಬ್ರಹ್ಮಾಂಡ ಎಲ್ಲಾ ಕಾರ್ಯ ನಡೆಸುವ ರೂಪಗಳು. ಇದನ್ನು ಸರ್ವಥಾ ಮರೆಯದೇ ಶ್ರೀಹರಿಯು ಅನಿರುದ್ಧಾದಿ ರೂಪಗಳಿಂದ ಪ್ರತತಿ ಬಳ್ಳಿಯಂತೆ ಎಲ್ಲ ತತ್ವಗಳಲ್ಲಿಯೂ ಸುತ್ತಿ ಸುತ್ತುತ್ತಾ ಇದ್ದುದು ಜ್ಞಾನಿಗಳಿಗೆ ಗೋಚರ. ಇಂಥ ಅತುಳ ಮಹಿಮನು ಪಿತೃಗಳಿಗೆ ತರ್ಪಕನೆನಿಸುತ್ತಾ ಷಣ್ಣವತಿ (೯೬) ನಾಮದಿಂದ ಕರೆಸುವನು. ತತ್ವದೊಳಗೆ ೨೪ ರೂಪದಿಂದ ಸುತ್ತಿ ಸುತ್ತಿಸುತ್ತಾ ಅಂದರೆ ಇಂದ್ರಿಯ ವ್ಯಾಪಾರ ನಡಸೋಣ-ಪಿತೃಗಳಿಗೆ ಅನ್ನರೂಪ ಷಣ್ಣವತಿ ಹೇಗೆಂದರೆ :

೧) ಯಜಮಾನನಲ್ಲಿ ಅನಿರುದ್ಧ-ಇಲ್ಲಿ ೨೪ ಅಂಶ, ಅನಿರುದ್ಧ-ಕೇಶವಾದಿ.

೨) ಅನ್ನದೊಳಗೆ ಪ್ರದ್ಯುಮ್ನ-೨೪ ಅಂಶ, ಪ್ರದ್ಯುಮ್ನ-ಕೇಶವಾದಿ.

೩) ಭೋಕ್ತೃಗಳೊಳಗೆ ಸಂಕರ್ಷಣ ೨೪ ಅಂಶ, ಸಂಕರ್ಷಣ-ಕೇಶವಾದಿ.

೪) ಅವಕಾಶಪ್ರದ–ವಾಸುದೇವ ೨೪ ಅಂಶ, ವಾಸುದೇವ–ಕೇಶವಾದಿ.

ಈ ಪ್ರಕಾರ ಇಂದ್ರಿಯ ವ್ಯಾಪಾರಗಳು ಪಿತೃಗಳಿಗೆ ಅನ್ನರೂಪವಾಗಿ ಅನ್ನನಾಮಕ ಅನಿರುದ್ಧಾದಿ ರೂಪಗಳ ಕಾರ್ಯ ಹೇಳಿದಂತಾಯಿತು.

ಈ ಪ್ರಕಾರವಾಗಿ ಇಪ್ಪತ್ತು ನಾಲ್ಕು ತತ್ವ–ತತ್ವ ಪತಿಗಳಾದ ಬ್ರಹ್ಮಾದಿ ದೇವತೆಗಳೊಳಗೆ

| | |
|---|---|
| ಮುಖ್ಯ ಪ್ರತಿಪಾದ್ಯ | ೧ ರೂಪ |
| ವಿಶ್ವಾದಿ | ೧೦೦೦ ರೂಪ |
| ಅಜಾದಿ | ೫೧ ರೂಪ |
| ನಾರಾಯಣಾದಿ | ೧೦೦ ರೂಪ |
| | ೧೧೫೨ ರೂಪ |

ಗಳಿಂದ ಇರುವನೆಂದು ಜ್ಞಾನಿಗಳಾದ ದ್ರೌಪದೀಶಪತಿ ವಿಠಲರ ಅಭಿಪ್ರಾಯ.

ಸ್ಥೂಲ ದೇಹದಲ್ಲಿ ೨೪ ತತ್ವಗಳು ಬ್ರಹ್ಮಾಂಡದಲ್ಲಿ ಒಂದರಲ್ಲೊಂದು ಸಂಸೃಷ್ಟ ಮಿಳಿತವಾದ ತತ್ವಗಳಂತೆ ಇರುವವು. ತತ್ಪತಿಗಳಾದ ದೇವತೆಗಳು ಸಹ, ಒಂದೊಂದು ತತ್ವದಲ್ಲಿ ತಾರತಮ್ಯಾನುಸರಿಸಿ ಮಿಳಿತರಾಗಿ ಕಾರ್ಯ ಮಾಡಿಸುತ್ತಾರೆಂಬುದು ಉಚಿತ. ಆದರೆ ಸಂಸೃಷ್ಟ ಅವ್ಯಾಕ್ತಾದಿ ತತ್ವಗಳಲ್ಲಿ ಪೃಥ್ವಿ ತತ್ವಾಭಿಮಾನಿಗಳು ನಿಯಮ್ಯರಾಗಿರುವರು. ನಿಯಾಮಕರಲ್ಲಿ:

ಈ ಪ್ರಕಾರ ೨೪ ತತ್ವಗಳಲ್ಲಿ × ೨೪ ತತ್ವಗಳ=೫೭೬

೨೪ ತತ್ವಪತಿಗಳಲ್ಲಿ × ೨೪ ದೇವತೆಗಳು =೫೭೬

ಒಟ್ಟಗೆ ೧೧೫೨ ರೂಪಗಳೆಂತಲೂ ಊಹಿಸಲು ಶಕ್ಯವಿದೆ. ಇಪ್ಪತ್ತು ನಾಲ್ಕು ತತ್ವಗಳಿಗೆ ಇಂಬು ಕೊಡುವವನೂ, ಸ್ಥೂಲ ಹೃದಯಾಷ್ಟದಳ ಕಮಲದಳ ಲರಲ್ಲಿ ೪ ದಿಕ್ಕುಗಳ ದಳಗಳಲ್ಲಿ ಎರಡರಂತೆ ೮, ವಿದಿಕ್ಕು ಕಮಲ ೪ ರಲ್ಲಿ ೪ ಒಟ್ಟಗೆ ೧೨ ರೂಪ. ಇದರಲ್ಲಿ ಶಕ್ತಿ ಪ್ರತಿಷ್ಠಾ ಸಂವಿತ್ ಸ್ಫೂರ್ತಿ ಪ್ರಕೃತಿ ಕಳಾ ವಿದ್ಯಾ ಮತಿಃ ನೀತಿ ಮಾಯಾಕಾಲ ಈ ಹನ್ನೊಂದು ರೂಪಗಳು ಸ್ತ್ರೀ ರೂಪಗಳು. ಬಂಗಾರ ವರ್ಣ ವಿಶಿಷ್ಟವಾದವುಗಳು. ಹೆಳಲು ಬಂಗಾರ, ಪೀತಾಂಬರ, ಕೈ ಕಂಕಣಾ–ಕಂಚುಕ ತೊಟ್ಟವು ಎರಡೇ ಕರ, ಇವೆರಡರಿಂದ

ಬೊಗಸಿಯೊಡ್ಡಿ ಬಿಂಬರೂಪಿ ಹರಿಯ ಎದುರಿಗೆ ನಿಂತು ಪ್ರಾರ್ಥನ ಮಾಡುತ್ತಾರೆ. ಈಶಾನ್ಯ ದಳದಲ್ಲಿ ಒಂದೇ ಪುರುಷ ರೂಪ. ಇಂತು ಶಕ್ತ್ಯಾದಿ ೧೧ ಶ್ರೀಹರಿಯ ರೂಪಗಳು. ಏಕಾದಶ ಇಂದ್ರಿಯಗಳಲ್ಲಿ ಪೊಂದಿಕೊಂಡಿರುವರು. ಸುಂದರಪ್ರದನಾದ ಪುರುಷ ನಾಮಕನು ಪೂರ್ಣ ಜ್ಞಾನಾನಂದಪ್ರದನು. ಪರಮಾಪ್ತನಾಗಿ ಜೀವನ ಚಿದ್ದೇಹದೊಳಗೆ ಒಂದುಗಳಿಗೆಯಾದರೂ ಬಿಡದೇ ಅಂದರೆ ಸರ್ವದಾ ಬಿಡದೇ ಇರುವನು. ತತ್ವಗಳಲ್ಲಿ ಇಂದ್ರಿಯಗಳಲ್ಲಿ ಶಕ್ತ್ಯಾದಿ ರೂಪಗಳ ಕಾರ್ಯ ಹೇಳಿ,—

ಓಂಕಾರ ಅಷ್ಟಾವರಣ ಪ್ರತಿಪಾದ್ಯ, ಅಕಾರ ಉಕಾರ ಮಕಾರನಾದ ಬಿಂದು ಘೋಷ ಶಾಂತ ಅತಿಶಾಂತದಲ್ಲಿ ವಿಶ್ವಾದಿ ಅಷ್ಟ ರೂಪಗಳಿಂದ ೫೧ ವರ್ಣ ಉತ್ಪತ್ತಿ. ೧) ಅಕಾರ ಪ್ರತಿಪಾದ್ಯ ವಿಶ್ವ (ಅನಿರುದ್ಧ)ನಿಂದ ೧೬ ಅಜಾದಿ ರೂಪಗಳು. ೨) ಉಕಾರ ಪ್ರತಿಪಾದ್ಯ ತೈಜಸ (ಪ್ರದ್ಯುಮ್ನ)ನಿಂದ ೫ ಕಪಿಲಾದಿ, ಕ ಖ ಗ ಘ ಙ, ೩) ಮಕಾರ ಪ್ರತಿಪಾದ್ಯ ಪ್ರಾಜ್ಞ (ಸಂಕರ್ಷಣ)ನಿಂದ ೫ ಚಾರ್ವಾಂಗಾದಿ ಚ ಛ ಜ ಝ ಞ.

ಸ್ವರಪತಿ ಪಾದ್ಯ ತುರ್ಯ ವಾಸುದೇವ ಸ್ವರದಲ್ಲಿ ೪) ನಾದ-ಪ್ರತಿಪಾದ್ಯ ತುರ್ಯನಿಂದ ೫ ಅಕ್ಷರ ಟ ಠ ಡ ಢ ಣ ಟಂಕ್ಯಾದಿ ೫ ರೂಪ. ೫) ಬಿಂದು ಪ್ರತಿಪಾದ್ಯ ಆತ್ಮನಿಂದ ೫ ಅಕ್ಷರ ತ ಥ ದ ಧ ನ ತಾರಾದಿ ೫ ರೂಪ. ೬) ಘೋಷ ಪ್ರತಿಪಾದ್ಯ ಅಂತರಾತ್ಮನಿಂದ ೫ ಅಕ್ಷರ ಪ ಫ ಬ ಭ ಮ ಪರಾದಿ ಪಂಚ. ೭) ಶಾಂತ ಪ್ರತಿಪಾದ್ಯ ಪರಮಾತ್ಮನಿಂದ ೪ ಅಕ್ಷರ ಯ ರ ಲ ವ ಯಜ್ಞಾದಿ (೪). ೮) ಅತಿಶಾಂತ ಪ್ರತಿಪಾದ್ಯ ಜ್ಞಾನಾತ್ಮನಿಂದ ೫ ಅಕ್ಷರ ಶ ಷ ಸ ಹ ಳ ಶಾಂತಾದಿ ೫, ಕ+ಷ ಸಂಯೋಗವೆ ಕ್ಷ ೧ ಅಕ್ಷರ. ಕ್ಷಂ ಲಕ್ಷ್ಮೀನೃಸಿಂಹ ಜೀವೆ.

**ಈ ಅಜಾದಿ ೫೧ ವರ್ಣಗಳು ದೇಹದಲ್ಲಿರುವ ವಿಚಾರ**

| | | |
|---|---|---|
| ಲಿಂಗದೇಹದಲ್ಲಿ ೧೬ ಕಳೆಗಳು ಇಲ್ಲಿ ವಿಶ್ವ–ಇಲ್ಲಿ ಅಜಾದಿ | ೧೬ | ರೂಪ. |
| ಪಂಚ ಜ್ಞಾನೇಂದ್ರಿಯ ತೈಜಸ ಇಲ್ಲಿ ಕಪಿಲಾದಿ | ೫ | ,, |
| ಪಂಚ ಕರ್ಮೇಂದ್ರಿಯದಿ ಪ್ರಾಜ್ಞ ಇಲ್ಲಿ ಚಾರ್ವಾಂಗಾದಿ | ೫ | ,, |
| ಪಂಚ ತನ್ಮಾತ್ರಾದಲ್ಲಿ ತುರ್ಯ ಇಲ್ಲಿ ಟಂಕ್ಯಾದಿ | ೫ | ,, |
| ಪಂಚಭೂತ ಪೃಥಿವ್ಯಾದಿಲಿ ಆತ್ಮ ಇಲ್ಲಿ ತಾರಾದಿ | ೫ | ,, |

| | | |
|---|---|---|
| ಮನಸ್ ತತ್ವ ಅಹಂಕಾರತತ್ವ ಅಂತರಾತ್ಮ ಪರ-ಫಲಿಬಲ್ಯಾದಿ | ೫ | ರೂಪ. |
| ಮಹತ್ತತ್ವದಲ್ಲಿ ಪರಮಾತ್ಮ ಇಲ್ಲಿ ಯಜ್ಞಾದಿ | ೪ | ,, |
| ಅವ್ಯಕ್ತ ತತ್ವದಲ್ಲಿ ಜ್ಞಾನಾತ್ಮ ಇಲ್ಲಿ ಶಾಂತಾದಿ | ೫ | ,, |
| | ೫೦ | ರೂಪ. |
| ಕ್ಷಂ ಲಕ್ಷ್ಮೀನರಸಿಂಹ ಜೀವದಲ್ಲಿ | ೧ | ,, |
| ಇಂತು ಅಜಾದಿ ೫೧ ವರ್ಣಗಳು | ೫೧ | ರೂಪ. |

ಸದಾ ಸರ್ವಕಾಲದಲ್ಲಿ ಸರ್ವತ್ರ ಲಿಂಗ ಅವ್ಯಕ್ತ ಅನಿರುದ್ಧ ಸ್ಥೂಲ ದೇಹಗಳಲ್ಲಿ ಇದೇ ಪ್ರಕಾರ ಚಿಂತನೆ ಮಾಡಬೇಕು. ಲಿಂಗದೇಹ ಕಾರಣ ಸ್ಥೂಲದೇಹ ಕಾರ್ಯವೆಂದು ತಿಳಿಯಬೇಕು.

ಹೀಗೆ ಇಪ್ಪತ್ತು ನಾಲ್ಕು ತತ್ವ, ತತ್ವಪತಿ ಬ್ರಹ್ಮಾದಿ ದೇವತೆಗಳಲ್ಲಿ ೧೩೮೨೪ ರೂಪಗಳನ್ನು ಅಲ್ಲಿ ಕಾರ್ಯೋನ್ಮುಖವಾದ ಪ್ರಕೃತಿ ಬಿಂದುಗಳು ತದಭಿಮಾನಿ ದೇವತೆಗಳಲ್ಲಿ ಇಷ್ಟು ರೂಪದಿಂದ ಪಂಚಾತ್ಮಕ ರಮಿಸುತ್ತಾನೆಂದರೆ, ಮೂಲರೂಪ ನಾರಾಯಣ ಇವನಿಂದ ವಾಸುದೇವಾದಿ ೪ ಅಂಶ ಇದರಿಂದ ಬ್ರಹ್ಮಾಂಡ ಪಿಂಡಾಂಡ ವ್ಯಾಪ್ತವಾದ ಅಂಶಾಂಶ ರೂಪಗಳು. ಅವತಾರ ರೂಪಗಳು ಸಹ ಪಂಚಾತ್ಮಕವಾದ ಪ್ರಯುಕ್ತ ವಿಹಾರ ಮಾಡುತ್ತಾನೆಂದು ದ್ರೌಪದೀಶಪತಿ ವಿಠಲರಾದ ಜ್ಞಾನಿಗಳ ವಚನ.

ಇಲ್ಲಿ ವಿಚಾರಾಂಶ. ಈ ಭಗವದ್ರೂಪ ಸಂಖ್ಯಾ ವಿವರಣೆ ಲೆಕ್ಕ ಹಿಂದಿನ ೧-೨ ಟಿಪ್ಪಣಿಕಾರರು ಏನೇನೋ ಮನಬಂದಂತೆ ಬರೆದಿರುವರು. ಅದೂ ಸಹ ಸರಿ ಹೋಗುವದಿಲ್ಲ. ಭಗವದ್ರೂಪಗಳ ಗಣನೆ ನಮ್ಮಂಥ ಅಜ್ಞರಿಂದ ಸಾಧ್ಯವೆ? ಶ್ರೀ ಜಂಬುಖಂಡಿ ಆಚಾರ್ಯರು ಭಾವಸೂಚನೆಯಲ್ಲಿ **ಪ್ರಮೇಯ ಭಾಸ್ಕರ** ಗ್ರಂಥಾಧಾರ "ತ್ರಯೋದಶ ಸಹಸ್ರರೂಪೈರಷ್ಟ ಶತಾಧಿಕೈ । ಚತುರ್ವಿಂಶತಿಭಿ ಶ್ರೀಶೋಪಾಸ್ತೇ ಪಂಚಾತ್ಮಕಃ ಸುತೇತಿ ॥ ಹೀಗೆ ಅಪ್ಪಣೆ ಕೊಡಿಸಿದ್ದಾರೆ. ೧೩೮೨೪ ರೂಪಗಳು ಅನಿರುದ್ಧಾದಿ ಐದು ರೂಪಗಳಲ್ಲಿ ಅಡಗಿರುವುವು ಎಂದು ಪೇಳಿದ್ದಾರೆ.

ಇನ್ನು ಸಾಧನ ಶರೀರವಾದ ಈ ದೇಹಕ್ಕೆ ಅಲಂಕರಿಸತಕ್ಕ ದ್ವಾದಶ ನಾಮ ಊರ್ಧ್ವ ಪುಂಡ್ರಗಳಲ್ಲಿ ಕೇಶವಾದಿ ದಾಮೋದರ ಪರಿಯಂತವಾಗಿ

ದ್ವಾದಶ ಮೂರ್ತಿಗಳು ಶುಕ್ಲ ಪಕ್ಷದಲ್ಲಿ. ಮತ್ತು ಸಂಕರ್ಷಣಾದಿ ಶ್ರೀಕೃಷ್ಣ ಪರಿಯಂತ ಕೃಷ್ಣ ಪಕ್ಷದಲ್ಲಿ ಚಿಂತಿಸಬೇಕು. ಸಾಧನ ಮಾಡುವ ಕಾಲ ವಿಶೇಷ. ೧೨ ಮಾಸಗಳಲ್ಲಿ ಮಾರ್ಗಶೀರ್ಷ ಆರಂಭಿಸಿ ಕಾರ್ತೀಕ ಪರಿಯಂತರ ೧೨ ಕೇಶವಾದಿ ದಾಮೋದರ ಮೂರ್ತಿಗಳನ್ನು-ವಸಂತಾದಿ ೬ ಋತುಗಳಲ್ಲಿ ಅನಿರುದ್ಧಾದಿ ೫ ವೇದವ್ಯಾಸ, ಹೀಗೆ ೬ ರೂಪಗಳನ್ನು ಚಿಂತಿಸುತ್ತ ಹಗಲು ೩೦ ಘಟಿಕಾ ಸಾಧನ ಕಾಲದಲ್ಲಿ ಸತ್ಕರ್ಮ ಸದ್ಧರ್ಮ ನಿರಾಶೆಯಿಂದಲಿ ಫಲಾಪೇಕ್ಷಾರಹಿತರಾಗಿ ಭಗತ್ಕರ್ತೃತ್ವ ಅನುಸಂಧಾನ ಪೂರ್ವಕ ಭಗವದರ್ಪಿತ ಬುದ್ಧಿಯಿಂದ ಮಾಡಬೇಕು. ಶ್ರೀಹರಿಯೇ ನೀನು ಸಂತುಷ್ಟನಾಗು ಎಂದು ಪ್ರಾರ್ಥಿಸುತ್ತ, ಶ್ರೀಹರಿಯೆ ನಿನ್ನ ಕರುಣಾಪ್ರಸಾದ ವಿನಾ ಮತ್ತೊಂದು ಒಲ್ಲೆನೆಂದು ಶ್ರೀಹರಿಯನ್ನೇ ಕೊಂಡಾಡುತ್ತಿರಬೇಕು.

ಇಂತು ಸಕಲ ದೇಹಾದಿಗಳಲ್ಲಿ ಬಹಿರದಲ್ಲಿರುವ ಹೆಂಟೆ, ಬಂಗಾರ, ಲೋಹ (ಕಬ್ಬಿಣ) ಶೈಲಜ = ಪರ್ವತದಿಂದ ಪುಟ್ಟುವ ಗಿಡ, ಬಳ್ಳಿ, ಹೂವು, ಕಲ್ಲು, ಮಣ್ಣು ಮುಂತಾದವುಗಳಲ್ಲಿ ಅಂದರೆ ಎಲ್ಲ ಜಡ ವಸ್ತುಗಳಲ್ಲಿ ಬ್ರಹ್ಮಾದಿ ಎಲ್ಲ ಜೀವರಲ್ಲಿ ಪ್ರತಿನಿತ್ಯ ಒಂದು ಕ್ಷಣವಾದರೂ ಬಿಡದೇ ಚೇಷ್ಟೆಗಳ ವ್ಯಾಪಾರ ಮಾಡುತ್ತಾನೆ. ಇಂಥ ಪರಮಾತ್ಮನು ತನ್ನ ಕ್ರಿಯಾ ಮಾಡಿ ಮಾಡಿಸುವ ಸಾಧನ ಸಂಪತ್ತಿಲ್ಲದ ಜೀವಿಗಳಿಗೆ, ತಿಳಿಸುವದಿಲ್ಲ. ಆದರೂ ಎಲ್ಲರಿಗೆ ಅಂದರೆ ಮುಕ್ತಿಯೋಗ್ಯ ಜೀವರಿಗೆ ಪ್ರೇಷ್ಠ ಬಹುಪ್ರೀತಿಯುಳ್ಳವನಾಗಿರುವನು. ಶ್ರೀಹರಿ ಸರ್ವರ ಮನಸ್ಸಿನಂತೆ ಬೇಡಿದ್ದನ್ನು ಕೊಡುವನು. ಸರ್ವ ಜೀವರನ್ನು ಅವರವರ ಯೋಗ್ಯತೆ ಪ್ರಕಾರ ಸಮಾಧಾನ ಮಾಡುತ್ತ ಶಾಂತವೀವನು.

ಅನಿರುದ್ಧಾದಿ ಪಂಚ ಭಗವದ್ರೂಪಿಯಾದ ಹರಿಯು ವಾಸುದೇವ ಅನಿರುದ್ಧ ಈ ಎರಡು ರೂಪದಿಂದ ಪುರುಷರ ಶರೀರಗಳಲ್ಲಿ, ಸಂಕರ್ಷಣ ಪ್ರದ್ಯುಮ್ನ ಈ ಎರಡು ರೂಪಗಳಿಂದ ಸ್ತ್ರೀಯರ ಶರೀರಗಳಲ್ಲಿ ಇರುವನು. ಮತ್ತು ಸರ್ವಾಸುನಿಲಯ-ಸರ್ವರ ಅಸು ಪ್ರಾಣ ಜೀವರಂತರ್ಯಾಮಿಯಾಗಿ ನಾರಾಯಣನು ಇಹನು. ಈ ಜೀವರಲ್ಲಿರುವ ಹರಿಗೂ ಜೀವರಿಗೂ ಅತ್ಯಂತ ಭೇದವೆಂಬ "ದ್ವಾಸುಪರ್ಣಾಸಯುಜಾ ಸಖಾಯು" ಎಂಬುವ ಶ್ರುತಿಯಿಂದ ಹೊಗಳುವ ಜೀವರು ಸಂಸಾರದಲ್ಲಿದ್ದರೂ ಜೀವನ್ಮುಕ್ತರೆನಿಸುವರು.

ಹೀಗೆ ಪರಮಾತ್ಮ ಜಡದೇಹವನ್ನು ಜೀವರಿಗೆ ಕೊಟ್ಟು ಸ್ಥೂಲದೇಹ ಪಿಂಡಾಂಡ ಬ್ರಹ್ಮಾಂಡದಲ್ಲಿ ಅನಿರುದ್ಧಾದಿ ಪಂಚರೂಪಗಳ ಅನಂತ ಅಂಶ ರೂಪಗಳಿಂದ ಬ್ರಹ್ಮಾದಿ ಜೀವರೊಳಗೆ ವ್ಯಾಪಿಸಿ ಆಯಾ ಜೀವರ ಸಮಸ್ತ ವ್ಯಾಪಾರಗಳನ್ನೂ ಬನ್ನ ಬಡದಲೆ=ಯಾವ ತರದ ಕಷ್ಟವಿಲ್ಲದೇ ಅನಾಯಾಸ ಮಾಡಿಸುತ್ತಾನಾದರೂ, ಆಯಾ ಜೀವರುಗಳಿಂದ ಸಕಲ ವ್ಯಾಪಾರ ತಾನು ಮಾಡಿಸಿದರೂ, ಜೀವರನ್ನು ಧನ್ಯ ಪುಣ್ಯವಂತರೆಂದೆನಿಸುವನು. ಸಕಲ ತತ್ವ ದೇವತೆಗಳು ಶ್ರೀಹರಿ ಪ್ರೇರಣೆಯಿಂದ ಸಕಲ ಜೀವರಲ್ಲಿ ಮಾಡಿ ಮಾಡಿಸುವ ಸಕಲ ಕರ್ಮಗಳನ್ನೂ ಸಮರ್ಪಿಸಲು ಸ್ವೀಕರಿಸಿ, ಸುಖವಾದ ನಿಜಾನಂದ ವನ್ನು ಕೊಟ್ಟು ರಕ್ಷಿಸುತ್ತಾನೆ-ಸಂದೇಹವಿಲ್ಲ.

ಇಂಥ ಪರಮಾತ್ಮನ ಅತ್ಯದ್ಭುತ ವ್ಯಾಪಾರಗಳನ್ನು ಅಜ್ಞಾನಿಗಳು ತಿಳಿಯರು ಎಂಬುದನ್ನು ದೃಷ್ಟಾಂತ ಪೂರ್ವಕವಾಗಿ ಹೇಳುತ್ತಾರೆ. ಸಮುದ್ರ ದಲ್ಲಿ ಪ್ರವೇಶಮಾಡಿದ ನದಿಗಳ ಉದಕ ಸಮುದ್ರದಲ್ಲಿ ಕೂಡದೇ ಬೇರೆಬೇರೆ ಹರಿಯುತ್ತಲಿವೆ. (ಇದರ ಮರ್ಮ ಸಂತತ ಸಮುದ್ರ ಯಾನ ಮಾಡುವ ನಾವಿಕರು ತಿಳಿದು ಅಲ್ಲಲ್ಲಿ ಬೇರೆ ಹರಿಯುವ ಸಿಹಿ ನೀರು ತುಂಬಿಕೊಳ್ಳು ವರು. ಇದು ಅನುಭವ). ಇಂಥ ಸಿಹಿಯಾಗಿರುವ ನದಿ ನೀರು ಉಪ್ಪಾಗಿ ರುವ ಸಮುದ್ರ ನೀರಿನಕ್ಕಿಂತಲೂ ಭೇದ, ಈ ಮರ್ಮವನ್ನು ಆಕಾಶದಲ್ಲಿಪ್ಪ ಮೇಘಗಳು ಸಮುದ್ರಕ್ಕಿಳಿದು ಒಳ್ಳೆ ನದಿಯ ಸಿಹಿ ನೀರು ತುಂಬಿಕೊಂಡು ಲೋಕಕ್ಕೆ ವೃಷ್ಟಿ ಮಾಡುವ ಮೇಘಗಳೇ ಬಲ್ಲವು. ಇಂಥ ಸ್ಥಿತಿ ಆಕಾಶದಲ್ಲಿ ಚರಿಸುವ ಕಾಗಿ-ಗುಬ್ಬಿ ಮುಂತಾದ ಪಕ್ಷಿಗಳು ಹೇಗೆ ತಿಳಿಯುವದಿಲ್ಲವೋ, ಸಂತತ ಪಾಲು ಸಮುದ್ರದಲ್ಲಿ ಶೇಷ ಪರ್ಯಂಕದಲ್ಲಿ ಶಯನನಾದ ಶ್ವೇತ ದ್ವೀಪಗತನಾದ ವಾಸುದೇವನ ಉದರದಲ್ಲಿ ಈ ಗುಣತ್ರಯ ಬದ್ಧ ಜಗವು ಸಕಲ ಜೀವರಿಂದ ಯುಕ್ತವಾಗಿರುವ ಸೂಕ್ಷ್ಮ ರೀತಿ ಬ್ರಹ್ಮಾಂಡವು ಇರು ವದು.-ಬ್ರಹ್ಮಾಂಡದಲ್ಲಿ ವಾಸುದೇವನಿರುವನೆಂಬುವದು ಆಗಮಜ್ಞರು, ವೇದಾರ್ಥಗಳನ್ನು ಬಲ್ಲ ಜ್ಞಾನಿಗಳೇ ತಿಳಿಯುವರು ಹೊರ್ತಾಗಿ ಅಜ್ಞಾನಿ ಗಳಿಂದ ತಿಳಿಯಲು ಶಕ್ಯವಲ್ಲ.

ಈ ಪ್ರಕಾರ ಶ್ರೀಹರಿಯು ಕರಣ-ಇಂದ್ರಿಯ ಪಂಚ ಭೂತಗಳು ಇವು ಗಳಿಗೆ ಪ್ರೇರಕರೂ, ಉತ್ತಮರೆನಿಸುವ ಬ್ರಹ್ಮಾದಿ ದೇವತೆಗಳಲ್ಲಿ ಅನಿರುದ್ಧ-

ಪ್ರದ್ಯುಮ್ನ ಸಂಕರ್ಷಣ ವಾಸುದೇವ ಈ ನಾಲ್ಕು ರೂಪಗಳ ಗುಣಕಾರ್ಯ ಗಳನ್ನು ತಿಳಿದು ಈ ನಾಲ್ಕು ರೂಪಗಳಿಂದಲೇ ಸರ್ವತ್ರ ಬ್ರಹ್ಮಾಂಡದಲ್ಲಿ ಕಾರ್ಯ ಮಾಡುವನೆಂದು, ಧ್ಯಾನಮಾಡುತ್ತಾ ಚಿಂತಿಸುತ್ತಾ ಅನುಮೋದಿ ಸುತ್ತ=ಆನಂದಪಡುತ್ತ ಹಿಗ್ಗಿ-ಪರವಶನಾಗಿ ಕುಣಿಕುಣಿದು ಪಾಡುತ್ತಾ ಇರುವ ತನ್ನ ಭಕ್ತರಿಗೆ, ತನ್ನಿರವು=ತನ್ನ ಸ್ಥಿತಿ, ಇರುವಿಕೆ ತನ್ನ ಅಸ್ತಿತ್ವ ವ್ಯಾಪ್ತತ್ವ ವ್ಯಕ್ತತ್ವ ಪ್ರಸನ್ನತ್ವ ಇವೇ ಮೊದಲಾದವುಗಳನ್ನು ತೋರಿಸಿ ಭವ ಸಂಸಾರ ಸಮುದ್ರವೆಂಬ ಭವದಿಂದ ವಿಮುಕ್ತರ ಮಾಡಿ ಲಿಂಗಶರೀರ ಬಂಧನ ದಿಂದ ಬಿಡುಗಡೆ ಮಾಡಿ, ನಿಜಾನಂದವನ್ನು ಈವನೆಂದು ಶ್ರೀಹರಿಯ ಅನಂತ ಮಹಿಮೆ ಕೊಂಡಾಡಿದ್ದಾರೆ.

"ಮಚ್ಛಾದ್ಯಾ ಅಪಿ ವೈವಿಷ್ಣು ಅವತಾರಾಶ್ಚ ಸರ್ವಶಃ ಜೀವಾಂತ ಸಂಸ್ಥಿತಾ ಶಕ್ತಿ ಸಂಯುತಾ ||" ಇತ್ಯಾದಿ ಪ್ರಮಾಣಾನುಸಾರವಾಗಿ ಜೀವ ಸ್ವರೂಪೇಂದ್ರಿಯಗಳಲ್ಲಿ ಪ್ರೇರಕನಾಗಿ ಸ್ಥೂಲೇಂದ್ರಿಯಗಳಲ್ಲಿ ಕಾರ್ಯ ಮಾಡಿಸುವ, ಮತ್ಸ್ಯಾದಿ ದಶರೂಪಗಳ ಇರುವಿಕೆ ತತ್ಕಾರ್ಯ ಹೇಳುತ್ತಾರೆ. ಮೂಲರೂಪಿಯಾದ ಶ್ರೀಹರಿ ನಾರಾಯಣನು ಜೀವನ ಮನಸ್ಸಿನಲ್ಲಿ ಶ್ರವ ಣಾದಿ-ಕಿವಿ, ಕಣ್ಣು, ಶ್ರೋತ್ರ, ಚಕ್ಷುರಿಂದ್ರಿಯಗಳಲ್ಲಿ ಮತ್ಸ್ಯ-ಕೂರ್ಮ, ರೂಪಿ ಹರಿಯು ತ್ವಕ್ಕಿನಲ್ಲಿ ಕೋಲ ವರಾಹ ರೂಪನು. ರಸನ-ಜಿಹ್ವಾ ನಾಲಿಗೆಯಲ್ಲಿ ನರಸಿಂಹರೂಪಿ ಹರಿ. ನಾಸಿಕ ನಾಳ, ನಾಶಿಕ ಮೂಗಿನ ಪ್ರದೇಶದಲ್ಲಿ ಬಾಲ ಬ್ರಹ್ಮಚಾರಿಯಾದ ವಾಮನ. ಮುಖದಲ್ಲಿ ಭಾರ್ಗವ ಪರಶುರಾಮ. ಹಸ್ತದಲ್ಲಿ ವಾಲಿಯನ್ನು ಕೊಂದ ಶ್ರೀರಾಮ. ಪಾದದಲ್ಲಿ ಶ್ರೀಕೃಷ್ಣ. ಪಾಯು ಇಂದ್ರಿಯದಲ್ಲಿ ಜಿನ ದೈತ್ಯನನ್ನು ಮೋಹಗೊಳಿಸಿದ ಬುದ್ಧ. ದನು ರಾಕ್ಷಸ ಭಂಜನನಾದ ಕಲ್ಕಿ, ಮೇಢ್ರ, ಉಪಸ್ಥದಿ. ಈ ಪ್ರಕಾರ ದಶ-ಹತ್ತು ಭಗವದ್ರೂಪಗಳನ್ನು ಹತ್ತು ಇಂದ್ರಿಯಗಳಲ್ಲಿ ತಿಳಿದು, ಸಕಲೇಂದ್ರಿಯಗಳಿಂದ ಅನುಭವಿಸುವ ಆಯಾ ವಿಷಯಗಳನ್ನು, ಜೀವನ ಪಾದದಲ್ಲಿರತಕ್ಕ "ಉತ್ತಮಾನಾಂ ಸ್ವರೂಪಂತು ಪಾದಶಬ್ದೇನಭಣ್ಯತೇ" ಎಂಬುವ ರೀತ್ಯಾ, ಮಧ್ವೇಶಾಂತರ್ಯಾಮಿಯಾದ ಶ್ರೀಕೃಷ್ಣನ ಪಾದಗಳಿಗೆ ಶ್ರೀ ಕೃಷ್ಣಾರ್ಪಣ ಮರ್ಮವನ್ನರಿತು ಶ್ರೀಕೃಷ್ಣಾ ನಿನಗೆ ಅರ್ಪಿತವೆನ್ನಲು ದೋಷದೂರನೂ, ಸಮಸ್ತ ಜಗತ್ತಿಗೆ ಸ್ವಾಮಿ-ಪತಿ-ಒಡೆಯನಾದ ಶ್ರೀ ಜಗ

ಸ್ನಾಥ ವಿಠಲಾಂತರ್ಯಾಮಿ ಬಿಂಬನು ವಿಶ್ವವ್ಯಾಪಕನಾಗಿ ಕೈಕೊಳ್ಳುವನೆಂದು ಮಂಗಳ ಸ್ತುತಿಯನ್ನು ಹೇಳಿ ಪಂಚಮಹಾಯಜ್ಞ ಸಂಧಿಯ ಮಂಗಳ ಮಾಡಿದ್ದಾರೆ.

॥ ಶ್ರೀ ಮಧ್ವೇಶ ಕೃಷ್ಣಾರ್ಪಣಮಸ್ತು ॥

॥ ಶ್ರೀ ರಾಘವೇಂದ್ರ ಗುರು-ಶ್ರೀ ವರದೇಂದ್ರ ಗುರು ॥

# ೬ನೇ ಪಂಚಮಹಾಯಜ್ಞ ಸಂಧಿ

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮ ಭಗವದ್ಭಕ್ತರಿದನಾದರದಿ ಕೇಳುವದು ॥ ಪಲ್ಲ ॥

ಮೂಲ :

**ಜನನಿಪಿತ ಭೂ ವಾರಿದಾಂಬರ ।**
**ವೆನಿಪ ಪಂಚಾಗ್ನಿಯಲಿ ನಾರಾ ।**
**ಯಣನ ತ್ರಿಂಶತಿ ಮೂರ್ತಿಗಳ ವ್ಯಾಪಾರ ವ್ಯಾಪ್ತಿಗಳ ॥**
**ನೆನೆದು ದಿವಸಗಳೆಂಬ ಸಮಿಧೆಗ ।**
**ಳನು ನಿರಂತರ ಹೋಮಿಸುತ ಪಾ ।**
**ವನಕೆ ಪಾವನನೆನಿಪ ಪರಮನ ಬೇಡು ಪರಮ ಸುಖ ॥ ೧ ॥**

ಬೃ. ಉ. ಭಾಷ್ಯ, ಛಾಂದೋಗ್ಯದಲ್ಲಿಯೂ ಹೇಳಿದ್ದಾರೆ "ದ್ಯುಪರ್ಜನ್ಯ ಧರಾ ಪುಂಸ್ತ್ರೀ ಸಂಸ್ಥಿತಃ ಪಂಚರೂಪಿಣಂ । ನಾರಾಯಣಂ ವಾಸುದೇವಂ ತಥಾ ಸಂಕರ್ಷಣಂ ಪ್ರಭುಂ ॥ ಪ್ರದ್ಯುಮ್ನಂಚಾನಿರುದ್ಧಂ ಚಕ್ರಮಾಧ್ಯಾಯಂ ಸ್ತು ಸರ್ವದಾ । ಪಂಚಾಗ್ನಿ ವಿನ್ಮಾಮು ಭವೇತ್ಸಯಾತಿ ಪರಮಂ ಪದಂ ॥ ನಾಸ್ಯ ಸಂಸರ್ಗದೋಷೋಽಪಿಕದಾಚ ನ ಭವಿಷ್ಯತಿ ॥ ಇತಿ ತ್ರೈವಿದ್ಯೆ ॥

**ಅವತರಣಿಕಾ:** ಹಿಂದೆ ೫ನೇ ಸಂಧಿಯಲ್ಲಿ ಜೀವರ ಸ್ವರೂಪ ಗುಣವನುಸರಿಸಿ ಸೂಕ್ಷ್ಮ ಸೃಷ್ಟಿಯಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಜಾತಿಯವರಿಗೆ ಅನಿರುದ್ಧ ಶರೀರವನ್ನು ನಿರ್ಮಿಸಿ ಶ್ರೀಹರಿ ತನ್ನ ವಿಭೂತಿ ರೂಪಗಳನ್ನಿಟ್ಟು, ಅನಿರುದ್ಧಾದಿ ೫ ರೂಪಗಳಿಂದ ಕಾರ್ಯ ಮಾಡುತ್ತಾನೆಂಬೋ ವಿವರಣವನ್ನು ಪೇಳುತ್ತ ಈ ೬ನೇ ಪಂಚಮಹಾಯಜ್ಞ ಸಂಧಿಯಲ್ಲಿ ಜೀವರಿಗೆ ಅನಿರುದ್ಧ ಶರೀರದ ಮೇಲೆ ಸ್ಥೂಲ ಶರೀರವನ್ನು ಹೇಗೆ ಕೊಡುತ್ತಾನೆಂಬುದನ್ನು ಪೇಳುತ್ತಾ, ಸಕಲವನ್ನೂ ಭಗವಂತನಿಗೆ ಯಜ್ಞತ್ವೇನ ಸಮರ್ಪಿಸುವ ಬಗೆ, ಅನಿರುದ್ಧಾದಿ ಪಂಚ ಭಗವದ್ರೂಪಗಳ ಕಾರ್ಯ, ಚತುರ್ವಿಂಶತಿ ತತ್ವ ಭಗವದ್ರೂಪಗಳ ವಿವರಣೆ ಮುಂತಾದ ಸ್ಥೂಲದೇಹ ಬಂಧ ನಿವೃತ್ತಿಗೆ ಕಾರಣವಾದ ಭಗವದುಪಾಸನಾ ವಿಷಯವನ್ನು ವಿಸ್ತರಿಸುತ್ತಾರೆ. ಪ್ರಾಣಾದಿ ಪಂಚ ರೂಪಗಳಲ್ಲಿ ನಾರಾಯಣಾದಿ ರೂಪ ಚಿಂತಿಸತಕ್ಕದ್ದು.

**ಪದ್ಯಾರ್ಥ :** ಜನನಿ=ಜೀವನು ಸ್ಥೂಲ ಶರೀರದಿಂದ ಪುಟ್ಟಲಿಕ್ಕೆ ತಾಯಿ ಗರ್ಭದಲ್ಲಿ ನವಮಾಸ ವಾಸ, ಪಿತ=ತಾಯಿ ಗರ್ಭ ಉತ್ಪತ್ತಿಯಾಗಲಿಕ್ಕೆ ತಂದೆಯು ರೇತಸ್ಸು ಕಾರಣ, ಭೂ=ತಂದೆಯು ರೇತಸ್ಸಿಗೆ ಕಾರಣ-ಭೂಮಿಯಲ್ಲಿ ಉತ್ಪನ್ನವಾದ ಧಾನ್ಯಾದಿಗಳು ಅನ್ನ, ವಾರಿದ=ಮೇಘದಿಂದ ಮಳೆಗರೆಯುವದು ಧಾನ್ಯಾದಿಗಳ ಬೆಳಸಿಗೆ ಕಾರಣ, ಅಂಬರ=ಆಕಾಶ (ಗಗನ) ಮೇಘಾದಿಗಳು ಸಂಚರಿಸಲಿಕ್ಕೆ ಅವಕಾಶ ಪ್ರದವಾದ ಆಕಾಶ. ಹೀಗೆ ತಾಯಿ, ತಂದೆ, ಭೂ, ಧಾನ್ಯ, ಮೇಘವರ್ಷ, ಗಗನ, ವೆನಿಪ=ವೆನಿಸುವ ಪಂಚಾಗ್ನಿಗಳು ಐದು ಅಗ್ನಿಗಳು. ಈ ಐದು ಅಗ್ನಿಗಳಲ್ಲಿ ನಾರಾಯಣನ=ಮೂಲರೂಪಿ ನಾರಾಯಣನಿಂದ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಈ ಐದು ರೂಪಗಳಲ್ಲಿ ತ್ರಿಂಶತಿ ಮೂರ್ತಿ=ಮೂವತ್ತು ರೂಪ. ಹೇಗಂದರೆ ಒಂದೊಂದು ನಾರಾಯಣಾದಿ ರೂಪಗಳು ಪುನಃ ನಾರಾಯಣ ವಾಸುದೇವ ಎಂತ ೫×೫=೨೫ ಮೂಲ ಐದು ರೂಪಗಳು ಹೀಗೆ ಮೂವತ್ತು ರೂಪಗಳಿಂದ ಮಾಡುವ ವ್ಯಾಪಾರ ಅಲ್ಲಲ್ಲಿ ವ್ಯಾಪ್ತಿಗಳ ನೆನದು=ಈ ಮೂವತ್ತು ರೂಪಗಳಿಂದ ವ್ಯಾಪಿಸಿದ್ದು, ಅವನ ವ್ಯಾಪಾರ ತಿಳಿದು, ದಿವಸಗಳೆಂಬ ಸಮಿಧೆಗಳು=ಅಗ್ನಿ ಪುಟವಾಗಲು ಸಮಿಧೆ, ಕಾಷ್ಟ ಬೇಕು. ಕಾಷ್ಟವ್ಯಾವುದು ಇಲ್ಲಿ-ದಿವಸ=ದಿನವೆಂಬುವದೇ ಕಾಷ್ಟ. ಕಾಲರೂಪಿ ಹರಿಯ ರೂಪ, ಯಾವ ಕಾಲದಲ್ಲಿ ಯಾವ ಅವಸ್ಥೆಯಲ್ಲಿಡುವನೊ, ಅದೇ ಕಾಲ ದಿವಸ-ಸಮಿಧೆ=ಕಾಷ್ಟಗಳನ್ನು ಅಗ್ನಿಗಳಲ್ಲಿ ಹೋಮಿಸುತ್ತಾ, ಪಾವನಕೆ ಪಾವನ=ಪವಿತ್ರಗೈಸುವ ಅಗ್ನಿಗೆ ವಾಯುವಿಗೆ ಪಾವಿತ್ರ್ಯತೆ ಕೊಡುವ ಶ್ರೀಹರಿಯು, ಪರಮನ=ಸರ್ವೋತ್ತಮನ ಕಾರಣ ಕಾರ್ಯರೂಪಗಳನ್ನರಿತು, ಪರಮ ಸುಖ=ಉತ್ತಮವಾದ ಮೋಕ್ಷ ಸುಖವನ್ನು ಬೇಡು ಎಂದು ಜೀವನಿಗೋಸುಗ ಶ್ರೀ ದಾಸರಾಯರು ಉಪದೇಶಿಸುತ್ತಾರೆ.

**ವಿಶೇಷಾರ್ಥ :** ತಾತ್ಪರ್ಯವೇನೆಂದರೆ, ಜೀವನಿಗೆ ಸ್ಥೂಲದೇಹ ಕೊಡಬೇಕಾದರೆ ಶ್ರೀಹರಿಯು ತತ್ವೇಶ ದೇವತೆಗಳ ದ್ವಾರಾ ಆಕಾಶದಲ್ಲಿ ಜೀವನನ್ನು ಇಟ್ಟು, ಮೇಘ ವೃಷ್ಟಿಯಲ್ಲಿ ಪ್ರವೇಶ ಮಾಡಿಸುತ್ತಾನೆ. ಮಳೆಯ ದ್ವಾರಾ, ಜೀವನನ್ನು ಭೂಗತವಾದ ಧಾನ್ಯಾದಿಗಳಲ್ಲಿ ತಂದಿರಿಸುತ್ತಾರೆ. ಧಾನ್ಯಾದಿಗಳು ಬೆಳಸು ಪಕ್ವಗೈಸಿ ಅನ್ನದ್ವಾರಾ ಪುರುಷರ ರೇತಸ್ಸಿನಲ್ಲಿ ತಂದಿ

ಡುವರು. ಪುರುಷದ್ವಾರಾ ಸ್ತ್ರೀ ಜನನಿ ಗರ್ಭದಲ್ಲಿ ಇಟ್ಟು, ನವಮಾಸ ನಂತರ ಸ್ಥೂಲ ದೇಹದಿಂದ ಸೃಷ್ಟಿ ಮಾಡಿಸುತ್ತಾರೆ. ಕಾರಣ ಇಂಥ ಸ್ಥೂಲ ದೇಹ ಉತ್ಪತ್ತಿಗೆ ಕಾರಣನಾದ ನಾರಾಯಣಾದಿ ಐದು ಭಗವದ್ರೂಪಗಳ ಕಾರ್ಯ ತಿಳಿದು, ಗಗನ ವಾರಿದ ಭೂ ಪಿತ ಜನನಿ ಇವೇ ಐದು ಅಗ್ನಿಗಳು. ಈ ಐದು ಅಗ್ನಿಗಳಲ್ಲಿ ಯಜ್ಞತ್ವೇನ ಹೋಮಿಸುವ ಕ್ರಮವನ್ನು ಬೃಹದಾರಣ್ಯ ಉಪನಿಷತ್ತಿನ ಪ್ರಮೇಯವನ್ನು ವಿಸ್ತರಿಸುತ್ತಾರೆ. ಇದೇ ಸ್ಥೂಲಾದಿ ಲಿಂಗ ದೇಹ ಬಿಡುಗಡೆಗೆ ಕಾರಣ. ಮುಂದೆ, ಪರಮ ಸುಖವಾದ ನಿಜಾನಂದ ಮೋಕ್ಷಕ್ಕೆ ಕಾರಣವೆಂದು ಅಭಿಪ್ರಾಯ. ಜನನಿಯಿಂದ ಉತ್ಪತ್ತಿ ಕಾರಣ ವೆಂದು ತಿಳಿಸಲು ಜನನಿ ಎಂಬ ಅಗ್ನಿಯಿಂದ ಪದ್ಯ ಪ್ರಾರಂಭಿಸಿದ್ದಾರೆ.

**ದ್ರಾಪದೀಶಪತಿ ವಿಠಲರು :** ಜನನಿ ಪಿತ ಭೂ ವಾರಿದಾಂಬಗ ॥ ಜನನಿ ಎಂದರೆ ಅಗ್ನಿ-ಸ್ತ್ರೀಯರಲ್ಲೇ ಅಗ್ನಿಯ ಅಧಿಷ್ಠಾನ, ಗೃಹಸ್ಥಾಶ್ರಮ ಧರ್ಮ ಅಗ್ನಿ ಹೋತ್ರಾದಿ ಕ್ರಿಯಕ್ಕೆ ಸಪತ್ನೀಕ ಅಧಿಕಾರಿಯೇ ಹೊರತು ವಿಧುರನು ಅಧಿಕಾರಿ ಅಲ್ಲ. ಆದರಿಂದ ಪಂಚಮಹಾ ಭೂತಗಳಲ್ಲಿ, ಪಂಚ ಮಹಾಯಜ್ಞ ಹೇಳಬೇಕಾಗಿ, ಅಗ್ನಿ ಪರವು ಹಾಗೂ ಸ್ತ್ರೀಯರ ಪರವೂ ಮಾಡಿ ಹೇಳುತ್ತಾರೆ. ಸ್ತ್ರೀ ರೇತಸ್ಸು ಶೋಣಿತದಲ್ಲಿ ಅಗ್ನಿ ಅಭಿಮಾನಿ, ಪುರುಷ ರೇತಸ್ಸಿಗೆ ವಾಯು ಅಭಿಮಾನಿಯೆಂತ ಅಧ್ಯಾತ್ಮಮಾಲಾ. ಜನನಿ ಯೆಂದರೆ ಅಗ್ನಿ-ಪಿತಾ ಎಂದರೆ= ಹೇಗೆ ಅಗ್ನಿಗೆ ವಾಯು ಸೇರದೆ ಅಭಿವೃದ್ಧಿ ಯಾಗುವದಿಲ್ಲವೋ ಆದರಿಂದ ವಾಯು ಪರವು-ಪುರುಷ ಪರವು ಉಭಯ ವಾಚಿ ೧) ಜನನಿವೊಂದಗ್ನಿ, ೨) ಪಿತಾವೊಂದಗ್ನಿ, ೩) ಭೂಮಿವೊಂದಗ್ನಿ, ೪) ಉದಕವೊಂದಗ್ನಿ, ೫) ಆಕಾಶವೊಂದಗ್ನಿ, ಹೀಗೆ ಐದು ಅಗ್ನಿಯಲ್ಲಿ ಹೋಮ. ಒಂದೊಂದು ಭೂತದಲ್ಲಿ ಐದು ಪ್ರಕಾರ ೨೫. ಪೃಥಕ್ ರೂಪ ಮೂಲರೂಪ ೫ ಅಂತೂ ೩೦ ರೂಪದ ವ್ಯಾಪಾರ ವ್ಯಾಪ್ತಿ ಹೇಳುತ್ತಾರೆ.

**ಭಾವಸೂಚನ :** ಇದಾನೀಂ ಪಂಚಮಹಾಯಜ್ಞ ಸಂಧಿ ಮುಪ ಕ್ರಮತೇ ॥ ಜನನೀತಿ । ಭಾಮಿನಿ । "ಛಾಯಾತಪಶ್ರುತ್ಯುಕ್ತ ಯಜ್ಞದ । ದಾಯವನು ಸದುಪಾಯದ್ವಿವರಿಸಿ । ಮೇಯರಿಗೆ ಬಹು ಸುಗಮ ಮಾಡಿದ ರೆಲ್ಲ ಕಾಲದಲಿ ॥ ಕಾಯ ಸ್ಥಿರವೆನ್ನದಲೆ ಸ್ಮೃತಿ । ಹೇಯವೆನುತಲಿ ಮನದ ಲೊಪ್ಪುತ । ಕಾಯಜಯ್ಯನ ಕಾಣೆ ಪಂಚ ಸುಯಜನ ಮುಖದಲ್ಲಿ ॥ ೬ ॥

ಜನನೀತಿ । ಪಂಚೇತಿ । ಉಕ್ತಂ ಚ ಶರ್ಕರಾಯಾಂ ॥ "ದ್ಯುಪರ್ಜನ್ಯಧರಾ ಪೃಥ್ವಿ ಪುರುಷಯೋಷಿದ್ರೂಪ ಪಂಚಾಗ್ನಿ ವಿದ್ಯಾನಿಷ್ಠಾ ಇತಿ ॥ ೧ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಅಭಯಂ ತಿತೀರ್ಷತಾಂ ಪಾರಂ" ಇತ್ಯುಕ್ತೇಃ "ಪಂಚಾಗ್ನಯಃ" ಇತ್ಯುಕ್ತ ಪಂಚಪಂಚ ರೂಪಾಣಿ (ಣಾಂ) ಯಜ್ಞ ಕಲಾಪಸ್ಯ ಷಟ್‌ತ್ವಾತ್ ತ್ರಿಂಶನ್ ಮೂರ್ತಿವಾಚಕ ತ್ರಿಂಶಚ್ಛಬ್ದ ನಿರ್ವಚನಸ್ಯ ತದನುಸಂಧಾತೃಭಿಃ ಅಹರಹಃ ಭಾವ್ಯಮ್ ॥ ತದಭಾವೇ ತ್ರಿಂಶದ್ಧಾಬೋಧಕ ಪದಾನಿ ವಾ ಪ್ರಪಠಿತಾನಿ ಸ್ಯುಃ ॥ ಏಕಭವೇ ಭಾವಿಭವೇ ವಾ ಉಕ್ತವೈಭವಲಾಭಃ ಭವೇ ದಿತ್ಯತಃ ಅಸ್ಯ ಪಂಚಮಹಾಯಜ್ಞ ಸಂಧೇಃ ಉಪಕ್ರಮಃ ॥

ಯದ್ವಾ ಓಂ "ನಾತಿಚಿರೇಣ" ಇತಿ ನಯಾನು ಚಿಂತನಾರ್ಥಂ ಯೋಷಿ ದ್ಗರ್ಭಾನುಗತಿಂ "ರೇತಃ ಸಿಗ್ಯೋೇಗೋಥ" ಸೂತ್ರೋಕ್ತಾಂ ವದನ್ "ವೈರಾಗ್ಯಾರ್ಥಂ ದ್ಯು ಪರ್ಜನ್ಯ ಪೃಥ್ವೀ ಪುರುಷ ಯೋಷಿದ್ರೂಪ ಪಂಚಾಗ್ನಿ ವಿದ್ಯಾನಿಷ್ಠಾಃ" ಇತಿ ಶರ್ಕರಾವಕ್ಷ್ಯ ಮಾಣೋಪನಿಷನ್ಮೂಲ ಮೂಲಕೋಽ ಸ್ಮತ್ ಪಂಚಕ್ರತು ಸಂಧಿಃ–ಇತಿಹಾರ್ದಂ ಕೃತ್ವಾ ದಾಸೇಟ್ ವ್ಯತಿಕರ ಮಾತ್ರಂ ಚರೀಕರೋತಿ ॥ ತಸ್ಮಾತ್ ಅತ್ರ ಅಪ್ರತ್ಯಯಾಃ "ಕಿಮನ್ಯೈಃ ಪಶು ಸನ್ನಿಭೈಃ" ಇತಿ ಟೀಕಾಕೃತಗಾಲೀ ಗೋಚರಾಃ ಉಪೇಕ್ಷ್ಯಾಃ ಏವ ಇತ್ಯತೋವಾ ಆಹ "ಜನನೀ" ಇತಿ ॥

### ಕನ್ನಡಾರ್ಥ

"ಸಂಸಾರದ ಪಾರವನ್ನು ಹೊಂದಿ ಅಭಯ (ಜರಾಮರಣಭಯರಹಿತ) ರೂಪವಾದ ಮೋಕ್ಷವನ್ನು ಹೊಂದ ಬಯಸುವವರು ಪಂಚಾಗ್ನಿ ವಿದ್ಯೆಯಲ್ಲಿ ನಿಷ್ಣಾತರೂ ಉಪಾಸಕರೂ ಆಗಬೇಕು" ಎಂದು ಉಪನಿಷತ್ತುಗಳಲ್ಲಿ ಹೇಳಿರು ತ್ತಾರೆ ಯಜ್ಞ ಕಲಾಪಗಳು (ಸಾಧನ ಸಾಮಗ್ರಿಗಳು) ಆರು ಇರುವದ ರಿಂದ ಒಂದೊಂದು ಯಜ್ಞಕ್ಕೆ ಆರರಂತೆ ಐದು ಯಜ್ಞಗಳಿಗೆ ಮೂವತ್ತು ಭಗವದ್ರೂಪಗಳಾಗುತ್ತವೆ. ಆದುದರಿಂದ ಪಂಚಮಹಾಯಜ್ಞಗಳಲ್ಲಿ ಮೂವತ್ತು ಭಗವದ್ರೂಪಗಳನ್ನು ಹೇಳುವ ಶಬ್ದಗಳ ಬಗೆಯನ್ನು ತಿಳಿದು ರೂಪಗಳನ್ನು ನಿತ್ಯದಲ್ಲಿ ಅನುಸಂಧಾನ ಮಾಡುತ್ತಿರಲೇಬೇಕು. ನಿತ್ಯದಲ್ಲಿ ಈ ಅನುಸಂಧಾನವು ಅಸಾಧ್ಯವಾಗುತ್ತಿದ್ದರೆ ಮೂವತ್ತು ಹರಿ ರೂಪಗಳನ್ನು

ತಿಳಿಸುವ ಪದಗಳನ್ನಾದರೂ ಪಠಿಸಬೇಕು. ಅಂದರೆ ಆ ಜನ್ಮದಲ್ಲಿ ಅಥವಾ ಮುಂದಾಗುವ ಜನ್ಮದಲ್ಲಿಯಾಗಲೀ ಪಂಚಾಗ್ನಿ ವಿದ್ಯೋಪಾಸನೆಯಿಂದ ಬರುವ ವೈಭವವು ಬರುತ್ತದೆ. ಆದುದರಿಂದ ಪಂಚಮಹಾಯಜ್ಞ ಸಂಧಿಯನ್ನು ಶ್ರೀ ದಾಸಶ್ರೇಷ್ಠರು ಉಪಕ್ರಮಿಸುತ್ತಾರೆ (೧).

ಅಥವಾ "ಓಂ ನಾತಿಚಿರೇಣ ವಿಶೇಷಾತ್ ಓಂ" (ಬ್ರ. ಸೂ. ಅ. ೩, ಪಾ೧. ಅ. ೧೭, ಸೂ. ೨೭)ಸ್ವರ್ಗದಿಂದ ಇಳಿದು ಬಂದ ಕರ್ಮಿಗಳು.(ಸಕಾಮ ಕರ್ಮವನ್ನು ಮಾಡುವವರು) ಅತಿ ಶೀಘ್ರವಾಗಿಯೇ (ಸ್ವಲ್ಪೇ ಕಾಲದಲ್ಲಿ) ಭೂಮಿಯನ್ನು ಕುರಿತು ಬಂದು ಬ್ರಾಹ್ಮಣ ಮುಂತಾದ ಯೋನಿಯಲ್ಲಿ ಪ್ರವೇಶಿಸುತ್ತಾನೆ; ಹೊರತಾಗಿ ವಿಲಂಬದಿಂದ ಭೂಮಿಗೆ ಬರುವದಿಲ್ಲ. ಸ್ವರ್ಗದಿಂದ ಇಳಿಯುವ ಕಾಲಕ್ಕೂ-ಭೂಮಿಗೆ ಬರುವ ಕಾಲಕ್ಕೂ ಸಾಮೀಪ್ಯವನ್ನು ತಿಳಿಸುವ ವಿಶೇಷ ಶ್ರುತಿ ವಚನಗಳಲ್ಲಿ ("ತದ್ಯ ಇಹ ರಮಣೀಯ ಚರಣಾಃ ರಮಣೀಯಾಂ ಯೋನಿಮಾಪದ್ಯಂತೆ ಅಭ್ಯಾಶೋಹಯತ್ತೇ") ಇರುವದರಿಂದ ಹೀಗೆ ಹೇಳಬೇಕು. ಈ ಸೂತ್ರದಲ್ಲಿ ಹೇಳಿದಂತೆ ಸ್ವರ್ಗದಿಂದ ಇಳಿದು ಬ್ರಾಹ್ಮಣಾದಿ ಯೋನಿಗಳಲ್ಲಿ ಗತಿ (ಪ್ರವೇಶ) ಯನ್ನು ಪಡೆಯುವ ಸಂಗತಿಯನ್ನು ತಿಳಿಸಲು "ಓ ರೇತಃ ಸಿಗ್ಯೋಗೋಥ" ಓಂ (ಬ್ರ. ಸೂ. ಅ. ೩, ಪಾ. ೧, ಅ. ೧೯, ಸೂ. ೨೮) ಕರ್ಮಿಗಳು ಮಾತೃಯೋನಿಯನ್ನು ಸೇರುವ ಮುನ್ನ ರೇತಸ್ಸನ್ನು ಇಡುವ ತಂದೆಗಳ ಸಂಪರ್ಕವನ್ನು ಪಡೆಯುತ್ತಾರೆ; ಆನಂತರ ಮಾತೃ ಶರೀರವನ್ನು ಸೇರುತ್ತಾನೆ.)" ಎಂದು ಹೇಳಿರುತ್ತಾರೆ. ವೈರಾಗ್ಯವು ಹುಟ್ಟುವದಕ್ಕಾಗಿ ಈ ಜೀವರ ಗತಿಗಳನ್ನು ಹೇಳಲಾಗಿರುತ್ತದೆ. "ಇದಕ್ಕಾಗಿಯೇ ಈ ಪಂಚಾಗ್ನಿ ವಿದ್ಯೆಯನ್ನು ಹೊಂದುತ್ತಾರೆ" ಎಂದು ಶರ್ಕರಾ ಟಿಪ್ಪಣೀಕಾರರು ಹೇಳಿರುತ್ತಾರೆ. ಈ ಟಿಪ್ಪಣೀಕಾರರು-ಟೀಕಾಕಾರರು ಉದಾಹರಿಸಿದ ಉಪನಿಷತ್ತುಗಳೇ ಈ ಪಂಚಮಹಾಯಜ್ಞ ಸಂಧಿಗೆ ಮೂಲವಾಗಿರುತ್ತವೆ. ಹೀಗೆ ಹೃದಯದಲ್ಲಿ ರಹಸ್ಯವನ್ನಿಟ್ಟು ಶ್ರೀ ಜಗನ್ನಾಥದಾಸವರ್ಯರು ಈ ಸಂಧಿಯನ್ನು ಉಪಕ್ರಮಿಸಿರುತ್ತಾರೆ. ಇದರಲ್ಲಿ ಅವಿಶ್ವಾಸವನ್ನು ಉಪನಂಬಿಗೆಯನ್ನು ತಾಳಿದವರು "ಕಿಮನ್ಯೈಃ ಪಶುಸನ್ನಿಭೈಃ" (ಪಶುಗಳಂತಿರುವ ಮಿಕ್ಕ ಅಜ್ಞಾನಿಗಳಿಂದೇನು?) ಎಂಬ ಶ್ರೀ ಟೀಕಾಕಾರರ ನಿಂದೆ (ಬೈಯ್ಯುವಿಕೆ)ಗೆ ಒಳಪಟ್ಟವರ ಸಾಲಿನಲ್ಲಿ ಕುಳಿತ

ವರು; ಆದುದರಿಂದ ಅವರಿಗೆ ಉದಾಸೀನತೆಯೇ ಯುಕ್ತವಾದುದು, ಎಂಬ ಅಭಿಪ್ರಾಯವನ್ನು ಬಚ್ಚಿಟ್ಟು ಹೇಳುತ್ತಾರೆ "ಜನನಿ" ಎಂಬ ಪದ್ಯದಿಂದ ||೧||

**ಅವತರಣಿಕಾ :** ದೇವತೆಗಳು ಜೀವನನ್ನು ಆಕಾಶದಲ್ಲಿ ತಂದಿಟ್ಟಾಗ್ಗೆ ಆಕಾಶವೇ (ಗಗನ) ಅಗ್ನಿ. ಈ ಅಗ್ನಿಗೆ ೬ ವಿಧವಾದ ಪದಾರ್ಥಗಳಾದುವು. ಈ ಪಂಚಾಗ್ನಿಯಲ್ಲಿ ಹೋಮಿಸುವ ಕ್ರಮವನ್ನು ಹೇಳುತ್ತಾರೆ.




**ಮೂಲ :**

**ಗಗನ ಪಾವಕ ಸಮಿಧಿ ರವಿ ರ |**
**ಶ್ಮಿಗಳೆ ಧೂಮವು ಅರ್ಚಿ ಎನಿಪುದು |**
**ಹಗಲು ನಕ್ಷತ್ರಗಳು ಕಿಡಿಗಳು ಚಂದ್ರಮಾಂಗಾರ ||**
**ಮೃಗ ವರೋದರನೊಳಗೆ ಐರೂ |**
**ಪಗಳ ಚಿಂತಿಸಿ ಭಕ್ತಿರಸ ಮಾ |**
**ತುಗಳೆ ಮಂತ್ರವಮಾಡಿ ಹೋಮಿಸುವರು ವಿಪಶ್ಚಿತರು || ೨ ||**

ಛಾಂದೋಗ್ಯದಲ್ಲಿಯೂ ಇದೆ. (ಮೂಲ ಪ್ರತಿಯಲ್ಲಿ ಬೃಹದಾರಣ್ಯ ಉಪನಿಷತ್ ವಾಕ್ಯ ಕೊಟ್ಟದೆ. "ಅಸೌವಾವ ಲೋಕೋಗೌತುಮಾಗ್ನಿ ಸ್ತಸ್ಯಾದಿತ್ಯ ಏವ ಸಮಿತ್=ರವಿ, ರಶ್ಮಯೋ ಧೂಮೋ ಅಹರರ್ಚಿಶ್ಚಂದ್ರ ಮಂಗಾರ ನಕ್ಷತ್ರಾಣಿ ವಿಸ್ಫುಲಿಂಗಾ ತಸ್ಮಿನ್ನೇ ತಸ್ಮಿನ್ನಗ್ನಾ ದೇವಾ | ಶ್ರದ್ಧಾಂಜುಹ್ವತಿ ತಸ್ಯಾ ಆಹುತೇ ಸೋಮೋರಾಜಾ ಸಂಭವತಿ || ಬೃ. ಉ. ಅ. ೮. ಮಂತ್ರ (೯).

**ಪದ್ಯಾರ್ಥ :** ಗಗನ=ಆಕಾಶವೇ, ಪಾವಕ=ಅಗ್ನಿಯೇ ೧) ನಾರಾಯಣ-ರವಿ, ಸಮಿಧಿ=ಕಾಷ್ಟಗತ ರೂಪ ೨) ನಾರಾಯಣ-ನಾರಾಯಣ ರಶ್ಮಿ=ಕಿರಣಗಳೇ ಧೂಮ. ನಾರಾಯಣ ವಾಸುದೇವ. ಹಗಲು=ಅರ್ಚಿ (ಉರಿ) ಎನಿಸುವದು (೪). ನಾರಾಯಣ-ಸಂಕರ್ಷಣ, ನಕ್ಷತ್ರಗಳೇ=ಕಿಡಿಗಳು. ಇಲ್ಲಿ (೫) ನಾರಾಯಣ ಪ್ರದ್ಯುಮ್ನ, ಚಂದ್ರಮ=ಅಂಗಾರ (ಕೆಂಡ) ಇಲ್ಲಿ (೬) ನಾರಾಯಣ ಅನಿರುದ್ಧ ಈ ಪ್ರಕಾರ ಗಗನವೆಂಬ ಅಗ್ನಿಗತ ಪಂಚ ರೂಪಗಳನ್ನು ಮೃಗವರೋದರ=ಮೃಗ-ಶಶವೆ ಕಲಾ ಉದರದಲ್ಲಿ ಉಳ್ಳ, ಅಂದರೆ ಶಶಾಂಕನಾದ ಚಂದ್ರನಲ್ಲಿ ಈ ನಾರಾಯಣಾದಿ ಐದು ರೂಪಗಳನ್ನು

ಚಿಂತಿಸುತ್ತ, ಭಕ್ತಿರಸ ಮಾತುಗಳ=ಭಕ್ತಿ ಮಾಹಾತ್ಮ್ಯ ಜ್ಞಾನಪೂರ್ವಕವಾಗಿ ಭಗವಂತನಲ್ಲಿ ಪ್ರೀತಿಯುಕ್ತವಾದ ಮಾತುಗಳೇ=ಮಂತ್ರಗಳು. ಈ ಪ್ರಕಾರ ವಾಗಿ, ವಿಪಶ್ಚಿತರು ಜ್ಞಾನಿಗಳು ಹೋಮಿಸುವರು. ದೇವತೆಗಳು ಜೀವ ನನ್ನು ಆಕಾಶದಲ್ಲಿಡುವಾಗ್ಗೆ, ಗಗನಗತ-ಅಗ್ನಿಯಲ್ಲಿ ಯಜ್ಞತ್ವೇನ ಸಮರ್ಪಣೆ ಮಾಡುವರು.

**ವಿಶೇಷ ಸೂಚನೆ :** "ಆಕಾಶೋಗ್ನಿ ಸವಿತ್ ಸೂರ್ಯೋ, ಧೂಮಃ ಕಿರಣ ಮಂಡಲಂ । ದಿವಾರ್ಚಿತಾಸ್ತಾರಕಾ ತತ್ರ ವಿಸ್ಫುಲಿಂಗಾ ಪ್ರಕೀ ರ್ತಿತಾಃ । ಚಂದ್ರಾಂಗಾರೋ ವಚೋಮಂತ್ರಾಃ ರತೋಭಕ್ತಿರಿತಿಸ್ಮರನ್ ॥ ಪಂಚರೂಪಾಣಿ ವಿಷ್ಣೋಶ್ಚ ಚಂದ್ರೇ ಹೂಯಂತಿ ಜ್ಞಾನಿನಃ ॥ ನಾರಾ ಯಣಾದಯಃ ಪಂಚಾ । ಕ್ರಮಾತ್ ಪಂಚಾಗ್ನಯಾಸ್ಮೃತಃ ॥ ಅದನಾ ದಂಗನೇತೃತ್ವಾನ್ನಿತರಾರಿ ಬಲತ್ವತಃ ॥ ೫ ॥ ಸರ್ವೇಧಾನಾ ಸ್ತಮಿದ್ವಿಷ್ಣು ಧೂತ್ಕಾರಾ ಧೂಮ ಉಚ್ಯತೇ । ಅರಂಚಿತತ್ವಾದರ್ಚಿಶ್ಚ ಸೋಂಗಾರೋಂಗ ರತೇರಪಿ ॥ ೬ ॥ ವಿವಿಧಂ ಸ್ಫುರಣಾಚ್ಚೈವ ವಿಸ್ಫುಲಿಂಗ ಇತೀರಿತಃ ॥ ಏವ ಮೇತೇಷು ಪಂಚಾತ್ಮಾ ವರ್ತತೇ ಸಾವಚಿಂತಯೇತ್ ॥ ೭ ॥

**ನೋಟ್ :** ಈ ಪ್ರಮಾಣಗಳಲ್ಲಿ ಅರ್ಥ ವಿಶದವಾಗಿ ವ್ಯಾಸದಾಸ ಸಿದ್ಧಾಂತ ಕೌಮುದೀ ಟೀಕಾದಲ್ಲಿ ಕೊಟ್ಟಿರುತ್ತಾರೆ. ಮುಂದೆ ಟೀಕಾ ನೋಡುವದು.

**ದ್ರೌಪದೀಶಪತಿ ವಿಠಲರು :** ಗಗನ ಪಾವಕ-ಅಗ್ನಿ ನಾರಾಯಣ, ೧) ಆಕಾಶ=ಅಗ್ನಿ=ನಾರಾಯಣ-ನಾರಾಯಣ; ೨) ಸೂರ್ಯ ರಶ್ಮಿ= ಧೂಮ, ನಾರಾಯಣ ವಾಸುದೇವ, ೩) ಹಗಲು=ಉರಿ=ನಾರಾಯಣ ಸಂಕರ್ಷಣ, ೪) ನಕ್ಷತ್ರ=ಕಿಡಿ, ನಾರಾಯಣ ಪ್ರದ್ಯುಮ್ನ, ೫) ಚಂದ್ರಮ= ಕೆಂಡ ನಾರಾಯಣ ಅನಿರುದ್ಧಃ ॥ ಮೃಗವರೋದರನೊಳಗೆ ಐರೂಪಗಳ ಚಿಂತಿಸಿ ಅಂದರೆ ಚಂದ್ರಾಂತರ್ಗತ ಐದು ರೂಪ ॥ ೨ ॥

**ಭಾವಸೂಚನ :** ಗಗನೇತಿ । ಮೃಗವರೋದರ=ಚಂದ್ರ ॥ ೨ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ತತ್ರಾದ್ಯಾಗ್ನಿಂ ನಿರ್ದಿಶತಿ ಅನುವದತಿ ಚ ತತ್ಕಲಾಪಸಮ್ ಗಗನೇತಿ ॥ ಪಂಚಮೇ ಛಾಂದೋಗ್ಯ ಖಂಡೇ ಚ ಉಕ್ತಮೇತತ್ ॥ ತಥಾಹಿ ಅಸೌ ವಾ

ವ ಲೋಕೇ ಗೌತಮಾಗ್ನಿಃ । ತಸ್ಯಾದಿತ್ಯ ಏವ ಸಮಿತ್ ॥ ರಶ್ಮಯಃ ಧೂಮಃ ॥ ಅಹರರ್ಚಿಃ ಚಂದ್ರಮಾ ಅಂಗಾರಃ। ನಕ್ಷತ್ರಾಣಿ ವಿಸ್ಫುಲಿಂಗಾಃ॥ ತಸ್ಮಿನ್ ಏತಸ್ಮಿನ್ ಅಗ್ನೌ ದೇವಾಃ ಶ್ರದ್ಧಾಂ ಜುಹ್ವತಿ ॥ ತಸ್ಯಾ ಆಹುತೇಃ ಸೋಮೋ ರಾಜಾ ಸಂಭವತಿ ॥ ಏತದ್ಭಾಷ್ಯಮ್ ॥ ನಾರಾಯಣಾದಯಃ । ಪಂಚ ಕ್ರಮಾತ್ ಪಂಚಾಗ್ನಯಃ ಸ್ಮೃತಾಃ॥ ಅದನಾತ್ ಅಂಗನೇತೃತ್ವಾತ್ ನಿತರಾಂ ಅಚಲತ್ವತಃ ॥ ಸಮೇಧನಾತ್ ಸಮಿತ್ ವಿಷ್ಣುಃ ಧೂತ್ಕಾರಾತ್ ಧೂಮ ಉಚ್ಯತೇ ॥ ಅರಂಚಿತತ್ವಾತ್ ಅರ್ಚಿಶ್ಚ ಸೋಽಂಗಾರೋಽಂಗರತೇ ರಪಿ ॥ ವಿವಿಧಂ ಸ್ಫುರಣಾಚ್ಚೈವ ವಿಸ್ಫುಲಿಂಗ ಇತೀರಿತಃ ॥ ಮೃಗವರೋ ದರಃ ಚಂದ್ರಃ ॥ ಸೋಮೋ ರಾಜಾ" ಇತ್ಯುಕ್ತೇಃ ॥ ಐರೂಪೇತಿ ॥ ನಾರಾ ಯಣ ನಾರಾಯಣ ಕ್ರಮೇಣ । ಏತಚ್ಚ ವಕ್ಷ್ಯಾಮಃ ॥ ಹೋಮಿಸುವರು ಹುತೋಽಭವಿಷ್ಯತೀತಿ ಚಿಂತನಮ್ ॥ ಲಯಚಿಂತನವತ್ ॥ ನೂನಂ ತು "ಪುನರ್ನಾರಾಯಣಾದ್ಯಾತ್ಮಾ ಪ್ರತ್ಯೇಕಂ ಪಂಚರೂಪವಾನ್ ॥ ರವಿಃ ರಶ್ಮಯಃ ಇತ್ಯತ್ರ "ಆದಿತ್ಯಃ ಸ ತಥಾಽದಾನಾತ್ ರಶ್ಮೀ ರತಿಶ ರೂಪತಃ ॥ ತಮಸಾ ಅಹನೀಯತ್ವಾತ್ ಅಹಃ ॥ ಚಂದ್ರಃ ಪರಂ ಸುಖಮ್ ॥ ಅನನ್ಯ ರಾಜೋ ನಕ್ಷತ್ರಮ್ ॥ ೨ ॥

## ಕನ್ನಡಾರ್ಥ

ಐದು ಅಗ್ನಿಗಳಲ್ಲಿ ಮೊದಲನೆಯ ಅಗ್ನಿಯನ್ನು ನಿರ್ದೇಶಿಸುತ್ತಾರೆ- "ಗಗನ" ಎಂಬ ಪದ್ಯದಿಂದ ಛಾಂದೋಗ್ಯೋಪನಿಷತ್ತಿನ ಐದನೆಯ ಖಂಡದಲ್ಲಿ ಈ ಪಂಚಾಗ್ನಿ ವಿದ್ಯೆಯನ್ನು ಹೇಳಿರುತ್ತಾರೆ. ಅದನ್ನೇ ಇಲ್ಲಿ ಉದಾಹರಿಸು ತ್ತಾರೆ. ಪಂಚಾಗ್ನಿ ವಿದ್ಯಾರಂಭದಲ್ಲಿ ಛಾಂದೋಗ್ಯದಲ್ಲಿ ಉಪಷ್ಟಂಭಕ ರೂಪವಾಗಿ ಕಥೆಯನ್ನು ಹೇಳಿರುತ್ತಾರೆ. ಆ ಕಥೆಯನ್ನು ವ್ಯಾಖ್ಯಾನ ಕಾರರು ಉದಾಹರಿಸಿರುವದಿಲ್ಲವಾದರೂ ಅನುವಾದವು ಸುಗಮವಾಗಲು ಇಲ್ಲಿ ಉದಾಹರಿಸುತ್ತೇವೆ.

"ಆರಣಿ"ಯ ಮಗನಾದ "ಶ್ವೇತಕೇತು" ಎಂಬ ಕುಮಾರನು ಪಾಂಚಾಲರಾಜನ ಸಭೆಗೆ ಬಂದನು. ಜಾಬಾಲಿಯ ಮಗನಾದ "ಪ್ರವಾ ಹಣ"ನೆಂಬ ರಾಜನು "ಎಲೋ ಕುಮಾರನೇ ನಿನಗೆ ತಂದೆಯು ವಿದ್ಯೆಯನ್ನು ಕಲಿಸಿರುವನಷ್ಟೇ ?" ಎಂದು ಪ್ರಶ್ನಿಸಿದನು. ಅದಕ್ಕೆ ಶ್ವೇತಕೇತು "ಅಹುದು;

ವಿದ್ಯೆ ಕಲಿಸಿರುವನು" ಎಂದು ಉತ್ತರಿಸಿದನು. ಪ್ರವಾಹಣನು ಶ್ವೇತಕೇತು ವಿಗೆ ೫ ಪ್ರಶ್ನೆಗಳನ್ನು ಮಾಡಿದನು. ಅವುಗಳನ್ನು ಉತ್ತರಿಸಲು ಅಸಮರ್ಥ ನಾದ ಶ್ವೇತಕೇತುವು ತನ್ನ ತಂದೆಯ ಹತ್ತಿರ ಬಂದು "ನೀನು ನನಗೆ ತತ್ವ ವಿದ್ಯೆಯನ್ನು ಉಪದೇಶಿಸಿರುವದಿಲ್ಲ. ಆ ಪಾಂಚಾಲರಾಜನು ಆ ಪ್ರಶ್ನೆ ಗಳನ್ನು ಮಾಡಿರುತ್ತಾನೆ. ನನಗೆ ಉತ್ತರಿಸಲಾಗಲಿಲ್ಲ; ಹಾಗೆಯೇ ನಿನ್ನಲ್ಲಿ ಬಂದಿರುತ್ತೇನೆ. ನೀನು ಆ ಪ್ರಶ್ನೆಗಳಿಗೆ ಉತ್ತರ ಹೇಳು" ಎಂದು ಪ್ರವಾಹ ಣನು ಮಾಡಿರುವ ಪ್ರಶ್ನಗಳನ್ನು ಹೇಳಿದನು. ಆ ಪ್ರಶ್ನಗಳಿಗೆ ಉತ್ತರ ಕೊಡಲು ಅಸಮರ್ಥನಾದ ಶ್ವೇತಕೇತುವಿನ ತಂದೆಯು ತನ್ನ ಅಜ್ಞಾನವನ್ನು ಒಪ್ಪಿ ಪ್ರವಾಹಣರಾಜನ ಬಳಿಗೆ ಬರುತ್ತಾನೆ. ಶ್ವೇತಕೇತುವಿನ ತಂದೆಗೆ "ಗೌತಮ" ಎಂದು ಸಂಬೋಧಿಸಿರುತ್ತದೆ. ಗೌತಮನಿಗೆ ಸ್ವಾಗತ ಸತ್ಕಾರ ವನ್ನು ಪ್ರವಾಹಣನು ಮಾಡಿದನು. ಮರುದಿನ ಪ್ರಾತಃಕಾಲದಲ್ಲಿ ಗೌತಮನು ಕಾಣಿಕೆಯೊಂದಿಗೆ ರಾಜನ ಬಳಿಗೆ ಬಂದು ಆ ಕಾಣಿಕೆಯ ದ್ರವ್ಯವನ್ನು ಮುಂದಿಟ್ಟನು. ಅದಕ್ಕೆ ರಾಜನು "ಈ ಕಾಣಿಕೆಗೆ ಸಕಲ ಸೌಭಾಗ್ಯ ಸಂಪತ್ತು ಮುಂತಾದ ಐಶ್ವರ್ಯವನ್ನೀಯುವೆನು; ವರವನ್ನು ಕೇಳು!" ಎನ್ನಲು, ಗೌತಮನು ಅದನ್ನೆಲ್ಲ ನಿರಾಕರಿಸಿ "ಶ್ವೇತಕೇತುವಿಗೆ ಮಾಡಿದ ಪ್ರಶ್ನೆಗಳನ್ನು ಬಿಡಿಸಿ ಅರ್ಥವನ್ನು ಉಪದೇಶಿಸಬೇಕು!" ಎಂದು ಕೇಳಿ ಕೊಳ್ಳುತ್ತಾನೆ. ಆಗ ರಾಜನು ಕೆಲವು ದಿವಸ ತನ್ನಲ್ಲಿ ಇಟ್ಟುಕೊಂಡು ಸಂವತ್ಸರ ವ್ರತವು ಮುಗಿದನಂತರ ಐದೂ ಪ್ರಶ್ನೆಗಳಿಗೆ ಉತ್ತರವನ್ನು ಉಪದೇಶಿಸುತ್ತಾನೆ.

ಐದು ಪ್ರಶ್ನೆಗಳಿಗೆ ಏಳು ಖಂಡಗಳಿಂದ ಉತ್ತರ ಹೇಳುತ್ತಾನೆ. ಪ್ರಶ್ನೆಗಳಿಗೆ ಕ್ರಮ ವ್ಯತ್ಯಾಸಮಾಡಿ ಕೊನೆಯದಕ್ಕೆ ಮೊದಲು ಉತ್ತರ ಕೊಡುತ್ತಾನೆ.

"ಹೇ ಶ್ವೇತಕೇತುವೇ! ಯಾವ ಕ್ರಮದಿಂದ ಯಾವ ತರಹದಿಂದ "ದ್ಯು ಪರ್ಜನ್ಯ ಭೂಮಿ ಪುರುಷ ಸ್ತ್ರೀ" ಎಂಬ ಆಹುತಿಗೆ ಆಧಾರ ಸ್ಥಾನ ಗಳಾದ ಈ ಪಂಚಾಗ್ನಿಗಳ ಮಧ್ಯದಲ್ಲಿ ಕೊನೆಯದಾದ "ಸ್ತ್ರೀ" ಎಂಬ ಅಗ್ನಿ ಯಲ್ಲಿ ರೇತಸ್ಸೆಂಬ ಹವಿರಾಹುತಿಯನ್ನು ಹಾಕಲು ಜಲಸಂಬದ್ಧ ಅಂದರೆ ಪಂಚಮಹಾಭೂತ ಬದ್ಧನಾದ ಜೀವನು ದೇಹವನ್ನು ಹೊಂದಿ ಪುರುಷನಾನು

ವುಳ್ಳವನು ಆಗುತ್ತಾನೆ? ಈ ಜೀವನು ಯೋಷಿದಗ್ನಿಯಲ್ಲಿ ರೇತೋ ಮಾರ್ಗ ವಾಗಿ ಬಿದ್ದು ದೇಹ ಹೊಂದಿ ಪುರುಷನೆಂದು ನಾವು ಪಡೆಯುವ ಕ್ರಮ ಹಾಗೂ ಪ್ರಕಾರಗಳನ್ನು ನೀನು ಬಲ್ಲೆಯಾ?" ಎಂದು ಶ್ವೇತಕೇತುವಿಗೆ ಕೇಳಿದ ರಾಜನ ಪ್ರಶ್ನೆಯಿದು.

ರಾಜನು ಗೌತಮನಿಗೆ ಈ ಪ್ರಶ್ನೆಯ ಉತ್ತರವನ್ನು ಹೇಳುತ್ತಾನೆ. "ಅಸೌವಾವ" ಎಂಬ ಉಪನಿಷದ್ವಾಕ್ಯದಿಂದ. ದ್ಯುಲೋಕದಲ್ಲಿರುವ ನಾರಾಯಣನು "ಅಸೌಲೋಕಃ" ಎನ್ನಿಸಿಕೊಳ್ಳುತ್ತಾನೆ. ಅಸುಗಳಲ್ಲಿ ಪ್ರಾಣಿ ಜೀವರಲ್ಲಿ ಇರುವದರಿಂದಲೂ ಪ್ರಕಾಶರೂಪನಾದುದರಿಂದಲೂ, ನಾರಾಯಣನು "ದ್ಯು" ಎಂದೂ "ಅಸೌಲೋಕ" ಎಂದೂ ಕರೆಯಲ್ಪಡುತ್ತಾನೆ. ಈ ನಾರಾಯಣನು "ದ್ಯು" ಅಗ್ನಿಯು, ಜಗತ್ತನ್ನು ಅದನ-ತಿನ್ನುವದರಿಂದಲೂ, ಅಂಗಗಳನ್ನು ಪ್ರೇರಿಸುವದರಿಂದಲೂ ನಾರಾಯಣನೇ ಅಗ್ನಿ ಶಬ್ದಕ್ಕೆ ಮುಖ್ಯ ವಾಚ್ಯನು. ದ್ಯುಲೋಕದಲ್ಲಿರುವ ನಾರಾಯಣನಿಗೆ "ಆ ದಾನ ಮಾಡುವನು-ಸರ್ವವನ್ನು ಸ್ವೀಕರಿಸುವನು" ಆದುದರಿಂದ ಆದಿತ್ಯನೆಂದು ಕರೆಯಲ್ಪಡುವ ಆದಿತ್ಯನಲ್ಲಿರುವ ನಾರಾಯಣ ನಾರಾಯಣನು-ಸಮಿತ್-ಸವ್ ಯಾವಾಗಲೂ ಅಧಿಕವಾಗಿ, ಏಧನಾತ್ ವೃದ್ಧಿಯನ್ನು ಹೊಂದಿದವನು ಆದುದರಿಂದ "ಸಮಿಧೆ" ಎಂದು ಕರೆಯಲ್ಪಡುತ್ತಾನೆ. "ದ್ಯು" ಅಗ್ನಿಗೆ ರಶ್ಮಿಗಳು=ಹೊಗೆಗಳು. ಅಂದರೆ ರತಿ ಹಾಗೂ ಸುಖ ಸ್ವರೂಪನಾದುದರಿಂದ "ರಶ್ಮಿ" ಶಬ್ದ ವಾಚ್ಯನಾದ ನಾರಾಯಣ ವಾಸುದೇವನು "ಧೂಮನು. ಅಜ್ಞಾನ ಮುಂತಾದವುಗಳನ್ನು ಧೂತ್ಕರಿಸು-ನಿವಾರಿಸುವದರಿಂದ "ಧೂಮ" ಶಬ್ದ ವಾಚ್ಯನು. ತಮಸ್ಸಿನಿಂದ ಸಂಪರ್ಕವಿಲ್ಲದ ಅತಿ ದೂರದಲ್ಲಿರುವದರಿಂದ ಅಥವಾ ತಮಸ್ಸಿನಿಂದ ಪ್ರತಿಹತನಾಗುವದಿಲ್ಲವಾದುದರಿಂದ "ಅಹಃ" ಶಬ್ದವಾಚ್ಯನಾದ ನಾರಾಯಣ ಸಂಕರ್ಷಣನು "ಅರ್ಚಿಃ" (ಜ್ವಾಲಾ) ಅಂದರೆ ಅರಂಚಿತನಾದುದರಿಂದ ನಿರ್ವಿಕಾರ ತೇಜೋರೂಪನಾದುದರಿಂದ "ಅರ್ಚಿ" ಎಂದು ಕರೆಯಿಸಿಕೊಳ್ಳುತ್ತ ಅರ್ಚಿಯಲ್ಲಿ (ಜ್ವಾಲೆಯಲ್ಲಿ) ಇರುತ್ತಾನೆ. "ದ್ಯು" ಅಗ್ನಿಗೆ-ಚಂದ್ರನು ಅಂಗಾರ (ಆರಿದ ಕೆಂಡ),-ಅಂದರೆ ಸುಖಮಯ ಸ್ವರೂಪನಾದುದರಿಂದ "ಚಂದ್ರ" ಶಬ್ದ ವಾಚ್ಯನು ನಾರಾಯಣ ಪ್ರದ್ಯುಮ್ನನು. "ಅಂಗಾರ"=ಅಂಗಗಳಲ್ಲಿ

ರಮಿಸುವ ಕಾರಣದಿಂದ "ಅಂಗಾರ" ಎಂದು ಕರೆಯಲ್ಪಡುತ್ತಾನೆ. ನಕ್ಷತ್ರ= ಅನ್ಯ ನಿಯಾಮಕರಿಲ್ಲದ ತನಗೆ ತಾನೇ ರಾಜನಾಗಿರುವ ಕಾರಣ "ನಕ್ಷತ್ರ" ಶಬ್ದ ವಾಚ್ಯನಾದ ನಕ್ಷತ್ರಗತನಾದ ನಾರಾಯಣಾನಿರುದ್ಧನು "ವಿಸ್ಫು ಲಿಂಗನು", ಅಂದರೆ ಮತ್ಸ್ಯ ಮುಂತಾದ ವಿವಿಧ ರೂಪಗಳಿಂದ ಪ್ರಕಾಶಿ ಸುವದರಿಂದ "ವಿಸ್ಫುಲಿಂಗ" ಎಂದು ಕರೆಯಿಸಿಕೊಳ್ಳುತ್ತಾನೆ.

ಇಂಥ "ದ್ಯು"ಲೋಕಸ್ಥ "ದ್ಯು" ಎಂದು ಕರೆಯಲ್ಪಡುವ ನಾರಾಯಣ ರೂಪಿ ಅಗ್ನಿಯಲ್ಲಿ (ಜೀವ ಹವಿಸ್ಸಿನ ಹೋಮಕ್ಕೆ ಆಧಾರವಾದುದರಿಂದ ಅಗ್ನಿ ಯೆನ್ನುತ್ತಾರೆ.) ದೇವತೆಗಳು ಶ್ರದ್ಧಾಪೂರ್ವಕವಾಗಿ ಯಜ್ಞಮಾಡುವ ಯಜಮಾನನನ್ನು ಭೂ ಜಲ ತೇಜೋ ಮುಂತಾದ ಪಂಚಭೂತಯುಕ್ತ ಜೀವನನ್ನು ಹಾಕುತ್ತಾರೆ-ಹೋಮಿಸುತ್ತಾರೆ (ಇಡುತ್ತಾರೆ). ದ್ಯುಲೋಕಾಗ್ನಿ ಎನಿಸಿರುವ ಹೋಮಾಧಾರ ದ್ಯುಲೋಕಸ್ಥ ನಾರಾಯಣನ ದಶೆಯಿಂದ (ದ್ಯುಲೋಕದಿಂದ) ಆ ಜೀವರೂಪ ಆಹುತಿಯನ್ನು ಸೋಮನ (ಚಂದ್ರನ) ಬಳಿಗೆ ಕಳಿಸುತ್ತಾರೆ.

ಈ ಉಪನಿಷತ್ತಿನ ಭಾಷ್ಯದಲ್ಲಿಯೂ ಸಹ ಇದೇ ವಿಷಯವು ನಿರೂಪಿತ ವಾಗಿರುತ್ತದೆ. "ನಾರಾಯಣನಿಂದ ಆರಂಭಿಸಿದ ಐದು ರೂಪಗಳು ಕ್ರಮ ದಿಂದ ಪಂಚಾಗ್ನಿಗಳೆನಿಸಿಕೊಂಡಿರುತ್ತವೆ. ಅದನ-ಜಗತ್ತನ್ನು ತಿನ್ನು (ಭಕ್ಷಿಸು-ಸಂಹರಿಸು)ವದು ೧) ಅವಯುವಗಳನ್ನು ಪ್ರೇರಿಸುವದರಿಂದ ೨) ಅತಿ ಶಯ ಅಚಲವಾದುದರಿಂದ ೩) ಈ ಕಾರಣಗಳಿಂದ ನಾರಾಯಣನು "ಅಗ್ನಿ" ಯೆನಿಸಿರುತ್ತಾನೆ. ನಿತ್ಯಾತಿ ವೃದ್ಧನಾದುದರಿಂದ ವಿಷ್ಣುವು "ಸಮಿತ್" ಎನಿಸಿಕೊಳ್ಳುತ್ತಾನೆ. ಅಜ್ಞಾನ ಮುಂತಾದವುಗಳನ್ನು ಧೂತ್ಕರಿಸುವದರಿಂದ "ಧೂಮ" ಎಂದೆನಿಸಿಕೊಳ್ಳುತ್ತಾನೆ. ಅರಂಚಿತನಾದುದರಿಂದ ನಿರ್ವಿಕಾರ ತೇಜೋರೂಪನಾದುದರಿಂದ ವಿಷ್ಣುವೇ ಅರ್ಚಿಯೆನಿಸಿಕೊಳ್ಳುತ್ತಾನೆ. ಅಂಗ ಗಳಲ್ಲಿ ರಮಿಸಿ ರತಿಗೆ ಕಾರಣನಾದುದರಿಂದ "ಅಂಗಾರ" ಎಂದು ಕರೆಯಲ್ಪಡು ತ್ತಾನೆ. ವಿವಿಧ ರೂಪಗಳಿಂದ ಸ್ಫುರಿತನಾಗುವದರಿಂದ "ಸ್ಫುಲಿಂಗ" ಶಬ್ದ ವಾಚ್ಯನು" ಎಂದು ಭಾಷ್ಯ ವಾಕ್ಯಗಳ ಅರ್ಥವನ್ನು ತಿಳಿಯಬೇಕು. ಸೋಮನು (ಚಂದ್ರ)ನು ರಾಜನೆಂದು ಹೇಳಿರುವದರಿಂದ ಮೃಗವರೋದರನು ಚಂದ್ರನು. "ಐರೂಪಗಳನ್ನು ಚಿಂತಿಸಬೇಕು" ಎಂಬಲ್ಲಿ ನಾರಾಯಣಾದಿ ಕ್ರಮವನ್ನು

ತಿಳಿಯಬೇಕು. ಆ ಕ್ರಮವನ್ನು ಮುಂದೆ ಹೇಳುವೆವು. ಹೋಮಿಸುವರು.- ಅಂದರೆ ಲಯ ಚಿಂತನವನ್ನು ಮಾಡುವಂತೆ "ಹುತೋ ಭವತಿ" ಎಂದು ಚಿಂತಿಸುತ್ತಾರೆ. ಇದಕ್ಕೆ ಭಾಷ್ಯ ವಾಕ್ಯಗಳೇ ಪ್ರಮಾಣ. ನಾರಾಯಣ ನಾರಾಯಣ ಎಂದು ಮುಂತಾದ ಐದು ರೂಪಗಳುಳ್ಳ ಹರಿಯು ಪ್ರತ್ಯೇಕ ರೂಪಗಳಿಂದ ಒಂದೊಂದರಲ್ಲಿ ಇರುತ್ತಾನೆ. "ರವಿಯು-ರಶ್ಮಿಯು" ಎಂಬಲ್ಲಿ "ಆದಾನ-ಸ್ವೀಕರಿಸು", ಇದರಿಂದ "ಆದಿತ್ಯನು" ರತಿ ಹಾಗೂ ಸುಖಪೂರ್ಣ ನಾದುದರಿಂದ "ರಶ್ಮಿ"ಯು. ತಮಸ್ಸಿನಿಂದ ಅಪ್ರತಿಹತನಾದುದರಿಂದ "ಅಹಃ" ಅತಿ ಸುಖಸ್ವರೂಪನಾದುದರಿಂದ "ಚಂದ್ರನು". ಅನ್ಯರಾಜ (ನಿಯಾಮಕ) ರಿಲ್ಲದಿರುವದರಿಂದ "ನಕ್ಷತ್ರನು". ಹೀಗೆ ಒಂದೊಂದು ಶಬ್ದವನ್ನೂ ನಿರ್ವಚನ ಮಾಡುವ ಭಾಷ್ಯ ವಾಕ್ಯಗಳೇ ಈ ವಿಷಯದಲ್ಲಿ ಪ್ರಮಾಣವೆಂದು ತಿಳಿಯ ಬೇಕು ‖ ೨ ‖

ಅವತರಣಿಕಾ: ಇನ್ನು ಜೀವನನ್ನು ದೇವತೆಗಳು ಪಾರಿದ ಮೇಘ ದ್ವಾರಾ ಮಳೆಯಲ್ಲಿಡುವರು. ಇಲ್ಲಿ ಅಗ್ನಿಗತವಾದ ರೂಪಗಳನ್ನು ಹೋಮಿಸುವ ಕ್ರಮ (ವಿಧಾನ) ಹೇಳುತ್ತಾರೆ.

ಮೂಲ:

ಪಾವಕನು ಪರ್ಜನ್ಯ ಸನ್ನಿಧಿಯು ।
ಪ್ರಾವಹೀಪತಿ ಧೂಮಗಳು ಮೇ ।
ಘಾವಳಿಗಳರ್ಚಿ ಕ್ಷಣ ಪ್ರಭೆಗರ್ಜನವೆ ಕಿಡಿಯು ‖
ಭಾವಿಸುವದಂಗಾರ ಸಿಡಿಲೆಂ ।
ದೀವಿಧಾಗ್ನಿಯೊಳಬ್ಧಿ ಜಾತನ ।
ಕೋವಿದರು ಹೋಮಿಸುವರನುದಿನ ಪರಮ ಭಕುತಿಯಲಿ ‖೩‖

ಬೃ. ಉಪನಿಷತ್, ಅ. ೮, ಮಂತ್ರ ೧೦. ಪರ್ಜನ್ಯೋವಾವ ಗೌತ ಮಾಗ್ನಿ ತಸ್ಯ ವಾಯುರೇವ ಸಮಿದಭ್ರಂ ಧೂಮೋ ವಿದ್ಯುದರ್ಚಿರಶನಿ ರಂಗಾರಾಂ ಹ್ರಾ (ಹ್ರಾ)ದನಯೋ ವಿಸ್ಫುಲಿಂಗಾ ಸ್ತಸ್ಮಿನ್ನೇ ತಸ್ಮಿನ್ನಗ್ನಾ ದೇವಾ ಸೋಮಂ ರಾಜಾನಂ ಜುಹ್ವತಿ ತಸ್ಯಾ ಆಹುತೇ ವರ್ಷಃ ಸಂಭವತಿ. ಈ ಮಂತ್ರ ಛಾಂದೋಗ್ಯದಲ್ಲಿಯೂ, ಸಂಕ್ಷಿಪ್ತವಾಗಿ ಹೇಳಿದಾರೆ.

**ಪದ್ಯಾರ್ಥ :** ಪಾವಕನು ಪರ್ಜನ್ಯ=ಪರ್ಜನ್ಯ ಮಳೆ ಎಂಬುದೇ ಅಗ್ನಿ ಇಲ್ಲಿ ೧) ವಾಸುದೇವ ರೂಪ, ಪ್ರಾವಹೀಪತಿ=ಪ್ರವಾಹ ವಾಯುದೇವರ ಪತ್ನಿಗೆ ಪತಿಯಾದ ಪ್ರವಾಹ ವಾಯು (ಭೂತಾಭಿಮಾನಿ)ವೇ ಸಮಿಧಿ= ಕಾಷ್ಟ, ೨) ಇಲ್ಲಿ ವಾಸುದೇವ ನಾರಾಯಣ, ಮೇಘಾವಳಿಗಳೇ=ಮೋಡಗಳೇ ಧೂಮಗಳು=ಹೊಗೆಯು, ೩) ಇಲ್ಲಿ ವಾಸುದೇವ ವಾಸುದೇವ, ಅರ್ಚಿ (ಉರಿಯು) ವಿದ್ಯುತ್=ಮಿಂಚು ಇಲ್ಲಿ ೪) ವಾಸುದೇವ ಸಂಕರ್ಷಣ, ಕ್ಷಣ ಪ್ರಭೆ=ಮಿಂಚು. ಭಾವಿಸುವದಂಗಾರ ಸಿಡಿಲು, ಸಿಡಿಲು=ಕೆಂಡ, ಅಶನಿ ರಂಗಾರ ಸಿಡಿಲೇವೆ ಕೆಂಡ, ಇಲ್ಲಿ ೫) ವಾಸುದೇವ ಪ್ರದ್ಯುಮ್ನ, ಗರ್ಜನವೆ ಕಿಡಿಯೂ=ಮೇಘಗರ್ಜನ, (ಹ್ರಾದುನಯೋ ವಿಸ್ಫುಲಿಂಗಾಃ) ಇಲ್ಲಿ, ೬) ವಾಸುದೇವ ಅನಿರುದ್ಧ. ಈ ವಿಧವಾದ ಅಗ್ನಿಯಲ್ಲಿ ಕೋವಿದರು ಜ್ಞಾನಿಗಳು, ಅಬ್ಧಿ ಜಾತನ-ಚಂದ್ರನಲ್ಲಿ ಪರಮ ಉತ್ತಮವಾದ ಭಕುತಿ ಯಿಂದ ಜೀವನನ್ನು ಹೋಮ ಮಾಡುತ್ತಾರೆ. ಈ ವಿಧವಾಗಿ ವಾರಿದ ಪರ್ಜನ್ಯಾಗ್ನಿಯಲ್ಲಿ ಹೋಮ ಕ್ರಮ.

**ದ್ರೌಪದೀಶಪತಿ ವಿಠಲರು :** ಪಾವಕನು ಪರ್ಜನ್ಯ.

೧) ಪರ್ಜನ್ಯ=ಅಗ್ನಿ-ವಾಸುದೇವ.

೨) ವರುಣ (ವಾಯು)=ಸಮಿಧಿ-ವಾಸುದೇವ ನಾರಾಯಣ.

೩) ಮೇಘ=ಹೊಗೆ-ವಾಸುದೇವ ವಾಸುದೇವ.

೪) ಮಿಂಚು=ಉರಿ-ವಾಸುದೇವ ಸಂಕರ್ಷಣ.

೫) ಸಿಡಿಲು=ಕೆಂಡ-ವಾಸುದೇವ ಪ್ರದ್ಯುಮ್ನ.

೬) ಗರ್ಜನ=ಕಿಡಿ-ವಾಸುವೇವ ಅನಿರುದ್ಧ.

**ಭಾವಸೂಚನ :** ಪಾವಕೇತಿ । ಪ್ರಾವಹೀಪತಿ ಪ್ರವಾಹವಾಯು ॥ ಅಬ್ಧಿ ಜಾತ=ಸೋಮನಲ್ಲಿ ಜೀವನನ್ನು ಹೋಮಿಸುವರು ॥ ೩ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಪಾವಕೇತಿ ॥ ಪರ್ಜನ್ಯೋ ವಾವ ಗೌತಮ ಅಗ್ನಿಃ ॥ ತಸ್ಯ ವಾಯು ರೇವ ಸಮಿತ್ ॥ ಅಭ್ರಂ ಧೂಮಃ ॥ ವಿದ್ಯುದರ್ಚಿಃ ॥ ಅಶನಿರಂಗಾರಾ ಹ್ರಾದುನಯೋ ವಿಸ್ಫುಲಿಂಗಾಃ ॥ ತಸ್ಮಿನ್ ಏತಸ್ಮಿನ್ ಅಗ್ನೌ ಸೋಮಂ ॥ ರಾಜಾನಂ ಜುಹ್ವತಿ ॥ ತಸ್ಯ ಆಹುತೇಃ ವರ್ಷಃ ಸಂಭವತಿ ॥ ಛಾ. ೫.

೫, ೭ (೨-೫) ಶ್ರೀ ಭಗವತ್ಪಾದಾಶ್ಚ "ವಾಯುರ್ಜ್ಞಾನಾಯು ರೂಪತಃ ॥ ಅಭ್ರ ಮಭ್ಭರಣಾತ್ ವಿಷ್ಣುಃ ವಿದ್ಯುತ್ ವಿದ್ಯೋತನಾದಪಿ ॥ ಅಶನಾತ್ ಅಶನಿಶ್ಚೈವ ನಿಹ್ರಾದಾತ್ ಹ್ರಾದುನಿಃ ತಥಾ ॥ ಪ್ರಾವಹೀಪತಿಃ ಪ್ರವಹ ವಾಯುಃ ॥ ಕ್ಷಣಪ್ರಭಾ ವಿದ್ಯುತ್ ॥ ಅಬ್ಧಿಜಾತಃ ಸೋಮಃ ॥ ೩ ॥

## ಕನ್ನಡಾರ್ಥ

ಪರ್ಜನ್ಯನಾಮಕನಾದ ವಾಸುದೇವನು-ಮೇಘ ಸಮೂಹ (ಪರ್ಜನ್ಯ) ದಲ್ಲಿ ಇರುವನು. ಎಲ್ಲವೂ ಈ ವಾಸುದೇವನ ಸೇವಾರ್ಥವಾಗಿ ಜನಿಸುವದ ರಿಂದ ಪರಮಾತ್ಮನಿಗೆ "ಪರ್ಜನ್ಯ" ಎಂದು ಕರೆಯುತ್ತಾರೆ. ಅಥವಾ ಯಾವನಿಂದ ಶ್ರೇಷ್ಠರಾದ ಬ್ರಹ್ಮಾದಿಗಳು ಹುಟ್ಟುವವೋ (ರೋ) ಅವನು ಪರ್ಜನ್ಯನು; ಪರಮಾತ್ಮನು. ಹೇ ಗೌತಮುನೇ! ಪರ್ಜನ್ಯಗತ ಪರ್ಜನ್ಯ ಶಬ್ದ ವಾಚ್ಯನಾದ ವಾಸುದೇವನು ಅಗ್ನಿಯು-ಹೋಮಾಧಾರನು. ಈ ಪರ್ಜನ್ಯಾಗ್ನಿಗೆ ವಾಯುವು ಸಮಿತ್=ಕಾಷ್ಠ (ಸಮಿಧೆಗಳು). ಜ್ಞಾನ ರೂಪವೂ-ಲೋಕಚೇಷ್ಟಕತ್ವ (ವಾಯು ರೂಪತ್ವ)ವೂ ಇರುವದರಿಂದ ವಾಯು ಶಬ್ದ ವಾಚ್ಯನಾದ ವಾಸುದೇವ ನಾರಾಯಣನು "ಸಮಿತ್" ಎಂದು ಹಿಂದಿನಂತೆ ಹೇಳಲ್ಪಡುತ್ತಾನೆ. ನೀರುಗಳನ್ನು ಪೂರೈಸಿ ತುಂಬುವದರಿಂದ ಅಥವಾ ಧರಿಸುವದರಿಂದ "ಅಭ್ರ" ಶಬ್ದ ವಾಚ್ಯನಾದ ವಾಸುದೇವ ವಾಸು ದೇವನು ಧೂಮನೆನಿಸುತ್ತಾನೆ. ವಿದ್ಯೋತಿಸು (ಅತಿಶಯವಾಗಿ ಹೊಳೆ ಯುವದರಿಂದ) ವದರಿಂದ "ವಿದ್ಯುತ್" ನಾಮಕನಾದ ವಿದ್ಯುತ್ತಿನಲ್ಲಿ (ಮಿಂಚು) ಇರುವ ವಾಸುದೇವ ಸಂಕರ್ಷಣನು ಅರ್ಚಿ (ಜ್ವಾಲೆ) ಸರ್ವ ವನ್ನು ನುಂಗುವದರಿಂದ (ಅಶನಾತ್) "ಅಶನಿ" ನಾಮಕನಾದ ಶಿಡಿಲು "ಅಶನಿ"ಯಲ್ಲಿರುವ ವಾಸುದೇವ ಪ್ರದ್ಯುಮ್ನನು "ಅಂಗಾರ" (ಕೆಂಡ) ಅತಿಶಯ ನಾದ ಮಾಡುವದರಿಂದ ಹ್ರಾದುನಿ ಶಬ್ದ ವಾಚ್ಯನಾದ ಮೇಘನಾದ ದಲ್ಲಿರುವ ವಾಸುದೇವಾನಿರುದ್ಧನು "ವಿಸ್ಫುಲಿಂಗ" ಕಿಡಿಗಳಲ್ಲಿರುವವನು. ಹೀಗೆ ನಾರಾಯಣಾದಿ ರೂಪಗಳಿಂದ ಐದು ರೀತಿಯಲ್ಲಿ ವಾಯು ಮುಂತಾದ ವರಲ್ಲಿರುವ ಪರ್ಜನ್ಯಗತ ವಾಸುದೇವನಲ್ಲಿ ಚಂದ್ರನನ್ನು ಕುರಿತು ಬಂದಿರುವ "ಶ್ರದ್ಧಾ" ಎಂದು ಉಕ್ತನಾದ ಜೀವನನ್ನು ಆಹುತಿಯಾಗಿ ಹೋಮಿಸುತ್ತಾರೆ.

ಈ ಆಹುತಿಯಿಂದ ದೇವತೆಗಳು ವೃಷ್ಟಿಯಲ್ಲಿ ಜೀವನನ್ನು ಇಡುತ್ತಾರೆ (ಸೇರಿಸುತ್ತಾರೆ).

ಶ್ರೀಮದಾನಂದತೀರ್ಥ ಭಗವತ್ಪಾದರು ಭಾಷ್ಯದಲ್ಲಿ ನಿರೂಪಿಸಿದಂತೆಯೇ ಉಪನಿಷತ್ತಿನ ಅರ್ಥವನ್ನು ಸಂಗ್ರಹಿಸಿ ಬರೆಯಲಾಗಿರುತ್ತದೆ. ಆದುದರಿಂದ ಭಾಷ್ಯ ವಾಕ್ಯಗಳಿಗೆ ಪ್ರತ್ಯೇಕವಾಗಿ ಅರ್ಥ ಬರೆಯುವದು ಅದನ್ನೇ (ಪುನುರಕ್ತಿ) ಪುನರುಚ್ಚರಿಸಿದಂತಾಗುವದರಿಂದ ಬಿಟ್ಟಿರುತ್ತೇವೆ. ಪ್ರಾವಹೀಪತಿ=ವಾಯುವು (ಪ್ರವಹ) ಕ್ಷಣ ಪ್ರಭಾ=ವಿದ್ಯುತ್ ಅಬ್ಧಿಜಾತಃ=ಸೋಮ (ಚಂದ್ರ) ॥ ೩ ॥ ಈ ವಿಷಯ ಬೃಹದಾರಣ್ಯದಲ್ಲಿಯೂ ಹೇಳಿರುತ್ತಾರೆ.

**ಅವತರಣಿಕಾ :** ಮಳೆಯ ದ್ವಾರಾ, ಪೃಥ್ವಿಯಲ್ಲಿ ಬೀಜದೊಳಗೆ ಜೀವನು ಬರುವ ಕ್ರಮ ಮತ್ತು ಪೃಥಿವಿ ಎಂಬ ಅಗ್ನಿಯಲ್ಲಿ ದೇವತೆಗಳು ಜೀವನನ್ನು ಹೋಮಿಸುವ ಕ್ರಮ ಹೇಳುತ್ತಾರೆ.

**ಮೂಲ :**

**ಧರಣಿಯೆಂಬುದೆ ಅಗ್ನಿ ಸಂವ ।**
**ತ್ಸರವೆ ಸಮಿಧೆ ವಿಹಾಯಸವೆ ಪೊಗೆ ।**
**ಇರಳುರಿ ದಿಶಾಂಗಾರವಾಂತರ ದಿಗ್ವಲಯ ಕಿಡಿಯೂ ॥**
**ವರುಷವೆಂಬಾಹುತಿಗಳಿಂದಲಿ ।**
**ಹರಿಯ ಮೆಚ್ಚಿಸಿ ಸಕಲರೊಳಗ ।**
**ಧ್ವರಿಯನಾಗಿರು ಸರ್ವ ರೂಪಾತ್ಮಕನ ಚಿಂತಿಸುತ ॥ ೪ ॥**

ಮೂಲದಲ್ಲಿ ಬೃ. ಉ. ಅ. ೮ ಮಂತ್ರ ಕೊಟ್ಟಿದ್ದಾರೆ. "ಪೃಥ್ವಿವಾವ ಗೌತಮಾಗ್ನಿ ತಸ್ಯ ಸಂವತ್ಸರ ಏವ ಸಮಿಧಾಕಾಶೋ ಧೂಮೋ ರಾತ್ರಿರರ್ಚಿರ್ದಿಶಾಂಗಾರಾ ಅವಾಂತರದಿಶೋ ವಿಸ್ಫುಲಿಂಗಾ ಸ್ತಸ್ಮಿನ್ನೇ ಸ್ತಸ್ಮಿನ್ನಗ್ನಾ ದೇವಾ ಜುಹ್ವತಿ ಸ್ತಸ್ಯ ಆಹುತೇ ಅನ್ನಂ ಸಂಭವತಿ ॥"

**ಪದ್ಯಾರ್ಥ :** ಧರಣಿ ಪೃಥಿವಿ ಎಂಬುದೆ=ಅಗ್ನಿ. ೧) ಇಲ್ಲಿ ಸಂಕರ್ಷಣ ರೂಪಿ ಹರಿ, ೨) ಸಂವತ್ಸರ=ಸಮಿಧಿ ಕಾಷ್ಠ ಸಂಕರ್ಷಣ ನಾರಾಯಣ, ವಿಹಾಯಸವೆ ಪೊಗೆ=ಆಕಾಶವೇ ಧೂಮ ೩) ಸಂಕರ್ಷಣ ವಾಸುದೇವ,

ಇರಳು=ರಾತ್ರಿ-ರತಿ ಪ್ರೇಮ ಕೊಡುವದರಿಂದ ರಾತ್ರಿ ಉರಿ, ೪) ಸಂಕರ್ಷಣ ಸಂಕರ್ಷಣ, ದಿಶ ಅಂಗಾರ=ದಿಕ್ ಅಪೇಕ್ಷಿತುಗಳನ್ನು ಕೊಡುವದರಿಂದ= ದಿಶ ಅಂಗಾರ=ಕೆಂಡದಲ್ಲಿ ೫) ಸಂಕರ್ಷಣ ಪ್ರದ್ಯುಮ್ನ, ಅವಾಂತರ ದಿಗ್ವಲಯ=ಅವಾಂತರ ದಿಶಾವೇ ಕಿಡಿ=ವಿಸ್ಫುಲಿಂಗಾಃ ಈ ಇಲ್ಲಿ ೬) ಸಂಕ ರ್ಷಣ ಅನಿರುದ್ಧ, ಈ ಧರಣಿ ಎಂಬುವ ಅಗ್ನಿಯಲ್ಲಿ ವರ್ಷ=ಮಳೆಯೆಂಬ ಆಹುತಿಗಳನ್ನು ಕೊಟ್ಟು, ಹರಿಯ ಮೆಚ್ಚಿಸಿ=ಬಿಂಬರೂಪಿಯಾದ ಶ್ರೀಹರಿ ಯನ್ನು ಮೆಚ್ಚಿಸಿ, ಸಕಲರೊಳಗೆ=ನಿನ್ನ ಸಾಮಾನಿಕರಾದ ಜೀವರಲ್ಲಿ, ಜ್ಞಾನಿ ಜನರಲ್ಲಿ, ಅಧ್ವರ್ಯನಾಗಿರು=ಯಜ್ಞದಲ್ಲಿ ಹೋಮ ಮಾಡತಕ್ಕ ಶ್ರೇಷ್ಠ ಪುರುಷನಾಗಿರು. ಸರ್ವ ರೂಪಾತ್ಮಕನ ಚಿಂತಿಸುತ ॥ ಸಕಲ ರೂಪವನ್ನು ಒಬ್ಬನೇ ನಾರಾಯಣ ರೂಪಿಯೆಂದು ಚಿಂತಿಸುತ್ತ ಜ್ಞಾನಿ ಶ್ರೇಷ್ಠನಾಗಿರು ಎಂದು ಉಪದೇಶಗೈಯ್ಯುತ್ತಾರೆ.

ದ್ರೌಪದೀಶಪತಿ ವಿಠಲರು : ಧರಣಿ ಎಂಬುದೆ ಅಗ್ನಿ.

೧) ಧರಣಿ=ಅಗ್ನಿ-ಸಂಕರ್ಷಣ.

೨) ಸಂವತ್ಸರ ಸಮಿಧಿ=ಸಂಕರ್ಷಣ ನಾರಾಯಣ.

೩) ವಿಹಾಯುಸ=(ಆಕಾಶ) ಪೊಗೆ=ಸಂಕರ್ಷಣ ವಾಸುದೇವ.

೪) ಇರುಳು=ರಾತ್ರಿ=ಉರಿ-ಸಂಕರ್ಷಣ ಸಂಕರ್ಷಣ.

೫) ದಿಶಾ=ಅಂಗಾರ-ಸಂಕರ್ಷಣ ಪ್ರದ್ಯುಮ್ನ.

೬) ಮೂಲಿ=ಕಿಡಿಯು-ಸಂಕರ್ಷಣ ಅನಿರುದ್ಧ.

ಭಾವಸೂಚನ : ಧರಣೀತಿ ॥ ೪ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಧರಣೀತಿ" ॥ "ಪೃಥಿವೀ ವಾವ ಗೌತಮ ಅಗ್ನಿಃ । ತಸ್ಯಾಃ ಸಂವ ತ್ಸರ ಏವ ಸಮಿತ್ । ಆಕಾಶೋ ಧೂಮಃ ॥ ರಾತ್ರಿಃ ಅರ್ಚಿಃ ॥ ದಿಶೋಽರಿ ಗಾರಾಃ । ಅವಾಂತರ ದಿಶೋ ವಿಸ್ಫುಲಿಂಗಾಃ ॥ ತಸ್ಮಿನ್ ಏತಸ್ಮಿನ್ ಅಗ್ನೌ ದೇವಾಃ ವರ್ಷಂ ಜುಹ್ವತಿ । ತಸ್ಯಾಃ ಆಹುತೇಃ ಅನ್ನಂ ಸಂಭವತಿ ॥" (ಛಾ. ೩. ೫, ೭, ೨, ೬) ಇರುಳು=ರಾತ್ರಿ । ಇದಮೇವ ಪಂಚರೂಪಂ ಗುರು ಮಧ್ವರಾಜ್ ನಿಜಗ್ರಂಥೇ-ನಿಜಗ್ರಂಥೇ ॥ "ಸಂವತ್ಸರೋ ವಾಸನಾಚ್ಚ ಸ ಆಕಾಶಃ ಪ್ರಕಾಶನಾತ್ ॥ ರಾತ್ರಿಶ್ಚ ರತಿದಾನಾತ್ ಸಃ ದಿಶಕ್ಷೀತಿ ದಿಶಃ

ಸ್ಮೃತಃ ॥ ಅವಾಂತರಂ ದಿಶೇತ್ ಯಸ್ಮಾತ್ ಅವಾಂತರ ದಿಗುಚ್ಯತೇ ॥ ೪ ॥

## ಕನ್ನಡಾರ್ಥ

"ಧರಣಿ" ಎಂಬ ಪದ್ಯಕ್ಕೆ ಛಾಂದೋಗ್ಯ ಉಪನಿಷತ್ತಿನ ಆಧಾರ ಪ್ರಥಿತ (ಸುಪ್ರಸಿದ್ಧ)ವಾದುದರಿಂದ "ಪೃಥಿವೀ" ಶಬ್ದ ವಾಚ್ಯನಾಗಿ "ಪೃಥಿವೀ" ಯಲ್ಲಿ ಇರುವ ಸಂಕರ್ಷಣನು ಅಗ್ನಿಯು (ಹೋಮಾಹುತ್ಯಾಧಾರನು). ಪೃಥಿವೀಸ್ಥ ಸಂಕರ್ಷಣನಿಗೆ "ವಾಸಮಾಡಿಸು-ವ್ಯಾಪಿಸು-ಮುಚ್ಚು"ವದರಿಂದ "ಸಂವತ್ಸರ" ಶಬ್ದವಾಚ್ಯನಾದ ಸಂವತ್ಸರಗತನಾದ ಸಂಕರ್ಷಣ ನಾರಾಯಣನು "ಸಮಿತ್" ಹಿಂದೆ ಹೇಳಿದಂತೆ "ಸಮಿತ್" (ಕಾಷ್ಠ) ಎನಿಸುತ್ತಾನೆ. ಸುತ್ತಲೂ ಪ್ರಕಾಶಿಸುವದರಿಂದ ಆಕಾಶ ಶಬ್ದ ವಾಚ್ಯನಾದ ಆಕಾಶದಲ್ಲಿರುವ ಸಂಕರ್ಷಣ ವಾಸುದೇವನು "ಧೂಮನು". ರತಿ (ಪ್ರೇಮ)ಯನ್ನು ಕೊಡುವದರಿಂದ "ರಾತ್ರಿ" ಶಬ್ದ ವಾಚ್ಯನಾದ ರಾತ್ರಿಗತನಾದ ಸಂಕರ್ಷಣ ಸಂಕರ್ಷಣನು "ಅರ್ಚಿ"ಯೆನಿಸಿಕೊಳ್ಳುತ್ತಾನೆ. ಅಪೇಕ್ಷಿತಗಳನ್ನು ಕೊಡುವದರಿಂದ "ದಿಶ" (ದಿಕ್) ಶಬ್ದವಾಚ್ಯನಾದ "ದಿಕ್ಕಿನಲ್ಲಿರುವ" ಸಂಕರ್ಷಣ ಪ್ರದ್ಯುಮ್ನನು ಅಂಗಾರ (ಕೆಂಡ) ಅವಾಂತರ ಫಲಗಳನ್ನೂ ಕೊಡುವದರಿಂದ "ಅವಾಂತರ ದಿಕ್" ಎಂದು ಕರೆಯಲ್ಪಡುವ ಸಂಕರ್ಷಣಾನಿರುದ್ಧನು "ವಿಸ್ಫುಲಿಂಗ" ಸಂವತ್ಸರ ಮುಂತಾದವುಗಳಲ್ಲಿ ಐದು ರೀತಿಯಿಂದ ನಾರಾಯಣಾದಿ ರೂಪಗಳಿಂದ ಇರುವ ಪೃಥಿವೀಸ್ಥನಾದ ಸಂಕರ್ಷಣನಲ್ಲಿ ವೃಷ್ಟಿಯಲ್ಲಿ (ಮಳೆಗಳಲ್ಲಿ) ಇಡಲ್ಪಟ್ಟ ಜೀವನನ್ನು ದೇವತೆಗಳು ಹೋಮಿಸುತ್ತಾರೆ. ಆ ಆಹುತಿಯಿಂದ ಪೃಥಿವಿಯಿಂದ ಜೀವನನ್ನು ಅನ್ನ ಮುಂತಾದ ತಿನ್ನುವ ವಸ್ತುಗಳಲ್ಲಿ ದೇವತೆಗಳು ಸ್ಥಾಪಿಸುತ್ತಾರೆ. ಶ್ರೀ ಗುರು ಮಧ್ವಮುನಿರಾಯರು ಭಾಷ್ಯದಲ್ಲಿ ಇದಕ್ಕೆ ಆಧಾರ ರೂಪವಾಗಿ ಇದರಂತೆಯೇ ಬರೆದಿರುತ್ತಾರೆ. ಭಾಷ್ಯದಲ್ಲಿ ಹೇಳಿದಂತೆಯೇ ಉಪನಿಷತ್ ಪದಗಳ ಅರ್ಥವನ್ನು ಬರೆದಿರುವದರಿಂದ ಭಾಷ್ಯ ವಾಕ್ಯಾರ್ಥವನ್ನು ಮತ್ತೆ ಬರೆಯುವ ಕಾರಣವಿಲ್ಲ ॥ ೪ ॥

**ಅವತರಣಿಕಾ :** ಧಾನ್ಯ-ಅನ್ನದಲ್ಲಿ ಬಂದ ಜೀವನು ಪುರುಷನು ಭುಂಜಿಸುವ ನಾದರೆ ಪುರುಷನಲ್ಲಿ ಬರುವ ಜೀವನ ಕ್ರಮವನ್ನು ಪುರುಷಾಗ್ನಿಯಲ್ಲಿ ಯಜ್ಞತ್ವೇನ ಅವದಾನ ಮಾಡುವ ವಿಧಾನ ಹೇಳುತ್ತಾರೆ.

**ಮೂಲ :**

**ಪುರುಷಶಿಖಿ ವಾಕ್ಸಮಿಧೆ ಧೂಮವು ।**
**ಪರಣ ಅರ್ಚಿಯು ಜಿಂಹ್ವೆ ಶ್ರೋತ್ರಗ ।**
**ಳೆರಡು ಕಿಡಿಗಳು ಲೋಚನಗಳಂಗಾರವೆನಿಸುವವು ॥**
**ನಿರುತ ಭುಂಜಿಸುವನ್ನ ಯದುಕುಲ ।**
**ವರನಿಗವದಾನಗಳು ಎಂದೀ ।**
**ಪರಿಸಮರ್ಪಣೆಗೈಯೆ ಕೈಕೊಂಡನುದಿನದಿ ಪೊರೆವ ॥ ೩ ॥**

ಬೃ. ಉ. ಅ. ೮, ಮಂತ್ರ ೧೨. "ಪುರುಷೋವಾವ ಗೌತಮಾಗ್ನಿ ಸ್ತಸ್ಯ ವಾಗೇವ ಸಮಿತ್ಪ್ರಾಣೋ ಧೂಮೋ ಜಿಂಹ್ವಾರ್ಚಿ ಚಕ್ಷುರಂಗಾರಾಃ ಶ್ರೋತ್ರಂ ವಿಸ್ಫುಲಿಂಗಾ ಸ್ತಸ್ಮನ್ನೇ ಸ್ತಸ್ಮಿನ್ನಗ್ನೌ ದೇವಾಃ ಅನ್ನಂ ಜುಹ್ವತಿ ತಸ್ಯಾಹುತೇರೇತಃ ಸಂಭವತಿ ॥" ಛಾಂದೋಗ್ಯದಲ್ಲಿಯೂ, ಈ ಮಂತ್ರ ಹೇಳಿದ್ದಾರೆ.

**ಪದ್ಯಾರ್ಥ :** ಪುರುಷ ಶಿಖಿ=ಪುರುಷನೆಂಬುವನೇ ಅಗ್ನಿ=ಈ ಅಗ್ನಿ ಯಲ್ಲಿ ೧) ಪ್ರದ್ಯುಮ್ನ, ವಾಕ್=ವಾಕ್ ಶಬ್ದ ವಾಚ್ಯನಾದ ವಾಕ್= ಸಮಿಧೆ ಕಾಷ್ಟ, ಇಲ್ಲಿ ೨) ಪ್ರದ್ಯುಮ್ನ ನಾರಾಯಣ, ಪರಣ=ಪ್ರಾಣವಾಚ್ಯನೆ, ಧೂಮ=ಹೊಗೆ. ಇಲ್ಲಿ ೩) ಪ್ರದ್ಯುಮ್ನ ಸಂಕರ್ಷಣ, ಅರ್ಚಿ=ಉರಿ. ಜಿಂಹ್ವಾ ಶ್ರೋತ್ರಗಳೆರಡು, ಕಿಡಿಗಳು, ಇಲ್ಲಿ ೪) ಪ್ರದ್ಯುಮ್ನ ಪ್ರದ್ಯುಮ್ನ-ಎರಡು, ಲೋಚನಂಗಳು=ಕಣ್ಣುಗಳಲ್ಲಿರುವ ಚಕ್ಷು ಶಬ್ದವಾಚ್ಯನಾದ ೬) ಪ್ರದ್ಯುಮ್ನ ಪ್ರದ್ಯುಮ್ನನೇ ಅಂಗಾರ=ಕೆಂಡ. ಇಲ್ಲಿ ಪ್ರದ್ಯುಮ್ನ ಅನಿರುದ್ಧ ಇವೇ ಮೊದ ಲಾದ ನಾಮದಿಂದ ಕರೆಸುವವು. ಈ ಪ್ರಕಾರ ನಿರುತ ಭುಂಜಿಸುವನ್ನ= ನಿತ್ಯದಲ್ಲಿ ಪ್ರಾಣಾಗ್ನಿ ಹೋತ್ರ ಕ್ರಮದಿಂದ ಯಜ್ಞತ್ವೇನ ಊಟಮಾಡುವ ಅನ್ನವು ಯದುಕುಲ=ಯದುರಾಜನ ವಂಶದಲ್ಲಿ ಅವತರಿಸಿದ ಶ್ರೀಕೃಷ್ಣ ರೂಪಿ ಹರಿಗೆ, ಇವು ಅವದಾನಗಳು,-ಆಹುತಿಗಳೆಂದು, ಈ ಪರಿಸಮರ್ಪಣೆಗೈಯೇ= ಈ ವಿಧಾನದಿಂದ ಸಮರ್ಪಣೆ=ಶ್ರೀ ಮಧ್ವೇಶ ಕೃಷ್ಣಾ ನಿನಗೆ ಅರ್ಪಿತವೆಂದು

ಕೊಡಲು, ಕೈಕೊಂಡು=ಬಹು ಪ್ರೀತಿಯಿಂದ ಸ್ವೀಕರಿಸಿ, ಅನುದಿನದಿ= ನಿತ್ಯಾನಂದವಾದ ನಿತ್ಯ ಮುಕ್ತಿಯೇ ಅನುದಿನ=ಸಂತತವಾಗಿ, ಪೊರೆವ= ಸಂರಕ್ಷಿಸುವ.

ದ್ರಾಪದೀಶಪತಿ ವಿಠಲರು : ಪುರುಷ ಶಿಖಿ ॥ ೫ ॥

೧) ಪುರುಷ ಶಿಖಿ=ಅಗ್ನಿ—ಪ್ರದ್ಯುಮ್ನ.

೨) ವಾಕ್ ಸಮಿಧಿ=ಪ್ರದ್ಯುಮ್ನ ನಾರಾಯಣ.

೩) ಪರಣ ಪ್ರಾಣ=ಧೂಮ-ಪ್ರದ್ಯುಮ್ನ ವಾಸುದೇವ.

೪) ಜಿಂಹ್ವೆ=ಉರಿ—ಪ್ರದ್ಯುಮ್ನ ಸಂಕರ್ಷಣ.

೫) ಕಿವಿ=ಕಿಡಿ-ಪ್ರದ್ಯುಮ್ನ ಪ್ರದ್ಯುಮ್ನ.

೬) ಕಣ್ಣು=ಕೆಂಡ-ಪ್ರದ್ಯುಮ್ನ ಅನಿರುದ್ಧ.

ಪರಣ ಅಂದರೆ ಪ್ರಾಣ=ಅಧ್ಯಾತ್ಮಕಾರರ ವಚನ-ಮುಖದಲ್ಲಿ ಆಹವನೀಯ ಅಗ್ನಿ, ಆತನ ಹೃದ್ಗತ ಪ್ರಾಣಾಂತರ್ಗತ ಹೃದ್ಗತ ಪರಮಾತ್ಮ, ವಾಕ್ಯದ್ದೆಶೆಯಿಂದ ಅಕಾರಾದಿ ವರ್ಣಗಳು ಉತ್ಪನ್ನ ಮಾಡುತ್ತಾನಾದ ಕಾರಣ ಇದೇ ಧೂಮ ॥ ೫ ॥

ಭಾವಸೂಚನ : ಪುರುಷೇತಿ ಶಿಖಿ=ಅಗ್ನಿ ॥ ೫ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಪುರುಷೇತಿ" ॥ ಪುರುಷೋ ವಾವ ಗೌತಮ ಅಗ್ನಿಃ ॥ ತಸ್ಯ ವಾಗೇವ ಸಮಿತ್ ॥ ಪ್ರಾಣೋ ಧೂಮಃ ॥ ಜಿಹ್ವಾ ಅರ್ಚಿಃ ॥ ಚಕ್ಷುರಂಗಾರಾಃ । ಶ್ರೋತ್ರಂ ವಿಸ್ಫುಲಿಂಗಾಃ ॥ ತಸ್ಮಿನ್ ಏತಸ್ಮಿನ್ ಅಗ್ನೌ ದೇವಾಃ ಅನ್ನಂ ಜುಹ್ವತಿ ॥ । ತಸ್ಯಾಃ ಆಹುತೇಃ ರೇತಃ ಸಂಭವತಿ ॥ ಶಬ್ದಪಂಚಕಂಟಿಪ್ಪಿಕೇ (ಟಿಟೀಕೇ) ಆಲವಬೋಧವರ್ಯಃ । ವಚನಾತ್ ವಾಕ್ ತಥಾ ಪ್ರಾಣಃ ತ್ವನನಾತ್ ಚಕ್ಷುಃ ಉಚ್ಯತೇ ॥ ದರ್ಶನಾತ್ ಶ್ರವಣಾತ್ ಶ್ರೋತ್ರಂ ಜಿಹ್ವಾ ವ್ಯೈ ಹೋಮತಃ ಸ್ಮೃತಃ ॥ ೫ ॥

### ಕನ್ನಡಾರ್ಥ

ಪೂರ್ಣನಾದುದರಿಂದ ಪುರುಷ ಶಬ್ದ ವಾಚ್ಯನಾದ=ಪುರುಷನಲ್ಲಿರುವ ಪ್ರದ್ಯುಮ್ನನು ಅಗ್ನಿಯು-ಹೋಮಾಧಾರನು. ಈ ಪುರುಷಾಗ್ನಿಗೆ ಮಾತನಾಡುವ ಗುಣವಿರುವದರಿಂದ "ವಾಕ್" ಶಬ್ದ ವಾಚ್ಯನಾದ ವಾಕ್‌ನಲ್ಲಿರುವ

ಪ್ರದ್ಯುಮ್ನ ನಾರಾಯಣನು ಸಮಿಧೆ(ಕಾಷ್ಠ)ಯೆನಿಸುತ್ತಾನೆ. ಚೇಷ್ಟಾ (ಕ್ರಿಯಾ) ಪ್ರವರ್ತಕನಾದುದರಿಂದ ಪ್ರಾಣಶಬ್ದ ವಾಚ್ಯನಾದ ಪ್ರಾಣದಲ್ಲಿರುವ ಪ್ರದ್ಯುಮ್ನ ವಾಸುದೇವನು "ಧೂಮ"ನೆನಿಸುತ್ತಾನೆ. ಕರೆಯುವದರಿಂದಲೂ ತಿನ್ನಲಿಕ್ಕೆ ಮುಖ್ಯ ಕಾರಣವಾದುದರಿಂದಲೂ "ಜಿಹ್ವಾ" ಶಬ್ದ ವಾಚ್ಯನಾಗಿ ಜಿಹ್ವೆಯಲ್ಲಿರುವ ಪ್ರದ್ಯುಮ್ನ ಸಂಕರ್ಷಣನು ಅರ್ಚಿ (ಜ್ವಾಲೆ)ಯೆನಿಸುತ್ತಾನೆ. ಸರ್ವವನ್ನೂ ನೋಡುವವನಾದುದರಿಂದ "ಚಕ್ಷುಃ" ಶಬ್ದ ವಾಚ್ಯನಾದ ಚಕ್ಷುಸ್ಸಿನಲ್ಲಿರುವ ಪ್ರದ್ಯುಮ್ನ ಪ್ರದ್ಯುಮ್ನನು "ಅಂಗಾರ" (ಕೆಂಡ)ನೆನಿಸುತ್ತಾನೆ ಸರ್ವವನ್ನು ಕೇಳುವದರಿಂದ ಶ್ರೋತ್ರ ಶಬ್ದವಾಚ್ಯನಾದ ಪ್ರದ್ಯುಮ್ನಾನಿರುದ್ಧನು ವಿಸ್ಫುಲಿಂಗನೆನಿಸುತ್ತಾನೆ. ನಾರಾಯಣಾದಿ ರೂಪಗಳಿಂದ ಪುರುಷನ ವಾಕ್ ಮುಂತಾದವುಗಳಲ್ಲಿರುವ ಪ್ರದ್ಯುಮ್ನನೆಂಬ ಪುರುಷ(ಗತ) ಅಗ್ನಿಯಲ್ಲಿ ಅನ್ನ (ತಿನ್ನುವ ವಸ್ತು)ದಲ್ಲಿರುವ ಜೀವನನ್ನು ಹೋಮಿಸುತ್ತಾರೆ. ಈ ಆಹುತಿಯಿಂದ ಪುರುಷ ಸ್ಥಾನದಿಂದ ದೇವತೆಗಳು ಜೀವನನ್ನು ರೇತಸ್ಸಿನಲ್ಲಿ ಸ್ಥಾಪಿಸುತ್ತಾರೆ. "ವಾಕ್-ಪ್ರಾಣ, ಜಿಹ್ವಾ, ಚಕ್ಷು-ಶ್ರೋತ್ರ". ಈ ಶಬ್ದಗಳಿಗೆ ಶ್ರೀ ಪೂರ್ಣಪ್ರಜ್ಞ ಗುರುವರ್ಯರು ವ್ಯಾಖ್ಯಾನವನ್ನು ಭಾಷ್ಯದಲ್ಲಿ ಮಾಡಿರುತ್ತಾರೆ. ಅದರಂತೆ ಈ ಉಪನಿಷತ್ಪದಗಳ ಅರ್ಥವನ್ನು ತಿಳಿಯಬೇಕು ॥ ೫ ॥

**ಅವತರಣಿಕಾ :** ಅನ್ನದ್ವಾರಾ ಪುರುಷ ರೇತಸ್ಸಿನಲ್ಲಿ ಬಂದ ಜೀವನನ್ನು ಸ್ತ್ರೀ ಎಂಬುವ ಅಗ್ನಿಯಲ್ಲಿ ಹೋಮಿಸುವ ಕ್ರಮ. ಸ್ತ್ರೀ ಗರ್ಭ ಧರಿಸಿ ನವಮಾಸಾನಂತರ ಜೀವನು ಸ್ಥೂಲದೇಹದಿಂದ ಪುಟ್ಟುತ್ತಾನೆಂದು ಪೇಳುತ್ತಾರೆ.

**ಮೂಲ :**

**ಮತ್ತೆ ಯೋಷಾಗ್ನಿಯೊಳು ತಿಳಿವುದು ।**
**ಪಸ್ಥ ತತ್ವವೆ ಸಮಿಧಿ ಕಾಮೋ ।**
**ತ್ಪತ್ತಿಪರ ಮಾತುಗಳು ಧೂಮವು ಯೋನಿ ಮಹದರ್ಚಿ ॥**
**ತತ್ಪ್ರವೇಶಾಂಗಾರ ಕಿಡಿಗಳು ।**
**ಉತ್ಸಹಗಳುತ್ಸರ್ಜನವೆ ಪುರು ।**
**ಷೋತ್ತುಮನಿಗವದಾನವೆನೆ ಕೈಕೊಂಡು ಮನ್ನಿಸುವ ॥ ೬ ॥**

ಬೃ. ಉ. ಅ. ೮, ಮಂತ್ರ ೧೩. "ಯೋಷಾವಾವ ಗೌತಮಾಗ್ನಿ ಸ್ತಸ್ಯ ಉಪಸ್ಥ ಏವ ಸಮಿಧ ದುಪಮಂತ್ರಂ ಏತೇ ಸಧೂಮೋ ಯೋನಿ ರರ್ಚಿಯದಂತಃಕರೋತಿ ತೇ ಅಂಗಾರಾ ಅಭಿನಂದಾ ವಿಸ್ಫುಲಿಂಗಾ ತಸ್ಮಿನ್ನೇ ತಸ್ಮಿನ್ನಗ್ನಾ ದೇವಾರೇತೋ ಜುಹ್ವತಿ ತಸ್ಯಾಹುತೇ ಗರ್ಭಃ ಸಂಭವತೀ ||" ಛಾಂದೋಗ್ಯದಲ್ಲಿಯೂ ಹೇಳಿದ್ದಾರೆ.

**ಪದ್ಯಾರ್ಥ :** ಮತ್ತೆ=ಪುನಃ, ಯೋಷಾಗ್ನಿಯೊಳು=ಸ್ತ್ರೀ ಎಂಬುವ ಅಗ್ನಿಯಲ್ಲಿ ೧) ಅನಿರುದ್ಧ, ಉಪಸ್ಥ ತತ್ವವೆ ಸಮಿಧಿ-ಗುಹ್ಯವಾದ ಉಪಸ್ಥ ತತ್ವವು=ಸಮಿಧಿ, ಇಲ್ಲಿ ೨) ಅನಿರುದ್ಧ ನಾರಾಯಣ, ಕಾಮೋತ್ಪತ್ತಿ ಮಾತು ಗಳೆ ಧೂಮವು=ಪುರುಷ ಸ್ತ್ರೀ ಸಂಯೋಗ ಕಾಲದಲ್ಲಿ ಕಾಮ ಇಚ್ಛಿತ ವಿಷಯಗಳನ್ನು ಮಾತಾಡುವದೇ ಧೂಮ=ಹೊಗೆ ೩) ಇಲ್ಲಿ ಅನಿರುದ್ಧ, ವಾಸುದೇವ, ಯೋನಿ ಮಹದರ್ಚಿ=ಪುರುಷ ಸ್ತ್ರೀ ಸಂಯೋಜನವೇ= ಯೋನಿ ಎನಿಸುತ್ತದೆ, ೪) ಇಲ್ಲಿ ಅನಿರುದ್ಧ ಸಂಕರ್ಷಣ, ತತ್ಪ್ರವೇಶಾಂಗಾರ ಕಿಡಿಗಳು-ಸ್ತ್ರೀ ಯೋನಿಯೊಳಗೆ, ಪುರುಷೇಂದ್ರಿಯ ಪ್ರವೇಶ ಕ್ರಿಯಾದಿಗಳು ಅಂಗಾರ=ಇಲ್ಲಿ ೫) ಅನಿರುದ್ಧ ಪ್ರದ್ಯುಮ್ನ, ಉತ್ಸಹಗಳುತ್ಸರ್ಜನವೇ ಕಿಡಿ ಗಳು=ರತಿ ಕ್ರೀಡೆಯಿಂದಾಗುವ ಉತ್ಸಾಹ, ರೇತೋತ್ಸರ್ಜನವೇ ವಿಸ್ಫು ಲಿಂಗಾ, ಕಿಡಿಗಳು=ಇಲ್ಲಿ ೬) ಅನಿರುದ್ಧ-ಅನಿರುದ್ಧ, ಈ ಪ್ರಕಾರ ವಾಸುದೇವ ಯಜ್ಞಾನುಸಂಧಾನದಿಂದ ಪುರುಷೋತ್ತಮ=ಪುರುಷ ಶ್ರೇಷ್ಠನಾದ ಶ್ರೀಹರಿ ಬಿಂಬರೂಪಿಗೆ, ಅವದಾನ=ಆಹುತಿಗಳೆಂದು ಕೊಡಲು, ಕೈಕೊಂಡು= ಸ್ವೀಕರಿಸಿ, ಮನ್ನಿಸುವ=ಆದರಿಸುವ, ಪ್ರೀತಿಯಿಂದ ಸ್ವೀಕರಿಸಿ, ಆದರ ಮಾಡುವನು || ೬ ||

**ದ್ರೌಪದೀಶಪತಿ ವಿಠಲರು :** ಮತ್ತೆ ಯೋಷಾಗ್ನಿಯಲಿ ||

೧) ಸ್ತ್ರೀ=ಅಗ್ನಿ-ಅನಿರುದ್ಧ.

೨) ಉಪಸ್ಥ=ಸಮಿಧಿ-ಅನಿರುದ್ಧ ನಾರಾಯಣ.

೩) ಮಾತುಗಳೇ=ಧೂಮ-ಅನಿರುದ್ಧ ವಾಸುದೇವ.

೪) ಯೋನಿ=ಅರ್ಚಿ-ಅನಿರುದ್ಧ ಸಂಕರ್ಷಣ.

೫) ತತ್ಪ್ರವೇಶ=ಕೆಂಡ-ಅನಿರುದ್ಧ ಪ್ರದ್ಯುಮ್ನ.

೬) ಉತ್ಸಹ=ಉತ್ಸರ್ಜನ-ಕಿಡಿ=ಅನಿರುದ್ಧ-ಅನಿರುದ್ಧ.

ಉಪಸ್ಥ ಎಂದರೆ=ರೇತಸ್ಸೂ ಮೂತ್ರ ಕೂಡಿ ಬರೋದ್ವಾರ. ಉಪಸ್ಥ ತತ್ವ, ರೇತಸ್ಸು ಬರತಕ್ಕ ಅಂತರ್ಗತ ದ್ವಾರವೇ ಯೋನಿ ಎನಬೇಕು. ತತ್ವವೇಶಾಯೆಂದರೆ ಪದಾರ್ಥ ಪೂರ್ತಿ ಇರ(ಟ್ಟು) ಕೊಡತಕ್ಕದ್ದು. ಉತ್ಸರ್ಜನ ಎಂದರೆ ಮಥನ ಮಾಡೋಣ ॥ ೬ ॥

**ಭಾವಸೂಚನ:** ಇದಾನೀಂ ವಾಮದೇವ ಯಜನ ಕ್ರಮ ಮಾಹ ॥ ಮತ್ತೇತಿ ॥ ೬ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಮತ್ತೆ" ಇತಿ ॥

ಉತ್ಸಾಹಾಃ=ಅಭಿನಂದಾಃ । ಉತ್ಸರ್ಜನಾಃ ವಿಸ್ಫುಲಿಂಗಾಃ । "ಯೋಷಾ ವಾವ ಗೌತಮ ಅಗ್ನಿಃ । ತಸ್ಯಾಃ ಉಪಸ್ಥ ಏವ ಸಮಿತ್ । ಉಪ ಮಂತ್ರಯತೇ ಸಧೂಮಃ । ಯೋನಿಃ ಅರ್ಚಿಃ ॥ ಯದಂತಃ ಕರೋತಿ ತೇ ಅಂಗಾರಾಃ ॥ ಅಭಿನಂದಾಃ ವಿಸ್ಫುಲಿಂಗಾಃ । ತಸ್ಮಿನ್ ಏತಸ್ಮಿನ್ ಅಗ್ನೌ ದೇವಾಃ ರೇತಃ ಜುಹ್ವತಿ । ತಸ್ಯಾಃ ಆಹುತೇಃ ಗರ್ಭಃ ಸಂಭವತಿ ಛಾ. ಖ. ೫, ೨, ೮ ॥ ಶ್ರೀಮದಾನಂದ ತೀರ್ಥರಾಟ್ ಪಂಚರತ್ನಂ ಆತ್ಮ ಮಂಜೂಷಾಯಾಂ ಬರೀ ಭರೀತಿ ॥ ಉಪಸ್ಥಿತೇಃ ಉಪಸ್ಥಃ ಸಃ ಉಪಮಂತ್ರ ಕೃತ್ ಏವ ಸಃ । ಯೋನಿಃ ಯುನಕ್ತಿ ಯಸ್ಮಾತ್ ಸಃ ಸರ್ವಾಂತಃ ಕೃಚ್ಚ ನಂದನಃ ॥ ಲೋಕಪದೋತ್ತದ್ವಾ್ಯ(ದ್ವಾ) ದೀನಾಂ ವೃತ್ತಿಂ ವಕ್ತಿ ॥ ಅಸೌ ಲೋಕಃ ಪ್ರಕಾಶತ್ವಾತ್ ಪ್ರಾಣಸ್ಥತ್ವಾಚ್ಚ ಕೇಶವಃ ॥ ಪರ್ಜನ್ಯೋ ಜನಕಃ ಯಸ್ಮಾತ್ ಪೃಥಿವೀ ಪೃಥಿತತ್ವತಃ॥ ಪುರುಷಃ ಪುರುಯಸ್ಮಾತ್ ಸಃ ಯೋಷಾ ಜೋಷ್ಯೋ ಯತೋಽಖಿಲೈಃ ॥ ಇತಿ ಸಾಮ ಸಂಹಿತಾಯಾಮ್ ॥ ಪುರು ಷೋತ್ತಮಃ ಸಹಸ್ರನಾಮಗಮ್ ॥ ಓಂ ಪ್ರಾಣೋ(ವೋ) ದೇವಾ ಅತಿರೋ ದಾಸಮೋಜಃ ಪತಿಂ ವೋ ಅಘ್ನ್ಯಾನಾಮ್ । ಪ್ರಜಾಯೈ ತ್ವಸ್ಯೈ ಯದಶಿಕ್ಷ ಇಂದ್ರ ಧೇನೂನಾ ಮಿಷುಧ್ಯಸೌ ಓಂ ॥ ನಷ್ಟಭಕ್ತಶಕ್ತ್ಯಾದೀನಿ ಪುರೂಣಿ ಪುರುಷಾರ್ಥ ಜಾತಾನಿ ಪುರುಭ್ಯಃ ಉತ್ಕೃಷ್ಟೇಭ್ಯಃ ದೇವಾದಿಭ್ಯಃ ಸ(ಸು) ನೋತಿ ಇತಿ ಪುರುಷಃ ॥ ಸ ಚಾಸೌ ಉತ್ತಮಶ್ಚ ಇತಿ ಸ ತಥೋಕ್ತಃ ॥ ಪುಣ್ಯಲೋಕೋ ಭವತಿ ಯ ಏವಂ ವೇದ–ಯ ಏವಂ ವೇದ ॥ ೬ ॥

## ಕನ್ನಡಾರ್ಥ

"ಮತ್ತೆ ಯೋಷಾಗ್ನಿಯಲಿ ತಿಳಿವುದು" ಎಂಬ ಪದ್ಯದಲ್ಲಿ ಹೇಳಲಾಗಿರುವ "ಯೋಷಾಗ್ನಿ ವಿದ್ಯೆಗೆ" ಛಾಂದೋಗ್ಯೋಉಪನಿಷತ್ತು ಹಾಗೂ ಭಾಷ್ಯಗಳ ಆಧಾರಗಳನ್ನು ವ್ಯಾಖ್ಯಾನಕಾರರು ತೋರಿಸುತ್ತಾರೆ. "ಎಲೋ ಗೌತಮ! ಸರ್ವರೂ (ಇವನನ್ನು) ಸೇವಿಸುವದರಿಂದ "ಯೋಷಾ" ಶಬ್ದ ವಾಚ್ಯನಾದ ಅನಿರುದ್ಧನು ಅಗ್ನಿಯು (ಹೋಮಾಧಾರನು). ಯೋಷಿತ್ (ಸ್ತ್ರೀ)ನಲ್ಲಿರುವ ಅನಿರುದ್ಧನೆಂಬ ಅಗ್ನಿಗೆ ಆ ಉಪಸ್ಥವು-ಸರ್ವದಾ ಉಪಸ್ಥಿತನಾಗಿರು (ಸನ್ನಿಹಿತನಾಗಿರು)ವದರಿಂದ "ಉಪಸ್ಥ" ಶಬ್ದವಾಚ್ಯನಾದ ಉಪಸ್ಥೇಂದ್ರಿಯದಲ್ಲಿರುವ ಅನಿರುದ್ಧ ನಾರಾಯಣನು "ಸಮಿತ್" ಸಮಿಧೆಗಳು. ರತಿಯ ಸಲುವಾಗಿ ಆಡುವ ಸಂಭಾಷಣಗಳು ಅಂದರೆ ಉಪಮಂತ್ರಿಸುವದರಿಂದ "ಉಪಮಂತ್ರಣ=(ಸಂಭಾಷಣ) ಶಬ್ದ ವಾಚ್ಯನಾದ ಅನಿರುದ್ಧ ವಾಸುದೇವನು "ಧೂಮ" ಹಿಂದೆ ಹೇಳಿದಂತೆ ಧೂಮ ಶಬ್ದ ವಾಚ್ಯನು. ಸಂಯೋಜನ ಮಿಶ್ರೀಕರಣ ಮಾಡುವದರಿಂದ "ಯೋನಿ" ಶಬ್ದ ವಾಚ್ಯನಾಗಿ ಯೋನಿಯಲ್ಲಿ ಇರುವ ಅನಿರುದ್ಧ ಸಂಕರ್ಷಣನು ಆರ್ಚಿಃ (ಜ್ವಾಲೆ). ಯೋನಿಯೊಳಗೆ ಮಾಡುವ ಕ್ರಿಯೆಗಳು ಹಾಗೂ ಕರ್ತನು (ಮಾಡುವವನು) ಇವರು ಅಂಗಾರಗಳು ಅಂದರೆ ಅಲ್ಲಿರುವ ಅನಿರುದ್ಧ ಪ್ರದ್ಯುಮ್ನನು ಅಂಗಾರನೆನಿಸುತ್ತಾನೆ. ಅದರಿಂದ ಆಗುವ ಅಭಿನಂದ (ಆನಂದ)ವು ವಿಸ್ಫುಲಿಂಗ (ಕಿಡಿ). ಸ್ವತಃ ಎಲ್ಲರನ್ನು ಅಭಿನಂದಿಸುವದರಿಂದ ಅಭಿನಂದ ಶಬ್ದ ವಾಚ್ಯನಾದ "ಅಭಿನಂದ" ದಲ್ಲಿರುವ ಅನಿರುದ್ಧ ಅನಿರುದ್ಧನು "ವಿಸ್ಫುಲಿಂಗ" ಎಂದು ಹಿಂದೆ ಹೇಳಿದಂತೆ ಹೇಳಿಸಿಕೊಳ್ಳುತ್ತಾನೆ. ಹೀಗೆ ನಾರಾಯಣಾದಿ ರೂಪಗಳಿಂದ ಈ ರೀತಿಯಾಗಿ ಯೋಷಿತ್ತಿನಲ್ಲಿರುವ ಅನಿರುದ್ಧನೆಂಬ ಅಗ್ನಿಯಲ್ಲಿ ರೇತಸ್ಸಿನಲ್ಲಿ ಸೇರಿಕೊಂಡಿರುವ ಜೀವನನ್ನು ತತ್ವಾಭಿಮಾನಿ ದೇವತೆಗಳು ಯೋನಿದ್ವಾರಾ ಹಾಕುತ್ತಾರೆ–ಹೋಮಿಸುತ್ತಾರೆ. ಯೋಷಿದಗ್ನಿಯಲ್ಲಿ ಹೋಮಿಸಿದ ಈ ಆಹುತಿಯಿಂದ ಗರ್ಭವನ್ನು (ಶರೀರ) ಹೊಂದುತ್ತಾನೆ. "ಯೋನೇಃ ಶರೀರಂ" ಎಂಬ ಬ್ರಹ್ಮ ಸೂತ್ರದಲ್ಲಿ ಇದರಂತೆ ನಿರೂಪಿತವಾಗಿರುತ್ತದೆ.

ಶ್ರೀಮದಾನಂದತೀರ್ಥ ಭಗವತ್ಪಾದರು ತಮ್ಮ ಮೂಲಕೋಶಗಳಲ್ಲಿ (ಭಾಷ್ಯದಲ್ಲಿ) ಈ ಪ್ರಮೇಯ ಮಣಿಗಳಲ್ಲಿ ಹೀಗೆ ನಿಬಂಧಿಸಿ ಇಟ್ಟಿರುತ್ತಾರೆ.

"ಉಪಸ್ಥಿತನಾಗುವದರಿಂದ ಹರಿಗೆ "ಉಪಸ್ಥ" ಎಂದು ಹೆಸರು. ಉಪಮಂತ್ರ (ಸಂಭಾಷಣ)ವನ್ನು ಮಾಡುವದರಿಂದ "ಉಪಮಂತ್ರ" ಎನ್ನುತ್ತಾರೆ. ಜೋಡಿಸಿ ಕೂಡಿಸು ಸಂಗಮಿಸುವುದರಿಂದ "ಯೋನಿ" ಎಂದು ಕರೆಯುತ್ತಾರೆ. ಯೋನಿಯೊಳಗೆ ಆಗುವ ಕ್ರಿಯಾಕರ್ತನು ಹರಿಯೇ. ಅಭಿನಂದಿಸುವದರಿಂದ "ಅಭಿನಂದ"ನೆಂದೆನಿಸುತ್ತಾನೆ." ಹೀಗೆ ಹೇಳಿ ಅನಂತರ ವಿಲೋಕವೆಂದು ಹೇಳಲಾಗಿರುವ "ದ್ಯು" ಮುಂತಾದ ಶಬ್ದಗಳನ್ನೂ ಶ್ರೀಹರಿಯಲ್ಲಿ ಸಮನ್ವಯಿಸಿರುತ್ತಾರೆ. ಹೇಗಂದರೆ "ಪ್ರಕಾಶರೂಪನಾದುದರಿಂದಲೂ ಪ್ರಾಣನಲ್ಲಿರುವದರಿಂದಲೂ ಹರಿಯು (ಕೇಶವನು) "ಅಸೌಲೋಕ" ಎಂದೆನಿಸುತ್ತಾನೆ. ಜನಕನಾದುದರಿಂದ "ಪರ್ಜನ್ಯನು" ಪ್ರಸಿದ್ಧನಾಗಿರುವದರಿಂದ "ಪೃಥ್ವಿ" ಎನಿಸುತ್ತಾನೆ. ಬಹು ರೂಪನಾದುದರಿಂದ "ಪುರುಷ"ನೆನಿಸುತ್ತಾನೆ. ಎಲ್ಲರಿಂದ ಸೇವಿತನಾಗುವದರಿಂದ "ಯೋಷಾ" ಎಂದೆನಿಸುತ್ತಾನೆ" ಎಂಬುದಾಗಿ ಸಾಮಸಂಹಿತೆಯಲ್ಲಿ ಹೇಳಲಾಗಿರುತ್ತದೆ.

"ಪುರುಷೋತ್ತಮಃ" ಈ ನಾಮವು ಶ್ರೀ ವಿಷ್ಣು ಸಹಸ್ರನಾಮಗಳಲ್ಲಿ ಸೇರಿದ್ದು. ಇದರ ಅರ್ಥವನ್ನು ಬೃಹತೀ ಋಜ್ಮಂತ್ರವು "ಪ್ರಾವೋ" ಎಂಬುದಾದಿ ವಿವರಿಸುತ್ತದೆ. "ಪುರೂಣಿ" ತಿರೋಹಿತವಾದ-ನಷ್ಟವಾದ-ಭಕ್ತರ ಶಕ್ತಿ ಮುಂತಾದ ಪುರುಷಾರ್ಥ ಸಾಧನ ಸಾಮಗ್ರಿಗಳನ್ನು, "ಪುರುಭ್ಯಃ" ಉತ್ಕೃಷ್ಟರಾದ ದೇವತೆಗಳಿಗೆ ಕೊಡುವದರಿಂದ "ಪುರುಷ" ಎಂದು ಹರಿಯನ್ನು ಕರೆಯುತ್ತಾರೆ. ಪುರುಷನೂ ಉತ್ತಮನೂ ಆದುದರಿಂದ "ಪುರುಷೋತ್ತಮ" ಎಂದು ಶ್ರೀ ಹರಿಯನ್ನು ಕರೆಯುತ್ತಾರೆ.

ಪಂಚಾಗ್ನಿಗಳನ್ನು ಹಿಂದೆ ಹೇಳಿದಂತೆ ತಿಳಿದುಕೊಂಡಿರುವ ಅಧಿಕಾರಯುಕ್ತ ಜ್ಞಾನಿಗಳು ಪಂಚ ಮಹಾಪಾಪಗಳಿಂದ ಲೇಪ ಹೊಂದುವದಿಲ್ಲ. ಹೀಗೆ ತಿಳಿಯುವವನೂ ಸಹ ಪುಣ್ಯಲೋಕವನ್ನು ಹೊಂದುತ್ತಾನೆ ॥ ೬ ॥

**ಅವತರಣಿಕಾ :** ಹಿಂದೆ ಸವಿಸ್ತರ-ಐದು ಅಗ್ನಿಗಳಲ್ಲಿ ಜೀವನನ್ನು ದೇವತೆಗಳು ಹೋಮಿಸುವ ಕ್ರಮ. ಪಂಚ ಮಹಾಯಜ್ಞದಲ್ಲಿ ಅನಿರುದ್ಧಾದಿ ಐದು ರೂಪಗಳ ಸ್ಮರಿತು ನೆನೆವರಿಗೆ ಜನ್ಮಗಳನ್ನು ಐದಿಸನು.

ಮೂಲ :

ಐದು ಅಗ್ನಿಗಳಲ್ಲಿ ಮರೆಯದೆ ।
ಐದು ರೂಪಾತ್ಮಕನ ಯಿಪ್ಪ ।
ತ್ತೈದು ರೂಪಗಳನುದಿನದಿ ನೆನೆವರಿಗೆ ಜನ್ಮಗಳ ।।
ಐದಿಸನು ನಳಿನಾಕ್ಷ ರಣದೊಳು ।
ಮೈದುನನ ಕಾಯ್ದಂತೆ ಸಲಹುವ ।
ಚೈದವಗೆ ಗತಿಯಿತ್ತ ಭಯಹರ ಭಕ್ತವತ್ಸಲನು ।। ೭ ।।

ಪದ್ಯಾರ್ಥ : ಐದು ಅಗ್ನಿಗಳಲ್ಲಿ=ಜನನಿ,-ಪಿತ, ಭೂ, ವಾರಿದ ಅಂಬರವೆಂಬಿವೇ ಈ ಐದು ಅಗ್ನಿಗಳು. ಇವುಗಳಲ್ಲಿ ಹಿಂದೆ ಹೇಳಿದಂತೆ, ಕ್ರಮವಾಗಿ ಐದು ರೂಪಾತ್ಮಕನ=ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣನ ಇಪ್ಪತ್ತೈದು ರೂಪಗಳನ್ನು ಒಂದೊಂದು ಅಂಶ ಈ ಮೂಲರೂಪದಲ್ಲಿ ಒಂದೊಂದರಲ್ಲಿ ಐದು ಅಂಶ ರೂಪದಂತೆ ೨೫ ರೂಪ ಗಳು; ಮೂಲ ಐದು ರೂಪಗಳು ಕೂಡಿ, ಮೂವತ್ತು ರೂಪಗಳನ್ನು ಹಿಂದೆ ಹೇಳಿದಂತೆ, ಅನುದಿನದಿ=ನಿತ್ಯ ನಿತ್ಯದಲ್ಲಿ-ಕ್ಷಣ ಕ್ಷಣ ಬಿಡದಲೆ, ನೆನವರಿಗೆ= ಧ್ಯಾನಿಸುವರಿಗೆ, ನಳಿನಾಕ್ಷ=ಅರಳಿದ ಕಮಲಗಳಂತೆ ಕಣ್ಣುಗಳುಳ್ಳ, ಕರುಣಾ ಮಯ ದೃಷ್ಟಿಯುಳ್ಳ ಶ್ರೀಹರಿಯು, ಜನ್ಮಗಳನ್ನು ಐದಿಸನು=ಮುಂದೆ ಇಂಥ ಸಂಸಾರದಲ್ಲಿ ಸುಖದುಃಖ ಸಮ್ಮಿಶ್ರವಾದ ಜನ್ಮಗಳನ್ನು ಕೊಡುವದಿಲ್ಲ. ಹೇಗೆಂದರೆ, ರಣದೊಳು ಮೈದುನನ ಕಾಯ್ದಂತೆ=ಕುರುಪಾಂಡುವ ಯುದ್ಧ ಭೂಮಿಯಲ್ಲಿ ಮೈದುನ ಅರ್ಜುನನನ್ನು ಕಾಯ್ದಂತೆ=ರಕ್ಷಣ ಮಾಡಿದಂತೆ ಸಲಹುವನು=ರಕ್ಷಣ ಮಾಡುವನು. ಚೈದವಗೆ ಗತಿ ಇತ್ತ=ರಾಜಸೂಯ ಯಜ್ಞ ಕಾಲದಲ್ಲಿ ಅಗ್ರಪೂಜೆ ಶ್ರೀ ಕೃಷ್ಣನಿಗೆ ಮಾಡುವಾಗ್ಗೆ ಶಿಶುಪಾಲನು ಶ್ರೀ ಕೃಷ್ಣನನ್ನು ಬೈದನು. ಶಿಶುಪಾಲನಲ್ಲಿ ಜಯ ದ್ವಾರಪಾಲನ ಆವೇಶ ಇದ್ದ ಕಾರಣ, ಜಯನಿಗೆ ಗತಿ ಇತ್ತನು. ಶಿಶುಪಾಲನಾದ ರಕ್ಕಸನಿಗೆ ಅವನ ಸ್ವರೂಪ ಯೋಗ್ಯತೆಯಂತೆ ನಿತ್ಯ ನರಕವನ್ನು ಪೊಂದಿಸಿದ. ಜೀವರ ಯೋಗ್ಯತೆಯಂತೆ ಅವರವರ ಗತಿ ಕೊಡುವನು. ಭಯಹರ=ಸಂಸಾರ ಭಯವನ್ನು ಪರಿಹರಿಸುವನು. ಕಾರಣವೇನೆಂದರೆ ಶ್ರೀಹರಿಯು ಭಕ್ತ ವತ್ಸಲನು=ಭಕ್ತರನ್ನು ಸಂರಕ್ಷಣೆ ಮಾಡುವ ಬಿರದುಳ್ಳ ಕರುಣಾಕರನು ||೭||




**ದ್ರೌಪದೀಶಪತಿ ವಿಠಲರು :** ಐದು ಅಗ್ನಿಗಳಲ್ಲಿ,

೧) ನಾರಾಯಣ=ಅಗ್ನಿ.

೨) ವಾಸುದೇವ=ಧೂಮ.

೩) ಸಂಕರ್ಷಣ=ಉರಿ.

೪) ಪ್ರದ್ಯುಮ್ನ=ಕೆಂಡ.

೫) ಅನಿರುದ್ಧ=ಕಿಡಿ.

ಈ ಐದು ಅಂಶ ರೂಪ, ಐದು ಅಂಶರೂಪದ ೨೫ ಸವಿತಾದಿ ೨೫ರಲ್ಲಿ ಅಂಶ ೫ ಹೀಗೆ ಮೂವತ್ತು ರೂಪದಿಂದ ರಮಿಸುತ್ತಾನೆ. ಈ ೨೫ರಲ್ಲಿ ೨೪ ತತ್ವಗಳು ಗುಣತ್ರಯ ಮೂರು ಕೂಡಿ ಒಂದು. ತದಭಿಮಾನಿ ದೇವಾಂತರ್ಗತನಾಗಿ, ವಿಹಾರ ಮಾಡುತ್ತಾನೆ ॥ ೭ ॥

**ಭಾವಸೂಚನ :** ಐದೇತಿ ॥ ಐದಿಸನು=ಕಳಿಸೋದಿಲ್ಲ. ಮೈದುನ=ರುಗ್ಮಿ ॥ ೭ ॥

**ನೋಟ್ :** ಮೈದುನ=ಶ್ರೀ ರುಕ್ಮಿಣಿದೇವಿಯರ ತಮ್ಮ ರುಗ್ಮಿಯನ್ನು ವಿವಾಹ ಕಾಲದಲ್ಲಿ ಸಂಹರಿಸದೇ, ಶ್ರೀ ರುಕ್ಮಿಣಿದೇವಿಯವರ ವಚನದಂತೆ ಜೀವದಾನವಿತ್ತು ಕಾಯ್ದನು. ಶ್ರೀ ಭಾಗವತಾಚಾರ್ಯರ ವಚನಕ್ಕೆ ಸರಿಯಾಗಿದೆ. ಇದೊಂದು ರೀತಿ ಅರ್ಥ. ರಣದೊಳಗೆ ಎಂಬುದಕ್ಕೆ ಯುದ್ಧ ಕಾಲ ಪ್ರಸಕ್ತಿ ಬರುವದು. ಜ್ಞಾನಿಗಳು ವಿಚಾರ ಮಾಡತಕ್ಕದ್ದು.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಅಥ "ಯ ಏತಾನ್ ಏವಂ ಪಂಚಾಗ್ನೀನ್ ವೇದ" ಇತಿ ಫಲಾಭಿಜ್ಞಸ್ಯ ಸುಯಜ್ಞಸ್ಯಾಪಿ ಫಲಂ ಕಿಂ ತದುಪಾಸಕಸ್ಯ ಇತ್ಯಾಹ "ಐದು" ಇತಿ ॥ "ತದಾಜ್ಞಯೇತಿ ವಿಜ್ಞಾಯ ಕಾಲೇ ಯಾಯಾತ್ ಸ್ವಯೋಷಿತಿ (ತಮ್ ॥ ಇತಿ ವಿಷ್ಣು ರಹಸ್ಯೋಕ್ತೇಃ ॥ ಶ್ರುತಿಸ್ಮೃತೀ ಹರೇರಾಜ್ಞೇ ಇತ್ಯುಕ್ತೇಃ ಅವಶ್ಯವೇದ್ಯತಾ॥ ಮೈದುನ ರುಕ್ಮೀ॥ ಬಹು ನೀಚ ಜರಾಸುತಾದಿ ಸಹಾಯಸ್ಯಾಪಿ ಶ್ರೀ ವಧೂವಾಗಮೃತಯಂತ್ರಿತ ತ್ವಾತ್ ರಕ್ಷಣಂ ಯಥಾ ತದ್ವತ್ ಪಂಚಮಹಾಪಾತಕಿಭಿಃ ಸಮಾಚರನ್ನಪಿ ಪಾಪ್ಮನಾ ಅವಿದ್ಧಃ ಪಂಚಾಗ್ನಿ ವೇದನಾಭಿವ್ಯಕ್ತ ತ್ರಿಂಶನ್ಮೂರ್ತಿ ಪ್ರಸಾದೇನೆ" ಇತಿ ಭ್ರೂತೇ ತಾವದುಪನಿಷತ್ ॥ "ಯಃ ಪಂಚಾಗ್ನೀನ್ ವೇದ ನ ಸ ತೈರಪ್ಯಾಚರನ್ ಪಾಪ್ಮನಾ

ಲಪ್ಯತೇ ಶುದ್ಧಃ ಪೂತಃ ||" ಇತಿ || ತೈರಿತಿ || ತದೇಷ ಶ್ಲೋಕಃ | ಸ್ತೇನೋ ಹಿರಣ್ಯಸ್ಯ ಸುರಾಂ ಪಿಬಂಶ್ಚ (ನ್ ಚ) ಗುರೋಃ ತಲ್ಪಂ ಆವಸನ್ ಬ್ರಹ್ಮಹಾ ಚ || ಏತೇ ಪತಂತಿ ಚತ್ವಾರಃ ಪಂಚಮಶ್ಚ ಆಚರನ್ ಚ ತೈಃ || ಪ್ರಕೃತೇ ಅನರ್ಹಾಃ ಗ್ರಾಹ್ಯಾಃ || ಮೈದುನೇತ್ಯಸೂಚಿ ಅಯಮರ್ಥಃ || ಬೈದವಗೆ ಇದಂ ದ್ವೇಷಿಗತಿದಾನಂ "ಸರ್ವಥಾ ಭಕ್ತಿತೋ ಮುಕ್ತಿಃ ದ್ವೇಷಾತ್ ತಮ ಉದೀರಿತಮ್ ||" ಇತಿ ತೃತೀಯ ಭಾಗವತ ತಾತ್ಪರ್ಯ ವಿರೋಧಿ ಇತಿ ಚೇತ್ ತದವಚ್ಛಿನ್ನಜಯ ಪರತಾಂ ಬ್ರೂಮಃ|| ತತ್ರ ಜೀವದ್ವಂದ್ವಮುದ್ರಯಾ ಗತಿದ್ವಯಮ್ || ಕಿಂ ಪ್ರಮಾಣಮಿತಿ ಚೇತ್ "ಜೀವದ್ವಯ ಸಮಾಯೋಗಾತ್ ಗತಿದ್ವಯ ಜಿಗೀರ್ಷವಃ ||" ಇತಿ || "ಶಿಶುಪಾಲಾದಿಷು ದ್ವಿಧಾ ಜೀವಾಃ ಸಂತಃ ತು ಅಸಂತಶ್ಚ" ಇತಿ ಚ || ಭಕ್ತವತ್ಸಲಃ ಓಂ ಗೃಹಂ(ಹೇ) ನಮಸ್ವಿನಃ ತೂತುಜಾನೋ ಮಹೇಮತೇಃಶ್ವೇಭಿಃ ಪ್ರಷಿತಪ್ಸುಭಿಃ|| ಆಯಾಹಿ ಯಜ್ಞಮಾಶುಭಃ ಶಮಿದ್ಧಿ || ಓಂ || ಭಜಸೇವಾಯಾಂ | ಸೇವ್ಯತೇ ಇತಿ ಭಕ್ತಂ ಧಾನಾದಿಕಂ ಪ್ರತಿ ವತ್ಸಲಾಃ ತತ್ಪ್ರೇಪ್ಸವಃ ಇತಿ ಯಾವತ್ ಅಶ್ವಾಃ ಯಸ್ಯ ಸ ತಥೋಕ್ತಃ || ೭ ||

## ಕನ್ನಡಾರ್ಥ

"ಅಥ ಏತಾನ್ ಪಂಚಾಗ್ನೀನ್ ವೇದ" "ಯಾರು ಈ ಪಂಚಾಗ್ನಿಗಳನ್ನು ತಿಳಿದವರೋ" ಎಂದು ಛಾಂದೋಗ್ಯ ಉಪನಿಷತ್ತಿನಲ್ಲಿ ಹೇಳಿದಂತೆ ಪಂಚಾಗ್ನಿ ವಿದ್ಯೆಯ ಫಲಶವನ್ನು ತಿಳಿಯುವವನಿಗೆ ಯಜ್ಞ ಫಲವು ಬರುತ್ತದೆ; ಎಂದಮೇಲೆ ಈ ಪಂಚಾಗ್ನಿ ಹೋತ್ರಗಳ ಉಪಾಸನೆಯನ್ನು ಮಾಡುವವನಿಗೆ "ಮತ್ತಿನ್ನೇನು ಫಲ" ? ಎಂದು ಹೇಳುತ್ತಾರೆ ದಾಸವರ್ಯರು— "ಐದು ಅಗ್ನಿಗಳಲ್ಲಿ" ಎಂಬ ಪದ್ಯದಿಂದ–

ವಿಷ್ಣು ರಹಸ್ಯದಲ್ಲಿ–"ಗೃಹಸ್ಥಾಶ್ರಮಿಗೆ "ಇದು ಭಗವಂತನ ಆಜ್ಞೆಯು" ಎಂದು ತಿಳಿದು ಉಚಿತ–ಸಂಭೋಗಯೋಗ್ಯ ಋತು ಮುಂತಾದ ಕಾಲಗಳಲ್ಲಿ ಸ್ವಸ್ತ್ರೀ ಸಂಭೋಗ ಮಾಡಬೇಕು" ಎಂದು ಹೇಳಲಾಗಿರುತ್ತದೆ. "ಶ್ರುತಿ ಸ್ಮೃತಿಗಳು ಶ್ರೀಹರಿಯ ಅಪ್ಪಣೆ" ಎಂದು ಪ್ರಮಾಣಗಳಿರುವದರಿಂದ "ಯೋಷಿತ್" ಮುಂತಾದ ಪಂಚಾಗ್ನಿಗಳನ್ನು ಅತ್ಯವಶ್ಯಕವಾಗಿ ತಿಳಿಯಬೇಕು. "ಏವಂ ವೇದ" ಎಂದು ಫಲಸ್ತುತಿಯೊಂದಿಗೆ ಪಂಚಾಗ್ನಿ ಹೋತ್ರ

ವನ್ನು ಉಪಾಸಿಸಬೇಕು" ಎಂದು ಹರಿಯ ಆಜ್ಞಾರೂಪವಾದ ಉಪನಿಷದ್ವಿಧಿಯಿರುತ್ತದೆ.

"ಮೈದುನ"=ರುಕ್ಮಿ. ಬಹು ನೀಚರಾದ "ಜರಾಸಂಧ" ಮುಂತಾದ ಪಾಪಿಗಳಿಗೆ ಸಹಾಯ ಮಾಡುವ ರುಕ್ಮಿಯನ್ನು-ತನ್ನ ಹೆಂಡತಿಯಾದ ಶ್ರೀದೇವಿ-ರುಕ್ಮಿಣೀದೇವಿಯವರ ಅಮೃತಗಳಂತಿರುವ ವಚನ ಪಾಶಬದ್ಧನಾದ ಶ್ರೀಕೃಷ್ಣನು ರಕ್ಷಿಸಿದನು. ಅದರಂತೆ ಪಂಚಮಹಾಪಾತಕಿಗಳೊಡನೆ ಪಾಪ ಮಾಡುತ್ತಿದ್ದರೂ-ಪಾಪಗಳಿಂದ ಲಿಪ್ತನಾಗುವದಿಲ್ಲ-ಪಂಚಾಗ್ನಿಜ್ಞಾನದಿಂದ ಆದ ಮೂವತ್ತು ರೂಪಗಳ ಪ್ರಸಾದದಿಂದ "ಈ ಪಾಪಲೇಪವಾಗದಿರುವದು" ಈ ಮಹಾಫಲವು ಬರುತ್ತದೆ" ಎಂದು ಉಪನಿಷತ್ತು ಹೇಳುತ್ತದೆ. "ಪಂಚಾಗ್ನಿಗಳನ್ನು ತಿಳಿದುಕೊಂಡವನು ಪಾಪಿ ಸಹವಾಸದ ಪಾಪಗಳನ್ನು ತಪ್ಪಿಸಿಕೊಂಡು ಶುದ್ಧನೂ-ಪವಿತ್ರನೂ ಆಗಿರುತ್ತಾನೆ" ಎಂದು ಉಪನಿಷದ್ವಾಕ್ಯದ ಅರ್ಥ. ಇದೊಂದು ಪಂಚಾಗ್ನಿ ವಿದ್ಯೆಯ ಮಹಿಮೆಯನ್ನು ಬಣ್ಣಿಸುವ ಉಪನಿಷತ್ ಶ್ಲೋಕವಿದು. "(೧) ಸುವರ್ಣವನ್ನು ಕದಿಯುವವನು; (೨) ಸುರೆ(ಮದ್ಯ)ಯನ್ನು ಕುಡಿಯುವವನು; (೩) ಗುರುತಲ್ಪ (ಪತ್ನಿ)ಗಾಮಿಯು; (೪) ಬ್ರಹ್ಮಹತ್ಯೆಯನ್ನು ಎಸಗಿದವನು; (೫) ಈ ನಾಲ್ವರ ಸಹವಾಸದಲ್ಲಿರುವವನು; ಹೀಗೆ ಪಂಚಮಹಾಪಾತಕಿಗಳು. ಪ್ರಕೃತ ಸಂದರ್ಭಕ್ಕೆ "ಅನರ್ಹರ"ನ್ನು ಪರಿಗಣಿಸಬೇಕು. ಈ ಅರ್ಥವು "ಮೈದುನ" ಎಂಬ ಪದದಿಂದ ಸೂಚಿತವಾಗಿರುತ್ತದೆ. "ಬೈದವರಿಗೆ"-ಬೈದ ದ್ವೇಷಿಗೆ ಈ ರೀತಿ ಸಾಯುಜ್ಯಗತಿ ದಾನವು "ಭಕ್ತಿಯಿಂದಲೇ ಮುಕ್ತಿಯಾಗುತ್ತದೆ; ದ್ವೇಷದಿಂದ ತಮಸ್ಸು ಆಗುತ್ತದೆ" ಎಂದು ತೃತೀಯಸ್ಕಂಧದ ಶ್ರೀಮದಾಚಾರ್ಯರ ತಾತ್ಪರ್ಯವಚನಕ್ಕೆ ವಿರುದ್ಧವಾಗುತ್ತದೆ" ಎಂದು ಒಂದು ಆಕ್ಷೇಪವು ಬರುತ್ತವೆ. ಆದರೆ ಇದಕ್ಕೆ ಶ್ರೀ ಶುಕಾಚಾರ್ಯರೇ ಉತ್ತರ ಕೊಟ್ಟಿರುತ್ತಾರೆ. "ಚೈದ್ಯ, ಶಿಶುಪಾಲ ಮುಂತಾದವರು ದ್ವೇಷದಿಂದ ಸದ್ಗತಿಯನ್ನು ಹೊಂದಿದ್ದಾರೆ" ಎಂದು ಭಾಗವತ ಸಪ್ತಮಸ್ಕಂಧದಲ್ಲಿ. ಹಾಗಾದರೆ "ಭಕ್ತಿಯಿಂದಲೇ ಮುಕ್ತಿಯಾಗುತ್ತದೆ" ಎಂಬ ಮಾತಿಗೆ ಕೇವಲ ಅರ್ಥವಾದವೆಂದೇ ಹೇಗೆ ಹೇಳಬೇಕು? ದ್ವೇಷಮಾಡುವವನ ಶರೀರದಲ್ಲಿರುವ (ಚೈದ್ಯನ ದೇಹದಲ್ಲಿರುವ) "ಜಯ" ಎಂಬ ದ್ವಾರಪಾಲಕನಿಗೆ

"ಮುಕ್ತಿಯು ಆಗಿದೆ" ಎಂದು ಹೇಳುತ್ತೇವೆ. ಶಿಶುಪಾಲ ಮುಂತಾದವರಲ್ಲಿ "ಜೀವದ್ವಯ"-ಎರಡು ಜೀವಗಳಿರುವದರಿಂದ ಅದಕ್ಕನುಸಾರವಾಗಿ ಎರಡು ವಿಧ ಗತಿಗಳನ್ನು ತಿಳಿಯಬೇಕು. ಹೀಗೆ ಹೇಳುವದರಲ್ಲಿ ಪ್ರಮಾಣವೇನು? ಎಂದು ಕೇಳಿದರೆ, ಶ್ರೀಮದಾಚಾರ್ಯರ ವಚನಗಳೇ! ಎಂದು ತಿಳಿಯಬೇಕು. "ಎರಡು ಜೀವರು ಇರುವದರಿಂದ ಇಬ್ಬರಿಗೂ ಎರಡು ವಿಧದ ಗತಿಗಳಿರುತ್ತವೆ." "ಶಿಶುಪಾಲ ಮುಂತಾದವರಲ್ಲಿ ಎರಡು ವಿಧ ಜೀವರು; "ಸುಜೀವ-ದುರ್ಜೀವ" ಎಂದು. ಈ ಎರಡು ವಾಕ್ಯಗಳಿಂದ ಈ ಅರ್ಥವು ಸಿದ್ಧವಾಗುತ್ತದೆ.

"ಭಕ್ತವತ್ಸಲ"=ಇದು ವಿಷ್ಣು ಸಹಸ್ರನಾಮಗಳಲ್ಲಿಯ ಒಂದು ನಾಮ. ಇದರ ಅರ್ಥವನ್ನು "ಗೃಹಂ ನನುಸ್ವಿನಃ" ಎಂಬ ಬೃಹತೀ ಋಙ್ಮಂತ್ರವು ವಿವರಿಸುತ್ತದೆ. "ಭಜ" ಎಂದರೆ "ಸೇವಿಸು" ಎಂದು ಅರ್ಥ. ಯಾವುದನ್ನು ಸೇವಿಸುತ್ತೇವೆಯೋ, ಯಾವದು ಸೇವಿತವಾಗುತ್ತದೆಯೋ ಅದು ಭಕ್ತ; ಅಂದರೆ ಧಾನ, ಕಡಲೆ ಮುಂತಾದ ಧಾನ್ಯ. ಅದನ್ನು ಕುರಿತು ಪ್ರೀತಿಪಡುವ-ಹೊಂದಲು ಅಪೇಕ್ಷಿಸುತ್ತಿರುವ ಅಶ್ವಗಳುಳ್ಳವನು ಭಕ್ತವತ್ಸಲ" ಎಂದು ಈ ಬೃಹತೀ ಋಙ್ಮಂತ್ರದ ಸಾರ. ಅಥವಾ ಯಜ್ಞಾರ್ಥವಾಗಿ ಅನ್ನ ಮುಂತಾದವುಗಳನ್ನು ವಿಭಜಿಸಿದ. ಅಂದರೆ, ಅನ್ನವನ್ನು ಹೋಮಿಸುವವರು. "ಭಕ್ತವತ್"-ಬ್ರಾಹ್ಮಣರು ಅವರನ್ನು ಅನುಸರಿಸುವದರಿಂದ ಪರಮಾತ್ಮನಿಗೆ ಭಕ್ತವತ್ಸಲನೆಂದು ಕರೆಯುತ್ತಾರೆ ॥ ೭ ॥

ಅವತರಣಿಕಾ: ಅನಿರುದ್ಧಾದಿ ಪಂಚರೂಪಗಳು ದೇಹದಲ್ಲಿ ಹೇಗೆ ವ್ಯಾಪಿಸಿ ಇರುತ್ತವೆಂಬುದನ್ನು ಪಂಚನಾರಿ ತುರಗವೆಂಬ ದೃಷ್ಟಾಂತದಿಂದ ತೋರಿಸುತ್ತಾರೆ.

**ಮೂಲ:**

**ಪಂಚನಾರೀ ತುರಗದಂದದಿ।**
**ಪಂಚರೂಪಾತ್ಮಕನು ತಾ ಪ।**
**ಟ್ಪಂಚರೂಪವಧರಿಸಿ ತತ್ತನ್ನಾಮದಿಂ ಕರೆಸಿ ॥**
**ಪಂಚ ಪಾವಕ ಮುಖದಿ ಗುಣಮಯ।**
**ಪಂಚ ಭೂತಾತ್ಮಕ ಶರೀರವ।**
**ಪಂಚವಿಧ ಜೀವರಿಗೆ ಕೊಟ್ಟಲ್ಲಲ್ಲೆ ರಮಿಸುವನು ॥ ೮ ॥**

**ಪದ್ಯಾರ್ಥ :** ಪಂಚನಾರೀ ತುರಗದಂದದಿ=ಐದು ಸ್ತ್ರೀಗಳಿಂದ ಕೂಡಿದ ಕುದುರೆಯಂತೆ "ಚಿತ್ರಕಲೆಗಾರರು ಪೂರ್ವ ಶಾಸ್ತ್ರಾನುಸರಿಸಿ ಬರೆದಿರುವ ಕುದುರೆಯಂತೆ, ಪಂಚರೂಪಾತ್ಮಕನು=ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ಈ ಐದು ರೂಪ ಮೂಲಹಾದವು. ಇವುಗಳಿಂದ ಒಂದೊಂದರಲ್ಲಿ ಐದರಂತೆ ಇಪ್ಪತ್ತೈದು ರೂಪಗಳು, ಇವೆಲ್ಲ ಕೂಡಿಸಿದರೆ ಷಟ್ಪಂಚರೂಪ ರೂಪಾತ್ಮಕನು=ಷಟ್ ೬ ಪಂಚ ೫=೬×೫=೩೦ ಮೂವತ್ತು ರೂಪಗಳನ್ನು ಧಾರಣಮಾಡಿ, ತತ್ತನ್ನಾಮದಿಂ ಕರೆಸಿ= ಆಯಾ ನಾಮಗಳಿಂದ ಕರೆಸುತ್ತ, ಪಂಚಪಾವಕ=ಐದು ಅಗ್ನಿಯ ಮುಖದಿ= ದ್ವಾರದಿಂದ-ಪಂಚಭೂತಾತ್ಮಕ, ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ ಇವುಗಳಲ್ಲಿ. ಗುಣಮಯ=ತ್ರಿಗುಣಾತ್ಮಕ, ಸತ್ವ, ರಜೋ-ತಮೋ ಗುಣಗಳಿಂದ-ಈ ಪಂಚಭೂತದಿಂದ ಮಿಳಿತವಾದ ಸ್ಥೂಲ ಶರೀರವನ್ನು, ಪಂಚವಿಧ ಜೀವರಿಗೆ=ದೇವ-ಋಷಿ-ಪಿತೃ, ಮಾನವ-ದಾನವರಿಗೆ, ಅಥವಾ ೧. ಮುಕ್ತಿಯೋಗ್ಯರು. ೨. ನಿತ್ಯ ಸಂಸಾರಿಗಳಲ್ಲಿ ಮೂರು ವಿಧ. ೧ ದಾನವರು ತಮೋ ಯೋಗ್ಯರಿಗೆ ಕೊಟ್ಟು, ಈ ಸ್ಥೂಲ ಶರೀರ, ಗತ ಎಲ್ಲ ವಿಭಾಗಗಳಲ್ಲಿದ್ದು ರಮಿಸುವನು. ಎಲ್ಲ ಅಂಗೋಪಾಂಗಗಳಲ್ಲಿದ್ದು, ಕಾರ್ಯ ಮಾಡುತ್ತ ರಮೆಯೊಡನೆ, ಸಕಲ ತತ್ವಾಭಿಮಾನಿ ದೇವತೆಗಳ ದ್ವಾರಾ ವಿಹಾರಮಾಡುವನು. ಶ್ರೀಕೃಷ್ಣನು ೫ ಜನ ಗೋಪಿಕಾ ಸ್ತ್ರೀಯರನ್ನು ಒಂದು ಕುದುರೆಯಾಗಿ ಮಾಡಿ ವಿಹಾರ ಮಾಡುತ್ತಿದ್ದನೆಂದು ಕೆಲವರ ಅಭಿಪ್ರಾಯ.

**ದ್ರೌಪದೀಶಪತಿ ವಿಠಲರು :** ಪಂಚನಾರೀ ತುರಗದಂದದಿ,

೧. ನಾರಾಯಣ ಮುಖ, ೨. ವಾಸುದೇವ ಮಧ್ಯಾಂಗ, ೩ ಸಂಕರ್ಷಣ ಪಾದ, ೪. ದಕ್ಷಿಣಾಂಗ ಪ್ರದ್ಯುಮ್ನ, ೫. ವಾಮಭಾಗ ಅನಿರುದ್ಧ ಇದೇ ಪಂಚಾತ್ಮಕ, ಷಟ್ಪಂಚದ ವಿವರ, ಆರೈದು ೬×೫=೩೦ ಮೂವತ್ತು. ಪಂಚವಿಧ ಜೀವರು, ೧ ದೇವ, ೨ ಋಷಿ, ೩. ಪಿತೃ, ೪ ದಾನವ, ೫. ಮಾನವ.

**ಭಾವ ಸೂಚನ :** ಪಂಚೇತಿ ॥ ಷಟ್ಪಂಚ=ಮೂವತ್ತು ॥ ಪಂಚವಿಧ ॥ ಸಾತ್ವಿಕಾದಿ ತ್ರಯ ಮುಕ್ತಿಯೋಗ್ಯ ತದಯೋಗ್ಯ ॥ ೮ ॥



## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ನನು ದ್ವಾವ್ಯದಿ ಪಂಚಾಗ್ನಿಷು ಪೃಥಕ್ ಪಂಚಾತ್ಮಾ ಧ್ಯೇಯಃ ಇತಿ ಅತ್ರ ಭಾಸತೇ। ಪೂರ್ವಪದ ವಚನಾಭ್ಯಾಂ ಅಸೂಚಿ ಚ। ತತ್ ಕಥಂ ಅವಿರ್ಭಾವಃ ಇತಿ ಚೇತ್ ॥ ಅತ್ರ ಬ್ರೂಮಃ ॥ ತತ್ರ ಏವಂ ಅನುಸಂಧಾನ ಪ್ರಕಾರಃ ॥ ತತ್ವನಿಯಾಮಕಾಃ ದೇವಾಃ ಹಿ ಉತ್ತರ ದೇಹಾರಂಭಕೈಃ ಭೂತ ಸೂಕ್ಷ್ಮೈಃ ಪರಿವೇಷ್ಟಿತಂ ಜೀವಂ ನಾರಾಯಣಾದಿ ಪಂಚಾಗ್ನಿಷು ಜುಹ್ವತಿ ॥ ತತ್ರ ಅಸೌ ಪ್ರಾಣೇ ಸ್ಥಿತತ್ವಾತ್ ಪ್ರಕಾಶರೂಪತ್ವಾಚ್ಚ ಅಸೌ ಲೋಕಾಭಿಧೇ ಸ್ವರ್ಗಲೋಕೇಸ್ಥಿತಃ ನಾರಾಯಣ ಏವ ಪ್ರಥಮಾಗ್ನಿಃ ॥ ಸಚ ಅದನಾತ್ ಅಂಗನೇತೃತ್ವಾತ್ ಅಗ್ನಿರಿತ್ಯುಚ್ಯತೇ ॥ ತಸ್ಯಾಗ್ನೇಃ ನಾರಾಯಣೋ ದ್ಭೂತಾನಿ ನಾರಾಯಣಾದೀನಿ ಪಂಚ ರೂಪಾಣಿ ಭವಂತಿ ॥ ತಥಾಹಿ ॥

ಪ್ರಾಣಿಕೃತಂ ಕರ್ಮಜಾತಂ ಆದಾಯ ಯಾತಿ ಇತಿ ಆದಿತ್ಯನಾಮಾ ಆದಿತ್ಯಾಂತರ್ಗತೋ ನಾರಾಯಣ ನಾರಾಯಣಃ ಸಮೇಧನಾತ್ ಸಮಿತ್ ॥ ರಶಿಶಂ ಮಾನರೂಪತ್ವಾತ್ ರಶ್ಮಿಸ್ಥಿತೋ ನಾರಾಯಣ ವಾಸುದೇವಃ ಅಜ್ಞಾನಾದೀನಾಂ ಧೂತ್ಕರಣಾತ್ ಧೂಮಃ ॥ ತಮಸಾ ಅಹನೀಯತ್ವಾತ್ ಅಹರ್ನಾಮಾ ಅಹಃಸಂಸ್ಥಿತೋ ನಾರಾಯಣ ಸಂಕರ್ಷಣಃ ಅರಂಚಿತತ್ವಾತ್ ಅರ್ಚಿಃ ॥ ಆಹ್ಲಾದರೂಪತ್ವಾತ್ ಚಂದ್ರನಾಮಾ ಚಂದ್ರಸಸ್ಥಿತೋ ನಾರಾಯಣ ಪ್ರದ್ಯುಮ್ನಃ ಅಂಗರತೇಃ ಅಂಗಾರಃ ॥ "ನ ವಿದ್ಯತೇ ಕ್ಷತ್ರಂ ಪಾಲಕಃ ಯಸ್ಯ" ಇತಿ ನಕ್ಷತ್ರನಾಮಾ ನಕ್ಷತ್ರಸ್ಥೋ ನಾರಾಯಣಾನಿರುದ್ಧೋ ವಿವಿಧಂ ಸ್ಫುರಣಾತ್ ವಿಸ್ಫುಲಿಂಗಃ ಇತಿ ॥ ೧ ॥ ಸೋಮಃ ರಾಜಾ ಭವತಿ ॥ ತತ್ರ ಜೀವಂ ಪ್ರವೇಶಯಂತಿ ॥ ಏವಂ ದೇವಾಃ ನಾರಾಯಣಾದಿ ಪಂಚರೂಪಾತ್ಮಕ ಸಮಿದಾದಿ ಪಂಚರೂಪೋಪಪನ್ನೇ ನಾರಾಯಣಾಖ್ಯೇ ಪ್ರಥಮಾಗ್ನೌ ಹುತ್ವಾ ತತಃ ಚಂದ್ರದ್ವಾರಾ ಪರ್ಜನ್ಯಾಹ್ವದ್ವಿತೀಯಾಗ್ನೌ ಜುಹ್ವತಿ ॥ ಪರಂ ಬ್ರಹ್ಮಾದಿಕಮಪಿ ಜನ್ಯಂ ಅಸ್ಯ ಇತಿ ಪರ್ಜನ್ಯನಾಮಾ ಪರ್ಜನ್ಯಸ್ಥಃ ವಾಸುದೇವಃ ದ್ವಿತೀಯಾಗ್ನಿಃ ॥ ಅಸ್ಯ ಅಗ್ನೇಃ ವಾಸುದೇವೋದ್ಭೂತಾನಿ ನಾರಾಯಣಾದಿಪಂಚರೂಪಾಣ್ಯೇವ ಸಮಿದಾದಿ ಪಂಚರೂಪಾಣಿ॥ ತಥಾಹಿ ॥ ಜ್ಞಾನಾಯುರೂಪತ್ವಾತ್ ವಾಯುನಾಮಾ ವಾಯುಸ್ಥಃ ವಾಸುದೇವ ನಾರಾಯಣಃ ಸಮಿತ್ ॥ ಅಪಾಂಭರಣಾತ್ ಅಭ್ರನಾಮಾ ಅಭ್ರಸ್ಥಃ ವಾಸುದೇವ ವಾಸುದೇವಃ ಧೂಮಃ ॥ ವಿಶೇಷೇಣ ದ್ಯೋತನಾತ್ ವಿದ್ಯುನ್ನಾಮಾ ವಿದ್ಯುತ್‌ಸಂಸ್ಥಿತಃ ವಾಸುದೇವಸಂಕರ್ಷಣಃ ಅರ್ಚಿಃ ॥ ಅಶನಾತ್ ಅಶನಿನಾಮಾ ಅಶನಿಗತಃ ವಾಸುದೇವಪ್ರದ್ಯುಮ್ನಃ ಅಂಗಾರಃ ॥ ನಿರ್ಹ್ರಾದನಾತ್ "ಹ್ರಾದುನಿ"ನಾಮಾ ಹ್ರಾದುನಿಸ್ಥಃ ವಾಸುದೇವಾನಿರುದ್ಧಃ ವಿಸ್ಫುಲಿಂಗಃ ಇತಿ ॥ ೨ ॥ ವರ್ಷಃ ತತ್ರವಿಷ್ಟಃ ಜೀವಃ ॥ ಏವಂ ನಾರಾಯಣಾದಿ ಪಂಚರೂಪಾತ್ಮಕ ಸಮಿದಾದ್ಯುಕ್ತರೂಪೋಪಪನ್ನೇ ವಾಸುದೇವಾಖ್ಯದ್ವಿತೀಯಾಗ್ನೌ ಹುತ್ವಾ ತತಃ ವೃಷ್ಟಿದ್ವಾರಾ ತೃತೀಯಾಗ್ನೌ ಜುಹ್ವತಿ ॥ ಪ್ರಥಿತತ್ವಾತ್ ಪೃಥಿವೀಸಂಸ್ಥಃ ಸಂಕರ್ಷಣಃ ತೃತೀಯಾಗ್ನಿಃ ॥ ಅಸ್ಯ ಅಗ್ನೇಃ ಸಂಕರ್ಷಣೋದ್ಭೂತಾನಿ ನಾರಾಯಣಾದಿ ಪಂಚರೂಪಾಣ್ಯೇವ ಸಮಿದಾದಿ ಪಂಚರೂಪಾಣಿ ॥ ತಥಾ ಹಿ । ಸಮ್ಯಗಾತ್ ವಾಸಯತಿ ಇತಿ ಸಂವತ್ಸರ

ನಾಮಾ ಸಂವತ್ಸರಸ್ಥಃ ಸಂಕರ್ಷಣನಾರಾಯಣಃ ಸಮಿತ್ ।। ಪ್ರಕಾಶನಾತ್ ಆಕಾಶನಾಮಾ ಆಕಾಶಸ್ಥಃ ಸಂಕರ್ಷಣ ವಾಸುದೇವಃ ಧೂಮಃ ।। ರತಿ ದಾತೃತ್ವಾತ್ ರಾತ್ರಿನಾಮಾ ರಾತ್ರಿಸ್ಥಃ ಸಂಕರ್ಷಣಸಂಕರ್ಷಣಃ ಅರ್ಚಿಃ ।। ಮೋಕ್ಷಾದಿ ಪುರುಷಾರ್ಥಂ ದಿಶತೀತಿ ದಿಙ್ನಾಮಾ ದಿಕ್‌ಸಂಸ್ಥಃ ಸಂಕರ್ಷಣ ಪ್ರದ್ಯುಮ್ನಃ ಅಂಗಾರಃ ।। ಸ್ವರ್ಗಾದ್ಯವಾಂತರಂ ದಿಶತಿ ಇತಿ ಅವಾಂತರ ದಿಙ್ನಾಮಾ ಅವಾಂತರದಿಕ್‌ಸಂಸ್ಥಃ ಸಂಕರ್ಷಣಾನಿರುದ್ಧಃ ವಿಸ್ಫುಲಿಂಗಃ ।।೩।। ಅನ್ನಂ ಪ್ರನಿಷ್ಟೈಃ ಜೀವಃ।। ಏವಂ ಸಂಕರ್ಷಣಾಖ್ಯೇ ತೃತೀಯಾಗ್ನೌ ಹುತ್ವಾ ಅನ್ನದ್ವಾರಾ ಚತುರ್ಥಾಗ್ನೌ ಜುಹ್ವತಿ ।। ಪುರುತ್ವಾತ್ ಪೂರ್ಣ ತ್ವಾತ್ ಪುರುಷನಾಮಾ ಪುರುಷಸ್ಥಃ ಪ್ರದ್ಯುಮ್ನಃ ಚತುರ್ಥಾಗ್ನಿಃ ।। ಅಸ್ಯ ಅಗ್ನೇಃ ಪ್ರದ್ಯುಮ್ನೋದ್ಭೂತಾನಿ ನಾರಾಯಣಾದಿ ಪಂಚರೂಪಾಣ್ಯೇವ ಸಮಿದಾದಿ ಪಂಚ ಭಗವದ್ರೂಪಾಣಿ ॥ ತಥಾಹಿ-।। ವಚನಾತ್ ವಾಙ್‌ನಾಮಾ ವಾಚಿಸಂಸ್ಥಃ ಪ್ರದ್ಯುಮ್ನನಾರಾಯಣಃ ಸಮಿತ್ ॥ ಪ್ರಕರ್ಷೇಣ ಅನನಾತ್ ಪ್ರಾಣನಾಮಾ ಪ್ರಾಣಸಂಸ್ಥಃ ಪ್ರದ್ಯುಮ್ನವಾಸುದೇವಃ ಧೂಮಃ ।। ಹೂಯತೇ ಅಸ್ಮಿನ್ ಇತಿ ಜಿಹ್ವಾನಾಮಾ ಜಿಹ್ವಾಸ್ಥಃ ಪ್ರದ್ಯುಮ್ನಸಂಕರ್ಷಣಃ ಅರ್ಚಿಃ ॥ ದರ್ಶನಾತ್ ಚಕ್ಷುರ್ನಾಮಾ ಚಕ್ಷುಸ್ಥಃ ಪ್ರದ್ಯುಮ್ನ ಪ್ರದ್ಯುಮ್ನಃ ಅಂಗಾರಃ ॥ ಶ್ರವಣಾತ್ ಶ್ರೋತ್ರನಾಮಾ ಶ್ರೋತ್ರಸ್ಥಃ ಪ್ರದ್ಯುಮ್ನಾನಿರುದ್ಧಃ ವಿಸ್ಫುಲಿಂಗಃ ಇತಿ ॥ ಏವಂ ಪ್ರದ್ಯುಮ್ನದ್ವಾರೇಣ ಚತುರ್ಥಾಗ್ನೌ ಹುತ್ವಾ ರೇತೋದ್ವಾರಾ ಪಂಚಮಾಗ್ನೌ ಜುಹ್ವತಿ ॥ ಜೋಷ್ಯತ್ವಾತ್ ಭೋಗ್ಯತ್ವಾತ್ ಯೋಷಾನಾಮಾ ಯೋಷಾಸ್ಥಃ ಅನಿರುದ್ಧಃ ಪಂಚಮಾಗ್ನಿಃ ॥ ಅಸ್ಯ ಅಗ್ನೇಃ ನಾರಾಯಣಾದಿ ಪಂಚರೂಪಾಣ್ಯೇವ ಸಮಿದಾದಿಪಂಚರೂಪಾಣಿ । ತಥಾಹಿ- ॥ ಉಪಸಮೀಪೇ ಸ್ಥಿತತ್ವಾತ್ ಉಪಸ್ಥ ನಾಮಾ ಉಪಸ್ಥಸ್ಥಿತಃ ಅನಿರುದ್ಧನಾರಾಯಣಃ ಸಮಿತ್ ।। ಉಪಮಂತ್ರಣ ಕರ್ತೃತ್ವಾತ್ ಉಪಮಂತ್ರಣನಾಮಾ ಉಪಮಂತ್ರಣಸ್ಥಃ ಅನಿರುದ್ಧವಾಸುದೇವಃ ಧೂಮಃ ॥ ಯುನಕ್ತಿ ಮಿಶ್ರೀಕರೋತಿ ಇತಿ ಯೋನಿನಾಮಾ ಯೋನಿಸ್ಥಃ ಅನಿರುದ್ಧಸಂಕರ್ಷಣಃ ಅರ್ಚಿಃ ॥ ಯೋನ್ಯಂತಃಕ್ರಿಯಮಾಣ ವ್ಯಾಪಾರ ಕರ್ತೃತ್ವಾತ್ ಅಂತಃಕರಣನಾಮಾ ಅಂತಃಕರಣಸ್ಥಃ ಅನಿರುದ್ಧ ಪ್ರದ್ಯುಮ್ನಃ ಅಂಗಾರಃ ॥ ಅಭಿನಂದಯತಿ ಇತಿ ಅಭಿನಂದನಾಮಾ ಅಭಿನಂದ

ಸ್ಥಿತಃ ಅನಿರುದ್ಧಾನಿರುದ್ಧಃ ವಿಸ್ಫುಲಿಂಗಃ ಇತಿ ಗರ್ಭಸ್ಥಃ ॥ ಏವಂ ಕ್ರಮೇಣ ಪಂಚಾಗ್ನೌ ಹೋಮಾನಂತರಂ ಪುರುಷಶಬ್ದಿತಃ ದೇಹಃ ಜಾಯತೇ ॥ ತತ ಏವ ಅಯಂ "ಪುರುಷಃ" ಇತ್ಯುಚ್ಯತೇ ॥ ಇತಿ ಉಪಾಸನಾಯಾಮ್ ॥ ನನು ನಾರಾಯಣಾದ್ಯಾತ್ಮಾ ತ್ರಿಂಶದಾತ್ಮಾ ಅವಿಕೃತಃ ಏವ ಏಕದಾ ಕಥಂ ಆವಿರ್ಬಭೂವ? ಅನ್ಯತ್ರ ಕನಕ ಕುಂಡಲಾದಿ ಭಾವನಿದರ್ಶನೋಕ್ತೇಃ ಚ ಕಿಂ ಬೀಜಮ್? ಇತಿ ಚೇತ್ ಅಭೇದಮಾತ್ರ ಏವ ಸಾ ॥ ಇತಿ ಭಾವೇನ ॥ "ಹರೇರಪಿ ಸ್ವರೂಪಾಣಾಮ್" ಇತಿ ಆರ್ಯಾರ್ಯೋಃ(ರ್ಯೋಃ) ದಿತರಿತ ಸಂಶ್ಲೇಷಂ ಲೌಕಿಕನಿದರ್ಶನಾರೂಢಂ ಕರ್ತುಮಾಹ–"ಪಂಚೇತಿ" ॥ ನಾಮ ದಿಂ–ನಾಮಭಿಃ ॥ ಮಯ–ವಿಕಾರ ಪಂಚ ವಿಧಾಃ ಸಾತ್ವಿಕಾಃ। ತ್ರಿದಿವ ನಿರಯಭೂಪ್ರಚುರಾಃ ತ್ರಯಃ ರಾಜಸಃ ॥ ತಮಸ್ಸ್ತಾಃ(ಸ್ಥಾಃ) ಚ ॥ ಇತಿ ಸಾಂಪ್ರದಾಯಕಾಃ ॥ ೮ ॥

## ಕನ್ನಡಾರ್ಥ

"ದ್ಯು ಮುಂತಾದ ಪಂಚಾಗ್ನಿಗಳಲ್ಲಿ ಬೇರೆಬೇರೆಯಾಗಿ (ಪ್ರತ್ಯೇಕವಾಗಿ) ಪಂಚರೂಪಿ ಹರಿಯನ್ನು ತಿಳಿದುಕೊಳ್ಳಬೇಕು" ಎಂಬ ಸಂಗತಿಯು ಇಲ್ಲಿ (ಈ ಸಂದರ್ಭದಲ್ಲಿ) ತಿಳಿದುಬರುತ್ತದೆ; ಹಾಗೂ ಪೂರ್ವಪದಗಳಿಂದ ಸೂಚಿತವೂ ಆಗುತ್ತದೆ. ಜೀವನು ಇಲ್ಲಿ ಬರುವದು ಹೇಗೆ? ಅಂದರೆ ಈ ರೀತಿಯಾಗಿ ಇಲ್ಲಿ ತಿಳಿಯಬೇಕು.

ತತ್ವನಿಯಾಮಕದೇವತೆಗಳು ಮುಂಬರುವ ದೇಹವನ್ನು ಹುಟ್ಟಿಸುವ (ಆರಂಭಿಸುವ) ಸೂಕ್ಷ್ಮಭೂತಗಳಿಂದ (ಪಂಚಮಹಾಭೂತಗಳ ಸೂಕ್ಷ್ಮ ಅಂಶಗಳಿಂದ) ಸುತ್ತುಮುತ್ತಲೂ ಸಂಬದ್ಧನಾದ ಜೀವನನ್ನು ನಾರಾಯಣ ಮುಂತಾದ ಐದು ಅಗ್ನಿಗಳಲ್ಲಿ ಹೋಮಿಸುತ್ತಾರೆ (ಇಡುತ್ತಾರೆ.) ಪ್ರಾಣ ನಲ್ಲಿದ್ದುದರಿಂದಲೂ ಪ್ರಕಾಶರೂಪನಾದುದರಿಂದಲೂ "ಅಸೌಲೋಕ" ಎಂದು ಕರೆಯಲ್ಪಡುವ ಸ್ವರ್ಗಲೋಕ(ದ್ಯು)ದಲ್ಲಿರುವ ನಾರಾಯಣನೇ ಒಂದನೆಯ ಅಗ್ನಿಯು. ಲೋಕವನ್ನು ತಿನ್ನು (ಸಂಹರಿಸು)ವದರಿಂದಲೂ ಅವಯವ (ಅಂಗ)ಗಳನ್ನು ಪ್ರೇರಿಸುವದರಿಂದಲೂ (ನಡೆಯಿಸು) ಅವನು "ಅಗ್ನಿ" ಎಂದು ಹೇಳಿಸಿಕೊಳ್ಳುತ್ತಾನೆ. "ದ್ಯು" ಎಂಬ ಈ ಅಗ್ನಿಗೆ–ನಾರಾಯಣ ಮುಂತಾದ ಐದುರೂಪಗಳು "ಸಮಿಧೆ" ಮುಂತಾದ ಐದರಲ್ಲಿರುವ ರೂಪಗಳು ಆಗಿರು

ತ್ತವೆ. ಹೇಗೆಂದರೆ—ಪ್ರಾಣಿಗಳು ಮಾಡುವ ಸಕಲಕರ್ಮಗಳನ್ನೂ ತೆಗೆದು ಕೊಂಡು ಹೋಗುವದರಿಂದ "ಆದಿತ್ಯ"ನೆಂದು ಶ್ರೀ ಹರಿಯನ್ನು ಕರೆಯು ತ್ತಾರೆ. ಇವನೇ ಆದಿತ್ಯನಲ್ಲಿದ್ದು "ನಾರಾಯಣ ನಾರಾಯಣ" ಎಂದು ಕರೆಯಿಸಿಕೊಳ್ಳುತ್ತಾನೆ. ಮೂಲಾಗ್ನಿ ನಾರಾಯಣನಿಗೆ ಇವನು "ಸವಿತ್" ಎಂದು ಹೇಳಿಸಿಕೊಳ್ಳುತ್ತ ಸವಿಧೆಯಲ್ಲಿ ಇರುತ್ತಾನೆ. "ಅತಿಶಯ ಅಭಿ ವೃದ್ಧಿಯಿರುವದರಿಂದ ಸವಿತ್" ಎನ್ನುತ್ತದೆ. ರತಿ ಸುಖ ಜ್ಞಾನರೂಪನಾದು ದರಿಂದ ಶ್ರೀ ಹರಿಗೆ "ರಶ್ಮಿ" ಎನ್ನುತ್ತಾರೆ. ರಶ್ಮಿಗಳಲ್ಲಿರುವ ಈ ನಾರಾಯಣ ವಾಸುದೇವನನ್ನು "ಅಜ್ಞಾನ ಮುಂತಾದ ದೋಷಗಳನ್ನು ನಾಶಗೊಳಿಸುವ ದರಿಂದ "ಧೂಮ" ಎಂದು ಕರೆಯುತ್ತಾರೆ. ಕತ್ತಲೆ-ಅಜ್ಞಾನ ಮುಂತಾ ದವುಗಳಿಗೆ ಒಳಪಡುವದಿಲ್ಲವಾದುದರಿಂದ "ಅಹ" (ಹಗಲು) ಎಂಬುದಾಗಿ ನಾರಾಯಣನ ಸಂಕರ್ಷಣನಿಗೆ ಕರೆಯುತ್ತಾರೆ. "ಅಹ–ಹಗಲು" ಇದರ ಲ್ಲಿರುವ ಈ ನಾರಾಯಣ ಸಂಕರ್ಷಣನು ಅತಿಶಯವಾಗಿ ನಿರ್ವಿಕಾರನಾಗಿ ಪ್ರಕಾಶಮಯನಾದುದರಿಂದ ನಾರಾಯಣನು "ಅರ್ಚಿ" ಎನ್ನಿಸಿಕೊಳ್ಳುತ್ತಾನೆ. ಆಹ್ಲಾದರೂಪನಾದುದರಿಂದ "ಚಂದ್ರ"ನೆಂದು ಹೇಳಿಸಿಕೊಳ್ಳುವ-ಚಂದ್ರ ನಲ್ಲಿರುವ ನಾರಾಯಣ ಪ್ರದ್ಯುಮ್ನನು "ಅಂಗಾರ" "ಅಂಗಗಳಲ್ಲಿ ರಮಿಸುವ ದರಿಂದ "ಅಂಗಾರ" ಎಂದೆನಿಸಿಕೊಳ್ಳುತ್ತಾನೆ. ಇನ್ನೊಬ್ಬರಿಂದ ಪಾಲನವನ್ನು ಹೊಂದದ ಸರ್ವತಂತ್ರ ಸ್ವತಂತ್ರ ಪೋಷಕನಾದುದರಿಂದ "ನಕ್ಷತ್ರ" ಎಂದೆನಿಸಿ ಕೊಳ್ಳುವ, ನಕ್ಷತ್ರಗತನಾದ ನಾರಾಯಣಾನಿರುದ್ಧನು "ವಿಸ್ಫುಲಿಂಗ"= ವಿವಿಧವಾಗಿ ಸ್ಫುರಿಸುವದರಿಂದ (ಹೊಳೆಯುವದರಿಂದ) ವಿಸ್ಫುಲಿಂಗನೆಂದು ಕರೆಯಲ್ಪಡುತ್ತಾನೆ. "ಸೋಮೋ ರಾಜಾ ಭವತಿ" ಎಂಬ ಸಂದರ್ಭಗಳಲ್ಲಿ "ಚಂದ್ರ ಮುಂತಾದವರಲ್ಲಿ ಜೀವರನ್ನು ಸೇರಿಸುತ್ತಾರೆ" ಎಂದು ತಿಳಿಯ ಬೇಕು. ಹೀಗೆ ದೇವತೆಗಳು ನಾರಾಯಣ ಮುಂತಾದ ರೂಪಗಳಿಂದ "ಸವಿತ್" ಮುಂತಾದವುಗಳಲ್ಲಿದ್ದು, ಪಂಚರೂಪನಾದ "ನಾರಾಯಣ" ಎಂಬ ಒಂದನೆಯ ಅಗ್ನಿಯಲ್ಲಿ ಹೋಮಿಸಿ-ಅನಂತರ ಚಂದ್ರಮುಖಾಂತರ ವಾಗಿ ಪರ್ಜನ್ಯವೆಂಬ ಎರಡನೆಯ ಅಗ್ನಿಯಲ್ಲಿ ಹೋಮಿಸುತ್ತಾರೆ. (೧) ಬ್ರಹ್ಮಾದಿ ಶ್ರೇಷ್ಠರನ್ನೂ ಜನಯಿಸು (ಹುಟ್ಟಿಸು)ವದರಿಂದ "ಪರ್ಜನ್ಯ"ನೆಂದು ಕರೆಯಿಸಿಕೊಳ್ಳುವ-ಪರ್ಜನ್ಯ (ಮೇಘಪಂಕ್ತಿ)ಗತನಾದ ವಾಸುದೇವನು

ಎರಡನೆಯ ಅಗ್ನಿಯು. ಈ ಅಗ್ನಿಗೆ ವಾಸುದೇವರೂಪದಿಂದ ಉದ್ಭವಿಸಿರುವ ನಾರಾಯಣ ಮುಂತಾದ ಐದುರೂಪಗಳು, "ಸಮಿತ್" ಮುಂತಾದವುಗಳು. ಜ್ಞಾನ-ಹಾಗೂ ಬಲ (ಆಯು) ರೂಪನಾದುದರಿಂದ "ವಾಯು" ಎಂದು ಹೇಳಿಸಿಕೊಳ್ಳುವ ವಾಯುಗತ ವಾಸುದೇವ ನಾರಾಯಣನು ಸಮಿಥೆ. ನೀರುಗಳನ್ನು ತುಂಬಿಸುವದರಿಂದ "ಅಭ್ರ" ಶಬ್ದವಾಚ್ಯನಾದ ಅಭ್ರ(ಮೇಘ)ಗತನಾದ ವಾಸುದೇವ ವಾಸುದೇವನು ಧೂಮನು. ವಿಶೇಷವಾಗಿ ಮಿಂಚುವದರಿಂದ (ಹೊಳೆಯುವದರಿಂದ) "ವಿದ್ಯುತ್" ಎಂದು ಹೇಳಿಸಿಕೊಳ್ಳುವ ವಿದ್ಯುತ್ತಿನಲ್ಲಿರುವ ವಾಸುದೇವ ಸಂಕರ್ಷಣನು "ಅರ್ಚಿ." ಎಲ್ಲವನ್ನು ನುಂಗುವದರಿಂದ "ಅಶನಿ" ಎಂದು ಕರೆಯಲ್ಪಡುವ ವಾಸುದೇವ ಪ್ರದ್ಯುಮ್ನನು (ಅಶನಿಯಲ್ಲಿದ್ದು) "ಅಂಗಾರ." ವಜ್ರದಂತೆ ವಿಚಿತ್ರವಾಗಿ ಗರ್ಜಿಸುವದರಿಂದ "ಹ್ರಾದುನಿ" ಎಂದು ಕರೆಯಲ್ಪಡುವ ವಾಸುದೇವಾನಿರುದ್ಧನು "ವಿಸ್ಫುಲಿಂಗ." ॥ ೨ ॥ ಹೀಗೆ ಸಮಿತ್ ಮುಂತಾದ ರೂಪಧಾರಿ ನಾರಾಯಣ ಮುಂತಾದ ಐದು ರೂಪದವನಾದ ವಾಸುದೇವನೆಂಬ ಎರಡನೆಯ ಅಗ್ನಿಯಲ್ಲಿ ಹೋಮಿಸಿ ವೃಷ್ಟಿಯ ಮುಖಾಂತರವಾಗಿ ಮೂರನೆಯ ಅಗ್ನಿಯಲ್ಲಿ ಹೋಮಿಸುತ್ತಾರೆ. ಪ್ರಸಿದ್ಧನಾದುದರಿಂದ "ಪೃಥಿವೀ" ಎಂದು ಕರೆಯಿಸಿಕೊಳ್ಳುವ "ಪ್ರಥಿವೀಸ್ಥ"ನಾದ ಸಂಕರ್ಷಣನು ಮೂರನೆಯ ಅಗ್ನಿಯು. ಈ ಅಗ್ನಿಗೆ ಸಂಕರ್ಷಣರೂಪದಿಂದ ಉದಯಿಸಿದ-ಅವಿರ್ಭವಿಸಿದ ನಾಗಾಯಣ ಮುಂತಾದ ಐದು ರೂಪಗಳು, ಸಮಿಥೆಯೆನಿಸುವ ರೂಪಗಳು—ಸರಿಯಾಗಿ ವಾಸಮಾಡಿಸು-ವ್ಯಾಪಿಸುವದರಿಂದ. ಸಂವತ್ಸರನಾಮಕನಾಗಿ ಸಂವತ್ಸರದಲ್ಲಿರುವ ಸಂಕರ್ಷಣನಾರಾಯಣನು "ಸಮಿತ್". ಪ್ರಕಾಶಿಸುವದರಿಂದ "ಆಕಾಶ" ನಾಮಕನಾದ ಆಕಾಶದಲ್ಲಿರುವ ಸಂಕರ್ಷಣ ವಾಸುದೇವನು ಧೂಮನು. ರತಿಯನ್ನೀಯುವದರಿಂದ "ರಾತ್ರಿ"ನಾಮಕನಾದ ರಾತ್ರಿಯಲ್ಲಿರುವ ಸಂಕರ್ಷಣ ಸಂಕರ್ಷಣನು ಅರ್ಚಿಯು. ಮೋಕ್ಷ ಮುಂತಾದ ಪುರುಷಾರ್ಥಗಳನ್ನು ಕೊಡುವದರಿಂದ "ದಿಶ" ಎಂದು ಕರೆಯಿಸಿಕೊಳ್ಳುವ, ದಿಕ್ಕುಗಳಲ್ಲಿರುವ ಸಂಕರ್ಷಣ ಪ್ರದ್ಯುಮ್ನನು ಅಂಗಾರನು. ಅವಾಂತರ ಫಲಗಳಾದ ಸ್ವರ್ಗ ಮುಂತಾದವುಗಳನ್ನು ಕೊಡುವದರಿಂದ "ಅವಾಂತರದಿಕ್" ಶಬ್ದವಾಚ್ಯನಾಗಿ ಅಲ್ಲಿರುವ ಸಂಕರ್ಷಣಾನಿರುದ್ಧನು ವಿಸ್ಫುಲಿಂಗನು. ಈಗ

ಜೀವನು ಅನ್ನವನ್ನು ಪ್ರವೇಶಿಸುತ್ತಾನೆ. ೩ ಹೀಗೆ ಸಂಕರ್ಷಣವೆಂಬ ಮೂರನೆಯ ಅಗ್ನಿಯಲ್ಲಿ ಹೋಮಿಸಿ ಅನ್ನದ ಮುಖಾಂತರವಾಗಿ ನಾಲ್ಕನೆಯ ಅಗ್ನಿಯಲ್ಲಿ ಹೋಮಿಸುತ್ತಾರೆ. ಬಹುರೂಪನೂ ಪೂರ್ಣನೂ ಆಗಿರುವ ದರಿಂದ "ಪುರುಷ" ಶಬ್ದವಾಚ್ಯನಾದ ಪ್ರದ್ಯುಮ್ನನು ನಾಲ್ಕನೆಯ ಅಗ್ನಿಯು. ಈ ಅಗ್ನಿಗೆ ಪ್ರದ್ಯುಮ್ನನಿಂದ ಉದಯಿಸಿದ ನಾರಾಯಣ ಮುಂತಾದ ಐದು ರೂಪಗಳು "ಸಮಿತ್" ಮುಂತಾದವುಗಳೆನಿಸಿರುತ್ತವೆ. ವಾಗ್ವ್ಯಾಪಾರ ಮಾಡಿಸು-ಮಾಡುವದರಿಂದ "ವಾಕ್" ಎಂಬ ಹೆಸರಿನಿಂದ "ವಾಕ್"ನಲ್ಲಿರುವ ಪ್ರದ್ಯುಮ್ನ ನಾರಾಯಣನು ಸಮಿತ್. ಅತಿಶಯವಾಗಿ ಸಂಚರಿಸುವದು-ಹಾಗೂ ಕ್ರಿಯಾಗಳನ್ನು ಪ್ರವರ್ತಿಸುವದರಿಂದ "ಪ್ರಾಣ"ನಾಮಕನಾಗಿ ಪ್ರಾಣನಲ್ಲಿ ಇರುವ ಪ್ರದ್ಯುಮ್ನವಾಸುದೇವನು ಧೂಮನು. ಕರೆಯುವ ದರಿಂದ-ಆಹ್ವಾನ ಮಾಡುವದರಿಂದ ಅಥವಾ ಈ ತನ್ನಲ್ಲಿಯೇ ಹೋಮವನ್ನು ಸ್ವೀಕರಿಸುವದರಿಂದ "ಜಿಹ್ವಾ"ನಾಮಕನಾಗಿ ಜಿಹ್ವೆ(ನಾಲಿಗೆ)ಯಲ್ಲಿ ಇರುವ ಪ್ರದ್ಯುಮ್ನ ಸಂಕರ್ಷಣನು ಅರ್ಚಿ. ನೋಡುವದು, ನೋಡಿಸುವದರಿಂದ "ಚಕ್ಷುಸ್" ಶಬ್ದವಾಚ್ಯನಾದ ಚಕ್ಷುಸ್ಸಿನಲ್ಲಿ (ಕಣ್ಣಿನಲ್ಲಿ) ಇರುವ ಪ್ರದ್ಯುಮ್ನ ಪ್ರದ್ಯುಮ್ನನು ಅಂಗಾರನು. ಕೇಳುವದರಿಂದ ಶ್ರೋತ್ರನಾಮಕನಾದ. ಶ್ರೋತ್ರದಲ್ಲಿ ಇರುವ ಪ್ರದ್ಯುಮ್ನಾನಿರುದ್ಧನು ವಿಸ್ಫುಲಿಂಗ. ಹೀಗೆ ಪ್ರದ್ಯು ಮ್ನಾಗ್ನಿಯಲ್ಲಿ ಹೋಮಿಸಿದ ನಂತರ ರೇತಸ್ಸಿನ ಮುಖಾಂತರವಾಗಿ (ರೇತಸ್ಸಿ ನಲ್ಲಿರುವ) ಜೀವನನ್ನು ಐದನೇ ಅಗ್ನಿಯಲ್ಲಿ ಹೋಮಿಸುತ್ತಾರೆ (ಹಾಕು ತ್ತಾರೆ.) ಉಪಭೋಗ್ಯ ಅಂದರೆ ಉಪಭೋಗಕ್ಕೆ ಉಪಜೀವನಕ್ಕೆ ಆಧಾರ (ಆಶ್ರಯ)ನಾದುದರಿಂದ "ಯೋಷಾ" ಶಬ್ದವಾಚ್ಯನಾಗಿ ಸ್ತ್ರೀಯರಲ್ಲಿರುವ ಅನಿರುದ್ಧನು ಐದನೆಯ ಅಗ್ನಿಯು. ಈ ಅಗ್ನಿಗೆ ಅನಿರುದ್ಧನಿಂದ ಉದ್ಭೂತ ವಾದ ನಾರಾಯಣ ಮುಂತಾದ ಐದು ರೂಪಗಳು "ಸಮಿತ್" ಎಂದು ಮುಂತಾಗಿ ಕರೆಯಿಸಿಕೊಳ್ಳುತ್ತವೆ. ಸಮೀಪದಲ್ಲಿ ಇರುವದರಿಂದ "ಉಪಸ್ಥ" ನಾಮಕನಾಗಿ "ಉಪಸ್ಥ"ದಲ್ಲಿರುವ ಅನಿರುದ್ಧ ನಾರಾಯಣನು ಸಮಿಧೆಯು. ಉಪಮಂತ್ರಣವನ್ನು ಮಾಡುವದರಿಂದ ಉಪಮಂತ್ರಣನಾಮಕನಾಗಿ ಅಲ್ಲಿ ರುವ ಅನಿರುದ್ಧವಾಸುದೇವನು ಧೂಮನು. ಮಿಶ್ರೀಕರಿಸುವದರಿಂದ, ಕೂಡುವದರಿಂದ ಯೋನಿನಾಮಕನಾಗಿ ಯೋನಿಯಲ್ಲಿರುವ ಅನಿರುದ್ಧಸಂಕ

ರ್ಣನು ಅರ್ಚಿ. ಯೋನಿಯ ಒಳಗೆ ಮಾಡುವ ವ್ಯಾಪಾರಗಳನ್ನು ಮಾಡಿ ಮಾಡಿಸುವದರಿಂದ "ಅಂತಃಕರಣ"ನಾಮಕನಾಗಿ ಆ ವ್ಯಾಪಾರಗಳಲ್ಲಿಯೂ ಮಾಡುವವನಲ್ಲಿಯೂ ಇರುವ ಅನಿರುದ್ಧ ಪ್ರದ್ಯುಮ್ನನು ಅಂಗಾರನು. ಅಭಿನಂದಿಸುವದರಿಂದ ಅಭಿನಂದನಾಮಕನಾಗಿ ಅಭಿನಂದ (ಉತ್ಸಾಹ)ದಲ್ಲಿರುವ ಅನಿರುದ್ಧ-ಅನಿರುದ್ಧನು ವಿಸ್ಫುಲಿಂಗನು. ಹೀಗೆ ಕ್ರಮವಾಗಿ ಪಂಚಾಗ್ನಿಯಲ್ಲಿ ಹೋಮವಾದ ನಂತರ ಗರ್ಭಸ್ಥನಾದ ಜೀವನು "ಪುರುಷ" ಎಂದು ಕರೆಯಲ್ಪಡುವ ದೇಹವನ್ನು ಹೊಂದುತ್ತಾನೆ. ಆದುದರಿಂದಲೇ ಜೀವನಿಗೆ "ಪುರುಷ" ಎಂದು ಕರೆಯುತ್ತಾರೆ. ಹೀಗೆ ಉಪಾಸನಾ ಪ್ರಕರಣದಲ್ಲಿ ಹೇಳಲ್ಪಟ್ಟಿರುತ್ತದೆ.

ನಾರಾಯಣ ಮುಂತಾದ ರೂಪಿಯಾದ ಹರಿಯು ಒಂದೇ ವೇಳೆಗೆ ವಿಕಾರವನ್ನು ಹೊಂದದೇ ಮೂವತ್ತು ರೂಪಗಳಿಂದ ಹೇಗೆ ಆವಿರ್ಭವಿಸುತ್ತಾನೆ, ವ್ಯಕ್ತನಾಗುತ್ತಾನೆ ? ಬೇರೆ ಬೇರೆ ಸಂದರ್ಭಗಳಲ್ಲಿ ಕನಕ-ಕುಂಡಲ ಭಾವದ ದೃಷ್ಟಾಂತಗಳಿಂದ ತಿಳಿಸಿರುತ್ತಾರೆ! ಎಂದು ಸಂಶಯವು ಬರಬಹುದು. ಆದರೆ ಆ ಎಲ್ಲ ದೃಷ್ಟಾಂತಗಳಿಗೆ "ಶ್ರೀ ಹರಿಯ ಎಲ್ಲ ರೂಪಗಳಿಗೂ ಮೂಲ ರೂಪಕ್ಕೂ ಇರುವ ಪರಸ್ಪರ ಅಭೇದವನ್ನು ತೋರಿಸುವದೇ ಮುಖ್ಯ ತಾತ್ಪರ್ಯವಾಗಿರುತ್ತದೆ. "ಹರೇರಪಿ ಸ್ವರೂಪಾಣಾಂ" ಎಂದು ಹೇಳಿರುವ ಆರ್ಯವರೇಣ್ಯರ ಅಭಿಪ್ರಾಯವನ್ನೇ ತಾರ್ಕಿಕ ದೃಷ್ಟಾಂತಗಳಿಂದ ನಿರೂಪಪಡಿಸಲು ಹೇಳುತ್ತಾರೆ "ಪಂಚ" ಎಂಬುದಾಗಿ. ನಾಮದಿಂ= ನಾಮಗಳಿಂದ, ಮಯ=ವಿಕಾರ, ಪಂಚವಿಧಃ+ಸಾತ್ವಿಕರು "ಸ್ವರ್ಗಪ್ರಚುರರು, ನರಕಪ್ರಚುರರು, ಭೂಪ್ರಚುರರು" ಎಂದು ಮೂರು ತರಹದ ರಾಜಸರು ತಾಮಸರು" ಎಂದು ಸಾಂಪ್ರದಾಯಕರು ಹೇಳುತ್ತಾರೆ ॥ ೮ ॥

**ಅವತರಣಿಕಾ :** ಅನಿರುದ್ಧಾದಿ ೩೦ ರೂಪದಿಂದ ಸ್ಥೂಲ ಶರೀರದಲ್ಲಿ ವ್ಯಾಪಿಸಿ ಕಾರ್ಯಮಾಡುವನಾದರೂ, ಬ್ರಹ್ಮಾದಿ ತೃಣಾಂತ ಜೀವರಲ್ಲಿ ಒಬ್ಬನೇ ಏಕಾತ್ಮ ಅಧಿಭೂತಾದಿ ರೂಪತ್ರಯ ಪ್ರಾಣಾದಿ ದಶರೂಪಗಳನ್ನು ತತ್ಕಾರ್ಯ ವಿವರಿಸುತ್ತಾರೆ.

**ಮೂಲ :**

**ವಿಧಿ ಭವಾದಿ ಸಮಸ್ತ ಜೀವರ ।**
**ಹೃದಯದೊಳಗೇಕಾತ್ಮನೆನಿಸುವ ।**
**ಪದುಮನಾಭನು ಅಚ್ಯುತಾನಂತಾದಿ ರೂಪದಲಿ ॥**

**ಅಧಿಸುಭೂತಾಧ್ಯಾತ್ಮವಧಿ ದೈ ।**
**ವದೊಳು ಕರೆಸುವ ಪ್ರಾಣ ನಾಗಾ ।**
**ಭಿದನು ದಶರೂಪದಲಿ ದಶವಿಧ ಪ್ರಾಣರೊಳಗಿದ್ದು ॥ ೯ ॥**

**ಪದ್ಯಾರ್ಥ :** ವಿಧಿಭವಾಧಿ ಸಮಸ್ತ ಜೀವರ ಹೃದಯದೊಳಗೇಕಾತ್ಮನೆನಿಸುವ=ಬ್ರಹ್ಮಾದಿ ತೃಣಾಂತ ಜೀವರ ಹೃದಯ ಜೀವಾಂತರ್ಯಾಮಿಯಾಗಿ ಏಕಾತ್ಮ ಒಬ್ಬನೇ ಎನಿಸುತ್ತಾನೆ. ಪದುಮನಾಭನು=ಬ್ರಹ್ಮದೇವರನ್ನು ನಾಭಿಯಿಂದ ಪುಟ್ಟಿಸಿದ ಕಮಲನಾಭಿ ರೂಪಿಯೇ, ಅಧಿ ಸುಭೂತದಲ್ಲಿ=ಅನಂತ ಅಧ್ಯಾತ್ಮದಲ್ಲಿ=ಗೋವಿಂದನು, ಅಧಿ ದೈವದಲ್ಲಿ=ಅಚ್ಯುತನೆಂದು ಕರೆಸುತ್ತಾನೆ. ಇನ್ನೂ ಶರೀರದೊಳಗೆ ಇರುವ ದಶವಿಧ ಪ್ರಾಣರಲ್ಲಿ=ಪ್ರಾಣ-ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ, ಕೃಕಳ, ದೇವದತ್ತ, ಧನಂಜಯ ಈ ಹತ್ತು ಜನ ಪ್ರಾಣರಲ್ಲಿ ದಶರೂಪದಿಂದ=ಹತ್ತು ರೂಪದಿಂದಿದ್ದು, ದಶವಿಧ ಕಾರ್ಯಗಳನ್ನು ಮಾಡಿಸುತ್ತಾನೆ.

ಅಧಿಭೂತ=ಶರೀರ.

ಆಧ್ಯಾತ್ಮ=ಇಂದ್ರಿಯ.

ಅಧಿದೈವ=ಅಭಿಮಾನಿ ದೇವತೆಗಳು.

ಈ ಪ್ರಕಾರ ಉಪನಿಷತ್ತಿನಂತೆ ಶ್ರೀ ವಿಜಯದಾಸಾರ್ಯರ ಸುಳಾದಿ, ಪ್ರಾಣಾಪಾನಾದಿ ದಶಪ್ರಾಣರ ಕಾರ್ಯವನ್ನು ವ್ಯಾಸದಾಸ ಸಿದ್ಧಾಂತ ಕೌಮುದಿ ವ್ಯಾಖ್ಯಾನದಲ್ಲಿ ವಿವರಿಸಿದ್ದಾರೆ.

**ದ್ರೌಪದೀಶಪತಿ ವಿಠಲರು :** ವಿಧಿಭವಾದಿ ಸಮಸ್ತ ಜೀವರ=ಏಕಾತ್ಮ ಒಬ್ಬನೇ ಪರಮಾತ್ಮ ಅನಂತ, ಅನಂತನೇ ಒಬ್ಬ. ಒಂದು ಶರೀರದಲ್ಲಿ ಅನೇಕ ಅವಯವ ಇದ್ದರೂನೂ, ಶರೀರವೆಂತಲೇ ಕರೆಸುತ್ತಾನೆ. ಆಧ್ಯಾತ್ಮ ಮಾಲಾ ವಚನ.

| | | | |
|---|---|---|---|
| ೧. ಅಧಿಭೂತ<br>ಅನಂತ | ೨. ಆಧ್ಯಾತ್ಮ<br>ಗೋವಿಂದ | ೩. ಅಧಿ ದೈವ<br>ಅಚ್ಯುತ | ಇದರ ವಿವರ |
| ೧. ಶರೀರಕ್ಕೆ ಜ್ವರಾದಿ<br>ಉಪದ್ರವ ದುಃಖ | ೨. ಸ್ತ್ರೀ ಪುತ್ರಾದಿ<br>ವಿಯೋಗಾದಿ<br>ದುಃಖ | ೩. ಅನಾವೃಷ್ಟಿ, ಅತಿವೃಷ್ಟಿ<br>ಸಿಡಿಲು, ದೇಹದಮೇಲೆ<br>ಬೀಳೋಣ, ವೃಶ್ಚಿ<br>ಕಾದಿ ದರ್ಶನ. | |

ವಾಯುಗಳೊಳಗೆ ಪ್ರಾಣಾದಿ ಪಂಚ, ನಾಗಾದಿ ಪಂಚ ಇದರೊಳಗೆ, ವ್ಯಾನನವಿನಾ, ಒಂದರೊಳಗೆ ಮೂರು ಮೂರು ೯ ತಿಳಿವುದು. (ಅಂದರೆ ಈ ಪ್ರಾಣಾದಿ ರೂಪಗಳು ಅಧ್ಯಾತ್ಮದಲ್ಲಿ ೩. ಅಧಿದೈವದಲ್ಲಿ ೩. ಅಧಿಭೂತದಲ್ಲಿ ೩) ॥ ೯ ॥

**ಭಾವಸೂಚನ**: ವಿಧೀತಿ ॥ ಏಕಾತ್ಮನೇತಿ ॥ ಉಕ್ತಂಚ ಏಕಾತ್ಮ ಜಾಜೋಭೃದಿತಿ ॥ ಅಧಿಸುಭೂತ=ಗಗನಾದಿ, ಅಧಿದೈವ=ದೇವಾದಿ, ಅಧ್ಯಾತ್ಮ=ಶರೀರ, ನಾಗ=ಗಜ ॥ ೯ ॥

"ವಿಧಿ" ಇತಿ ॥ ಏಕಾತ್ಮಾ—ಓಮ್* ಆಮಿನಾತಿ ಶ್ರದಸ್ಮೈ ಧತ್ತ ಸ ಜನಾಸ ಇಂದ್ರಃ ॥ ಯೋರಧ್ರಸ್ಯ ಚೋದಿತಾ ಯಃ ಕೃಶಸ್ಯ ಯೋ ಬ್ರಹ್ಮಣೋನಾಥಮಾನಸ್ಯ ಕೀರೇಃ ॥ ಓಮ್* ॥ ಅನೇನ "ತತ್ವಂ ವೇತ್ತಿ" ಇತಿ ತತ್ವವಿತ್ । ತಸ್ಮೈ ಏಕಂ ಮುಖ್ಯಂ ಬಲಾದಿ ತನೋತಿ ಇತಿ "ಆತ್ಮೇತಿ" ನಿರುಕ್ತೇಃ ಸೂಚನಾತ್ ॥ ಅಧಿಭೂತಂ ಶರೀರಮ್ ॥ ಅಧ್ಯಾತ್ಮಂ ಇಂದ್ರಿಯಮ್ ॥ ಅಧಿದೈವಂ ಅಭಿಮಾನಿನಃ ॥ ಪದ್ಮನಾಭಃ-ಓಮ್* ಋಷ್ವಯಾಯೋ ರುರೋ ಜಾಧ್ವಾನಯದ್ದುರಿತಾದಂಭಯಚ್ಚ ॥ ಆಸಹಸ್ರಂ ಪತಿಭಿ ರಾಯಾತು (ಪತಿಭಿರಿಂದ್ರ ರಾಯಾತು) ವಿದ್ಯುಮ್ನ ತುವಿವಾಜೇಭಃ* ॥ ಓಂ ॥ ಪದ್ಮನಾ ಸಿಂಹನಾದಾದಿನಾ ರಣೇ ಆಭಾತಿ । ತೃತೀಯಾಮಾಃ ಅಲುಕ್ ॥ ಅಚ್ಯುತಃ-ಓಂ* ಅಮಯೋದಂ ನನು ತ್ವಾ ವಿಸದ್ಯೋ ವಿಶ್ವಾ ಬೃ (ದೃ)ಂಹಿತ್ವಾ(ನ್ಯ)ನ್ಯೇಷಾ ಮಿಂದ್ರಃ ಪುರಃ ಸಹಸಾ ಸಪ್ತತರ್ದಃ ವ್ಯಾನವಸ್ಯ ತೃತ್ಸವೇ ॥ * ॥ ಓಮ್ ॥ ತೇನ "ಅಚ್ಯುತಃ"=ಸುಖವತ್ವಾತ್ ಅಚ್ಯುತಃ ॥ ಅನಂತಃ *ಸವ್ಯಾಮನು ಸ್ಫಿಗ್ಯಂ ವಾ ವಸೇ ವೃಷಾನದಾನೋ ಅವ ಸ್ವರೋಷತಿ । ಮಧ್ವಾ ಸಂಪೃಕ್ತಾಃ ಸಾರಘೇಣ ಧೇನವಸ್ತೂಯೇಮಹಿ ॥ * ॥ ಓಮ್ ॥ ಆಮತಿ-ಆಮ್ ಹಿಂಸಾಯಾಮ್ । ಹಿನಸ್ತಿ ಇತಿ ಹಿಂಸಾ ಹೇತುತ್ವಾತ್ ಅಂತಃ ರೋಷಃ ॥ ಯದ್ವಾ-ಅತಿ-ಬಂಧನೇ । ಅಂತತಿ ಬಧ್ನಾತಿ ಇತಿ ಅಂತೋ ರೋಷಃ ॥ ಯದ್ವಾ-"ಅಂತೋಽಸ್ತ್ರೀ ನಿಶ್ಚಯೇ ನಾಶೇ" ಇತ್ಯಭಿಧಾನಾತ್ ॥ ರೋಷಃ ॥ ನ ವಿದ್ಯತೇ ಭಕ್ತೇಷು ರೋಷಃ ಯಸ್ಯಸಃ ಅನಂತಃ ॥ ಆತ್ಮಾ ದಾತಾ । ಸ ಚಾಸೌ ಆತ್ಮಾ ಇತಿ ಸತಥೋಕ್ತಃ ॥ ಆದಿಪದೇನ ಗೋವಿಂದಃ ॥ ಓಂ* ಸಹಾವಾ ತ್ವಂ ಹ ನು ತ್ಯದ(ದ್ದ)ದ

ಮಾಯೋ ದಸ್ಯೂಜ್ರೇತಃ ಕೃಷ್ಟೀರವ(ರಿವ) ನೋರಾರ್ಯೋಯ ಅಸ್ತಿಸ್ವಿನ್ನು (ಕಿನ್ನು)ವೀರ್ಯಂ ತತ್ತ ಇಂದ್ರ ನ ಸ್ವಿದಸ್ತಿ ॥ * ಓಮ್ ॥ ಗಾಂ ಪಶುಪುತ್ರಾ ದೀನ್ ವಿಂದತಿ ಲಂಭಯತಿ ಇತಿ ಸ ತಥೋಕ್ತಃ ॥ ಪ್ರಾಣಪಂಚಕಂ ನಾಗ-ಕೂರ್ಮ-ಕೃಕಲ-ದೇವದತ್ತ-ಧನಂಜಯಾಃ ಚ ॥ ಇತಿ ದಶ ॥ ೯ ॥

## ಕನ್ನಡಾರ್ಥ

"ವಿಧಿ ಭವಾದಿ" ಎಂದು ಪ್ರಾರಂಭಿಸಿರುವ ಈ ಪದ್ಯದಲ್ಲಿರುವ "ಏಕಾತ್ಮಾ" ಎಂಬ ಪದವು ಶ್ರೀ ವಿಷ್ಣು ಸಹಸ್ರನಾಮದೊಳಗಿರುವ "ತತ್ವ ವಿದೇಕಾತ್ಮಾ" ಎಂಬ ನಾಮದ ಸಂಗ್ರಹ. ಬೃಹತೀ ಛಂದಸ್ಸಿನ ಋಕ್ಕು ಈ ನಾಮದ ಅರ್ಥವನ್ನು ವಿವರಿಸುತ್ತದೆ. ತತ್ವ ಅಂದರೆ ಸರ್ವತಂತ್ರ ಸ್ವತಂತ್ರನೂ, ಜ್ಞಾನಾನಂದಾತ್ಮಕನೂ, ಗುಣಪರಿಪೂರ್ಣನೂ, ಪರಬ್ರಹ್ಮ ಶಬ್ದ ವಾಚ್ಯನೂ ಆದ ಶ್ರೀ ನಾರಾಯಣನು. ಅವನನ್ನು ಸರಿಯಾದ ಸ್ವರೂಪದಲ್ಲಿ ಶ್ರೀಮದಾಚಾರ್ಯರು ಶಾಸ್ತ್ರದಲ್ಲಿ ಹೇಳಿ ತೋರಿಸಿರುವಂತೆ ತಿಳಿಯುವವನು "ತತ್ವವಿತ್" ಎಂದು ಹೇಳಿಸಿಕೊಳ್ಳುತ್ತಾನೆ. ಅಂಥ ತತ್ವವಿತ್ತನಿಗೆ (ಪರಮಾತ್ಮ ತತ್ವಜ್ಞಾನಿಗೆ) ಮುಖ್ಯವಾದ ಬಲಜ್ಞಾನ ಮುಂತಾದವುಗಳನ್ನು ಕೊಡುವವನು "ತತ್ವ ವಿದೇಕಾತ್ಮ" ಎಂದು ಎನಿಸಿಕೊಳ್ಳುತ್ತಾನೆ. "ಅಧಿಭೂತ-ಅಧ್ಯಾತ್ಮ-ಅಧಿದೈವಗಳಲ್ಲಿ ಕರೆಸುವ" ಎಂದು ಹೇಳಿರುವ ಸಂದರ್ಭದಲ್ಲಿ ಅಧಿಭೂತವೆಂದರೆ ಶರೀರವೆಂದು ಅರ್ಥ. ಇಂದ್ರಿಯಗಳಿಗೆ ಅಧ್ಯಾತ್ಮವೆಂದೂ ಅಭಿಮಾನಿ ದೇವತೆಗಳಿಗೆ ಅಧಿ ದೈವವೆಂದೂ (ಹೆಸರುಗಳನ್ನು) ತಿಳಿಯಬೇಕು. "ಪದ್ಮನಾಭಃ"-ಈ ನಾಮವೂ ಶ್ರೀಮದ್ವಿಷ್ಣು ಸಹಸ್ರನಾಮದಲ್ಲಿ ಸೇರಿದುದೇ ಆಗಿರುತ್ತದೆ. ಇದರ ಅರ್ಥವನ್ನು ವಿವರಿಸುವ ಬೃಹತೀ ಛಂದಸ್ಸಿನ ಋಕ್ಕನ್ನೂ ಕೊಟ್ಟಿರುತ್ತದೆ. ಅದಕ್ಕೆ ಅನುಗುಣವಾದ ಅರ್ಥ-ಪದ್ಮನಾಸಿಂಹನಾದ ಮುಂತಾದವುಗಳಿಂದ ರಣದಲ್ಲಿ ಆಭಾತಿ=ಅತಿಶಯವಾಗಿ ಶೋಭಿಸುವವನು-ಪದ್ಮನಾಭನು. "ಅಚ್ಯುತಃ"=ಇದೂ ಅದರಂತೆ ಶ್ರೀ ವಿಷ್ಣುವಿನ ಸಾವಿರನಾಮದೊಳಗಣ ಒಂದು ನಾಮವು. ಬೃಹತೀ ಛಂದಸ್ಸಿನ ಋಙ್ಮಂತ್ರಕ್ಕೆ ಅನುಸಾರವಾಗಿ ನಾಶವನ್ನು-ಚ್ಯುತಿಯನ್ನು ಹೊಂದದ ಸುಖ

* ಈ ಗುರ್ತು ಹಾಕಿದುದು, ಎಲ್ಲ ಬೃಹತೀ ಸಹಸ್ರ ಛಂದಸ್ಸು ವೇದ ಋಕ್ಕುಗಳು ಎಂತ ತಿಳಿಯಬೇಕು.

ಪೂರ್ಣನಾದುದರಿಂದ-"ಅಚ್ಯುತನು" ಎಂದು ಅರ್ಥವಾಗುತ್ತದೆ. ಅನಂತಃ ಇದೂ ಸಹಸ್ರನಾಮಗಳಲ್ಲಿರುವ "ಅನಂತಾತ್ಮ" ಎಂಬುದರ ಸಂಗ್ರಹ. ಬೃಹತೀ ಮಂತ್ರಾನುಗುಣವಾಗಿ "ಅವ್" ಎಂಬುದಕ್ಕೆ "ಹಿಂಸೆ" ಎಂದು ಅರ್ಥವಿರುವದರಿಂದ ಅದರಿಂದ ಹುಟ್ಟಿದ ಈ ಅಂತವೆಂಬ ಶಬ್ದಕ್ಕೆ "ರೋಷ" ಎಂದು ಅರ್ಥವಾಗುತ್ತದೆ. ಅಂದರೆ ರೋಷದಿಂದ ಹಿಂಸೆಯಾಗುವದರಿಂದ ಹಿಂಸಾಕಾರಣವಾದ ರೋಷವು "ಅಂತ"ವೆನಿಸುತ್ತದೆ(೧). ಅಥವಾ ಕೋಶ ದಲ್ಲಿ ಪುಲ್ಲಿಂಗದಲ್ಲಿರುವ ಅಂತಶಬ್ದಕ್ಕೆ "ನಿಶ್ಚಯ-ನಾಶಗಳು ಅರ್ಥ" ಎಂದು ಹೇಳಿರುವದರಿಂದ ನಾಶವೆಂದೂ ಅರ್ಥ ಆಗುತ್ತದೆ. ಅಥವಾ ಅಂತತಿ ಬಂಧಿ ಸುವದು ಅಂದರೆ ರೋಷವು ಅಂತ. ಭಕ್ತರಿಗೆ ಇಂಥ ಅಂತಗಳು-ನಾಶರೋಷ ಬಂಧನಗಳು ಯಾವನಿಂದ ಬರುವದಿಲ್ಲವೋ ಅಥವಾ ಭಕ್ತರ ವಿಷಯದಲ್ಲಿ ರೋಷವಿಲ್ಲದವನು ಅನಂತನು. ಇಂಥ ಸ್ವಭಾವವುಳ್ಳವನು "ಅನಂ ತಾತ್ಮ"ನು. "ಆದಿ" ಎಂಬುದರಿಂದ ಗೋವಿಂದ ಮುಂತಾದ ನಾಮಗಳನ್ನೂ ಸಂಗ್ರಹಿಸಬೇಕು. ಬೃಹತೀ ಛಂದಸ್ಸಿನ ಋಜ್ಮಂತ್ರವನ್ನು ಅನುಸರಿಸಿ "ಪಶು ಪುತ್ರ ಮುಂತಾದ ಸಂಪತ್ತನ್ನು ಹೊಂದಿಸುವವನು-ಕೊಡಿಸುವವನು ಗೋವಿಂದನು" ಎಂದು ಗೋವಿಂದನಾಮಕ್ಕೆ ಅರ್ಥವಾಗುತ್ತದೆ. ದಶವಿಧ ಪ್ರಾಣರ=ಹತ್ತು ಪ್ರಾಣರು ಯಾರೆಂದರೆ-"ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ, ಕೃಕಲ, ದೇವದತ್ತ, ಧನಂಜಯ" ರೆಂದು ತಿಳಿಯಬೇಕು ॥ ೯ ॥

ಅವತರಣಿಕಾ : ಇನ್ನು ಜೀವ-ಲಿಂಗ-ಅನಿರುದ್ಧ, ಸ್ಥೂಲ ಶರೀರದಲ್ಲಿ ಮತ್ತು ಪ್ರಾಣಾದಿ ದಶಪ್ರಾಣದಲ್ಲಿ ತತ್ತನ್ನಾಮದಿಂದ ಕರೆಸುತ್ತಿರುವ ಭಗವಂತನ ರೂಪ ಸಂಖ್ಯೆಗಳನ್ನು ವಿಸ್ತರಿಸುತ್ತಾರೆ.

ಮೂಲ :

ಈರಯಿದು ಸಾವಿರದ ಇಪ್ಪ ।
ತ್ತಾರಧಿಕ ಮುನ್ನೂರು ರೂಪಗ ।
ಳೀರೆರಡು ಸ್ಥಾನದಲಿ ಚಿಂತಿಪುದನುದಿನದಿ ಬುಧರು ॥
ನೂರು ಇಪ್ಪತ್ತೇಳಧಿಕ ಮೂ ।
ರಾರು ಸಾವಿರ ರೂಪದಿಂ ದಶ ।
ನಾರುತರೊಳಿದ್ದವರವರ ಪೆಸರಿಂದ ಕರೆಸುವನು ॥ ೧೦ ॥

**ಪದ್ಯಾರ್ಥ :** ಈರೈದು=ಹತ್ತು. ಇಪ್ಪತ್ತಾರಧಿಕ ಮುನ್ನೂರು ಅಂದರೆ ೧೦೩೨೬ ರೂಪಗಳಿಂದ, ಈರೆರಡು ಸ್ಥಾನದಲಿ=ದೇಹಚತುಷ್ಟಯ ವಾದ, ಜೀವ-ಲಿಂಗ-ಅನಿರುದ್ಧ-ಸ್ಥೂಲ-ಶರೀರದಲ್ಲಿ, ಪ್ರಕೃತಿ ಪರಮಾಣು ಗಳಿಗನುಸರಿಸಿ ಇರುತ್ತಾನೆ. ಅಥವಾ-ಮತ್ತು ಹಿಂದೆ ಹೇಳಿದ ಏಕಾತ್ಮ ಅಧ್ಯಾತ್ಮಾ-ಅಧಿದೈವ-ಅಧಿಭೂತಗತ, ದಶ ಪ್ರಾಣರುಗಳಲ್ಲಿ, ಆಯಾ ನಾಮ ಸಂಖ್ಯಾ ಅನುಸರಿಸಿ, ಮೂರಾರು ಸಾವಿರ=ಹದಿನೆಂಟು ಸಾವಿರದಾ, ನೂರಾ ಇಪ್ಪತ್ತೇಳಧಿಕ-೧೮೧೨೭ ರೂಪದಿಂದ ಅಲ್ಲಿರುವ ಪ್ರಕೃತಿ ಬಿಂದುಗಳಲ್ಲಿರುವ ಈ ರೂಪಗಳನ್ನು, ದಶವಿಧ=ಪ್ರಾಣಾದಿ ೫ ನಾಗಾದಿ ೫ ಹೀಗೆ ಹತ್ತುಜನ ಪ್ರಾಣರಲ್ಲಿ, ಇಷ್ಟು ರೂಪಗಳಿಂದ ಇದ್ದು, ಆ ಪ್ರಾಣಾದಿ ನಾಮಗಳಿಂದ ಕರೆ ಸುತ್ತಾನೆಂದು, ಬುಧರು=ಜ್ಞಾನಿಗಳು.-ಅನುದಿನದಿ=ದಿನೇದಿನೇ-ನಿರಂತರ ದಲ್ಲಿ ಚಿಂತನೆ ಮಾಡಬೇಕೆಂದು ಶ್ರೀ ದಾಸಾರ್ಯರ ಆಜ್ಞೆ.

**ದ್ರೌಪದೀಶಪತಿ ವಿಠಲರು :** ಈರೈದು ಸಾವಿರದ, ಜೀವ-ಲಿಂಗ-ಅನಿರುದ್ಧ-ಸ್ಥೂಲ, ಒಟ್ಟಿಗೆ ೧೦೩೨೬ ಭಗವದ್ರೂಪಗಳು ನಾಲ್ಕು ಶರೀರದಲ್ಲಿ ಚಿಂತಿಸುವದು. ಜೀವ ಲಿಂಗ ಶರೀರದಲ್ಲಿ ಮುಖ್ಯ ಪ್ರಾಣ ದಶ ವಾಯು ರೂಪದಿಂದ ಇದ್ದಾನೆ. ಅನಿರುದ್ಧ ಸ್ಥೂಲ ಶರೀರಗಳಲ್ಲಿ ಮುಖ್ಯ ಪ್ರಾಣರು ಸಹ ಇದ್ದಾರೆ. ಇವರಂತರ್ಗಂತ ರೂಪ ೧೮೧೨೭ ದಶ ಮಾರುತರಲ್ಲಿದ್ದು ಅವರವರ ಹೆಸರಿನಿಂದ ಕರೆಸುತ್ತಾನೆ.

**ಭಾವಸೂಚನ :** ಈರೆರಡೇತಿ ॥ ಉಕ್ತಂಚ ಬ್ರಹ್ಮತರ್ಕೆ ॥ ಚತುಃ ಸಹಸ್ರೈಷಡ್ವಿಂಶತ್ಯಧಿಕೈಃ ತ್ರಿಶತೈರ್ಯುತೈಃ ॥ ಚತುಸ್ಥಾನೇ ಗತಶ್ರೀಶ ಇತಿ॥ ಸಪ್ತವಿಂಶತ್ಯಧಿಕ ಶತೈರಷ್ಟಾದಶ ಸಹಸ್ರ ಕೈಃ ॥ ಶ್ರೀ ಮುಕುಂದಃಸ್ಥಿತೋ ನಿತ್ಯಂ ರೂಪೈರ್ದಶಸುವಾಯುಷ್ವಿತಿ । ಮಹಾವಿಷ್ಣು ಪುರಾಣೆ ॥ ೧೦ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಉಕ್ತ ಚತುಸ್ಥಾನ ಗ (ಗತ) ರೂಪಸಂಖ್ಯಾಮಾಹ-"ಈರೈದು" ಇತಿ॥ ಚತುಸ್ಥಾನ=ದೇಹ ಚತುಷ್ಟಯಮ್ ॥ ದಶಸಾಹಸ್ರ ಸಂಯುಕ್ತ ಷಡ್ವಿಂ ಶತ್ಯಧಿಕಂ ಶತಮ್॥ ತ್ರ್ಯೈತ್ಮಕಂ ಚಾಧಿಭೂತಾದಿ (ಧಿ) ಚತುಸ್ಥಾನಗತೋ ಹರಿಃ ॥ "ಸಪ್ತವಿಂಶತ್ಯಧಿಕ ಶತ ಸಹಸ್ರಾಷ್ಟಕ ದಶಾತ್ಮಕಃ॥ ದಶ ಪ್ರಾಣೇಷು" ಇತಿ ಪ್ರವೃತ್ತೇ ॥ ಪ್ರಕೃಷ್ಟನಯನಾತ್ ಪ್ರಾಣಃ ಅಪಾನಃ ಅವಾಕ್ (ಙ್)

ನಯನಾತ್ ಹರಿಃ ॥ ವಿವಿಧಂ ನಯನಾತ್ ವ್ಯಾನಃ ಸೋನ್ನಂ ಸರ್ವೋಪ ಜೀವ್ಯತಃ ॥ ಸೌಖ್ಯಜ್ಞಾನೇ ತು ಯಸ್ಮಾತ್ ಸಃ ಕೂರ್ಮೋ ಜ್ಞಾನ್ಯಜಕಾಮಧುಕ್ ॥ ಕೃಕಲೋ ದೇವದತ್ತಾನಾಂ ಚ ದತ್ತ ಇಷ್ಟಾತ್ಮನಾ ಸ್ವಯಮ್॥ ದೇವದತ್ತಃ ಧನಂ ಜೇತಾ ಧನಂಜಯ ಇತೀರಿತಃ॥ ಇತಿ ಗುರುವೃತ್ತೇ ॥೧೦॥

## ಕನ್ನಡಾರ್ಥ

ಹಿಂದೆ ಹೇಳಿದ ಸ್ಥಾನಗಳಲ್ಲಿರುವ ಭಗವಂತನ ರೂಪಗಳ ಸಂಖ್ಯೆಯನ್ನು ಹೇಳುತ್ತಾರೆ. "ಈರೈದು" ಎಂಬ ಪದ್ಯದಿಂದ "೧೦೩೬" ರೂಪಗಳಿಂದ ಹರಿಯು ನಾಲ್ಕು ಸ್ಥಾನಗಳಲ್ಲಿ ದೇಹ ನಾಲ್ಕರಲ್ಲಿ ಮತ್ತು ಅಧ್ಯಾತ್ಮ-ಅಧಿದೈವ-ಅಧಿಭೂತ-ಹೃದಯ ಇರುತ್ತಾನೆ. ೧೮೧೨೭ ರೂಪಗಳಿಂದ ಹತ್ತು ಪ್ರಾಣರುಗಳಲ್ಲಿ ಇರುವನೆಂದು ತಿಳಿಯಬೇಕು" ಎಂದು "ಪ್ರವೃತ್ತ" ವೆಂಬ ಗ್ರಂಥದಲ್ಲಿ ಉಕ್ತವಾಗಿರುತ್ತದೆ. "ಅತಿಶಯವಾಗಿ ಪ್ರೇರಿಸು ಚೇಷ್ಟಾಯುಕ್ತ ಮಾಡುವದರಿಂದ "ಪ್ರಾಣ"ನು. ಅವಾಕ್ ಕೆಳಗೆ ತರುವದರಿಂದ "ಅಪಾನನು" ವಿವಿಧವಾಗಿ ತರು-ಪ್ರೇರಿಸು-ವದರಿಂದ "ವ್ಯಾನನು". ಅವನು ಅನ್ನರೂಪನು. ಉಪಜೀವ್ಯನು. (ಆದುದರಿಂದ ಉದಾನನೂ, ಸಮಾನವಾದುದರಿಂದ ಸಮಾನನೂ ಎನಿಸಿಕೊಳ್ಳುತ್ತಾನೆ) ತನ್ನ ಸ್ವಸ್ಥಿತಿಯನ್ನು ಬಿಟ್ಟು ಬದಲಾವಣೆಯನ್ನು ಹೊಂದದಿರುವುದರಿಂದ "ನಾಗ"ನು. ಉತ್ಕೃಷ್ಟ ಸುಖ ಜ್ಞಾನ ರೂಪನೂ ಅವುಗಳನ್ನು ಕೊಡುವವನೂ ಆದುದರಿಂದ "ಕೂರ್ಮ"ನು. ಜ್ಞಾನಿಗಳಾದ ಅಜಾದಿಗಳಿಗೆ ಕಾಮಿತಪ್ರದನಾದುದರಿಂದ "ಕೃಕಲ"ನು. ದೇವತೆಗಳಿಗೆ ಇಷ್ಟರೂಪದಿಂದ ತನ್ನನ್ನು ತಾನೇ ಕೊಟ್ಟುಬಿಡುವದರಿಂದ "ದೇವದತ್ತನು". ಧನವನ್ನು ಜಯಿಸುವದರಿಂದ "ಧನಂಜಯನು", ಎಂದು ಗುರುವೃತ್ತದಲ್ಲಿ ಹೇಳಲಾಗಿರುತ್ತದೆ. ॥ ೧೦ ॥

ಅವತರಣಿಕಾ : ಹಿಂದೆ ಹೇಳಿದ ೧೪ ಸ್ಥಾನಗತವಾದ ರೂಪಗಳನ್ನು ಒಟ್ಟಿಗೆ ಈ ಪದ್ಯದಿಂದ ದಾಸಾರ್ಯರು ನಿರೂಪಿಸುತ್ತಾರೆ.

ಮೂಲ :

ಚಿತ್ತಯಿಸುವುದು ಎಂಟೆಧಿಕ ಇ।
ಪ್ಪತ್ತು ಸಾವಿರ ನಾಲ್ಕು ಶತ ಅಯಿ।
ವತ್ತು ಮೂರು ಸುಮೂರ್ತಿಗಳು ಅಹವಲ್ಲೆ ಪರಿಯಂತ ॥

**ಹತ್ತು ನಾಲಕು ರೂಪಗಳ ನೆರೆ ।**
**ಬಿತ್ತರವ ಈ ಪರಿ ತಿಳಿದು ಪುರು ।**
**ಷೋತ್ತಮನ ಸರ್ವತ್ರ ಪೂಜೆಯ ಮಾಡು ಕೊಂಡಾಡು ॥೧೧॥**

**ಪದ್ಯಾರ್ಥ :** ಚಿತ್ತೈಸುವದು=ಮನಮುಟ್ಟಿ ತಿಳಿಯುವದು. ಭಗವಂತನಲ್ಲಿ ಭಕ್ತಿಯುತರಾಗಿ ಆಲಿಸುವದು. ಇಪ್ಪತ್ತುಸಾವಿರ ನಾಲ್ಕುಶತ ಐವತ್ತುಮೂರು ಸುಮೂರ್ತಿಗಳು=೨೦೪೫೩ ಮೂರ್ತಿಗಳು, ಅಹವು=ಇರುವವು. ಅಲ್ಲೆ ಪರಿಯಂತ ಎಂದರೆ ಹತ್ತುನಾಲ್ಕು ರೂಪಗಳು=ಹತ್ತು ದಶ ಪ್ರಾಣಾದಿಗಳಲ್ಲಿರುವ ರೂಪಗಳು, ಮತ್ತು ನಾಲ್ಕು ಸ್ಥಾನ-ನಾಲ್ಕು ದೇಹ ಗತವಾದ ರೂಪಗಳು ಪ್ರಕೃತಿ ಪರಮಾಣುಗಳಿಗನುಸರಿಸಿ ತಿಳಿವುದು, ಬಿತ್ತರವ=ವಿಸ್ತಾರವನ್ನೂ ತಿಳಿಯುವದು. ಈ ಪ್ರಕಾರ ಪುರುಷೋತ್ತಮನ= ಪುರಿಶೇತೀತಿ ಪುರುಷ. ಈ ಪುರುಷರಲ್ಲಿ-ಉತ್ತಮ ಶ್ರೀ ಹರಿಯನ್ನು ನಾಲ್ಕು ಶರೀರಗಳಲ್ಲಿ ದಶಪ್ರಾಣರಲ್ಲಿ, ಸರ್ವತ್ರ ಎಲ್ಲ ಕಡೆಯಲ್ಲಿ ಅಂದರೆ ಶರೀರ ಎಲ್ಲ ಕಡೆಯಲ್ಲಿ ತಿಳಿದು, ಪೂಜೆಯ ಮಾಡು, ಪೂಜಿಸು, ಕೊಂಡಾಡು, ಸ್ತೋತ್ರ ಮಾಡು ಎಂದು ದಾಸಾರ್ಯರು ಅಪ್ಪಣೆ ಕೊಡಿಸಿದ್ದಾರೆ. ಮಾನವರಾದ ನಾವುಗಳು ಪ್ರತಿದಿನ ಕಾರಣ ಕಾರ್ಯರೂಪಗಳನ್ನು ಅರಿತು ಚಿಂತನೆ ಪ್ರತಿ ನಿತ್ಯ ಮಾಡಿ ಸ್ಮರಿಸಿದರೆ ತಾಪತ್ರಯ ಪರಿಹರಿಸಿ ಫಲವನ್ನು ಕೊಡುವ ರೂಪಗಳ ಜ್ಞಾನ ದರ್ಶನ ದೇವತೆಗಳಿಗೆ ಆಗುವದು.

**ದ್ರೌಪದೀಶ ಪತಿವಿಠಲರು :** ಚಿತ್ತೈಸುವದು ಎಂಟಧಿಕ=ಉಭಯ ರೂಪ ಒಟ್ಟು ೨೦೪೫೩ ಈ ಭಗವದ್ರೂಪಗಳು ತಾಪತ್ರಯಗತ ರೂಪಗಳು.

**ಭಾವಸೂಚನ :** ಚಿತ್ತೈಸುವದೇತಿ ॥ ತದುಕ್ತಂ ಬೃಹತ್ತಾರತಮ್ಯೆ ॥ ಅಷ್ಟಾವಿಂಶತ್ಸಹಸ್ರೈಶ್ಚ ಪುನಃಶತೈಃ ॥ ಚತುರ್ಭಿಃಸ್ತ್ರ್ಯಧಿಕೈಃ ಪಂಚಾಶದ್ರೂಪೈ ಶ್ರೀಧರೋ ಹರಿಃ ॥ ಚತುರ್ದಶ ಸುರೂಪೈಸ್ತುಸರ್ವತ್ರಾಸ್ತೇಮಮ್ಯೆಶ್ವರ ಇತಿ ॥ ನೆರೆಬಿತ್ತರವಾ=ಅತ್ಯಂತ ವಿಸ್ತರವಾ ॥ ೧೧ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಕ್ರೋಡೀ ಕರೋತಿ- "ಚಿತ್ತೈಸುವದು" ಇತಿ ॥ ಅಲ್ಲಿ=ಚತುರ್ದೇಹೇಷು । ನೆರೆ ರೀತಿ । ವಿತ್ತರ=ವಿಸ್ತಾರ । ಹತ್ತು-ದಶ ಪ್ರಾಣೇಷು ।

ನಾಲ್ಕು ಪದ್ಮನಾಭಾದಯಃ। "ಅಷ್ಟಾವಿಂಶತ್ ಸಹಸ್ರ್ಯಸ್ತು ಚತುಃ ಶತಯುತೈರ್ಹರಿಃ ॥ ಗಾತ್ರೇ ಸರ್ವತ್ರ ಚ ॥ ಇತಿ ಚ ॥ ೧೧ ॥

**ಕನ್ನಡಾರ್ಥ**

ಈ ರೂಪಗಳನ್ನು ಕ್ರೋಢೀಕರಿಸಿ ಹೇಳುತ್ತಾರೆ "ಚಿತ್ರೈಸುವದು" ಎಂಬ ಪದ್ಯದಿಂದ.

ಅಲ್ಲಿ ಎಂದರೆ ನಾಲ್ಕು ದೇಹಗಳಲ್ಲಿ ಎಂದು ಅರ್ಥ. ಬಿತ್ತರ=ವಿಸ್ತಾರ. ನೆರೆ-ರೀತಿ. ೨೮೪೫೩ ರೂಪಗಳಿಂದ ಶ್ರೀ ಹರಿಯು ೧೪ ಸ್ಥಳಗಳಲ್ಲಿಯೂ ದೇಹದಲ್ಲಿ ಎಲ್ಲೆಡೆಯಲ್ಲಿಯೂ ಇರುತ್ತಾನೆ," ಎಂದು ಹೇಳಿರುವ ಗುರುವೃತ್ತ ಮುಂತಾದವುಗಳ ವಾಕ್ಯಗಳು ಪ್ರಮಾಣವಾಗಿರುತ್ತವೆ ॥ ೧೧ ॥

**ಅವತರಣಿಕಾ :** ಹಿಂದೆ ಹೇಳಿದಂತೆ ಇಷ್ಟು ಭಗವದ್ರೂಪಗಳನ್ನು ಚಿಂತಿಸುವ ಜ್ಞಾನಿಗಳು ಸಹ ಮೋಹಕ್ಕೊಳಗಾಗುವರು. ಇದರ ಕಾರಣ ಲಿಂಗದೇಹಗತ ಶಬ್ದಾದಿಗಳು ತಮೋ ಆವರಕದಲ್ಲಿ ಶ್ರೀ ದುರ್ಗಾದೇವಿಯು ಈ ಮೋಹ ಹುಟ್ಟಿಸುವ ಳೆಂದು ಹೇಳುತ್ತಾರೆ.

ಮೂಲ :

**ಈರೆರಡು ಶತಹ್ಯಷ್ಟಧಿಕ ಹದಿ ।**
**ನಾರು ಸಾವಿರ ರೂಪ ಸರ್ವ ಶ ।**
**ರೀರದೊಳು ಶಬ್ದಾದಿಗಳಧಿಷ್ಠಾನದೊಳಗಿಪ್ಪ ॥**
**ಮಾರುತನು ನಾಗಾದಿ ರೂಪದಿ ।**
**ಮೂರನೇ ಗುಣಮಾನಿ ಶ್ರೀ ದು ।**
**ರ್ಗಾರಮಣ ವಿದ್ಯಾ ಕುಮೋಹವ ಕೊಡುವ ಕರಣಕ್ಕೆ ॥೧೨॥**

**ಪದಾರ್ಥ :** ಈರೆರಡು ಶತ ಹೃಷ್ಟಧಿಕ ಹದಿನಾರು ಸಾವಿರ=ಅಂದರೆ ೧೬೪೦೮ ರೂಪಗಳಿಂದ, ಸರ್ವಶರೀರದೊಳಗೆ=೪ ದೇಹಗಳಲ್ಲಿಪ್ಪ ಶಬ್ದಾದಿ ಗಳಲ್ಲಿಪ್ಪ=ಶಬ್ದಾದಿಗಳ ಅಧಿಷ್ಠಾನದೊಳಗಿಪ್ಪ=ಶಬ್ದ-ಸ್ಪರುಶ-ರೂಪ-ರಸ-ಗಂಧ ಪಂಚತನ್ಮಾತ್ರಾಗಳಲ್ಲಿ ಪ್ರೇರಕನಾಗಿ ಇದ್ದು, ಮಾರುತ=ವಾಯುವಿನ ನಾಗ ಕೂರ್ಮ ಕೃಕಳ ದೇವದತ್ತ ಧನಂಜಯ ಈ ಐದು ರೂಪಗಳು ಪ್ರಾಣ ರೂಪ ಗಳಲ್ಲಿದ್ದು (ಈ ಪಂಚಭೂತಗಳ ತಮೋಗುಣವಾದ ಪಂಚತನ್ಮಾತ್ರಾ ಅಧಿ

ಷ್ಠಾನ=ಸ್ಥಾನದಲ್ಲಿ ನಾಗಾದಿ ಅಂತರ್ಯಾಮಿ, ಮೂರನೇ ಗುಣಮಾನಿ= ತಮೋಗುಣಾಭಿಮಾನಿ ದುರ್ಗಾದೇವಿಯರ ರಮಣ ಇಷ್ಟು ರೂಪಗಳಿಂದ ಇದ್ದು ಅವಿದ್ಯಾ ಪಂಚಕಗತನಾಗಿ, ಕುಮೋಹವ=ಕೆಟ್ಟ ಮೋಹವನ್ನು ಕರಣಕ್ಕೆ-ಇಂದ್ರಿಯಗಳಿಗೆ ಕೊಡುವನು. ಅಂದರೆ ಸರ್ವಶರೀರದಲ್ಲಿ ಅಂದರೆ ಲಿಂಗದೇಹದ ತಮೋ ಆವರಣಗತ ಶಬ್ದಾದಿಗಳಲ್ಲಿ ಕಾರಣರೂಪದಿಂದ ಇರುವನು. ಅವ್ಯಕ್ತ ದೇಹಗತ ತಮೋಭಾಗದಿ ಅನಿರುದ್ಧ ದೇಹಗತ ಪಂಚ ತಮೋ ಆವರಣದಿ ಸ್ಥೂಲ ದೇಹದಲ್ಲಿಪ್ಪ ತಮೋ ದೈತ್ಯಾದಿಗಳ ದ್ವಾರ ಅವಿದ್ಯಾ ಅಜ್ಞಾನಾದಿ ಕೆಟ್ಟ ಮೋಹನವನ್ನು ಅಜ್ಞಾನಿಗಳಿಗೆ ಕೊಡುವನು.

**ದ್ರೌಪದೀಶಪತಿ ವಿಠಲರು:** ಈರೆರಡು ಶತಹ್ಯಷ್ಟಧಿಕ ॥ ಅವಿದ್ಯಾಗತ ರೂಪಗಳು ದುರ್ಗಾರಮಣ ಕರಣಕ್ಕೆ ಮೋಹ ಕೊಡುವ.

೧) ಶಬ್ದ=ತಮ ಇಲ್ಲಿ ಕೃದ್ಧೋಲ್ಕ.
೨) ಸ್ಪರ್ಶ=ಮೋಹ ಇಲ್ಲಿ ಮಹೋಲ್ಕ.
೩) ರೂಪ=ಮಹಾ ಮೋಹ ಇಲ್ಲಿ ವೀರೋಲ್ಕ.
೪) ರಸ=ತಾಮಿಸ್ರ ಇಲ್ಲಿ ದ್ಯುಲ್ಕ.
೫) ಗಂಧ=ಅಂಧತಾ ಮಿಸ್ರ ಇಲ್ಲಿ ಸಹಸ್ರೋಲ್ಕ.

ಇದರೊಳಗೆ ಇರುವ ರೂಪ ೧೬೪೦೮ ತನು ನಾಲ್ಕು ರೂಪವೆಂದರೆ ತಾಪತ್ರಯದಲ್ಲಿ ಒಂಭತ್ತು ಅವಿಗತ-ಐದು ಒಟ್ಟು ೧೪ ರೂಪ ಆಯಿತು.

**ಭಾವಸೂಚನ:** ಈರೇತಿ॥ ತದುಕ್ತಂ ಪ್ರಮೇಯ ಮುಕ್ತಾವಲ್ಯಾಂ॥ ಚತುಃ ಶತೈಶ್ಚ ದ್ಯಷ್ಟೇತ್ತೈಃ ಷೋಡಶೈಸ್ತು ಸಹಸ್ರಕೈಃ ॥ ಶಬ್ದ ಬೋಧ್ಯೋ ಶಬ್ದ ಮುಖ ವಿಷಯಸ್ಥ ಇತಿ ॥ ೧೨ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ನನು ಏವಂ ಅನುಸಂದಧತಾಮಪಿ ಮೋಹಾಜ್ಞಾನದರ್ಶನಾತ್ ತಥ ಮೇತತ್ ? ಇತ್ಯಾಶಂಕ್ಯ ಲಿಂಗಕಲಾಮಾತ್ರಾಗತ ನಾಗಾದಿಗತ ತಮೋ ಮಾನಿ ದುರ್ಗಾರಮಣಸ್ಯ ಪಂಚರೂಪಿ (ಪ) ಭಗವತಃ ಏವ ಇತಿ ವಕ್ತುಂ ಉತ್ತರೂಪಾಣಿ ಆಹ "ಈರೆರಡು" ಇತಿ ॥ ದ್ವಾತ್ರಿಂಶತ್ ಸಹಸ್ರಾತ್ಮಾ ಚತುಃಶತ ಹರಿಃ ಪ್ರಭುಃ ॥ ಸರ್ವದೇಹೇಷು ಶಬ್ದಾದ್ಯಾಃ ನಾಗಾದಿಭಿರಧಿಷ್ಠಿತಾಃ ॥ ಇತಿ ವೈಭವೇ ॥ ಅವಿದ್ಯೇತಿ ಭೇದಃ ॥ ೧೨ ॥

## ಕನ್ನಡಾರ್ಥ

ಹೀಗೆ ಅನುಸಂಧಾನ ಮಾಡುವವರಿಗೂ ಸಹ ಅಜ್ಞಾನ ಮೋಹ ಗಳಿರುವುದು ಕಂಡು ಬರುತ್ತವೆ. ಇದು ಹೇಗೆ ಕೂಡುತ್ತದೆ? ಎಂದು ಆಕ್ಷೇಪವನ್ನು ತಂದುಕೊಂಡು ಲಿಂಗಶರೀರದ ಕಳಾ (ಮಾತ್ರ)ಗಳಲ್ಲಿರುವ ನಾಗ ಮುಂತಾದವರಲ್ಲಿರುವ ತಮೋಗುಣಾಭಿಮಾನಿಯಾದ ದುರ್ಗಾದೇವಿಯು ಪತಿಯಾದ ಪಂಚರೂಪಿ ಭಗವಂತನಿಂದಲೇ "ಮೋಹಾಜ್ಞಾನಾದಿಗಳು ಇಂಥ ಅನುಸಂಧಾತೃಗಳಿಗೆ ಬರುತ್ತನೆ" ಎಂದು ಹೇಳಲು, ಹಿಂದೆ ಹೇಳಿದ ರೂಪಗಳನ್ನು ಹೇಳುತ್ತಾರೆ. "ಈರೆರಡು" ಎಂಬ ಪದ್ಯದಿಂದ. ೩೨೪೦೦ ರೂಪಗಳಿಂದ ಪರಮಾತ್ಮನು ನಾಗಾದಿ ದಶಪ್ರಾಣಾದಿಗಳಲ್ಲಿ ಇದ್ದು ತಮೋ ಗುಣಮಾನಿ ದುರ್ಗಾಪತಿ ರೂಪದಿಂದ ಅವಿದ್ಯಾ ಮೋಹಗಳನ್ನು ಕೊಡು ತ್ತಾರೆ, ಎಂದು "ವೈಭವ" ಎಂಬ ಗ್ರಂಥದಲ್ಲಿ ಹೇಳಲಾಗಿರುತ್ತದೆ. ಮೂಲ ದಲ್ಲಿ ೧೬೪೦ಲ ರೂಪವೆಂದು ಹೇಳಿದ್ದಾರೆ. ಈ ಜ್ಞಾನಿಗಳು ಒಟ್ಟಿಗೆ ೩೨೪೦೦ ರೂಪಗಳೆಂಬುದಕ್ಕೆ ಪ್ರಮಾಣ ಕೊಟ್ಟಿದ್ದಾರೆ. ಇದು ವಿಚಾರಾಂಶವಾಗಿದೆ.

**ಅವತರಣಿಕಾ :** ಹಿಂದೆ ಐದು ಅವಿದ್ಯಾಗಳಲ್ಲಿಪ್ಪ ೫ ರೂಪಕೃದ್ಧೋಲ್ಕಾದಿ ಗಳಿಂದ ಇದ್ದು, ಸಜ್ಜನರ ಅಜ್ಞಾನಾದಿ ಅವಿದ್ಯಾ ಛೇದಿಸುತ್ತಾನೆ. ಅಸಜ್ಜನರಾದ ತಾಮಸರಿಗೆ ಅಜ್ಞಾನಾದಿಗಳನ್ನು ಕೊಡುವನೆಂದು ಈ ಪದ್ಯದಿಂದ ಹೇಳುತ್ತಾರೆ.

**ಮೂಲ :**

**ಐದವಿದ್ಯಗಳೊಳಗೆ ಇಹ ನಾ ।**
**ಗಾದಿಗಳಧಿಷ್ಠಾನದಲಿ ಲ ।**
**ಕ್ಷ್ಮೀಧವನು ಕೃದ್ಧೋಲ್ಕ ಮೊದಲಾದೈದು ರೂಪಗಳ ॥**
**ತಾಧರಿಸಿ ಸಜ್ಜನರ ವಿದ್ಯವ ।**
**ಛೇದಿಸುವ ತಾಮಸರಿಗಜ್ಞಾ ।**
**ನಾದಿಗಳ ಕೊಟ್ಟೆನರವರ ಸಾಧನವ ಮಾಡಿಸುವ ॥ ೧೩ ॥**

**ಪದ್ಯಾರ್ಥ :** ಐದವಿದ್ಯಗಳೊಳಗೆ=ಹಿಂದೆ ಹೇಳಿದ ತಮ-ಮೋಹ- ಮಹಾಮೋಹ-ತಾಮಿಸ್ರ-ಅಂಧಃ ತಾಮಿಸ್ರಗಳಲ್ಲಿ ಕ್ರಮವಾಗಿ ನಾಗ- ಕೂರ್ಮ-ಕೃಕಳ ದೇವದತ್ತ-ಧನಂಜಯಾದಿ ವಾಯು ಅಧಿಷ್ಠಾನದಲ್ಲಿ ಲಕ್ಷ್ಮೀ

ಧವ=ಶ್ರೀ ಲಕ್ಷ್ಮೀರೂಪಕ್ಕೂ ದುರ್ಗಾ ರೂಪಕ್ಕೂ ಕಿಂಚಿತ್ತಾದರೂ ಭೇದ ವಿಲ್ಲೆಂದು ತೋರಿಸಲು, ಲಕ್ಷ್ಮೀಪದ ಪ್ರಯೋಗಿಸಿರುವರು. ಈ ಲಕ್ಷ್ಮೀ ರಮಣನಾದ ಸ್ವಾಮಿ ಕೃದ್ಧೋಲ್ಕ-ಮಹೋಲ್ಕ-ವಿರೋಲ್ಕ-ದ್ಯುಲ್ಕ-ಸಹ ಸ್ರೋಲ್ಕ ಕ್ರಮವಾಗಿ ಈ ಐದು ರೂಪಗಳನ್ನು, ತಾ ಧರಿಸಿ=ತಾನು ಧಾರಣ ಮಾಡಿ ಇದ್ದು, ಸಜ್ಜನರವಿದ್ಯವ=ಸಜ್ಜನರಾದ=ಮುಕ್ತಿ ಯೋಗ್ಯರಾದ ಅವಿದ್ಯಾ-ಅಜ್ಞಾನ ಮಿಥ್ಯಾ ಜ್ಞಾನಾದಿಗಳನ್ನು, ಛೇದಿಸುವ=ಕತ್ತರಿಸುವ, ಕಡಿದು ಕಳೆಯುವ. ತಾಮಸರಿಗೆ=ತಮೋಗುಣವಿಶಿಷ್ಟರಾದ ಅಜ್ಞಾನಿಗಳಿಗೆ ಅಜ್ಞಾನಾದಿಗಳನ್ನು ಕೊಟ್ಟು, ಅವರವರ ಸಾಧನವ ಮಾಡಿಸುವ. ಮುಕ್ತಿ ಯೋಗ್ಯರಿಗೆ ಒಳ್ಳೆ ಗತಿ ಕೊಡಲು, ಅಂಥ ಒಳ್ಳೇ ಸುಜ್ಞಾನ ಪಾಲಿಸುವ, ತಾಮಸರಾದ ದೈತ್ಯಾದಿಗಳಿಗೆ ಅಜ್ಞಾನವನ್ನು ಹೆಚ್ಚಿಸಿ, ತಮೋದ್ವಾರ ಐದಿ ಸುವ ಸಾಧನವನ್ನು ಮಾಡಿಸುತ್ತಾನೆ.

**ದ್ರೌಪದೀಶಪತಿ ನಿಶಲರು :** ಐದವಿದ್ಯಗಳೊಳಗೆ=ಕೃದ್ಧೋಲ್ಕಾದಿ ಐದು ರೂಪದಿಂದ ಇದ್ದಾನೆ.

**ಭಾವಸೂಚನ:** ಐದೇತಿ ॥ ೧ ಕೃದ್ಧೋಲ್ಕ, ೨ ಮಹೋಲ್ಕ, ೩ ವೀರೋಲ್ಕ. ೪ ದ್ಯುಲ್ಕ, ೫ ಸಹಸ್ರೋಲ್ಕ, ಉಕ್ತಂಚ ಸಾರಸಂಗ್ರಹೇ ॥ ಕೃದ್ಧ ಮಹಾವೀರ ದ್ಯುಲ್ಕ ಸಹಸ್ರ ಸಹಿತೋಲ್ಕ ಇತಿ ॥ ೧೩ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಐದು" ಇತಿ ॥ ತಮಸ್ತುಶಾರ್ವರಂ ವಿಂದ್ಯಾತ್(ವಿದ್ಯಾತ್) ಮೋಹ ಶ್ಚೈವ ವಿಪರ್ಯಯಾತ್ ॥ ಮೋಹಃ ಭ್ರಾಂತಿಃ ॥ ತದಾಗ್ರಹಃ ಮಹಾ ಮೋಹಃ ತಾಮಿಸ್ರಃ ಕ್ರೋಧಃ ಉಚ್ಯತೇ ॥ ಮರಣಂ ತ್ವಂಧತಾಮಿಸ್ರಂ ಅವಿದ್ಯಾ ಪಂಚಪರ್ವಿಕಾ ॥ ಇತಿ ಭಾಗವತ ತೃತೀಯ ತಾತ್ಪರ್ಯೇ ॥ ತದರ್ಥಸ್ತು:— "ಶರ್ವರೀ ಭವತಮಃ ಸದೃಶಂ ಜೀವೇಶ್ವರ ವೈಲಕ್ಷಣ್ಯಾ ಜ್ಞಾನಾತ್ಮಕಂ ತಮಃ ಏಕಮ್ ॥ ೧ ॥ ಜೀವೇಶ್ವರಾಭೇದ ಜ್ಞಾನಾಖ್ಯೋ ವಿಪರ್ಯಯಾಪರ ಪರ್ಯಾಯಃ ಮೋಹಃ ಏಕಃ ॥ ೨ ॥ ತದಾಗ್ರಹಃ ಮಹಾಮೋಹಃ ಸಮ್ಮೋಹಾ ಪರಪರ್ಯಾಯಃ ಏಕಃ ॥ ೩ ॥ ಜೀವೇಶ್ವರಾ ಭೇದ ನಿರಾಕರ್ತೃಷು ಕ್ರೋಧ ತಾಮಿಸ್ರಃ ಏಕಃ ॥ ೪ ॥ ಜೀವೇಶ್ವರಾಭೇದ ವಾದಿಭಿಃ ಸಹ ಮರಣ ಪರ್ಯಂತಂ ವಿಗ್ರಹಃ ಅಂಧತಾಮಿಸ್ರಃ ಏಕಃ ॥ ೫ ॥

ಇತಿ ಮಂಜರೀ ॥ "ತಮಃ ಶಬ್ದಗತಂ ಪ್ರಾಹುಃ ಮೋಹಾ ಸ್ಪರ್ಶಗತೋ ಮತಃ ॥ ಮಹಾಮೋಹಂ ರೂಪಗತಃ ತಾಮಿಸ್ರಃ ರಸಗಃ ಮತಃ ॥ ಗಂಧ ಗೋಂಧ ತಾಮಿಸ್ರಾಖ್ಯಃ ತ ಏತೇ ಭಾವರೂಪತಾಃ" ॥ ಇತಿ ಪ್ರಕಾಶ ಸಂಹಿತಾಯಾಮ್ ॥ ಮೊದಲಾದ= ವಿರೋಲ್ಕ ಮಹೋಲ್ಕ ದ್ಯುಲ್ಕ ಸಹ ಸ್ರೋಲ್ಕಾಃ ॥ ಕೃತ್=ಕ್ರೋಧಃ। ತಂಹಿತಂ ಪ್ರಾಪಯತಿ ಇತಿ ॥ ತನ್ನಾಮನೀ ದುರ್ಯೋಧನಃ ಕೃದ್ಧಃ॥ತದ್ವಿಷಯೇ ಉಲ್ಕೇವ ಆಚರತೀತಿ ಕೃದ್ಧೋಲ್ಕಃ॥೧॥ ಮಹತೋ ರುಲಯೋಃ ರುದ್ರೇಂದ್ರಯೋಃ ತಂ ಯಸ್ಮಾತ್ ಸ ತಥೋಕ್ತಃ ॥ ೨ ॥ ವೀರಾಣಾಂ ಋಜೂನಾಂ ಉತ್ಕೃಷ್ಟಂ ಲಂ ಅಮೃತಂ ಕಾಮಯತಿ ದಾತುಂ ಪ್ರತಿಜಾನೀತೇ ಇತಿ ತಥೋಕ್ತಃ ॥ ೩ ॥ ದ್ಯೂಪಲಕ್ಷಿತಯಾವಲ್ಲೋ ಕಾನಾಂ ಉಲ್ಕೇವ ಪ್ರಕಾಶಕತ್ವಾತ್ ಸ ತಥೋಕ್ತಃ ॥।ಸಹಸ್ರ ಸಂಖ್ಯಾಕಾಃ ಉಲ್ಕಾಃ ಕಾಂತಿ ವಿಶೇಷಾಃ ಯಸ್ಯ ಇತಿ ತಥೋಕ್ತಃ ॥ ೪ ॥ ( ೧೩ )

## ಕನ್ನಡಾರ್ಥ

"ಐದವಿದ್ಯೆಗಳಲ್ಲಿ" ಎಂಬ ಪದ್ಯದಲ್ಲಿ ಅವಿದ್ಯಾಗಳಲ್ಲಿರುವ ಭಗವದ್ರೂಪ ಗಳನ್ನು ನಿರೂಪಿಸುತ್ತಾರೆ. ಭಾಗವತ ತಾತ್ಪರ್ಯ ತೃತೀಯ ಸ್ಕಂಧದಲ್ಲಿ "ತಮಸ್ಸು-ಮೋಹ-ಮಹಾಮೋಹ-ತಾಮಿಸ್ರ-ಅಂಧತಾಮಿಸ್ರ" ಎಂಬುದಾಗಿ ಅವಿದ್ಯೆಯಲ್ಲಿ ಪರ್ವಗಳು-ಪ್ರಭೇದಗಳು" ಎಂದು ಹೇಳಿರುತ್ತಾರೆ. ಈ ಶ್ಲೋಕ ಗಳ ಅರ್ಥವನ್ನು ಹೀಗೆ ತಿಳಿಯಬೇಕು. "ರಾತ್ರಿಯಲ್ಲಿರುವ ಕತ್ತಲೆಯಂತೆ ಇರುವ ಜೀವೇಶ್ವರರ ವೈಲಕ್ಷಣ್ಯವನ್ನು (ಭೇದವನ್ನು) ತಿಳಿಯದೇ ಇರುವದು. ಇದು ಅಜ್ಞಾನ. ಇದೇ ಒಂದು ತಮಸ್ಸು. ಜೀವೇಶ್ವರರಲ್ಲಿ ಅಭೇದವನ್ನು ತಿಳಿಯುವದೇ ಒಂದು ಅಜ್ಞಾನವೆಂದು ಕರೆಯಲ್ಪಡುವ ವಿಪರ್ಯಾಯ. (ವಿಪರೀತ ಜ್ಞಾನ) ವೆಂಬ ಮೋಹವು ಎರಡನೆಯದು. ಜೀವೇಶ್ವರರ ಅಭೇದವೇ ಇದೆ, ಎಂಬ ವಿಷಯದಲ್ಲಿ ಮಹಾ ಆಗ್ರಹವು ಮಹಾಮೋಹ ವೆನಿಸಿರುತ್ತದೆ. ಇದು ಮೂರನೆಯ ಪ್ರಭೇದ. ಜೀವೇಶ್ವರರಲ್ಲಿ ಐಕ್ಯ ವನ್ನು ನಿರಾಕರಿಸುವವರಲ್ಲಿ ಕ್ರೋಧವು ತಾಮಿಸ್ರವು; ಇದು ನಾಲ್ಕನೆಯದು. "ಜೀವೇಶ್ವರರಲ್ಲಿ ಭೇದವಿದೆ" ಎಂದು ವಾದಿಸುವ ಸದ್ವಾದಿಗಳೊಡನೆ ಮರಣ ವಾಗುವವರೆಗೂ ಕಲಹ (ವಿಗ್ರಹ) ಮಾಡುವದು ಅಂಧತಾಮಿಸ್ರ. ಇದು ಐದನೆಯದು." ಹೀಗೆ ಮಂಜರಿಯಲ್ಲಿ ಹೇಳಲಾಗಿದೆ. ಶಬ್ದದಲ್ಲಿ ತಮಸ್ಸು

ಇದೆ ಎಂದು ಪ್ರಾಜ್ಞರು ಹೇಳುತ್ತಾರೆ. ಸ್ಪರ್ಶದಲ್ಲಿ ಮೋಹವಿರುತ್ತದೆ ಎಂದು ಪ್ರಸಿದ್ಧವಿದೆ. ರೂಪದಲ್ಲಿ ಮಹಾ ಮೋಹವಿರುತ್ತದೆ. ತಾಮಿಸ್ರವು ರಸದಲ್ಲಿದೆ ಎಂದು ಪ್ರಸಿದ್ಧವಾಗಿರುತ್ತದೆ. ಅಂಧತಾಮಿಸ್ರವು ಗಂಧದಲ್ಲಿ ಇರುತ್ತದೆ. ಇವು ಐದು ಭಾವರೂಪಗಳಾಗಿರುತ್ತವೆ." ಎಂದು ಪ್ರಕಾಶ ಸಂಹಿತೆಯಲ್ಲಿ ಹೇಳಲ್ಪಟ್ಟಿರುತ್ತದೆ. ಮೊದಲಾದ ಎಂದರೆ ವೀರೋಲ್ಕ ದ್ಯುಲ್ಕ ಮಹೋಲ್ಕ ಸಹಸ್ರೋಲ್ಕಗಳು. ಕೃತ್ ಎಂದರೆ ಕ್ರೋಧ. ಅದನ್ನು ನಾಶಗೊಳಿಸುವವನು ಕೃದ್ಧಃ || ಅಥವಾ ಕೃತ್=ಕ್ರೋಧ. ಅದಕ್ಕೆ ಅಭಿಮಾನಿಯಾದ ದುರ್ಯೋಧನನು ಕೃದ್ಧನು. ದುರ್ಯೋಧನನ ವಿಷಯದಲ್ಲಿ ಉಲ್ಕಾ (ಜ್ವಾಲೆ ನೊಂದಿದ ಕೆಂಡ) ದಂತೆ ವರ್ತಿಸುವದರಿಂದ ಭಗವಂತನಿಗೆ "ಕೃದ್ಧೋಲ್ಕ" ಎಂದು ಕರೆಯುತ್ತಾರೆ. ಮಹಾತ್ಮರಾದ ರುದ್ರ ಇಂದ್ರ ದೇವತೆಗಳಿಗೆ ಸುಖವನ್ನೀಯುವದರಿಂದ ನಾರಾಯಣನಿಗೆ "ಮಹೋಲ್ಕ" ಎಂದು ಕರೆಯುತ್ತಾರೆ. ವೀರರೆನಿಸಿರುವ ಋಜುಗಳಿಗೆ ಉತ್ಕೃಷ್ಟವಾದ ಸುಖವನ್ನೀಯುವದರಿಂದ "ವೀರೋಲ್ಕ" ಎನ್ನುತ್ತಾರೆ. ದ್ಯು ಮುಂತಾದ ಸಕಲ ಲೋಕಗಳನ್ನೂ ಉಲ್ಕೆಯಂತೆ ಪ್ರಕಾಶಿಸುವದರಿಂದ "ದ್ಯುಲ್ಕ" ಎನ್ನುತ್ತಾರೆ. ಸಹಸ್ರಾರು ಕಾಂತಿಯ ಪ್ರಭೇದಗಳುಳ್ಳವನಾದುದರಿಂದ "ಸಹಸ್ರೋಲ್ಕ" ಎನ್ನುತ್ತಾರೆ. || ೧೩ ||

**ಅವತರಣಿಕಾ :** ಹಿಂದೆ ಪೇಳಿದ ಅವಿದ್ಯಾಗಳನ್ನು ಪರಿಹಾರಗೊಳಿಸಲೊಸುಗ ಶ್ರೀ ವಿಜಯದಾಸರ ಸುಳಾದಿಯಂತೆ ಸಾಮೋಪಾಸನೆ ಮಾಡಬೇಕೆಂದು ಈ ಪದ್ಯದಲ್ಲಿ ವಿವರಿಸುತ್ತಾರೆ. ಸಂಧಿಯ ಸಾರದಲ್ಲಿ ವಿಸ್ತಾರ ವಿವರಿಸಿದೆ. (ಛಾಂದೋಗ್ಯ ಶ್ರುತಿಗಳನ್ನು)

**ಮೂಲ :**

**ಗೋವುಗಳೊಳುದ್ಗೀಥನಿಹ ಪ್ರ ।**
**ಸ್ತಾವ ಹಿಂಕಾರೆರಡು ರೂಪದಿ ।**
**ಆವಿ ಅಜಗಳೊಳಿಹನು ಪ್ರತಿಹಾರಾಹ್ವ ಹಯಗಳೊಳು ॥**

**ಜೀವನಪ್ರದ ನಿಧನ ಮನುಜರೊ ।**
**ಳೀ ವಿಧದೊಳಿಹ ಪಂಚಸಾಮವ ।**
**ಜಾವಜಾವಕೆ (ಝಾವಝಾವಕೆ) ನೆನೆವರಿಗೆ ಐದಿಸನು**
**ಜನ್ಮಗಳ ॥ ೧೪ ॥**

(ವ್ಯಾಸಾರ್ಯರು ಅವಿ ಶಬ್ದಕ್ಕೆ ಛಂದಸ್ಸಿನ ನಿಯಮದಂತೆ ಆವಿ ಎಂದು ಪೇಳಿದ್ದಾರೆ.)

**ಪದ್ಯಾರ್ಥ :** ಗೋವುಗಳೊಳು=ಶ್ರೀಹರಿಯು ಸದ್ಗತಿಯನ್ನು ಕೊಡುವನಾದ ಕಾರಣ ಗೋ ಎಂದು ಕರೆಸುತ್ತಾನೆ. ಪಶುವಾದ ಗೋವುಗಳಲ್ಲಿ ಉದ್ಗೀಥ ನಾಮಕ ಸಾಮ ಹರಿಯ ರೂಪ, ಉದ್ಗೀಥನೆಂದರೆ=ಓಂಕಾರದಿಂದ ಉಚ್ಚನೆಂದು ಸರ್ವೋತ್ತಮನೆಂದು ಗಾನ ಮಾಡಲ್ಪಡುವದರಿಂದ ಉದ್ಗೀಥನೆಂದು ಅಥವಾ ನಾರಾಯಣನಿಂದ ವಾಸುದೇವಾದಿ ರೂಪಗಳು. ಆವಿರ್ಭೂತ-ಉದ್ಭವವಾದ ಕಾರಣ ಉದ್ಗೀಥ ನಾಮದಿಂದ ನಾರಾಯಣನಿರುವ. ಅವಿ (ಆವಿ) ಕುರಿಗಳಲ್ಲಿ ಪ್ರಸ್ಥಾವ, ಸೀತಾದಿಗಳಿಂದ ಸಂರಕ್ಷಣ ಮಾಡುವದರಿಂದ ಅವಿ ಕುರಿಯಲ್ಲಿ ಪ್ರಸ್ತಾವ ಪ್ರಥಮಾವತಾರ ರೂಪನಾದ ವಾಸುದೇವನು ಪ್ರಸ್ತಾವ ಪ್ರಸ್ತೋತ್ರನೆಂದು ಹೆಸರು. ಅಜ=ಆಡುಗಳಲ್ಲಿ, ಹಿಂಕಾರ=ಹಿಂ-ಸೃಷ್ಟಿಯನ್ನು ಮಾಡುವನಾದುದರಿಂದ ಪ್ರದ್ಯುಮ್ನನು ಹಿಂಕಾರನೆಂದು, ಹಯುಗಳೊಳು=ಪ್ರತಿಹಾರ ರೂಪ ಜಗತ್ತನ್ನು ಪ್ರೇರಿಸಿ ಪ್ರತಿಹರಣ ಮಾಡುವದರಿಂದ ಅನಿರುದ್ಧಗೆ ಪ್ರತಿಹಾರನೆಂದು ಹೆಸರು. ಜೀವನ ಪ್ರದನಿಧನ ಮನುಜರೊಳು=ಜೀವನ ಕೊಟ್ಟು, ಸಂಹಾರ ಮಾಡುವದರಿಂದ ನಿಧನನೆಂದು ಸಂಕರ್ಷಣನಿಗೆ ಹೆಸರು. ಈ ಪ್ರಕಾರವಾಗಿ, ಪಂಚಸಾಮವ= ಸಾಧುಸ್ವಭಾವವು ನಿರ್ದೋಷತ್ವವೂ ಇರುವದರಿಂದ ಸಾಮವೆಂದು ಶ್ರೀಹರಿಗೆ ಹೆಸರು. ಇಂಥ ಪಂಚ ಪಶು=ಅಂದರೆ ಸುಖವನ್ನು ಕೊಡತಕ್ಕ ಶ್ರೀಹರಿಯನ್ನು ಗೋ ಆವಿ ಅಜ ಹಯ ಮನುಜನೂ ಯಜ್ಞಪಶುವಾದ ಕಾರಣ. ಇಂಥ ಪ್ರಾಣಿಗಳಲ್ಲಿ ಶ್ರೀಹರಿಯ ಸಾಮೋಪಾಸನೆ ಮಾಡಿದರೆ ಅವಿದ್ಯಾ ಪರಿಹಾರಮಾಡಿ ಮುಂದೆ ಜನ್ಮಗಳನ್ನು ಕೊಡನೆಂದು ಹೇಳಿದ್ದಾರೆ.

**ದ್ರೌಪದೀಶಪತಿ ವಿಠಲರು :** ಗೋವುಗಳೊಳಗೆ ಪಂಚಸಾಮ ಭಗವದ್ರೂಪ ೧) ಗೋವುಗಳೊಳಗೆ=ಉದ್ಗೀಥ, ೨) ಆವಿ=ಕುರಿಗಳೊಳಗೆ-

ಧವ=ಶ್ರೀ ಲಕ್ಷ್ಮೀರೂಪಕ್ಕೂ ದುರ್ಗಾ ರೂಪಕ್ಕೂ ಕಿಂಚಿತ್ತಾದರೂ ಭೇದ ವಿಲ್ಲೆಂದು ತೋರಿಸಲು, ಲಕ್ಷ್ಮೀಪದ ಪ್ರಯೋಗಿಸಿರುವರು. ಈ ಲಕ್ಷ್ಮೀ ರಮಣನಾದ ಸ್ವಾಮಿ ಕೃದ್ಧೋಲ್ಕ-ಮಹೋಲ್ಕ-ವಿರೋಲ್ಕ-ದ್ಯುಲ್ಕ-ಸಹ ಸ್ರೋಲ್ಕ ಕ್ರಮವಾಗಿ ಈ ಐದು ರೂಪಗಳನ್ನು, ತಾ ಧರಿಸಿ=ತಾನು ಧಾರಣ ಮಾಡಿ ಇದ್ದು, ಸಜ್ಜನರವಿದ್ಯವ=ಸಜ್ಜನರಾದ=ಮುಕ್ತಿ ಯೋಗ್ಯರಾದ ಅವಿದ್ಯಾ-ಅಜ್ಞಾನ ಮಿಥ್ಯಾ ಜ್ಞಾನಾದಿಗಳನ್ನು, ಛೇದಿಸುವ=ಕತ್ತರಿಸುವ, ಕಡಿದು ಕಳೆಯುವ. ತಾಮಸರಿಗೆ=ತಮೋಗುಣವಿಶಿಷ್ಟರಾದ ಅಜ್ಞಾನಿಗಳಿಗೆ ಅಜ್ಞಾನಾದಿಗಳನ್ನು ಕೊಟ್ಟು, ಅವರವರ ಸಾಧನವ ಮಾಡಿಸುವ. ಮುಕ್ತಿ ಯೋಗ್ಯರಿಗೆ ಒಳ್ಳೆ ಗತಿ ಕೊಡಲು, ಅಂಥ ಒಳ್ಳೇ ಸುಜ್ಞಾನ ಪಾಲಿಸುವ, ತಾಮಸರಾದ ದೈತ್ಯಾದಿಗಳಿಗೆ ಅಜ್ಞಾನವನ್ನು ಹೆಚ್ಚಿಸಿ, ತಮೋದ್ವಾರ ಐದಿ ಸುವ ಸಾಧನವನ್ನು ಮಾಡಿಸುತ್ತಾನೆ.

**ದ್ರೌಪದೀಶಪತಿ ನಿತಲರು :** ಐದವಿದ್ಯಗಳೊಳಗೆ=ಕೃದ್ಧೋಲ್ಕಾದಿ ಐದು ರೂಪದಿಂದ ಇದ್ದಾನೆ.

**ಭಾವಸೂಚನ:** ಐದೇತಿ ॥ ೧ ಕೃದ್ಧೋಲ್ಕ, ೨ ಮಹೋಲ್ಕ, ೩ ವೀರೋಲ್ಕ. ೪ ದ್ಯುಲ್ಕ, ೫ ಸಹಸ್ರೋಲ್ಕ, ಉಕ್ತಂಚ ಸಾರಸಂಗ್ರಹೇ ॥ ಕೃದ್ಧ ಮಹಾವೀರ ದ್ಯುಲ್ಕ ಸಹಸ್ರ ಸಹಿತೋಲ್ಕ ಇತಿ ॥೧೩॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಐದು" ಇತಿ ॥ ತಮಸ್ತು ಶಾರ್ವರಂ ವಿಂದ್ಯಾತ್(ವಿದ್ಯಾತ್) ಮೋಹ ಶ್ಚೈವ ವಿಪರ್ಯಯಾತ್ ॥ ಮೋಹಃ ಭ್ರಾಂತಿಃ ॥ ತದಾಗ್ರಹಃ ಮಹಾ ಮೋಹಃ ತಾಮಿಸ್ರಃ ಕ್ರೋಧಃ ಉಚ್ಯತೇ ॥ ಮರಣಂ ತ್ವಂಧತಾಮಿಸ್ರಂ ಅವಿದ್ಯಾ ಪಂಚಪರ್ವಿಕಾ ॥ ಇತಿ ಭಾಗವತ ತೃತೀಯ ತಾತ್ಪರ್ಯೇ ॥ ತದರ್ಥಸ್ತು:— "ಶರ್ವರೀ ಭವತಮಃ ಸದೃಶಂ ಜೀವೇಶ್ವರ ವೈಲಕ್ಷಣ್ಯಾ ಜ್ಞಾನಾತ್ಮಕಂ ತಮಃ ಏಕಮ್ ॥ ೧ ॥ ಜೀವೇಶ್ವರಾಭೇದ ಜ್ಞಾನಾಖ್ಯೋ ವಿಪರ್ಯಯಾಪರ ಪರ್ಯಾಯಃ ಮೋಹಃ ಏಕಃ ॥ ೨ ॥ ತದಾಗ್ರಹಃ ಮಹಾಮೋಹಃ ಸಮ್ಮೋಹಾ ಪರಪರ್ಯಾಯಃ ಏಕಃ ॥ ೩ ॥ ಜೀವೇಶ್ವರಾ ಭೇದ ನಿರಾಕರ್ತೃಷು ಕ್ರೋಧ ತಾಮಿಸ್ರಃ ಏಕಃ ॥ ೪ ॥ ಜೀವೇಶ್ವರಾಭೇದ ವಾದಿಭಿಃ ಸಹ ಮರಣ ಪರ್ಯಂತಂ ವಿಗ್ರಹಃ ಅಂಧತಾಮಿಸ್ರಃ ಏಕಃ ॥ ೫ ॥

ಇತಿ ಮಂಜರೀ ॥ "ತಮಃ ಶಬ್ದಗತಂ ಪ್ರಾಹುಃ ಮೋಹಾ ಸ್ಪರ್ಶಗತೋ ಮತಃ ॥ ಮಹಾಮೋಹಂ ರೂಪಗತಃ ತಾಮಿಸ್ರಃ ರಸಗಃ ಮತಃ ॥ ಗಂಧ ಗೋಽಂಧ ತಾಮಿಸ್ರಾಖ್ಯಃ ತ ಏತೇ ಭಾವರೂಪತಾಃ" ॥ ಇತಿ ಪ್ರಕಾಶ ಸಂಹಿತಾಯಾಮ್ ॥ ಮೊದಲಾದ= ವಿರೋಲ್ಕ ಮಹೋಲ್ಕ ದ್ಯುಲ್ಕ ಸಹ ಸ್ರೋಲ್ಕಾಃ ॥ ಕೃತ್ =ಕ್ರೋಧಃ । ತಂಹತಿಂ ಪ್ರಾಪಯತಿ ಇತಿ ॥ ತನ್ನಾಮನೀ ದುರ್ಯೋಧನಃ ಕೃದ್ಧಃ॥ತದ್ವಿಷಯೇ ಉಲ್ಕೇವ ಆಚರತೀತಿ ಕೃದ್ಧೋಲ್ಕಃ॥೧॥ ಮಹತೋ ರುಲಯೋಃ ರುದ್ರೇಂದ್ರಯೋಃ ತಂ ಯಸ್ಮಾತ್ ಸ ತಥೋಕ್ತಃ ॥೨॥ ವೀರಾಣಾಂ ಋಜೂನಾಂ ಉತ್ಕೃಷ್ಟಂ ಲಂ ಅಮೃತಂ ಕಾಮಯತಿ ದಾತುಂ ಪ್ರತಿಜಾನೀತೇ ಇತಿ ತಥೋಕ್ತಃ ॥ ೩ ॥ ದ್ಯೂಪಲಕ್ಷಿತಯಾವಲ್ಲೋಕಾನಾಂ ಉಲ್ಕೇವ ಪ್ರಕಾಶಕತ್ವಾತ್ ಸ ತಥೋಕ್ತಃ ॥ ಸಹಸ್ರ ಸಂಖ್ಯಾಕಾಃ ಉಲ್ಕಾಃ ಕಾಂತಿ ವಿಶೇಷಾಃ ಯಸ್ಯ ಇತಿ ತಥೋಕ್ತಃ ॥ ೪ ॥ ( ೧೩ )

## ಕನ್ನಡಾರ್ಥ

"ಐದವಿದ್ಯೆಗಳಲ್ಲಿ" ಎಂಬ ಪದ್ಯದಲ್ಲಿ ಅವಿದ್ಯಾಗಳಲ್ಲಿರುವ ಭಗವದ್ರೂಪಗಳನ್ನು ನಿರೂಪಿಸುತ್ತಾರೆ. ಭಾಗವತ ತಾತ್ಪರ್ಯ ತೃತೀಯ ಸ್ಕಂಧದಲ್ಲಿ "ತಮಸ್ಸು-ಮೋಹ-ಮಹಾಮೋಹ-ತಾಮಿಸ್ರ-ಅಂಧತಾಮಿಸ್ರ" ಎಂಬುದಾಗಿ ಅವಿದ್ಯೆಯಲ್ಲಿ ಪರ್ವಗಳು-ಪ್ರಭೇದಗಳು" ಎಂದು ಹೇಳಿರುತ್ತಾರೆ. ಈ ಶ್ಲೋಕಗಳ ಅರ್ಥವನ್ನು ಹೀಗೆ ತಿಳಿಯಬೇಕು. "ರಾತ್ರಿಯಲ್ಲಿರುವ ಕತ್ತಲೆಯಂತೆ ಇರುವ ಜೀವೇಶ್ವರರ ವೈಲಕ್ಷಣ್ಯವನ್ನು (ಭೇದವನ್ನು) ತಿಳಿಯದೇ ಇರುವದು. ಇದು ಅಜ್ಞಾನ. ಇದೇ ಒಂದು ತಮಸ್ಸು. ಜೀವೇಶ್ವರರಲ್ಲಿ ಅಭೇದವನ್ನು ತಿಳಿಯುವದೇ ಒಂದು ಅಜ್ಞಾನವೆಂದು ಕರೆಯಲ್ಪಡುವ ವಿಪರ್ಯಾಯ. (ವಿಪರೀತ ಜ್ಞಾನ) ವೆಂಬ ಮೋಹವು ಎರಡನೆಯದು. ಜೀವೇಶ್ವರರ ಅಭೇದವೇ ಇದೆ, ಎಂಬ ವಿಷಯದಲ್ಲಿ ಮಹಾ ಆಗ್ರಹವು ಮಹಾಮೋಹವೆನಿಸಿರುತ್ತದೆ. ಇದು ಮೂರನೆಯ ಪ್ರಭೇದ. ಜೀವೇಶ್ವರರಲ್ಲಿ ಐಕ್ಯವನ್ನು ನಿರಾಕರಿಸುವವರಲ್ಲಿ ಕ್ರೋಧವು ತಾಮಿಸ್ರವು; ಇದು ನಾಲ್ಕನೆಯದು. "ಜೀವೇಶ್ವರರಲ್ಲಿ ಭೇದವಿದೆ" ಎಂದು ವಾದಿಸುವ ಸದ್ವಾದಿಗಳೊಡನೆ ಮರಣವಾಗುವವರೆಗೂ ಕಲಹ (ವಿಗ್ರಹ) ಮಾಡುವದು ಅಂಧತಾಮಿಸ್ರ. ಇದು ಐದನೆಯದು." ಹೀಗೆ ಮಂಜರಿಯಲ್ಲಿ ಹೇಳಲಾಗಿದೆ. ಶಬ್ದದಲ್ಲಿ ತಮಸ್ಸು

ಇದೆ ಎಂದು ಪ್ರಾಜ್ಞರು ಹೇಳುತ್ತಾರೆ. ಸ್ಪರ್ಶದಲ್ಲಿ ಮೋಹವಿರುತ್ತದೆ ಎಂದು ಪ್ರಸಿದ್ಧವಿದೆ. ರೂಪದಲ್ಲಿ ಮಹಾ ಮೋಹವಿರುತ್ತದೆ. ತಾಮಿಸ್ರವು ರಸ ದಲ್ಲಿದೆ ಎಂದು ಪ್ರಸಿದ್ಧವಾಗಿರುತ್ತದೆ. ಅಂಧತಾಮಿಸ್ರವು ಗಂಧದಲ್ಲಿ ಇರು ತ್ತದೆ. ಇವು ಐದು ಭಾವರೂಪಗಳಾಗಿರುತ್ತವೆ." ಎಂದು ಪ್ರಕಾಶ ಸಂಹಿತೆ ಯಲ್ಲಿ ಹೇಳಲ್ಪಟ್ಟಿರುತ್ತದೆ. ಮೊದಲಾದ ಎಂದರೆ ವೀರೋಲ್ಕ ದ್ಯುಲ್ಕ ಮಹೋಲ್ಕ ಸಹಸ್ರೋಲ್ಕಗಳು. ಕೃತ್ ಎಂದರೆ ಕ್ರೋಧ. ಅದನ್ನು ನಾಶ ಗೊಳಿಸುವವನು ಕೃದ್ಧಃ ॥ ಅಥವಾ ಕೃತ್=ಕ್ರೋಧ. ಅದಕ್ಕೆ ಅಭಿಮಾನಿ ಯಾದ ದುರ್ಯೋಧನನು ಕೃದ್ಧನು. ದುರ್ಯೋಧನನ ವಿಷಯದಲ್ಲಿ ಉಲ್ಕಾ (ಜ್ವಾಲೆ ನೊಂದಿದ ಕೆಂಡ) ದಂತೆ ವರ್ತಿಸುವದರಿಂದ ಭಗವಂತನಿಗೆ "ಕೃದ್ಧೋಲ್ಕ" ಎಂದು ಕರೆಯುತ್ತಾರೆ. ಮಹಾತ್ಮರಾದ ರುದ್ರ ಇಂದ್ರ ದೇವತೆಗಳಿಗೆ ಸುಖವನ್ನೀಯುವದರಿಂದ ನಾರಾಯಣನಿಗೆ "ಮಹೋಲ್ಕ" ಎಂದು ಕರೆಯುತ್ತಾರೆ. ವೀರರೆನಿಸಿರುವ ಋಜುಗಳಿಗೆ ಉತ್ಕೃಷ್ಟವಾದ ಸುಖವನ್ನೀಯುವದರಿಂದ "ವೀರೋಲ್ಕ" ಎನ್ನುತ್ತಾರೆ. ದ್ಯು ಮುಂತಾದ ಸಕಲ ಲೋಕಗಳನ್ನೂ ಉಲ್ಕೆಯಂತೆ ಪ್ರಕಾಶಿಸುವದರಿಂದ "ದ್ಯುಲ್ಕ" ಎನ್ನು ತ್ತಾರೆ. ಸಹಸ್ರಾರು ಕಾಂತಿಯ ಪ್ರಭೇದಗಳುಳ್ಳವನಾದುದರಿಂದ "ಸಹ ಸ್ರೋಲ್ಕ" ಎನ್ನುತ್ತಾರೆ. ॥ ೧೩ ॥

**ಅವತರಣಿಕಾ :** ಹಿಂದೆ ಪೇಳಿದ ಅವಿದ್ಯಾಗಳನ್ನು ಪರಿಹಾರಗೊಳಿಸಲೊಸುಗ ಶ್ರೀ ವಿಜಯದಾಸರ ಸುಳಾದಿಯಂತೆ ಸಾಮೋಪಾಸನೆ ಮಾಡಬೇಕೆಂದು ಈ ಪದ್ಯ ದಲ್ಲಿ ವಿವರಿಸುತ್ತಾರೆ. ಸಂಧಿಯ ಸಾರದಲ್ಲಿ ವಿಸ್ತಾರ ವಿವರಿಸಿದೆ. (ಛಾಂದೋಗ್ಯ ಶ್ರುತಿಗಳನ್ನು)

**ಮೂಲ :**

> ಗೋವುಗಳೊಳುದ್ಗೀಥನಿಹ ಪ್ರ ।
> ಸ್ತಾವ ಹಿಂಕಾರೆರಡು ರೂಪದಿ ।
> ಆವಿ ಅಜಗಳೊಳಿಹನು ಪ್ರತಿಹಾರಾಹ್ವ ಹಯಗಳೊಳು ॥

**ಜೀವನಪ್ರದ ನಿಧನ ಮನುಜರೊ ।**
**ಳೀ ವಿಧದೊಳಿಹ ಪಂಚಸಾಮವ ।**
**ಜಾವಜಾವಕೆ (ಝಾವಝಾವಕೆ) ನೆನೆವರಿಗೆ ಐದಿಸನು**
**ಜನ್ಮಗಳ ॥ ೧೪ ॥**

(ದಾಸಾರ್ಯರು ಅವಿ ಶಬ್ದಕ್ಕೆ ಛಂದಸ್ಸಿನ ನಿಯಮದಂತೆ ಆವಿ ಎಂದು ಹೇಳಿದ್ದಾರೆ.)

**ಪದ್ಯಾರ್ಥ :** ಗೋವುಗಳೊಳು=ಶ್ರೀಹರಿಯು ಸದ್ಗತಿಯನ್ನು ಕೊಡುವನಾದ ಕಾರಣ ಗೋ ಎಂದು ಕರೆಸುತ್ತಾನೆ. ಪಶುವಾದ ಗೋವುಗಳಲ್ಲಿ ಉದ್ಗೀಥ ನಾಮಕ ಸಾಮ ಹರಿಯ ರೂಪ, ಉದ್ಗೀಥನೆಂದರೆ=ಓಂಕಾರದಿಂದ ಉಚ್ಚನೆಂದು ಸರ್ವೋತ್ತಮನೆಂದು ಗಾನ ಮಾಡಲ್ಪಡುವದರಿಂದ ಉದ್ಗೀಥನೆಂದು ಅಥವಾ ನಾರಾಯಣನಿಂದ ವಾಸುದೇವಾದಿ ರೂಪಗಳು. ಆವಿರ್ಭೂತ–ಉದ್ಭವವಾದ ಕಾರಣ ಉದ್ಗೀಥ ನಾಮದಿಂದ ನಾರಾಯಣನಿರುವ. ಅವಿ (ಆವಿ) ಕುರಿಗಳಲ್ಲಿ ಪ್ರಸ್ಥಾವ, ಸೀತಾದಿಗಳಿಂದ ಸಂರಕ್ಷಣ ಮಾಡುವದರಿಂದ ಅವಿ ಕುರಿಯಲ್ಲಿ ಪ್ರಸ್ತಾವ ಪ್ರಥಮಾವತಾರ ರೂಪನಾದ ವಾಸುದೇವನು ಪ್ರಸ್ತಾವ ಪ್ರಸ್ತೋತ್ರನೆಂದು ಹೆಸರು. ಅಜ=ಆಡುಗಳಲ್ಲಿ, ಹಿಂಕಾರ=ಹಿಂ–ಸೃಷ್ಟಿಯನ್ನು ಮಾಡುವನಾದುದರಿಂದ ಪ್ರದ್ಯುಮ್ನನು ಹಿಂಕಾರನೆಂದು, ಹಯಗಳೊಳು=ಪ್ರತಿಹಾರ ರೂಪ ಜಗತ್ತನ್ನು ಪ್ರೇರಿಸಿ ಪ್ರತಿಹರಣ ಮಾಡುವದರಿಂದ ಅನಿರುದ್ಧಗೆ ಪ್ರತಿಹಾರನೆಂದು ಹೆಸರು. ಜೀವನಪ್ರದನಿಧನ ಮನುಜರೊಳು=ಜೀವನ ಕೊಟ್ಟು, ಸಂಹಾರ ಮಾಡುವದರಿಂದ ನಿಧನನೆಂದು ಸಂಕರ್ಷಣನಿಗೆ ಹೆಸರು. ಈ ಪ್ರಕಾರವಾಗಿ, ಪಂಚಸಾಮವ=ಸಾಧುಸ್ವಭಾವವು ನಿರ್ದೋಷತ್ವವೂ ಇರುವದರಿಂದ ಸಾಮವೆಂದು ಶ್ರೀಹರಿಗೆ ಹೆಸರು. ಇಂಥ ಪಂಚ ಪಶು=ಅಂದರೆ ಸುಖವನ್ನು ಕೊಡತಕ್ಕ ಶ್ರೀಹರಿಯನ್ನು ಗೋ ಆವಿ ಅಜ ಹಯ ಮನುಜನೂ ಯಜ್ಞಪಶುವಾದ ಕಾರಣ. ಇಂಥ ಪ್ರಾಣಿಗಳಲ್ಲಿ ಶ್ರೀಹರಿಯ ಸಾಮೋಪಾಸನೆ ಮಾಡಿದರೆ ಅವಿದ್ಯಾ ಪರಿಹಾರಮಾಡಿ ಮುಂದೆ ಜನ್ಮಗಳನ್ನು ಕೊಡನೆಂದು ಹೇಳಿದ್ದಾರೆ.

**ದ್ರೌಪದೀಶಪತಿ ವಿಠಲರು :** ಗೋವುಗಳೊಳಗೆ ಪಂಚಸಾಮ ಭಗವದ್ರೂಪ ೧) ಗೋವುಗಳೊಳಗೆ=ಉದ್ಗೀಥ, ೨) ಆವಿ=ಕುರಿಗಳೊಳಗೆ–

ಪ್ರಸ್ಥಾವ, ೩) ಅಜ=ಮೇಕೆ-ಆಡುಗಳೊಳಗೆ ಹಿಂಕಾರ, ೪) ಹಯ=ಕುದುರೆಗಳೊಳಗೆ ಪ್ರತಿಹಾರ, ೫) ಮನುಷ್ಯನಲ್ಲಿ=ನಿಧನ ಹೀಗೆ ೫ ರೂಪ.

**ಭಾವಸೂಚನ :** ಗೋವೇತಿ ॥ ಸಾಮೇತಿ ॥ ಸಾಮ ಪಂಚಕಸ್ಯ ಪೃಥಿವ್ಯಾದಿ ದೈವತಾತ್ವ ಮುಕ್ತ್ವಾ ಅಂತವದ್ವೈಖಲು ಸಾಮೇತ್ಯಾದಿನಾ ಹರೇರೇವ ಪ್ರತಿಪಾದ್ಯತ್ವ ಮುದೀರಿತಂ ॥ ೧೪ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಏವಂ ತದನುಗ್ರಹಾತ್ ಛಿನ್ನಾವಿದ್ಯಸ್ಯ ಮುಮುಕ್ಷೋಃ ಕಾಂಚನ ಸಾಮೋಪಾಸನಾಂ ವಕ್ತುಂ ಅಧಿಷ್ಠಾನ ಮಾಹ "ಗೋವುಗಳೊಳು" ಇತಿ ॥ ಯಥಾಹುಃ ಛಂದೋಗಾಃ । ಪಶುಷು ಪಂಚವಿಧಂ ಸಾಮ ಉಪಾಸೀತ । ಅಜಾ ಹಿಂಕಾರಃ । ಅವಯಃ (ಆವಯಃ) ಪ್ರಸ್ತಾವಃ । ಗಾವಃ ಉದ್ಗೀಥಃ । ಅಶ್ವಾಃ ಪ್ರತಿಹಾರಃ । ಪುರುಷಃ ನಿಧನಂ । ಭವತಿ ಹಾಸ್ಯ ಪಶವಃ । ಪಶುಮಾನ್ ಭವತಿ ಯ ಏತದೇವಂ ವಿದ್ವಾನ್ ಪಶುಷು ಪಂಚವಿಧಂ ಸಾಮ ಉಪಾಸ್ತೇ ॥ ಇತಿ ॥ ಪೂಜ್ಯ ಪಾದಾಸ್ತುಃ ಪಾಲನಾತ್ ಸುಖಕಾರಿ ತ್ವಾತ್ ಪಶುನಾಮಾ ಜನಾರ್ದನಃ ॥ ಮುಕ್ತಃ ತದ್ವಾನ್ ಭವತ್ಯೇವ ಪಶುಪೂಪಾಸಕೋ ಹರೇಃ (ಭವೇತ್ ॥) ಇತಿ ಚ ॥ ಯಜ್ಞೇನಾಂಚನಹೇತುತ್ವಾತ್ ಅಜಸ್ಥೋ ಭಗವಾನ್ ಅಜಃ ॥ ಅವಿಸ್ಥಃ ತ್ವವಿರೇವೋಕ್ತಃ ಊರ್ಣಶಾಯೀ ತತೋಽವನಾತ್ ॥ ಗೌಶ್ಚ ಸದ್ಗತಿ ಹೇತುತ್ವಾತ್ ಗೌಸ್ಥಃ ಸ ಪುರುಷೋತ್ತಮಃ ॥ ಅಶ್ವಶ್ಚೈವಾರು ಗಂತೃತ್ವಾತ್ ಪುರುಷಃ ಪೂರ್ತಿಹೇತುತಃ ॥ ಇತಿ ಚ॥ ಭವಂತಿ ಹಾಸ್ಯ ಪಶವಃ ಇತಿ ಪ್ರಸಿದ್ಧ ಪಶವಃ ಏವ॥ ಅಜಾಃ ಇತ್ಯಾದಿ= ಬಹುವಚನಂ ಬಹುರೂಪತ್ವಾತ್ ಭಗವತಃ ॥ ಸಾಧುತ್ವಾತ್ ಸಾಮನಾಮಾನಂ ಸಮಸ್ತ ಗುಣಪೂರ್ತಿತಃ ॥ ಸಮಸ್ತಂ ಯ ಉಪಾಸೀತ ನಾರಾಯಣ ಮನಾಮಯಮ್ ॥ ಸರ್ವನಾಮ್ನಾಂ ದೇವತೇತಿ ಸ ಮುಕ್ತಃ ಸಾಧು ಧರ್ಮಬಾತ್ ॥ ಇತಿ ಸಾಮ ಸಂಹಿತಾಯಾಮ್ ॥ ನಾರಾಯಣಾಖ್ಯಃ ಉದ್ಗೀಥಃ ಉದ್ಗೇಯಃ ಪ್ರಣವೇನ ತು ॥ ಉದ್ಗಚ್ಛಂತಿ ಯತೋಽಸ್ಮಾದ್ವಾ ವಾಸುದೇವಾದಿ ಮೂರ್ತಯಃ ॥ ಪ್ರಥಮಾವತಾರ ರೂಪತ್ವಾತ್ ವಾಸುದೇವಃ ಪರಃ ಪುಮಾನ್ ॥ ಪ್ರಸ್ತಾವಃ ನಿಧನಂ ಚಾಪಿ ಸಂಕರ್ಷಣಃ ಉದಾಹೃತಃ ॥ ಸಂಕರ್ಷಣೋ ಹಿ ಸಂಹರ್ತಾ ಪ್ರದ್ಯುಮ್ನಃ ಪರಮೇಶ್ವರಃ ॥

ಹಿಂಕಾರಃ ಇತಿ ಸಂಪ್ರೋಕ್ತಃ ಹೀತಿ ಸೃಷ್ಟಿರುದೀರ್ಯತೇ || ಪ್ರಸಿದ್ಧತಾ ಹಿ ಸೃಷ್ಟಿಸ್ಥಾತ್ ಅನಿರುದ್ಧಃ ಪರಃ ವಿಭುಃ || ಪ್ರತಿಹಾರ ಇತಿ ಪ್ರೋಕ್ತಃ ಸಹಿ ಕಾರ್ಯೇಷ್ವಿದಂ ಜಗತ್ || ಪ್ರತಿಪ್ರತಿಹರೇನ್ನಿತ್ಯಂ ಮೂರ್ತಿ ಪ್ರತಿಹೃತೇಃ ತಥಾ || ತೇ ಪೃಥಿವ್ಯಾದಿಷು ಸದಾ ತನ್ನಾಮಾನಃ ಪ್ರತಿಷ್ಠಿತಾಃ|| ಇತಿ ಚ|| ಝಾವ ಪ್ರಹರ || ೧೪ ||

## ಕನ್ನಡಾರ್ಥ

ಹೀಗೆ ಭಗವಂತನ ಅನುಗ್ರಹದಿಂದ ಅವಿದ್ಯೆಯನ್ನು ಕಳೆದುಕೊಂಡಿರುವ ಮುಮುಕ್ಷುವಿಗೆ ಪರಮ ಶ್ರೇಷ್ಠವಾದ ಸಾಮೋಪಾಸನೆಯನ್ನು ನಿರೂಪಿಸಲು ಅಧಿಷ್ಠಾನಗಳನ್ನು ಹೇಳುತ್ತಾರೆ "ಗೋವುಗಳೊಳು" ಎಂಬ ಪದ್ಯದಿಂದ. ಛಾಂದೋಗ್ಯ ಶ್ರುತಿಗಳಲ್ಲಿ ಇದು ಹೇಳಲ್ಪಟ್ಟಿರುತ್ತದೆ.

ಛಾಂದ್ಯೋಗ್ಯೋಪನಿಷತ್ತಿನಲ್ಲಿ ಮೊದಲನೆಯ ಅಧ್ಯಾಯದಲ್ಲಿ ಸಾಮದ ಒಂದು ಭಾಗವೆನಿಸಿರುವ ಉದ್ಗೀಥ ಸ್ತೋಭದಲ್ಲಿ ಮಾಡಬೇಕಾದ ಉಪಾಸನೆಯನ್ನು ನಿರೂಪಿಸಿರುತ್ತದೆ. ಎರಡನೆಯ ಅಧ್ಯಾಯದಲ್ಲಿ ಐದೈದು ಭಾಗಗಳುಳ್ಳ ಸಪ್ತವಿಧವಾದ ಸಾಮಗಳಲ್ಲಿ ಮಾಡುವ ಸಾಮೋಪಾಸನೆಯನ್ನು ನಿರೂಪಿಸುತ್ತ ೧ನೆಯದಾಗಿ ಲೋಕಗಳಲ್ಲಿ, ೨ನೆಯದಾಗಿ ವೃಷ್ಟಿಯಲ್ಲಿ, ೩ನೆಯದಾಗಿ ನೀರುಗಳಲ್ಲಿ, ೪ನೆಯದಾಗಿ ಋತುಗಳಲ್ಲಿ, ೫ನೆಯದಾಗಿ ಪಶುಗಳಲ್ಲಿ ೬ನೆಯದಾಗಿ ಪ್ರಾಣರಲ್ಲಿ ಸಾಮೋಪಾಸನೆಯನ್ನು ಮಾಡುವ ಕ್ರಮವನ್ನು ನಿರೂಪಿಸಲಾಗಿರುತ್ತದೆ. ಅದರಲ್ಲಿ ಪಶುಗಳಲ್ಲಿ ಐದು ವಿಧವಾಗಿ ಸಾಮವನ್ನು ಉಪಾಸಿಸಬೇಕು. "ಅಜ, ಅವಿ, ಗೋವು, ಅಶ್ವ, ಪುರುಷ" ಇವುಗಳಲ್ಲಿ ಐದು ವಿಧವಾಗಿ ಸಾಮವನ್ನು ಉಪಾಸಿಸಬೇಕು. "ಅಜವು (ಆಡು) ಹಿಂಕಾರ; ಅವಿ (ಕುರಿ) ಪ್ರಸ್ತಾವ; ಗೋವು (ಆಕಳು) ಉದ್ಗೀಥ; ಅಶ್ವಗಳು ಪ್ರತಿಹಾರ, ಪುರುಷನು ನಿಧನು" ಎಂದು.

ಶ್ರೀಮದಾನಂದ ತೀರ್ಥ ಭಗವತ್ಪಾದರು ಶ್ರೀಮದ್ಭಾಷ್ಯದಲ್ಲಿ ಪಶು ಶಬ್ದವನ್ನು ಪರಮಾತ್ಮನಲ್ಲಿ ಸಮನ್ವಯಿಸಿರುತ್ತಾರೆ. ಹೇಗೆಂದರೆ ಪ-ಪಾತಿ= ಸಂರಕ್ಷಿಸುತ್ತಾನೆ; ಶು-ಶಂ-ಸುಖರೂಪನೂ, ಸುಖಕಾರಿಯೂ ಆಗಿರುವದರಿಂದ ಪರಮಾತ್ಮನಿಗೆ "ಪಶು" ಎಂದು ಉಪನಿಷತ್ತುಗಳು ರಹಸ್ಯದಿಂದ ಕರೆಯುತ್ತವೆ. ಪಶುಶಬ್ದವಾಚ್ಯನಾದ ಪಶುಗಳಲ್ಲಿರುವ ಹರಿಯನ್ನು ಉಪಾಸಿಸು

ವವರಿಗೆ ಮುಕ್ತಿಯಲ್ಲಿ ಇಂಥ ಭಗವದ್ರೂಪನನ್ನು ಹೊಂದುತ್ತಾನೆ. ಯಜ್ಞದಿಂದ ಗತಿಯನ್ನು ಹೊಂದಿಸುವದರಿಂದ–ಅಜ (ಆಡು)ಗಳಲ್ಲಿರುವ ಹರಿಯನ್ನು "ಅಜ"ನೆಂದು ಕರೆಯುತ್ತಾರೆ. ಆವಿ (ಕುರಿ) ಗಳಲ್ಲಿರುವ ಹರಿಗೆ "ಅವಿ" ಎನ್ನುತ್ತಾರೆ. ಉಣ್ಣೆಗಳಲ್ಲಿದ್ದು ಜನರನ್ನು ಛಳಿಗಾಳಿಯಿಂದ ರಕ್ಷಿಸುವದರಿಂದ "ಅವಿ" ಎನಿಸುತ್ತಾನೆ. ಸದ್ಗತಿಯನ್ನು ಕೊಡುವದರಿಂದ (ಸದ್ಗತಿಗೆ ಕಾರಣನಾದುದರಿಂದ) ಹರಿಯನ್ನು "ಗೋ" ಎಂದು ಕರೆಯುತ್ತಾರೆ. ಅತಿ ಶೀಘ್ರವಾಗಿ ಗತಿಸುವದರಿಂದ "ಅಶ್ವ"ನೆಂದು ಅಶ್ವದಲ್ಲಿರುವ ಹರಿಗೆ ಕರೆಯುತ್ತಾರೆ. ಜೀವರಿಗೆ ಪೂರ್ಣತೆಯು ಬರಲು ಕಾರಣನಾದುದರಿಂದ ಪುರುಷ ಅಥವಾ ಪೂರ್ಣತೆಯು ಇರುವದರಿಂದ ಪುರುಷನೆಂದು ಪುರುಷನಲ್ಲಿರುವ ಹರಿಯನ್ನು ಕರೆಯುತ್ತಾರೆ. ಹೀಗೆ ಪಶುಗಳಲ್ಲಿ ಹರಿಯನ್ನು ಪಂಚವಿಧ ನಾಮದಿಂದ ಉಪಾಸಿಸುವವರಿಗೆ ಪ್ರಸಿದ್ಧವಾದ ಲೌಕಿಕ ಪಶುಗಳು ಬಹಳ ಆಗುತ್ತವೆ" ಎಂದು ತಿಳಿಯಬೇಕು.

"ಅಜಾಃ–ಅಶ್ವಾಃ" ಎಂದು ಮುಂತಾಗಿ ಪ್ರಯೋಗಿಸಿರುವ ಬಹುವಚನವು ಒಂದೊಂದರಂತೆ ಇರುವ ಪರಮಾತ್ಮನ ಬಹು ರೂಪಗಳನ್ನು ಸಂಬಂಧಿಸಿರುತ್ತದೆ.

ಸಾಧು ಸ್ವಭಾವವು (ನಿರ್ದೋಷತನವು) ಇರುವದರಿಂದ "ಸಾಮ" ಎಂದು ಶ್ರೀ ಹರಿಯನ್ನು ಕರೆಯುತ್ತಾರೆ. ಸಮಸ್ತಗುಣ ಪೂರ್ಣನಾದುದರಿಂದ " ಸಮಸ್ತಸಾಮ " ಗಳಿಂದ ಉಪಾಸಿಸುತ್ತಾರೆ. "ಸಾಮದ ಅವಾಂತರ ನಾಮಗಳಿಂದಲೂ ಸರ್ವನಾಮಗಳಿಂದಲೂ ಹೇಳಿಸಿಕೊಳ್ಳುವ ದೇವತೆ," ಎಂದು ಹರಿಯನ್ನು ಉಪಾಸಿಸತಕ್ಕವನಿಗೆ ಸಾಧು ಧರ್ಮದ ಸತ್ಫಲವು ಲಭಿಸುತ್ತದೆ." ಎಂದು ಸಾಮ ಸಂಹಿತೆಯಲ್ಲಿ ಹೇಳಲಾಗಿರುತ್ತದೆ. ನಾರಾಯಣನು " ಉದ್ಗೀಥ " ಎನಿಸಿಕೊಳ್ಳುತಾನೆ. ಪ್ರಣವ ( ಓಂಕಾರ ) " ದಿಂದ ಉಚ್ಚನೆಂದು ಸರ್ವೋತ್ತಮನೆಂದು ಗಾನಮಾಡಲ್ಪಡುವನರಿಂದ "ಉದ್ಗೀಥ" ನೆಂದು ನಾರಾಯಣನಿಗೆ ಹೇಳುತ್ತಾರೆ. ಮತ್ತು ವಾಸುದೇವ ಮುಂತಾದ ರೂಪಗಳು ನಾರಾಯಣ ರೂಪದಿಂದಲೇ ಉದ್ಭವವನ್ನು ಹೊಂದುವದರಿಂದ "ಉದ್ಗೀಥ" ನೆಂದು ಕರೆಯುತ್ತಾರೆ. ನಾರಾಯಣನ ಪ್ರಥಮದ (ಮೊದಲನೆಯ) ಅವತಾರನಾದುದರಿಂದ ಪರಮ ಪುರುಷನಾದ ವಾಸುದೇವನು.

'ಪ್ರಸ್ತೋತೃ' ಎನಿಸಿಕೊಳ್ಳುತ್ತಾನೆ. ಸಂಹಾರವನ್ನು ಮಾಡುವುದರಿಂದ ಸಂಕರ್ಷಣನನ್ನು "ನಿಧನ" ಎಂದು ಕರೆಯುತ್ತಾರೆ. "ಹಿ" ಎಂದರೆ ಸೃಷ್ಟಿ. ಸೃಷ್ಟಿಯನ್ನು ಮಾಡುವುದರಿಂದ-ಪರಮೈಶ್ವರ್ಯಶಾಲಿಯಾದ ಪ್ರದ್ಯುಮ್ನನು "ಹಿಂಕಾರ" ಎನಿಸಿಕೊಳ್ಳುತ್ತಾನೆ. ಆಯಾ ಕಾರ್ಯಗಳಲ್ಲಿ ಜಗತ್ತನು ಪ್ರೇರಿಸು-ಪ್ರತಿಹಾರಣ ಮಾಡುವದರಿಂದ ಅನಿರುದ್ಧನಿಗೆ "ಪ್ರತಿಹಾರ" ವೆಂದೂ ಕರೆಯುತ್ತಾರೆ. ಮೂರ್ತಿಗಳನ್ನು ಪ್ರತಿಹರಿಸುವದರಿಂದಲೂ ಪ್ರತಿಹಾರವೆನ್ನುತ್ತಾರೆ. ಹೀಗೆ ಐದು ಸಾಮಗಳಲ್ಲಿ ಆಯಾ ನಾಮಗಳಿಂದ ಕರೆಯಿಸಿಕೊಳ್ಳುತ್ತ ಇರುವ ಭಗವದ್ರೂಪಗಳೊಂದಿಗೆ ಸಮಸ್ತ ಸಾಮೋಪಾಸನೆಯನ್ನು ಮಾಡಬೇಕು. ಹೀಗೆ ಶ್ರೀ ಮದಾಚಾರ್ಯರು ಭಾಷ್ಯದಲ್ಲಿ ಭಗವತ್ಪರತ್ವವನ್ನು ನಿರೂಪಿಸಿರುತ್ತಾರೆ. ಝಾವ=ಪ್ರಹರ. ಹೀಗೆ ಪಂಚವಿಧ ಸಾಮವನ್ನು ಪಶುಮುಂತಾದವುಗಳಲ್ಲಿ ಉಪಾಸಿಸಬೇಕೆಂಬುದು ದಾಸರ ಹೃದಯ ||೧೪||

**ಅವತರಣಿಕಾ :** ಹಿಂದೆ ೫ನೇ ಸಂಧಿಯಲ್ಲಿ ಕಾಲನಾಮಕ ಹರಿಯರೂಪಗಳನ್ನೂ ಹೇಳಿದರು, ಈಗ ಅದೇ ಕಾಲ ಪ್ರವರ್ತಕನಾಗಿ ಕೃತಾ ತ್ರೇತಾ ದ್ವಾಪರ ಕಲಿ ಈ ನಾಲ್ಕು ಯುಗ ಪ್ರವರ್ತಕ ಧರ್ಮಗಳನ್ನು ಜೀವನಿಗೆ ಸುಖ ಅಭೀಷ್ಟ ಕೊಡುವನೆಂದು ಹೇಳುತ್ತಾರೆ.

**ಮೂಲ :**

**ಯುಗ ಚತುಷ್ಟಯಗಳಲಿ ತಾನಿ ।**
**ದ್ದುಗ ಪ್ರವರ್ತಕ ಧರ್ಮಕರ್ಮಗ ।**
**ಳಿಗೆ ಪ್ರವರ್ತಕ ವಾಸುದೇವಾದೀರೆರಡುರೂಪ ॥**
**ತೆಗೆದುಕೊಂಡು ಯುಗಾದಿ ಕೃತು ।**
**ತಾಯುಗ ಪ್ರವರ್ತಕ ಎನಿಸಿ ಧರ್ಮ ।**
**ಪ್ರಘಟಕನು ತಾನಾಗಿ ಭಕುತರಿಗೀವ ಸಂಪದವ ॥೧೫॥**

**ಪದಾರ್ಥ :** ಯುಗ ಚತುಷ್ಟಯಗಳಲಿಕೃತ-ತ್ರೇತಾ-ದ್ವಾಪರ, ಕಲಿ, ಈ ನಾಲ್ಕು ಯುಗಗಳಲ್ಲಿ. ಕಾಲ ನಾಮಕ ಹರಿಯು ತಾನೇ ಇದ್ದು, ಯುಗ ಪ್ರವರ್ತಕ, ಈ ನಾಲ್ಕು ಯುಗಗಳನ್ನು ನಡೆಸತಕ್ಕವನು, ಧರ್ಮ ಕರ್ಮಗಳಿಗೆ=ಆಯಾ ಯುಗದಲ್ಲಿ ನಡೆಯುವ ಧರ್ಮ-ಆಯಾ ಕರ್ಮಗಳಿಗೂ

ಗ್ರೇರಕನಾಗಿ ನಡೆಸುವವನೂ ತಾನೇ ವಾಸುದೇವಾದಿ ಈರೆರಡು ರೂಪ= ವಾಸುದೇವ-ಸಂಕರ್ಷಣ ಪ್ರದ್ಯುಮ್ನ-ಅನಿರುದ್ಧ ಈ ನಾಲ್ಕು ರೂಪವನ್ನು ತೆಗೆದುಕೊಂಡು, "ಯುಗಾದಿ ಕೃತು=ಎಂದು ಸಹಸ್ರನಾಮೋಕ್ತ ನಾಮ- ಯುಕ್ ಅಂದರೆ ಚೇತನರುಗಳಲ್ಲಿ-ಸಂಬಂಧಿಸಿರುವ ಸುಖ, ಭೋಗಿಸುವ ರನ್ನು-ಆದಿ=ವಿಶ್ವತೋಮುಖವಾಗಿ ಎಲ್ಲ ರೀತಿಯಿಂದಲೂ ಮಾಡುವನು. ಯುಗ ಪ್ರವೃತ್ತಕ=ಯುಗಾವೃತ್ತ=ಅಭೀಷ್ಟಗಳನ್ನು ತಂದು ಕೊಡುವನು. ಅಂದರೆ ಯಜ್ಞ ದಾನ ಸುಖೋಪಾಯುಗಳಾದ ಯಜ್ಞದಾನಾದಿಗಳನ್ನು ಪ್ರಘಟಕನು ತಾನಾಗಿ=ದಿನ ದಿನೇ ಪ್ರವೃರ್ತಿಸುವನೂ ತಾನೇ ಆಗಿ ಭಕು ತರಿಗೆ ಸಂಪತ್ತನ್ನು ಕೊಡುವನು. ಹಿಂದಿನ ಪದ್ಯದಲ್ಲಿ ಹೇಳಿದ ಸಾಮೋ ಪಾಸನೆ, ಮಾಡಿದರೆ, ಕಾಲನಾಮಕ ಹರಿಯು, ಧರ್ಮ ಕರ್ಮಾನುಸರಿಸಿ ಭಕ್ತರ ಅಭೀಷ್ಟಗಳನ್ನು ಕೊಡುವನು.

ವ್ಯಾಸದೀಶ ಪತಿವಿಠಲರು : ಯುಗ ಚತುಷ್ಟಯ-೧. ಕೃತಯುಗ ದಲ್ಲಿ=ವಾಸುದೇವ, ೨. ತ್ರೇತಾಯುಗಕ್ಕೆ ಸಂಕರ್ಷಣ—೩. ದ್ವಾಪರಕ್ಕೆ ಪ್ರದ್ಯುಮ್ನ ೪. ಕಲಿಯುಗ ಪ್ರವರ್ತಕ. ಅನಿರುದ್ಧ.

ಭಾವಸೂಚನ : ಯುಗಚತುಷ್ಟಯೇತಿ ॥ ಯುಗಾದಿಕೃದ್ಯುಗಾವರ್ತ ಇತಿ ॥ ೧೫ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಯುಗ" ಇತಿ॥ ಯುಗಾದಿಕೃತ್—ಓಂ * ಶಚಿಭಿರಾದಿತ್ಯರಾಮಿ ಷರಾಂ (ಶಚಿಭಿದಿರಾತ್ಸ್ವಧಾ ಮಿಷರಾಂ) ಪರ್ಯಾಪಶತ್ನ್ ॥ ಆಯಾಹಿ ವನಸಾ(ವಸಾ) ಸಹ॥ ಗಾವಃ ಸಚಂತ ವರ್ತನಿಂ ಯದೂ ಧಾ (ಧ) ಭಿಃ ಓಂ । ಅನೇನ-ಯಜ್ಯತೇ ಚೇತನೇಷು ಸಂಬಧ್ನಾತಿ ಇತಿ ಯತ್ ॥ ಸ್ವಧ್ವಾಪರ ಪರ್ಯಾಯಂ ಸುಖನ್ ಆದಿಃ ಭೋತ್ತಾ ॥ ಯಜಃ ಸುಖಸ್ಯ ಆದಿಃ ಸಮಂತಾತ್ ಭೋತ್ತಾ-ಕರೋತಿ ಇತಿ ಸತಥೋಕ್ತಃ ॥ ಓಂ * ಆಯಾಹಿ ವಸ್ವ್ಯಾ (ವಿಶ್ವಯಾ) ಧಿಯಾ ಮಂಹಿಷ್ಠೋ ಜಾರಯನ್ ಮಖಃ॥ ಸದಾನುಭಿಃ ಪಿತೃಭೃತೋನ ತಂತು ಮಿತ್ಸುದಾನವಃ ಪ್ರತಿ ದಧ್ಮೋಯ ಗಾಮುಸಿ (ಪ್ರತಿ ದಧ್ಮೋ ಕಜಾಮುಸಿ) ॥* ಓಂ ॥ ಅನೇನ-ಅಭೀಷ್ಟಜಾತಂ

ಯುಜ್ಯತೇ ಸಂಬಧ್ಯತೇ ಅನೇನ ಇತಿ ಯತ್ ಯಜ್ಞೋ ದಾನಂ ಚ ।
ತದಾವರ್ತಯತಿ ಇತಿ ಸತತೋಕ್ತಂ ।। ೧೫ ।।

ಕನ್ನಡಾರ್ಥ

"ಯುಗಚತುಷ್ಟಯುಗಳಲ್ಲಿ" ಎಂಬ ಪದ್ಯದಲ್ಲಿ—"ಯುಗಾದಿಕೃತ್" "ಯುಗಾವರ್ತ" ಎಂಬ ಎರಡು (ಸಹಸ್ರನಾಮುಗಳಲ್ಲಿಯ) ನಾಮುಗಳ ಅರ್ಥವನ್ನು ವಿವರಿಸುತ್ತಾರೆ. ಇವೆರಡೂ ನಾಮುಗಳ ಅರ್ಥ ವಿವರ್ಣರೂಪವಾದ ಬೃಹತೀ ಮಂತ್ರಗಳನ್ನೂ ಕೊಡಲಾಗಿರುತ್ತದೆ ಯುಗಾದಿಕೃತ್= ಯುದ್=ಚೇತನಗಳಲ್ಲಿ ಸಂಬಂಧಿಸಿ ಇರುವದು ಸುಖ. ಇದಕ್ಕೆ "ಸ್ವಧಾ" ಎಂತಲೂ ಬೇರೆ ಹೆಸರು. ಇಂಥ ಸುಖಕ್ಕೆ ಆದಿಂ=ವಿಶ್ವತೋಮುಖವಾಗಿ-ಎಲ್ಲ ವಿಧದಿಂದಲೂ-ಭೋಗಿಸುವವನನ್ನು (ಭೋಕ್ತೃನನ್ನಾಗಿ) ಕೃತ್= ಮಾಡುವವನು-ಎಂದು ಅರ್ಥ.

ಸರ್ವತೋಮುಖವಾಗಿ ಸುಖಯುಕ್ತನನ್ನಾಗಿ ಮಾಡುವವನು-ಎಂದು "ಯುಗಾದಿಕೃತ್" ನಾಮುದ ಅರ್ಥ ವಿವರಣೆ.

"ಯುಗಾವರ್ತ"-ಅಭೀಷ್ಟವಸ್ತುಗಳನ್ನು - ಸಂಯೋಜಿಸುವದರಿಂದ-(ತಂದುಕೊಡುವದರಿಂದ) "ಯುತ್" ಅಂದರೆ-ಯಜ್ಞದಾನಗಳು. ಸುಖೋಪಾಯಗಳಾದ ಯಜ್ಞದಾನಗಳನ್ನು ಪುತ್ತೂ ಮತ್ತೂ-ದಿನದಿನಗಳಲ್ಲಿ ಪ್ರವರ್ತಿಸುವವನು ಎಂದು "ಯುಗಾವರ್ತ" ನಾಮುದ ಅರ್ಥ ವಿವರಣೆ.

ಅವತರಣಿಕಾ: ಇನ್ನು ಈ ನಾರಾಯಣಾದಿ ೫ ರೂಪಗಳೇ ಶರೀರವಲ್ಲಿ ಅಂದರೆ ಸಕಲ ದೇಹ ಅಂಗಗಳಲ್ಲಿ ವ್ಯಾಪಿಸಿರುವ ರೂಪಗಳನ್ನು ವಿವರಿಸುತ್ತಾರೆ.

ಮೂಲ :

ತಲೆಯೊಳಿಹ ನಾರಾಯಣನು ಗಂ ।
ಟಲಡಿವೊಡಲೊಳು ವಾಸುದೇವನು ।
ಬಲದಲಿಹ ಪ್ರದ್ಯುಮ್ನ ಎಡಭಾಗದಲಿ ಅನಿರುದ್ಧ ॥
ಕೆಳಗಿನಂಗದಿ ಸಂಕರುಷಣನ ।
ತಿಳಿದು ಈ ಪರಿ ಸಕಲ ದೇಹಗ ।
ಳೊಳಗೆ ಪಂಚಾತ್ಮಕನ ರೂಪವ ನೋಡು ಕೊಂಡಾಡು ॥೧೬॥

ಪದ್ಯಾರ್ಥ : ತಲೆಯೊಳು ನಾರಾಯಣನು ಇರುವನು. ಗಂಟಲಡಿ

ಒಡಲೊಳು=ಕುತ್ತಿಗೆ ಕೆಳಗೆ ಒಡಲು ಮಧ್ಯ ಉದರದಿ ವಾಸುದೇವರೂಪ, ಬಲಭಾಗದಲ್ಲಿ ಪ್ರದ್ಯುಮ್ನ. ಶರೀರ ಎಡಭಾಗಕ್ಕೆ ಅನಿರುದ್ಧದೇವನಿರುವನು. ಕೆಳಗಿನಂಗದಿ ಸಂಕರ್ಷಣ=ಕಟಿಪಾದಾಂತ ಕೆಳಭಾಗದಲ್ಲಿ ಸಂಕರ್ಷಣ ರೂಪಿ ಹರಿಯು ಇರುವನು. ತಿಳಿದು ಈ ಪರಿ=ಈ ಪ್ರಕಾರ ದೇಹಗಳಲ್ಲಿರುವ ನಾರಾಯಣಾದಿ ಪಂಚರೂಪಗಳ ಕಾರ್ಯಗಳನ್ನು ಜ್ಞಾನಿಗಳಿಂದ ಉಪದೇಶ ಹೊಂದಿ ತಿಳಿದುಕೊಂಡು, ಸರ್ವದೇಹಗಳೊಳಗೆ=ಸ್ಥೂಲ, ಅನಿರುದ್ಧ, ಲಿಂಗ ಸ್ವರೂಪ ಈ ನಾಲ್ಕು ದೇಹಗಳಲ್ಲಿ, ಪಂಚಾತ್ಮಕನ=ನಾರಾಯಣಾದಿ ಐದು ರೂಪಗಳನ್ನು ನೋಡು. ಜ್ಞಾನಚಕ್ಷುಸ್ಸಿನಿಂದ ನೋಡು, ಕೊಂಡಾಡು, ಸ್ತುತಿಸು, ಸ್ತೋತ್ರಮಾಡುವದೆಂದು ಉಪದೇಶಮಾಡುತ್ತಾರೆ.

ದ್ರೌಪದೀಶ ಪತಿನಿತಲರು: ತಲೆಯೊಳಿಹ ನಾರಾಯಣನು.

ಭಾವಸೂಚನ : ತಲೀಲಿ । ಉಕ್ತಂಚ ಸೂತ್ರಭಾಷ್ಯೆ । "ಶಿರೋ ನಾರಾಯಣಃ ಪಕ್ಷೋದಕ್ಷಿಣ ಸವ್ಯಏವಚ। ಪ್ರದ್ಯುಮ್ನಶ್ಚಾನಿರುದ್ಧಶ್ಚೇತಿ॥೧೬॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ತಲೆಯೊಳಿಹ" ಇತಿ । ನಾರಾಯಣಃ-ಓವ್ * ರುರೋಜ ಕವಿಭಿಃ ಕವಿಃ ಸನ್ ಸನೀವ್ಯಾಭಿರ್ಜರಿತಾರ ಮಚ್ಛಾಮಹೋ ವಾಜೇಭಿರ್ಮಹದ್ಭಿಶ್ಚ ಶುಷ್ಮೈಃ ಪುರುವೀರಾಭಿಃ * ।ಓಂ। ನಾರಂ ಅನ್ನಂ ಬಲಾದಿ ದಾತೃತ್ವೇನ ತದಾ ಶ್ರಯತ್ವಾತ್ ನಾರಾಯಣಃ । ಶಿರೋ ನಾರಾಯಣಃ ಪಕ್ಷಃ ದಕ್ಷಿಣಃ ಸವ್ಯ ಏವಚ । ಪ್ರದ್ಯುಮ್ನಶ್ಚಾನಿರುದ್ಧಶ್ಚ ಸಂದೋಹೋ ವಾಸುದೇವಕಃ। ಪುಚ್ಛಂ ಸಂಕರ್ಷಣಃ ಪ್ರೋಕ್ತಃ। (ಏಕ ಏವತು ಪಂಚಧಾ ।) ಇತಿ ಸೂತ್ರ ಭಾಷ್ಯೇ । ೧೬ ।

## ಕನ್ನಡಾರ್ಥ

"ತಲೆಯೊಳಿಹ ನಾರಾಯಣನು" ಎಂಬ ಪದ್ಯದಲ್ಲಿರುವ ನಾರಾಯಣ ಶಬ್ದವನ್ನು ವಿವರಿಸುತ್ತ ಬೃಹತೀ ಮಂತ್ರವನ್ನು ಉದಾಹರಿಸುತ್ತಾರೆ. ನಾರಂ= ಅನ್ನ ಬಲ ಮುಂತಾದವುಗಳನ್ನು ಕೊಡುವದರಿಂದ ಅನ್ನಾಶ್ರಯನು- "ನಾರಾಯಣನು" ಎಂದು ಅರ್ಥ.

ನಾರಾಯಣನು ಶಿರಸ್ಸು-ಶಿರಸ್ಸಿನಲ್ಲಿ ಇರತಕ್ಕವನು. ದಕ್ಷಿಣ ಬಾಹು ವಿನಲ್ಲಿರುವವನು-ಪ್ರದ್ಯುಮ್ನನು ; ಎಡಬಾಹುವಿನಲ್ಲಿರುವವನು-ಅನಿರುದ್ಧನು.

ವಾಸುದೇವನು ಸಂದೋಹ–ದೇಹ ಮಧ್ಯಭಾಗದಲ್ಲಿರುವವನು. ಸಂಕರ್ಷಣನು ಪುಚ್ಛ–ಪಾದಗತನು." ಎಂದು ಸೂತ್ರ ಭಾಷ್ಯದಲ್ಲಿ ಹೇಳಲಾಗಿರುತ್ತದೆ. ಅದರಂತೆ ಈ ಪದ್ಯದಲ್ಲಿ ಪಂಚ ರೂಪಗಳನ್ನು ನಿರೂಪಿಸಲಾಗಿರುತ್ತದೆ. | ೧೬ |

**ಅವತರಣಿಕಾ :** ಇನ್ನು ಇವೇ ನಾರಾಯಣಾದಿ ೫ ರೂಪಗಳಿಂದ ಇರುವರು. ಅದರ ವಿವರ ಈ ಕವಚ ರೂಪಗಳನ್ನು ಸ್ಮರಿಸುವವರಿಗೆ ಮೈಲಿಗೆ ದೋಷಾದಿಗಳಿಲ್ಲವೆಂದು ಹೇಳುತ್ತಾರೆ.

**ಮೂಲ :**

**ತನುವಿಶಿಷ್ಟದಿ ಇಪ್ಪ ನಾರಾ |**
**ಯಣನು ಕಟಿಪಾದಾಂತ ಸಂಕರು |**
**ಷಣನು ಶಿರ ಜಘನಾಂತವಾಗಿಹ ವಾಸುದೇವಾಖ್ಯ ||**
**ಅನಿಮಿಷೇಶನಿರುದ್ಧ ಪ್ರದ್ಯು |**
**ಮ್ನನು ಎಡದಿ ಬಲಭಾಗದಲಿ ಚಿಂ |**
**ತನೆಯ ಮಾಳ್ಪರಿಗುಂಟೆ ಮೈಲಿಗೆ ವಿಧಿ ನಿಷೇಧಗಳು || ೧೭ ||**

**ಪದ್ಯಾರ್ಥ :** ತನು ವಿಶಿಷ್ಟದಿ=ಶಿರ ಆರಂಭಿಸಿ ಟೊಂಕ ಪರಿಯಂತ, ನಾರಾಯಣನು ಇರುವನು, ಕಟಿಪಾದಾಂತ ಸಂಕರುಷಣನು=ಟೊಂಕ (ಸೊಂಟ)ದಿಂದ ಆರಂಭಿಸಿ ಕೆಳಭಾಗದಲ್ಲಿ ಸಂಕರ್ಷಣ, ಮತ್ತು ಶಿರಸ್ಸು ಜಘನಾಂತವಾಗಿಹ ವಾಸುದೇವಾಖ್ಯ=ವಾಸುದೇವನಾಮಕನು ಶಿರಸ್ಸಾರಂಭಿಸಿ ಜಘನ=ವಿಾನಖಂಡ (....................................) ವರೆಗೆ ವಾಸುದೇವನು, ಅನಿಮಿಷೇಶ=ರೆಪ್ಪೆ ಹಾಕದಿರುವ–ನಿದ್ರಾ ಇಲ್ಲದ ದೇವತೆಗಳಿಗೆ ಒಡೆಯನಾದ ಅನಿರುದ್ಧ, ಪ್ರದ್ಯುಮ್ನರು. ಎಡದಿ ಅನಿರುದ್ಧ, ಬಲಭಾಗದಲ್ಲಿ ಪ್ರದ್ಯುಮ್ನನು ಇರುವನೆಂದು ಈ ವಿಧಾನವನ್ನು ಗುರುಗಳಿಂದ ತಿಳಿದು ಚಿಂತನೆಯ ಮಾಡುವರಿಗೆ ಮೈಲಿಗೆ=ಅಶುಚಿ ಸ್ಪರ್ಶಾಸ್ಪರ್ಶ ಮುಂತಾದ ದೋಷಗಳುಂಟೆ ? ಇಲ್ಲವೆಂದು ಅರ್ಥ.

**ದ್ರಾಪದೀಶಪತಿ ವಿಠಲರು :** ತಲೆಯೊಳಿಹ |
**ಭಾವಸೂಚನ :** ತನ್ವಿತಿ | ಅನಿಮಿಷದೇವ | ೧೭ |

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ವಾಸುದೇವಃ ಶಿರೋಪಿ ವಾ" । ಇತಿ ಪಕ್ಷಾಂತರೋಕ್ತಿಃ। ತಾಮನು ಸರನ್ನಾಹ "ತನುವಿಶಿಷ್ಟದಿ" ಇತಿ। "ವೈಲಿಗೆ"=ಕೇನಸ್ಯಾತ್ ಯೇನಸ್ಯಾತ್" ಇತ್ಯುಕ್ತೇಃ । ಪ್ರಮಾದಾತ್ ಚ ಕೃತಂ ಸ್ವಲ್ಪಂ ಭಸ್ಮೀ ಭವಿಷ್ಯತಿ" । ಇತ್ಯುಕ್ತೇಃ ಚ । ೧೭ ।

## ಕನ್ನಡಾರ್ಥ

ಅಭೇದವಿದ್ದರೂ ಅವಯವ-ಅವಯವಿ ಭಾವದಿಂದ ಕ್ರೀಡಿಸುತ್ತ ದೇಹದಲ್ಲಿರುವ ನಾರಾಯಣ ಮುಂತಾದ ಪಂಚ ರೂಪಗಳನ್ನು ಒಂದು ಕ್ರಮದಿಂದ ಹೇಳಿ ಪಕ್ಷಾಂತರವೆಂದು ಭಾಷ್ಯದಲ್ಲಿ ಹೇಳಿದಂತೆ ಹೇಳುತ್ತಾರೆ "ತನು ವಿಶಿಷ್ಟದಿ" ಎಂಬ ಪದ್ಯದಿಂದ. ಹೀಗೆ ನಾರಾಯಣನ ಪಂಚರೂಪಗಳನ್ನು ಉಪಾಸಿಸುವವನಿಗೆ ವೈಲಿಗೆಗಳಿಲ್ಲವೆಂದು ಹೇಳಿರುತ್ತಾರೆ. ಇದಕ್ಕೆ "ಕೇನ ಸ್ಯಾತ್" ಎಂದು ಮುಂತಾದ ವಚನಗಳು ಆಧಾರವಾಗಿರುತ್ತದೆ. ಪ್ರಮಾದ ದಿಂದ ಆಗಿರುವ ದೋಷಗಳು ಭಸ್ಮವಾಗುತ್ತವೆ" ಎಂದು ವಚನಗಳ ಅರ್ಥ. । ೧೭ ।

ಅವತರಣಿಕಾ : ಇನ್ನು ಸ್ಥೂಲದೇಹದಲ್ಲಿ ೨೪ ತತ್ವಗಳನ್ನು, ತತ್ವಾಭಿಮಾನಿ ದೇವತೆ ಕೇಶವಾದಿ ೨೪ ಭಗವದ್ರೂಪಗಳನ್ನೂ ಪಾಣಿತತ್ವಾರಂಭಿಸಿ ತತ್ವನ್ಯಾಸ-ಸೃಷ್ಟಿ ನ್ಯಾಸ ಕ್ರಮದಿಂದ ಅವ್ಯಕ್ತ ತತ್ವದವರೆಗೆ ಯುತ್ಕ್ರಮದಿಂದ ಪದ್ಯ ೧೮-೧೯ ರಿಂದ ಹೇಳುತ್ತಾರೆ.

ಮೂಲ :

ಪದುಮನಾಭನು ಪಾಣಿಯೊಳಗಿಹ ।
ವದನದಲಿ ಹೃಷಿಕೇಶ ನಾಶಿಕ ।
ಸದನದಲಿ ಶ್ರೀಧರನು ಜಿಹ್ವೆಯೊಳಿಪ್ಪ ವಾಮನನು ॥
ವಿದಿತ ತ್ರಿವಿಕ್ರಮನು ನೇತ್ರದಿ ।
ಮಧುಹತ್ವಗ್ದೇಶದೊಳಗಿಹ ಕ ।
ರ್ಣದಲಿ ಇಪ್ಪನು ವಿಷ್ಣುನಾಮಕ ಶ್ರವಣನೆಂದೆನಿಸಿ ॥ ೧೮ ॥

ಪದ್ಯಾರ್ಥ : ಪದ್ಮನಾಭನು ಪಾಣಿಯೊಳಗೆ=



ಶ್ರೀ ಗೋಪಾಲದಾಸರು ಬರೆದ ಜಲಪಸ್ತದಲ್ಲಿ ಪಂಚ ಜ್ಞಾನೇಂದ್ರಿಯ ತತ್ವಗಳು, ದೇವತೆಗಳು

೧. ಪಾಣಿ ತತ್ವ=೧ ದಕ್ಷ ಪ್ರಜೇಶ್ವರರಲ್ಲಿ- ಪದ್ಮನಾಭ } ಕರ್ಮೇಂದ್ರಿಯ:<br>
೨. ವಾಕ್ ವದನದಲಿ - ವಹ್ನಿ - ಹೃಷೀಕೇಶ } ಎರಡು.

ಪಂಚ ಜ್ಞಾನೇಂದ್ರಿಯ. ೩. ಘ್ರಾಣ, ನಾಶಿಕ=ಅಶ್ವಿನಿ ದೇವತೆಗಳು= ಶ್ರೀಧರ-ತ್ರಿವಿಕ್ರಮ. ೪. ಜಿಂಹ್ವೆ ತತ್ವದಲ್ಲಿ=ವರುಣ=ವಾಮನ, ೫. ಚಕ್ಷು: ನೇತ್ರದಲ್ಲಿ ಸೂರ್ಯ-ವಿದಿತ. ೬. ತ್ವಕ್=ಅಹಂಕಾರ ಪ್ರಾಣ—ಮಧುಹ= ಮಧುಸೂದನ. ೭ ಶ್ರೋತ್ರ=ಕರ್ಣಗಳಲ್ಲಿ ದಿಗಭಿಮಾನಿಗಳು=ವಿಷ್ಣು ನಾಮದಿಂದ ಇರುತ್ತಾರೆ. ಈ ಶ್ಲೋಕದ ೭ ತತ್ವಗಳನ್ನು ವಿವರಿಸಿದರು.

ದ್ರೌಪದೀಶಪತಿ ವಿಠಲರು : ಪದುಮನಾಭನು ಪಾಣಿಯೊಳಗಿಹ.

ಭಾವಸೂಚನ : ಪದುಮೇತಿ ||



ಎಡಹಸ್ತದಲ್ಲಿರುವ ಪಂಚ ಕರ್ಮೇಂದ್ರಿಯಗಳು

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಪದುಮನಾಭನು" ಇತಿ ॥ ಪದ್ಮನಾಭಃ ಓಂ* ತುಭ್ಯಂ ಬ್ರಹ್ಮಾಣಿ ಗಿರ ಇಂದ್ರ ತುಭ್ಯಂ ನದಂ ವ ಓದತೀನಾಂ ಸತ್ರಾದಧಿರೇ ಹರಿ (೦೦)ವೋ ಜುಷಸ್ವ ನದಂ ಯೋ ಯುವತೀನಾಂ* ॥ ಓಂ ॥ ಪದ್ಮಂ ಸ್ವಕಾರಣತ್ವೇ ನ ಪ್ರಾಪ್ನೋತಿ ಇತಿ ಪದ್ಮನಃ ಚತುರ್ಮುಖಃ॥ ತಸ್ಯ ಆಭಾಯತಃ ತಥೋಕ್ತಃ॥ ಹಸ್ತಗಃ ಪದ್ಮನಾಭೋ ಹಿ ಹೃಷೀಕೇಶೋ ಮುಖೇ ಸ್ಮೃತಃ ॥ ಶ್ರೀಧರೋ ನಾಸಿ ಜಿಹ್ವಾಯಾಂ ವಾಮನೋಽಸ್ತಿ ತ್ರಿವಿಕ್ರಮಃ ॥ ತ್ವಚ್ಯಕ್ಷಯೋಃ ಮಧುದ್ವೇಷೀ ವಿಷ್ಣುಃ ಜೀವಸುಕರ್ಣಯೋಃ ॥ ಮಧುಸೂಧನಃ ಓಂ ॥*

(ಅಹನ್) ವೃತ್ರಂ ವೃತ್ತತರಂ ವ್ಯಂಸಮಿಂದ್ರೋ ವಜ್ರೇಣ ಮಹತಾ ಧನೇನ ಸ್ಕಂಧಾಂಸೀ(ಶೀ)ವ ಕುಲಿಶೇನಾ ವಿವೃತ್ಣಾಹಿಃ ಶಯತ ಉಪಪೃತ್"* ॥ ಓಂ ॥ ಮಧುವದಾಪಾತ ರಮಣೀಯಂ ಮಂ ಜ್ಞಾನಂ ಸುಖಂ ವಾ ಧುನೋತಿ ಇತಿ ವಾ ಮಧೂನಿ ಅಜ್ಞಾನಾದೀನಿ ವೃತ್ರಾದೀನಿ(ನ್)ವಾ ಸೂದಯತಿ ಇತಿ ಮಧುಸೂಧನಃ ॥ ೧೮ ॥

## ಕನ್ನಡಾರ್ಥ

"ಪದುಮನಾಭನು" ಎಂಬ ಪದ್ಯದಲ್ಲಿರುವ "ಪದ್ಮನಾಭ" ಎಂಬುದು ಶ್ರೀಮದ್ವಿಷ್ಣುನಾಮವು. ಅದರ ವಿವರಣವನ್ನು ಬೃಹತೀ ಮಂತ್ರವು ಮಾಡುತ್ತದೆ. ಪದ್ಮದಲ್ಲಿ ವಾಸಮಾಡಿಕೊಂಡವನು "ಪದ್ಮಃ" ಅವನ ಸ್ತೋತ್ರಗಳಿಗೆ ಆಶ್ರಯನಾಗಿರುವವನು–ವಿಷಯನಾಗಿರುವವನು ; ಅಥವಾ ಅವನಿಗೆ ಜ್ಞಾನ ಬಲ ಸಾಮರ್ಥ್ಯಗಳನ್ನು ಕೊಟ್ಟಿರುವವನು ಪದ್ಮನಾಭನು ಎಂದು ಮಂತ್ರ ಸಾರಾರ್ಥ. ಕೈಗಳಲ್ಲಿ ಪದ್ಮನಾಭನು, ಮುಖದಲ್ಲಿ ಹೃಷೀಕೇಶನು ; ನಾಸಿಕೆಯಲ್ಲಿ ಶ್ರೀಧರನು ; ಜಿಹ್ವೆಯಲ್ಲಿ ವಾಮನನು, ತ್ರಿವಿಕ್ರಮನು ತ್ವಚ (ಚರ್ಮ)ದಲ್ಲಿ, ಕಣ್ಣುಗಳಲ್ಲಿ ಮಧುಸೂಧನನು, ಕಿವಿಗಳಲ್ಲಿ ವಿಷ್ಣುವು. ಹೀಗೆ ಭಗವದ್ರೂಪಗಳು ದೇಹದ ಅವಯವೇಂದ್ರಿಯಗಳಲ್ಲಿ ಇರುತ್ತವೆ. "ಮಧುಸೂದನ" ಎಂಬುದನ್ನು ಬೃಹತೀ ಮಂತ್ರವು ವ್ಯಾಖ್ಯಾನಿಸಿರುತ್ತದೆ. ಮಧುವಿನಂತೆ ಮೇಲೆ ಮೇಲೆ ರಮಣೀಯವಾಗಿ ತೋರುವ ವೈಷಯಿಕಜ್ಞಾನ–ಅಜ್ಞಾನವನ್ನು ಕಳೆಯುವವನು ; ಅಥವಾ ಮಧು=ಅಜ್ಞಾನ ರೋಗ ಭಯ ಮುಂತಾದವುಗಳು ಅಥವಾ ವೃತ್ರ ಮುಂತಾದ ವಿರೋಧಿಗಳು. ಇವುಗಳನ್ನು ನಾಶಮಾಡುವವನು ಮಧುಸೂದನನು" ಎಂಬುದು ಬೃಹತೀ ಮಂತ್ರ ವಿವರಣದ ಸಾರ ॥ ೧೮ ॥

**ಅವತರಣಿಕಾ :** ಮನಸ್ತತ್ತ್ವ, ಅಹಂಕಾರತತ್ವ, ಮಹತ್ತತ್ವ, ಅವ್ಯಕ್ತತತ್ವಗತ ಭಗವದ್ರೂಪಗಳನ್ನು ವಿವರಿಸುತ್ತಾರೆ.

**ಮೂಲ :**

**ಮನದೊಳಿಹ ಗೋವಿಂದ ಮಾಧವ ।**
**ಧನಪ ಸಖ ತತ್ವದೊಳು ನಾರಾ ।**
**ಯಣ ಮಹತ್ತತ್ವದೊಳು ಅವ್ಯಕ್ತದೊಳು ಕೇಶವನು ॥**

**ಇನಿತು ರೂಪವ ದೇಹದೊಳು ।**
**ಚಿಂತನೆಯ ಗೈವ ಮಹತ್ಮರಿಳಿಯೊಳು ।**
**ಮನುಜರವರಲ್ಲಮರರೇ ಸರಿ ಹರಿಕೃಪಾ ಬಲದಿ ॥ ೧೯ ॥**

**ಪದ್ಯಾರ್ಥ :** ೧) ಮನದೊಳಿಹ=ಮನಸ್ತತ್ವದಲ್ಲಿ (ಇಂದ್ರಕಾಮಾದಿ) ಗೋವಿಂದನು.

೨) ಧನಪಸಖತತ್ವ=ಕುಬೇರ ಮಿತ್ರ ರುದ್ರ=ಅಹಂಕಾರದಲ್ಲಿ ಮಾಧವ.

೩) ಮಹತ್ತತ್ವದೊಳು=ಬ್ರಹ್ಮ ವಾಯುಗಳು=ನಾರಾಯಣ.

೪) ಅವ್ಯಕ್ತ ತತ್ವದಲ್ಲಿ (ಮುಖ್ಯಾಭಿಮಾನಿ ರಮಾ. ಅಮುಖ್ಯಾಭಿಮಾನಿ, ಭಾರತಿ-ಸರಸ್ವತೀಗಳು)—ಕೇಶವ.

ಇನಿತು=ಈ ಪ್ರಕಾರ ರೂಪಗಳನ್ನು ದೇಹದೊಳು=ದೇಹದಲ್ಲಿ ಹೀಗೆ ಚಿಂತಿಸುವ ಮಹಾತ್ಮರು, ಅಂದರೆ ದೇಹಗತವಾದ ತತ್ತತ್ ಸ್ಥಾನದಲ್ಲಿ ತತ್ತತ್ ತತ್ವಪತಿಗಳಲ್ಲಿ ನಿಂತು ವ್ಯಾಪಾರ ಮಾಡುವನೆಂಬ ಅನುಸಂಧಾನವು ಪ್ರತಿಕಾರ್ಯದಲ್ಲಿ ಹರಿಕರ್ತೃತ್ವ ಅನುಸಂಧಾನ ಬರಬೇಕು. ಅಂದರೆ ಅವರು ಮನುಜರಲ್ಲ. ಮನುಷ್ಯರೇ ಅಲ್ಲ. ಅಮರರೇ ಸರಿ=ದೇವತೆಗಳ ಸಮಾನ



ಮನಸ್ಸಿನಲ್ಲಿ ಇಂದ್ರ-ಕಾಮರು



ಅಹಂಕಾರ ತತ್ವದಲ್ಲಿ ಗರುಡ-ಶೇಷರು

ರಾದವರು ದೇವತೆಗಳಿಗೆ ಸಕಲ ಕಾರ್ಯದಲ್ಲಿ ಬಿಂಬರೂಪಿ ಹರಿಯು ನೋಡುತ್ತಾರೆ. ಮನುಜೋತ್ತಮರಿಗೆ ಈ ಅನುಸಂಧಾನ ಚಿಂತನಾಪ್ರತಿ ಇಂದ್ರಿಯ ಕಾರ್ಯಗಳಲ್ಲಿ ಇರಬೇಕಾದುದು.

ದ್ರೌಪದೀಶಪತಿ ವಿಠಲರು : ಮನದೊಳಿಹ ಗೋವಿಂದ.
ಭಾವಸೂಚನ : ಮನ ಇತಿ ||

ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಮನಃ" ಇತಿ || ಮಾಧವೋ ಹಿ ಮನಸ್ತತ್ವೇ ಗೋವಿಂದೋ ಮಾನಸೇ ಹರಿಃ || ನಾರಾಯಣಃ ಮಹತ್ತತ್ವೇ ಅವ್ಯಕ್ತೇ (ವೈ) ಕೇಶವೋ ಹರಿಃ || ಇತಿ ಸಂಧ್ಯಾ ಪದ್ಧತೌ || ಕೇಶವಾದಿ ರೂಪೇಣ ಲಲಾಟಾದಿ ಸ್ಥಿತೇಃ ಏಕವಿಂಶಃ ಇತ್ಯುಚ್ಯತೇ || ಇತಿ ಛಾಂದೋಗ್ಯಭಾಷ್ಯೇ ಚ || ಕೇಶವಃ ಓಂ* ಯದಿಸ್ವಿಂದ್ರಂ ವೃಷಣಂ ಸಚಾಸುತೇ ಸಖಾಯಂ ತೃಣವಾಮಹೇ || ಉಗ್ರಂ ಯುಯುಜ್ಮ ಪ್ರತನಾಸು ಸಾಸಹಿಮ್ || ಓಂ* || ಕಂ ಸುಖಂ, ಈಃ ಲಕ್ಷ್ಮೀಃ ಶಂ ಶ್ರೇಯಃ, ತಾನಿ ವಹತಿ ಗಮಯತಿ ಇತಿ ಕೇಶವಃ || ೧೯ ||

## ಕನ್ನಡಾರ್ಥ

"ಮನದೊಳಿಹ" ಎಂಬ ಪದ್ಯದಲ್ಲಿ ಹೇಳಿರುವ ಕೇಶವಾದಿ ರೂಪಗಳ ಸ್ಥಾನಗಳ ವಿಷಯದಲ್ಲಿ ಸಂಧ್ಯಾ ಪದ್ಧತಿಯಲ್ಲಿ ಉದಾಹರಿಸಿರುವ ವಚನಗಳು ಪ್ರಮಾಣವಾಗಿರುತ್ತವೆ. "ಮನಸ್ತತ್ವದಲ್ಲಿ ಗೋವಿಂದನು; ಅಹಂಕಾರ (ಮಾನಸ) ತತ್ವದಲ್ಲಿ ಮಾಧವನು; ಮಹತ್ತತ್ವದಲ್ಲಿ ನಾರಾಯಣನು; ಅವ್ಯಕ್ತ ತತ್ವದಲ್ಲಿ ಕೇಶವನು" ಎಂದು ಸಂಧ್ಯಾ ಪದ್ಧತಿಯ ಪ್ರಮಾಣಗಳ ಅರ್ಥ. "ಕೇಶವ ಮುಂತಾದ ರೂಪಗಳಿಂದ ಲಲಾಟ ಮುಂತಾದ ಸ್ಥಳಗಳಲ್ಲಿ ಇರುವದರಿಂದ ಇಪ್ಪತ್ತೊಂದು (೨೧) ರೂಪಗಳು ಹೇಳಲ್ಪಡುತ್ತವೆ" ಎಂದು ಶ್ರೀಮದಾಚಾರ್ಯರು ಛಾಂದೋಗ್ಯ ಭಾಷ್ಯದಲ್ಲಿ ಹೇಳಿರುತ್ತಾರೆ. "ಕೇಶವ" ಎಂಬ ನಾಮವನ್ನು "ಯದಿನ್ವಿಂದ್ರ" ಎಂಬುದಾಗಿ ಇರುವ ಬೃಹತೀ ಮಂತ್ರವು ವಿವರಿಸುತ್ತದೆ. ಕಂ–ಸುಖ, ಈ–ಲಕ್ಷ್ಮಿ (ಸಂಪತ್ತು), ಶಂ–ಶ್ರೇಯಸ್ಸು ಇವುಗಳನ್ನು ವಹಿಸುವವನು ಅಂದರೆ ಕೊಡುವವನು "ಕೇಶವನು" ಎಂಬುದು ಮಂತ್ರದ ಸಾರಾರ್ಥ ॥ ೧೯ ॥



ಮಹತ್ತತ್ವಗತ
ಬ್ರಹ್ಮ-ವಾಯು

**ಅವತರಣಿಕಾ:** ಸ್ಥಿತಿನ್ಯಾಸ ಕ್ರಮದಿಂದ ಯ್ಯುತ್ಕ್ರಮವಾಗಿ ಪೃಥಿವಿ ತತ್ವಾರಂಭಿಸಿ ರಸತತ್ವ ಪರ್ಯಂತ ೭ ತತ್ವಗತ ರೂಪಗಳನ್ನು ನಿರೂಪಿಸುತ್ತಾರೆ.

**ಮೂಲ:**

**ನೆಲದೊಳಿಪ್ಪನು ಕೃಷ್ಣರೂಪದಿ ।**
**ಜಲದೊಳಿಪ್ಪನು ಹರಿಯೆನಿಸಿ ಶಿಖಿ ।**
**ಯೊಳಗೆ ಯಿಪ್ಪನು ಪರಶುರಾಮ ಉಪೇಂದ್ರನೆಂದೆನಿಸಿ ॥**




ಅವ್ಯಕ್ತ ತತ್ವಗತ ಭಾರತಿ-ಸರಸ್ವತಿ

**ಎಲರೊಳಿಪ್ಪ ಜನಾರ್ದನನು ಬಾಂ ।**
**ದಳ ದೊಳಚ್ಯುತ ಗಂಧ ನರಹರಿ ।**
**ಪೊಳೆವಧೋಕ್ಷಜ ರಸಗಳೊಳು ರಸರೂಪ ತಾನಾಗಿ ॥ ೨೦ ॥**

**ಪದ್ಯಾರ್ಥ :** ಪಂಚಭೂತ ಪೃಥಿವ್ಯಾದಿ ತತ್ವಗಳಲ್ಲಿ ರೂಪ ವಿವರ.
೧) ನೆಲದೊಳು=ಪೃಥ್ವಿ ತತ್ವದಲ್ಲಿ ಧರಾಶನೇಶ್ವರ=ಕೃಷ್ಣರೂಪ.
೨) ಜಲದೊಳಿಪ್ಪ=ಅಪ್ಪು ತತ್ವದಲ್ಲಿ ವರುಣ ಹರಿರೂಪ.
೩) ಶಿಖಿಯೊಳು=ತೇಜ ತತ್ವದಲ್ಲಿ-ಅಗ್ನಿ ಪರುಶುರಾಮ=ಉಪೇಂದ್ರ.
೪) ಎಲರು=ವಾಯು ತತ್ವದಲ್ಲಿ-ಪ್ರವಾಹ ವಾಯು=ಜನಾರ್ದನನು.
೫) ಬಾಂದಳದೊಳು=ಆಕಾಶ ತತ್ವದಲ್ಲಿ, ಗಣೇಶ-ಅಚ್ಯುತ.
ಪಂಚತನ್ಮಾತ್ರಗತ ೨ ರೂಪ :

೧) ಗಂಧ ತತ್ವದಲ್ಲಿ ಪೃಥ್ವಿ, ತಮೋಗುಣ. ಗಂಧ=ಬೃಹಸ್ಪತೀ ಸಮಾನ=ನರಹರಿ-ನರಸಿಂಹ.

೨) ರಸ ತತ್ವದಲ್ಲಿ ಪೃಥ್ವಿ, ತಮೋಗುಣ. ಬೃಹಸ್ಪತಿ ಉದಾನ-ಅಧೋಕ್ಷಜ.



ಎಡಪಾದಾಂಗುಲಿಯಲ್ಲಿ ಪಂಚಭೂತ ತತ್ವಪತಿಗಳು
(ಶ್ರೀ ಗೋಪಾಲದಾಸರು ಬರೆದ ಚಿತ್ರ)

ಈ ಪ್ರಕಾರ ರಸಗಳೊಳಗೆ ಶ್ರೀಹರಿ ರಸರೂಪ ತಾನೆ ಆಗಿರುತ್ತಾನೆಂದು ಹೇಳುತ್ತಾರೆ.

ದ್ರೌಪದೀಶಪತಿ ವಿಠಲರು : ನೆಲದೊಳಿಪ್ಪನು.

ಭಾವಸೂಚನ : ನೆಲೇತಿ ಉಕ್ತಂಚ ಸೂತ್ರಭಾಷ್ಯೇ ॥ ಕಾರ್ಷ್ಣ್ಯ ಪ್ರಚುರಾಚಪೃಥ್ವೀತಿ । ಬಾಂದಳ—ಆಕಾಶ ॥

ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ನೆಲದೊಳಿಪ್ಪನು" ಇತಿ ॥ "ಕಾರ್ಷ್ಣ್ಯ ಪ್ರಚುರಾ ಚ ಪೃಥಿವೀ"




ಬಲ ಪಾದಾಂಗುಲಿಯಲ್ಲಿಪ್ಪ ಪಂಚತನ್ಮಾತ್ರಾ ತತ್ತ್ವಾಭಿಮಾನಿ ರೂಪಗಳು

ಇತ್ಯುಕ್ತೇಃ ॥ ಓಂ* ಸ್ತೋಮಾ ಇಂದ್ರಸ್ಯ ವಜ್ರಿಣ ನ ವಿಂಧೇ ಅಸ್ಯ ಸುಷ್ಟುತಿಮ್ ॥ ವೃಷಾ ಯೂಥೇವ ವಂಸಗಃ ಕೃಷ್ಟೀರಿಯತ್ರ್ಯೋಜಸಾ ಈಶಾನಃ ॥ ಓಂ ॥ ಕರ್ತೃತ್ವಾತ್ ಚೇಷ್ಟಕತ್ವಾತ್ ಸರ್ವಜಗತ್ಪ್ರವರ್ತಕತ್ವಾತ್ ಬಲಾದ್ಯನಂತ ಗುಣತ್ವಾತ್ ಕೃಷ್ಣಃ ॥ ಜಲೇ ಹರಿಃ ಜಾಮದಗ್ನ್ಯಃ ಅಗ್ನಾವಿಂದ್ರಾನುಜಾತ್ಮಕಃ ॥ ವಾಯೌ ಜನಾರ್ದನಃ ಖೇ ತುಚ್ಯುತ್ಯಪೇತೋಽಸ್ತಿ ಗಂಧಗಃ ॥ ನೃಸಿಂಹೋಽಧೋಕ್ಷಜಃ ಪ್ರೋಕ್ತಃ ರಸೇ ತದ್ರೂಪ ಏಕರಾಟ್ ॥ ಇತಿ ॥ ೨೦ ॥

## ಕನ್ನಡಾರ್ಥ

"ಭೂಮಿಯಲ್ಲಿ ಕಪ್ಪು ಬಣ್ಣವು ಬಹಳಷ್ಟು ಇರುವದರಿಂದ 'ಕೃಷ್ಣಾ' ಎಂದು ಕರೆಯುತ್ತಾರೆ" ಎಂದು ಮುಂತಾದ ವಚನಗಳಿರುವದರಿಂದ "ನೆಲದೊಳಿಪ್ಪನು ಕೃಷ್ಣರೂಪದಿ" ಎಂದು ದಾಸವರ್ಯರು ನಿರೂಪಿಸಿರುತ್ತಾರೆ. ಕೃಷ್ಣನಾಮಾರ್ಥವನ್ನು ವಿವರಿಸುವ "ಸ್ತ್ರೋಮಾ" ಇತ್ಯಾದಿಯಾಗಿರುವ ಬೃಹತೀ ಮಂತ್ರದ ಅರ್ಥಸಾರವಿಂತಿದೆ—"ಕರ್ತೃವಾಗಿರುವದರಿಂದ (೧) ಬಲ ವ್ಯಾಪಾರಗಳನ್ನು ಮಾಡಿಸಿ, ಜಗತ್ತನ್ನು ಪ್ರವರ್ತಿಸುವದರಿಂದ (೨) ಮುಂತಾದ ಅನಂತ ಗುಣಗಳಿರುವದರಿಂದ 'ಕೃಷ್ಣ' ಎಂದು ಕರೆಯುತ್ತಾರೆ." ಜಲ (ನೀರು)ದಲ್ಲಿ ಹರಿಯು; ಅಗ್ನಿಯಲ್ಲಿ ಜಮದಗ್ನಿ ಕುಮಾರನಾಗಿ ಅವತರಿಸಿದ ಭಾರ್ಗವರಾಮನು (ಪರಶುರಾಮ); ಉಪೇಂದ್ರ ರೂಪದಿಂದ ಗಾಳಿಯಲ್ಲಿ ಜನಾರ್ದನನು; ಆಕಾಶದಲ್ಲಿ ಅಚ್ಯುತನು; ಗಂಧದಲ್ಲಿ ನಾರಸಿಂಹನು; ರಸದಲ್ಲಿ ಅಧೋಕ್ಷಜನು" ಹೀಗೆ ಪ್ರಮಾಣ ವಚನಗಳಿಗನುಸಾರವಾಗಿಯೇ "ನೆಲದೊಳಿಪ್ಪನು" ಎಂದು ಶ್ರೀ ದಾಸವರ್ಯರು ನಿರೂಪಿಸಿರುತ್ತಾರೆ ॥ ೨೦ ॥

ಅವತರಣಿಕಾ: ಪಂಚತನ್ಮಾತ್ರಾಗತ ರೂಪ ಸ್ಪರ್ಶ ಶಬ್ದಾದಿ ೩ ತತ್ವಗಳಲ್ಲಿಯೂ ಮತ್ತು ಕರ್ಮೇಂದ್ರಿಯ ಗತವಾದ ಉಪಸ್ಥ, ಪಾಯು, ಪಾದತತ್ವ ಹೀಗೆ (೬) ತತ್ವಗಳಲ್ಲಿಪ್ಪ ರೂಪಗಳನ್ನು ಹೇಳುತ್ತಾರೆ.

ಮೂಲ:

**ರೂಪ ಪುರುಷೋತ್ತಮನು ಸ್ಪರ್ಶ ।**
**ಪ್ರಾಪಕನು ಅನಿರುದ್ಧ ಶಬ್ದದಿ ।**
**ವ್ಯಾಪಿಸಿಹ ಪ್ರದ್ಯುಮ್ನುಪಸ್ಥದಿ ವಾಸುದೇವನಿಹ ॥**
**ತಾ ಪೊಳೆವ ಪಾಯುಸ್ಥನಾಗಿ ಜ ।**
**ಯಾಪತಿಯು ಸಂಕರುಷಣನು ಸು ।**
**ಸ್ಥಾಪಕನೆನಿಸಿ ಪಾದದೊಳು ದಾಮೋದರನು ಪೊಳೆವ ॥ ೨೧ ॥**

**ಪದ್ಯಾರ್ಥ:** ೧) ರೂಪ=ರೂಪ ತತ್ವದಲಿ (ತೇಜತನ್ಮಾತ್ರಾ) ಬೃಹಸ್ಪತಿ ಅಪಾನ=ಪುರುಷೋತ್ತಮನು.

೨) ಸ್ಪರುಶ ರೂಪ ತತ್ವದಲಿ (ವಾಯುತನ್ಮಾತ್ರಾ) ಬೃಹಸ್ಪತಿ ವ್ಯಾನನಲ್ಲಿ–ಪ್ರಾಪಕನು ಸ್ಪರುಶ ಶಕ್ತಿ ಜ್ಞಾನ ಕೊಡುವನು ಅನಿರುದ್ಧನು.

೩) ಶಬ್ದ ತತ್ವದಲ್ಲಿ-ಆಕಾಶ ತನ್ಮಾತ್ರಾ=ಬೃಹಸ್ಪತಿ ಪ್ರಾಣ-ಪ್ರದ್ಯುಮ್ನ.

೪) ಉಪಸ್ಥ ತತ್ವದಲ್ಲಿ (ಕರ್ಮೇಂದ್ರಿಯ) ಸ್ವಾಯಂಭುವ ಮನು-ವಾಸುದೇವನು ಇರುವನು, ತಾ ಪೊಳೆವ-ಪ್ರಕಾಶಿಸುವ.

೫) ಪಾಯುಸ್ಥನಾಗಿ ತತ್ವದಲ್ಲಿ (ಕರ್ಮೇಂದ್ರಿಯ) ಮಿತ್ರನಾಮಕ ಸೂರ್ಯ-ಜಯಾದೇವಿ ಪತಿಯಾದ=ಸಂಕರ್ಷಣನು.

ಸುಸ್ಥಾಪಕನೆನಿಸಿ ಸಮೀಚೀನವಾಗಿ ನೆಲಸಿಪ್ಪ.

೬) ಪಾದ ತತ್ವದಲ್ಲಿ=ಇಂದ್ರಪುತ್ರ ಜಯಂತ ಯಜ್ಞ ಶಂಭು ದಾಮೋದರನು ಪೊಳೆವ=ಪ್ರಕಾಶಿಸುತ್ತ ಇರುವನು.

ಇಂತು ಪದ್ಯ ೧೮ರಲ್ಲಿ ಪಾಣಿತತ್ವಾರಂಭಿಸಿ ಶ್ರೋತ್ರ ೭ ತತ್ವ, ಪದ್ಯ ೧೯ರಲ್ಲಿ, ಮನಾದಿ ೪ ತತ್ವಗಳ ಅವ್ಯಕ್ತವರೆಗೆ ೪ ತತ್ವ, ಪದ್ಯ ೨೦ರಲ್ಲಿ, ಪೃಥಿವ್ಯಾದಿ ೫ ಪಂಚಗಂಧ ರಸ ೨. ಹೀಗೆ ೭ ತತ್ವ, ಪದ್ಯ ೨೧ರಲ್ಲಿ, ರೂಪಾದಿ ಪಾದ ಪರಿಯಂತ ೬ ತತ್ವ ಒಟ್ಟಿಗೆ ೨೪ ತತ್ವಗಳಲ್ಲಿಪ್ಪ ೨೪ ಭಗವನ್ಮೂರ್ತಿಗಳನ್ನು ಧ್ಯಾನ ಮಾಡಬೇಕೆಂದು ಹೇಳಿದ್ದಾರೆ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ರೂಪ" ಇತಿ ॥ ಪುರುಷಾಗ್ರ್ಯೋ ರೂಪಗತಃ ಅನಿರುದ್ಧಃ ಸ್ಪರ್ಶನಾಯಕಃ ॥ ಪ್ರದ್ಯುಮ್ನಃ ಶಬ್ದಗಃ ಲಿಂಗೇ ವಾಸುದೇವಃ ಜಯಾಪತಿಃ ॥ ಪಾಯುಸ್ಥಃ ಪಾಯು ಗೋ ದಾಮೋದರ ಇತ್ಥಂ ವಿಚಿಂತಯೇತ್ ॥ ಇತಿ ಮಾಹಾತ್ಮ್ಯೇ ॥ ೨೧ ॥

## ಕನ್ನಡಾರ್ಥ

"ರೂಪದಲ್ಲಿ ಪುರುಷೋತ್ತಮನು ; ಸ್ಪರ್ಶದಲ್ಲಿ ಅನಿರುದ್ಧನು ; ಶಬ್ದದಲ್ಲಿ ಪ್ರದ್ಯುಮ್ನನು ; ಲಿಂಗ (ಉಪಸ್ಥ)ದಲ್ಲಿ ವಾಸುದೇವನು ; ಪಾಯುವಿನಲ್ಲಿ ಸಂಕರುಷಣನು ; ಪಾದದಲ್ಲಿ ದಾಮೋದರನು ; ಹೀಗೆ ಅವಯುವಗಳಲ್ಲಿ ಭಗವದ್ರೂಪಗಳನ್ನು ಚಿಂತಿಸಬೇಕು" ಎಂದು "ಮಾಹಾತ್ಮ್ಯ"ವೆಂಬ ಗ್ರಂಥದಲ್ಲಿ ಹೇಳಲಾಗಿರುತ್ತದೆ. ॥ ೨೧ ॥

ಅವತರಣಿಕಾ: ಇಪ್ಪತ್ತು ನಾಲ್ಕು ತತ್ವ, ತತ್ವಾಭಿಮಾನಿ ದೇವತೆಗಳಲ್ಲಿಯೂ, ೨೪ ಕಾರ್ಯ ರೂಪದಿಂದ ಇರುವುದಲ್ಲದೆ ಕಾರಣ ರೂಪವಾದ ಅನಿರುದ್ಧಾದಿ ರೂಪ ಗಳಿಂದ ಇದ್ದು, ಆಯಾ ಜೀವರುಗಳನ್ನು ಪುಟ್ಟಿಸಿದ ಪಿತೃಗಳಿಗೆ ತರ್ಪಕನಾಗಿರುವ ದನ್ನು ವಿವರಿಸುತ್ತಾರೆ.




ಶ್ರೀ ಕೇಶವಾದಿ ೨೪ ಮೂರ್ತಿಗಳು

ಮೂಲ:

ಚತುರವಿಂಶತಿ ತತ್ವದೊಳು ಶ್ರೀ ।
ಪತಿಯೆ ಅನಿರುದ್ಧಾದಿ ರೂಪದಿ ।
ವಿತತನಾಗಿದ್ದಖಿಳ ಜೀವರ ಸಂಹನನದೊಳಗೆ ॥
ಪ್ರತತಿಯಂದದಿ ಸುತ್ತು ಸುತ್ತುತ ।
ಪಿತೃಗಳಿಗೆ ತರ್ಪಕನೆನಿಸಿ ಕೊಂ ।
ಡತುಳ ಮಹಿಮನು ಷಣ್ಣವತಿ ನಾಮದಲಿ ನೆಲೆಸಿಹನು ॥೨೨॥

ಪದ್ಯಾರ್ಥ: ಚತುರವಿಂಶತಿ ತತ್ವದೊಳು=ಇಪ್ಪತ್ತು ನಾಲ್ಕು ತತ್ವಗಳಲ್ಲಿ, ಶ್ರೀಪತಿಯು ಅನಿರುದ್ಧಾದಿ ರೂಪದಿ=ಶ್ರೀ ಲಕ್ಷ್ಮೀಪತಿಯು ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣಾದಿ ರೂಪಗಳಿಂದಲೂ, ವಿತತನಾಗಿ=ವ್ಯಾಪ್ತನಾಗಿರುವನು, ಅಖಿಳ ಜೀವರ ಸಂಹನನದೊಳಗೆ=ಸಮಸ್ತ ಜೀವರ ದೇಹಗಳೊಳಗೆ, ಪ್ರತತಿಯಂದದಿ=ಬಳ್ಳಿಯಂದದಿ, ಸುತ್ತು ಸುತ್ತುತ=ಬಳ್ಳಿಯು ಯಾವ ಪ್ರಕಾರವಾಗಿ ಆಧಾರವಾಗಿರುವ ಒಂದು ಗಿಡದ ಕೊಂಬೆಗೆ ಸುತ್ತುತ್ತ ಹೋಗುತ್ತದೋ ಅಂದರೆ ಬಳ್ಳಿಗೆ ಸುತ್ತಲು ಒಂದು ಆಧಾರವಿರಬೇಕು. ಶ್ರೀಹರಿಯು ಸ್ವತಂತ್ರ. ಅವನಿಗೆ ಯಾವ ಆಧಾರವೂ ಬೇಕಿಲ್ಲವಾದರೂ, ಜೀವರುಗಳ ದೇಹಗಳಲ್ಲಿ ಒಂದೊಂದು ರೂಪದಿಂದ ಸುತ್ತಿಕೊಂಡಿರುತ್ತಾನೆ. ಪಿತೃಗಳಿಗೆ ತರ್ಪಕನೆನಿಸಿ=ಆಯಾ ಜೀವರುಗಳನ್ನು ಪರಂಪರಾ ಹುಟ್ಟಿಸಿದ ಪಿತೃ ತಂದೆ-ಮುತ್ತಾತ್ತ ಅಜ್ಜ-ಇತ್ಯಾದಿ ಪಿತೃಗಳಿಗೆ, ತರ್ಪಕ=ತೃಪ್ತಿಪಡಿಸುವವನು ಎನಿಸಿಕೊಂಡು, ಅತುಳ ಮಹಿಮನು, ಬಹು ಮಹಿಮಾವುಳ್ಳ ಶ್ರೀಹರಿಯು, ಷಣ್ಣವತಿ=ತೊಂಭತ್ತಾರು ನಾಮಗಳಿಂದ ಕರೆಸುತ್ತ, ನೆಲೆಸಿಹನು-ಮನೆಮಾಡಿಕೊಂಡಿರುವನು.

ದ್ರಾಪದೀಶಪತಿ ವಿಠಲರು: ಚತುರವಿಂಶತಿ ತತ್ವದೊಳು=೨೪ ತತ್ವಗಳೊಳಗೆ ಅನಿರುದ್ಧಾದಿ ೪ ರೂಪದಿಂದ ಸುತ್ತಿಸುತ್ತಾ ಇಂದ್ರಿಯ ವ್ಯಾಪಾರ ನಡೆಸೋಣಾ, ಪಿತೃಗಳಿಗೆ ಅನ್ನರೂಪ, ಷಣ್ಣವತಿದಾವದೆಂದರೆ ೯೬ ರೂಪ ವಿವರ.

೧) ಯಜಮಾನನಲ್ಲಿ ಅನಿರುದ್ಧಾದಿ ೨೪ ಅಂಶ,ಅನಿರುದ್ಧ-ಕೇಶವಾದಿ.

೨) ಅನ್ನದೊಳಗೆ ಪ್ರದ್ಯುಮ್ನ=೨೪ ಅಂಶ ಪ್ರದ್ಯುಮ್ನ-ಕೇಶವಾದಿ.

೩) ಭೋಕ್ತೃಗಳೊಳಗೆ ಸಂಕರ್ಷಣ=೨೪ ಅಂಶ ಸಂಕರ್ಷಣ-ಕೇಶವಾದಿ.

೪) ಅವಕಾಶಪ್ರದವಾದೇವ=೨೪ ಅಂಶ ವಾಸುದೇವ-ಕೇಶವಾದಿ.

**ಭಾವಸೂಚನ : ಚತುರೇತಿ ॥**

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಚತುರೇತಿ" ॥ ಪ್ರತತಿ=ಬಳ್ಳಿ ॥ ೨೨ ॥

### ಕನ್ನಡಾರ್ಥ

ಪ್ರತತಿ=ಬಳ್ಳಿ. ಶ್ಲೋಕಾರ್ಥವು ಸರಳವಿದ್ದುದರಿಂದ ವ್ಯಾಖ್ಯಾನವನ್ನು ಮಾಡಿರುವದಿಲ್ಲ ॥ ೨೨ ॥

ಅವತರಣಿಕಾ : ಇಪ್ಪತ್ತು ನಾಲ್ಕು ತತ್ತ್ವ ತತ್ವಪತಿ ದೇವತೆಗಳಲ್ಲಿರುವ ಆಯಾ ನಾಮ ರೂಪದಿಂದ ಕಾರ್ಯ ಮಾಡುವ ಎಲ್ಲ ಭಗವದ್ರೂಪಗಳನ್ನೂ ಒಟ್ಟಿಗೆ ನಿರೂಪಿಸುತ್ತಾರೆ.

ಮೂಲ :

**ಚತುರವಿಂಶತಿ ತತ್ವದೊಳು ತ ।**
**ತ್ಪತಿಗಳೆನಿಸುವ ಬ್ರಹ್ಮಮುಖ ದೇ ।**
**ವತೆಗಳೊಳು ಹನ್ನೊಂದು ನೂರೈವತ್ತೆರಡು ರೂಪ ॥**
**ವಿತತನಾಗಿದ್ದೆಲ್ಲ ಜೀವರ ।**
**ಜತನ ಮಾಡುವಗೋಸುಗ ಜಗ ।**
**ತ್ಪತಿಗೆ ಏನಾದರು ಪ್ರಯೋಜನವಿಲ್ಲವಿದರಿಂದ ॥ ೨೩ ॥**

**ಪದ್ಯಾರ್ಥ :** ಚತುರವಿಂಶತಿ ತತ್ವದೊಳು=ಇಪ್ಪತ್ತು ನಾಲ್ಕು ತತ್ವಗಳು ೨೪, ತತ್ಪತಿಗಳೆನಿಸುವ=ಈ ಇಪ್ಪತ್ತು ನಾಲ್ಕು ತತ್ಪತಿಗಳಿಗೆ=ತತ್ವಗಳಿಗೆ ಒಡೆಯರಾದ ಬ್ರಹ್ಮ ಮುಖ ದೇವತೆಗಳೊಳು=ಬ್ರಹ್ಮದೇವರೆ ಮೊದಲಾದ ದೇವತೆಗಳಲ್ಲಿ ೨೪ ಹೀಗೆ=ತತ್ವಗಳಲ್ಲಿಪ್ಪ ೨೪ ರೂಪ ೨೪×೨೪=೫೭೬; ೨೪ ಬ್ರಹ್ಮಾದಿ ದೇವತೆಗಳಲ್ಲಿರುವ ೨೪ ರೂಪ ೨೪×೨೪=೫೭೬. ಹೀಗೆ ಒಟ್ಟಿಗೆ ಹನ್ನೊಂದು ನೂರಾ ಐವತ್ತು ಎರಡು ರೂಪ—೧೧೫೨ ಗಳಿಂದ ಅಥವಾ (ಅಲ್ಲಿಪ್ಪ ಗುಣಬಿಂದುಗಳ ಸಂಖ್ಯೆಯಲ್ಲಿಪ್ಪ ರೂಪ) ವಿತತ=ವ್ಯಾಪ್ತ

ನಾಗಿದ್ದು, ಎಲ್ಲ ಜೀವರ ಜತನ ಮಾಡುವ ಗೋಸುಗ ಎಲ್ಲ ಜೀವರನ್ನು ಸಂರಕ್ಷಣೆ ಮಾಡುವ ಗೋಸ್ಕರ ಇಷ್ಟು ರೂಪಗಳಿಂದ ಇದ್ದಾನೆ. ಹೊರತಾಗಿ, ಜಗತ್ಪತಿಗೆ=ಜಗತ್ತಿಗೆ ಒಡೆಯನಾದ ಶ್ರೀಹರಿಗೆ ಏನಾದರೂ ಸ್ವಪ್ರಯೋಜನ ವಿಲ್ಲ. ಕೇವಲ ಜೀವರ ರಕ್ಷಣೆ ಮಾಡುವದಕ್ಕಾಗಿಯೇ ಇಷ್ಟು ರೂಪಗಳಿಂದ ಕಾರ್ಯ ಮಾಡುತ್ತಾನೆ ‖ ೨೩ ‖

ದ್ರೌಪದೀಶಪತಿ ವಿಠಲರು : ಚತುರವಿಂಶತಿ ತತ್ವದೊಳಗೆ ೨೪ ತತ್ವಾಭಿಮಾನಿ ದೇವತೆಗಳೊಳಗೆ ೧೧೫೨ ರೂಪ ವಿವರ :

| | |
|---|---|
| ಓಂ ಪ್ರತಿಪಾದ್ಯ | ೧ ರೂಪ |
| ವಿಶ್ವಾದಿ | ೧೦೦೦ ರೂಪ |
| ನಾರಾಯಣಾದಿ | ೧೦೦ ರೂಪ |
| ಅಜಾದಿ | ೫೧ ರೂಪ |
| | ೧೧೫೨ ರೂಪ |




ಭಾವಸೂಚನ : ಚತುರೇತಿ ‖

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಚತುರೇತಿ‖ "ಏಕಾದಶ ಶತಾತ್ಮಾಯಂ ದ್ವಿಪಂಚಾಶತ್ ಸ್ವರೂಪಕಃ‖ ಸಾತ್ವಿಕೇಷ್ವಜ ಮುಖ್ಯೇಷು" ಇತಿ ಚ ‖ ೨೩ ‖

## ಕನ್ನಡಾರ್ಥ

"ಚತುರವಿಂಶತಿ" ಎಂಬ ಪದ್ಯದಲ್ಲಿ ಹೇಳಿದ ಭಗವಂತನ ೧೧೫೨ ರೂಪಗಳ ವಿಷಯದಲ್ಲಿ ಪ್ರಮಾಣವನ್ನು ಉದಾಹರಿಸಿರುತ್ತಾರೆ. "೧೧೫೨ ರೂಪಗಳಿಂದ ಸಾತ್ವಿಕರಾದ ಅಜ ಮುಂತಾದವರಲ್ಲಿ ಶ್ರೀಹರಿಯಿರುತ್ತಾನೆ" ಎಂದು ಪ್ರಮಾಣ ಶ್ಲೋಕದ ಅರ್ಥ ‖ ೨೩ ‖

ಅವತರಣಿಕಾ : ಪುರುಷನಾಮಕನಾದ ಸ್ವರೂಪದೇಹಗತ ಬಿಂಬನೇ ಶಕ್ತಿ ಮೊದಲಾದ ಹನ್ನೊಂದು ರೂಪದಿಂದಿದ್ದು, ಸ್ವರೂಪೇಂದ್ರಿಯದಲ್ಲಿಂದ ತನ್ನ ಅಂಶ ಗಳನ್ನು ಸ್ಥೂಲ ಮನಾದಿ ಇಂದ್ರಿಯಗಳಲ್ಲಿಟ್ಟು ಕರಣಗಳ ವ್ಯಾಪಾರ ನಡೆಸುವನು ಎಂದು ಹೇಳುತ್ತಾರೆ.

ಮೂಲ:

ಇಂದಿರಾಧವ ಶಕ್ತಿ ಮೊದಲಾ ।
ದೊಂದಧಿಕ ದಶ ರೂಪದಿಂದಲಿ ।
ಪೊಂದಿಹನು ಸಕಲೇಂದ್ರಿಯಗಳಲಿ ಪುರುಷನಾಮಕನು ॥
ಸುಂದರಪ್ರದ ಪೂರ್ಣಜ್ಞಾನಾ ।
ನಂದಮಯ ಚಿದ್ದೇಹದೊಳು ತಾ ।
ನೊಂದರಕ್ಷಣವಗಲದಲೆ ಪರಮಾಪ್ತನಾಗಿಪ್ಪ ॥ ೨೪ ॥

**ಪದ್ಯಾರ್ಥ:** ಇಂದಿರಾಧವ=ಶ್ರೀ ಲಕ್ಷ್ಮಿಪತಿಯು, ಶಕ್ತಿ ಮೊದಲಾ ದೊಂದಧಿಕ ದಶರೂಪದಿಂದಲಿ=ತತ್ವನ್ಯಾಸ ಧ್ಯಾನ ಮಂತ್ರಗತ "ಶಕ್ತಿಃ ಪ್ರತಿಷ್ಠಾ ಸಂವಿತ್ ಸ್ಫೂರ್ತಿ ಪ್ರಕೃತಿ ರೇವಚ ॥ ಕಳಾವಿದ್ಯಾಮತಿರ್ನಿೀತಿ ಮಾಯಾ ಕಾಲಶ್ಚ । ಪೂರುಷಃ ॥ ಎಂಬುವ ತಂತ್ರಸಾರ ವಾಕ್ಯದಂತೆ ಹನ್ನೊಂದು ಸ್ತ್ರೀ ರೂಪಗಳು, ಸಂಕಲೇಂದ್ರಿಯಗಳಲ್ಲಿ ಹನ್ನೊಂದು ಇಂದ್ರಿಯಗಳಲ್ಲಿ ಪೊಂದಿಹನು=ಹೊಂದಿಕೊಂಡಿರುವನು. ಈ ರೂಪಗಳಲ್ಲಿ ಸ್ತ್ರೀ ಆಕಾರವಾಗಿರುವರು. ಹೆಳಲು ಭಂಗಾರ-ಕಂಚುಕ, ಸ್ತ್ರೀ ವಸನ ಎರಡು ಭುಜ. ಪ್ರಾಂಜಲಿ=ಪ್ರಾರ್ಥನಾ ಮುದ್ರಾ ಬೊಗಸಿಯೊಡ್ಡಿಕೊಂಡು ಬಿಂಬನಾದ ಪುರುಷ ನಾಮಕನ ಸಮ್ಮುಖವಾಗಿ ನಿಂತಿರುವ ರೂಪಗಳೆಂದು ಶ್ರೀಮದಾಚಾರ್ಯರು ತಂತ್ರಸಾರ, ಪುರುಷ ನಾಮಕನು=ಪುರುಷಾಕಾರ ಉಳ್ಳ ಹರಿಯು, ಪುರುಷ ಶಬ್ದ ವಾಚ್ಯನಾಗಿ, ಸುಂದರವಾದ ಅವಯುವ ಗಳಿಂದ ಯುಕ್ತನಾಗಿರುವದರಿಂದ ಸುಂದರ ಪ್ರದ=ಸೌಂದರ್ಯವನ್ನು ತಂದುಕೊಡುವವನು, ಸಚ್ಚಿದಾನಂದ ಸ್ವರೂಪನೂ, ಪೂರ್ಣವಾದ ಜ್ಞಾನಾ ನಂದ ಉಳ್ಳವನೂ, ಆನಂದಮಯ ನಾಮಕನೂ, ಚಿದ್ದೇಹದ ಆನಂದಮಯ ಕೋಶಗತನಾಗಿರುವನೂ (ಚಿದ್ದೇಹಾಕಾರ ಆನಂದಮಯನಯ್ಯಾ) ಎಂಬುವ ಶ್ರೀ ವಿಜಯರಾಯರ ವಾಕ್ಯ) ಇಂಥ ಪುರುಷ ಶಬ್ದ ವಾಚ್ಯನಾದ ಹರಿಯು, ಒಂದರಕ್ಷಣ ಬಿಡದಲೇ ಪರಮಾಪ್ತನಾಗಿಪ್ಪ=ಒಂದು ಲವ ತೃಣಕ್ಷಣವಾದರೂ ಜೀವನಿಂದ ಅಗಲದೇ ಪರನು ಉತ್ತಮ ಸರ್ವೋತ್ತಮನೂ, ಆಪ್ತನೂ ಬಂಧುವೂ ಆಗಿರುವನು.

**ದ್ರೌಪದೀಶಪತಿ ವಿಠಲರು:** ಇಂದಿರಾಧವ ಶಕ್ತಿ ॥ ಶಕ್ತ್ಯಾದಿ

ಹನ್ನೊಂದು ರೂಪ ೧೧ ಇಂದ್ರಿಯಗಳಲ್ಲಿ ಸ್ತ್ರೀರೂಪ ಧರಿಸಿದಂಥಾತನು. ಪುರುಷ ನಾಮಕನೇ ಚಿದ್ದೇಹದೊಳಗೆ ಪುರುಷನಾಗಿಪ್ಪ ॥ ೨೪ ॥

**ಭಾವಸೂಚನ:** ಇಂದಿರೇತಿ ॥ ಉಕ್ತಂ ಚ ಭಗವತ್ಪಾದೈಃ ॥ "ಕಾಲ ಮಾಯೇತಿ ನಿಯತಿರ್ಮತಿರೇವ ಚ ॥ ವಿದ್ಯಾ ಕಳಾಪ್ರವೃತ್ತಿಶ್ಚೇತಿ । ಸ್ಫೂರ್ತಿಃ ಸಂವಿತ್‌ಪ್ರತಿಷ್ಠಾ ಚ ಶಕ್ತಿ ರಿತಿ ಚ ॥ ೨೪ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಇಂದಿರೇತಿ ॥ "ಕಾಲಮಾಯೇ ನಿಯತಿಃ ಮತಿರೇವ ಚ ॥ ವಿದ್ಯಾ ಕಲಾ ಪ್ರವೃತ್ತಿಶ್ಚ" ಇತ್ಯನಂತರಂ "ಸ್ಫೂರ್ತಿಃ ಪ್ರತಿಷ್ಠಾ ಸಂವಿತ್ ಚ ಶಕ್ತಿ ರಿತ್ಯಪರಾಣಿ ಚ ॥ ಮಹಾಲಕ್ಷ್ಮ್ಯಾಃ ಸ್ವರೂಪಾಣಿ ಹ್ಯೇಕಾದಶವಿದೋ ವಿದುಃ॥ ವಿಷ್ಣೋರಪಿ ಹಿ ರೂಪಾಣಿ ತನ್ನಾಮ್ನ್ಯೇಕಾದಶೈವ ತು ॥" ಇತಿ ಸಾರ ಸಂಗ್ರಹೇ ॥ ೨೪ ॥

## ಕನ್ನಡಾರ್ಥ

"ಇಂದಿರಾರಮಣನಾದ ಶ್ರೀ ನಾರಾಯಣನು ಪುರುಷ ನಾಮಕನಾಗಿ ಹನ್ನೊಂದು ರೂಪಗಳಿಂದ ಸಕಲೇಂದ್ರಿಯಗಳಲ್ಲಿ ಹೊಂದಿಕೊಂಡಿರುತ್ತಾನೆ." ಈ ವಿಷಯದಲ್ಲಿ ಪ್ರಮಾಣವನ್ನು ಉದಾಹರಿಸಿರುತ್ತಾರೆ. ೧) ಕಾಲ, ೨) ಮಾಯಾ, ೩) ನಿಯತಿ, ೪) ಮತಿ, ೫) ವಿದ್ಯಾ, ೬) ಕಲಾ, ೭) ಪ್ರವೃತ್ತಿ, ೮) ಸ್ಫೂರ್ತಿ, ೯) ಪ್ರತಿಷ್ಠಾ, ೧೦) ಸಂವಿತ್, ೧೧) ಶಕ್ತಿ. ಹೀಗೆ ಹನ್ನೊಂದು ಶ್ರೀ ಮಹಾಲಕ್ಷ್ಮಿಯ ರೂಪಗಳು. ಇದರಂತೆ ಇವುಗಳಲ್ಲಿ ನಾರಾಯಣನ ಈ ಶಬ್ದಗಳಿಂದ ಕರೆಯಿಸಿಕೊಳ್ಳುವ ರೂಪಗಳೂ ಇರುತ್ತವೆ. ಇವೇ ನಾರಾಯಣನ ಶಕ್ತಿ ಮುಂತಾದವುಗಳು" ಎಂದು ಪ್ರಮಾಣಗಳ ಅರ್ಥ. ॥ ೨೪ ॥

**ಅವತರಣಿಕಾ:** ಇನ್ನು ಓಂಕಾರ ಮಂತ್ರವರ್ಣ ಪ್ರತಿಪಾದ್ಯ ವಿಶ್ವ, ತೈಜಸ, ಪ್ರಾಜ್ಞರು, ವಿಶ್ವಾದಿ ಆವಿರ್ಭೂತ ಅಜಾನಿ ಪಂಚಾಶದ್ವರಣ ಅಜಾದಿ ರೂಪಗಳ ಇರುವಿಕೆಯ ವಿವರಿಸುತ್ತಾರೆ.

ಮೂಲ :

ಆರಧಿಕ ದಶ ರೂಪದಿಂದಲಿ ।
ತೋರುತಿಪ್ಪನು ವಿಶ್ವಲಿಂಗ ಶ ।
ರೀರದೊಳು ತೈಜಸನು ಪ್ರಾಜ್ಞನು ತುರ್ಯ ನಾಮಕನು ।
ಮೂರಯಿದು ರೂಪಗಳ ಧರಿಸುತ ।
ಈರಯಿದು ಕರದೊಳು ಮಾತ್ರದಿ ।
ಖೇರ ಶಿಖಿ ಜಲ ಭೂಮಿಯೊಳಗಿಹನಾತ್ಮನಾಮದಲಿ ॥ ೨೫ ॥

**ಪದ್ಯಾರ್ಥ:** ಅನಿರುದ್ಧಾದಿ ರೂಪಗಳೇ ವಿಶ್ವಾದಿ ಅಜಾದಿ ರೂಪಗಳು. ಆರಧಿಕ ದಶರೂಪದಿಂದಲಿ ತೋರುತಿಪ್ಪನು. ವಿಶ್ವ=೧೦+೬=ಹದಿನಾರು ರೂಪದಿಂದಲಿ, ಆಕಾರವಾಚ್ಯ ವಿಶ್ವರೂಪಿಯಿಂದ ೧೬ ಸ್ವರ ವರಣಗಳ ಉತ್ಪತ್ತಿ ಇಂಥ ಅಜಾದಿ, ಆಃ ಅರ್ಧಗರ್ಭ ಪರಿಯಂತವಾಗಿ ೧೬ ರೂಪಗಳು. ಲಿಂಗಕಲೆಗಳಲ್ಲಿರುವವು. ತೈಜಸ, ಪ್ರಾಜ್ಞ, ತುರ್ಯ ನಾಮಕನು. **ಉಕಾರ** ತೈಜಸನಿಂದ=ಕ ಖ ಗ ಘ ಙ ॥ ಕಪಿಲಾದಿ ೫ ರೂಪಗಳು. **ಮಕಾರ** ಪ್ರತಿಪಾದ್ಯ ಪ್ರಾಜ್ಞನಿಂದ ಚ ಛ ಜ ಝ ಞ- ಚಾರ್ವಾಂಗಾದಿ ೫ ರೂಪಗಳು. ಸ್ವರಗತ ತುರ್ಯ ಈತನೇ ವಾಸುದೇವ ಈ ಸ್ವರಗತನಾದ **ವಾಚ್ಯಾ**ತುರ್ಯದಿಂದ ಟ ಠ ಡ ಢ ಣ=ಟಂಕ್ಯಾದಿ ೫ ರೂಪಗಳು. ಹೀಗೆ ಮೂರೈದು=ಕಪಿಲಾದಿ ಪಂಚ, ಚಾರ್ವಾಂಗಾದಿ ಪಂಚ, ಟಂಕ್ಯಾದಿ ಪಂಚ ಹದಿನೈದು ರೂಪಗಳನ್ನು ಧರಿಸಿರುತ್ತಾನೆ. ಈರೈದು ಕರಣದಲಿ=ದಶ ಇಂದ್ರಿಯಗಳಲ್ಲಿ ಮಾತ್ರದಿ ಪಂಚತನ್ಮಾತ್ರದಲ್ಲಿ ಹೀಗೆ ೧೫ ರೂಪ ಖೇರ ಆಕಾಶ ವಾಯು ಶಿಖಿ ತೇಜ ಜಲ ಅಪ್ಪು ಭೂಮಿ-ಪೃಥ್ವಿಯಲ್ಲಿ. ಸೂಕ್ಷ್ಮ ಪಂಚಭೂತಾದಿಗಳಲ್ಲಿ ಬಿಂದು ವಾಚ್ಯನಿಂದ, ತ ಥ ದ ಧ ನ=ತಾರಾದಿ ಐದು ರೂಪಗಳಿಂದ ಆತ್ಮನಾಮದಿಂದ ಕಾರಣವಾದ ಲಿಂಗ ಶರೀರದಲ್ಲಿ ವ್ಯಾಪಿಸಿಕೊಂಡಿರುತ್ತವೆ. (ಇನ್ನು ಮುಂದಿನ ಪದ್ಯದಲ್ಲಿ ಘೋಷ, ಶಾಂತ, ಅತಿಶಾಂತಾದಿ ಆವಿರ್ಭೂತ ರೂಪಗಳನ್ನು ಹೇಳುತ್ತಾರೆ.)

ದ್ರೌಪದೀಶಪತಿ ವಿಠಲರು : ಆರಧಿಕ ದಶರೂಪದಿಂದಲಿ :

೧) ಅಕಾರ ಪ್ರತಿಪಾದ್ಯ ಅನಿರುದ್ಧ ಈತನೇ ವಿಶ್ವ ೧೬ ಅಕ್ಷರ ಅಂ ಅಃ ೧೬ ರೂಪ (ಅಜಾದಿ ಅರ್ಧ ಗರ್ಭವರೆಗೆ).

೨) ಉಕಾರ ಪ್ರತಿಪಾದ್ಯ ಪ್ರದ್ಯುಮ್ನನೇ ತೈಜಸ ೫ ಅಕ್ಷರ ಕ, ಖ, ಗ, ಘ, ಙ ೫ ರೂಪ.

೩) ಮಕಾರ ಪ್ರತಿಪಾದ್ಯ ಸಂಕರ್ಷಣ ಈತನೇ ಪ್ರಾಜ್ಞ, ೫ ಅಕ್ಷರ ಚ ಛ ಜ ಝ ಞ ೫ ರೂಪ. ಸ್ವರ ಪ್ರತಿಪಾದ್ಯ ವಾಸುದೇವ, ಈತನೇ ತುರ್ಯ-ಸ್ವರದಾಗ ನಾದ, ಬಿಂದು, ಘೋಷ, ಶಾಂತ, ಅತಿಶಾಂತ, ಕಲೆತಿರುತ್ತನೆ.

೪) ನಾದದಿಂದ ೫ ಅಕ್ಷರ ಟ ಠ ಡ ಢ ಣ ೫ ರೂಪ ಆತ್ಮನಾಮದಿಂದ.

**ಭಾವಸೂಚನ :** ಆರೇತಿ ॥ ೨೫ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಆರೇತಿ॥ "ಲಿಂಗೇ ಷೋಡಶರೂಪೀ ಚ ವಿಶ್ವಃ ತೈಜಸ ಪ್ರಾಜ್ಞಕೌ॥ ತುರ್ಯೋ ದಶಸ್ವಿಂದ್ರಿಯೇಷು ಪಂಚಪಂಚಾತ್ಮಕಾಃ ಕಿಲ ॥" ಇತಿ ಚ ವೈಭವೇ ॥ ಭೂತಮಾತ್ರಾಸು ಆತ್ಮನಾಮಾ ಅಹಂಕಾರೇ ಚಿತ್ತೇ ಅಂತರಃ ಇತಿ ॥ ೨೫ ॥

**ಕನ್ನಡಾರ್ಥ**

"ಲಿಂಗ ಶರೀರದಲ್ಲಿ ೧೬ ರೂಪಗಳಿಂದ ವಿಶ್ವನಿರುತ್ತಾನೆ. ತೈಜಸ, ಪ್ರಾಜ್ಞತುರ್ಯರು ೧೫ ರೂಪಗಳಿಂದ ದಶೇಂದ್ರಿಯಗಳಲ್ಲಿ ಇರುತ್ತಾರೆ. ಭೂತ ಹಾಗೂ ತನ್ಮಾತ್ರಾಗಳಲ್ಲಿ ಇರುತ್ತಾನೆ. ಅಹಂಕಾರ ಚಿತ್ತಗಳಲ್ಲಿ "ಅಂತರಾತ್ಮ" ಎಂಬ ನಾಮದಿಂದ ಇರುತ್ತಾನೆ. ಆತ್ಮನಾಮದಿಂದ ಮನಸ್ಸಿನಲ್ಲಿ ಇರುತ್ತಾನೆ.

**ಅವತರಣಿಕಾ :** ಮನ ಅಹಂಕಾರ-ಮಹತ್ತತ್ವ, ಅವ್ಯಕ್ತದಲ್ಲಿ ಅಂತರಾತ್ಮ-ಜ್ಞಾನಾತ್ಮಾ-ಪರಮಾತ್ಮನಿಂದಾವಿರ್ಭೂತ ಉಳಿದ ೧೫ ರೂಪಗಳ ವಿವರ ಹೇಳುತ್ತಾರೆ.

**ಮೂಲ :**

ಮನದೊಳಾಹಂಕಾರದೊಳು ಚಿಂ ।
ತನೆಯ ಮಾಳ್ಪದು ಅಂತರಾತ್ಮನ ।
ಘನ ಸುತತ್ವದಿ ಪರಮ ನವ್ಯಕ್ತದಲಿ ಜ್ಞಾನಾತ್ಮಾ ॥

**ಇನಿತು ಪಂಚಾಶದ್ವರಣ ವೇ |**
**ದ್ಯನ ಅಜಾದ್ಯೈವತ್ತು ಮೂರ್ತಿಗ |**
**ಳನು ಸದಾ ಸರ್ವತ್ರ ದೇಹಗಳಲ್ಲಿ ಪೂಜಿಪುದು || ೨೬ ||**

**ಪದ್ಯಾರ್ಥ :** ಮನದೊಳು-ಸೂಕ್ಷ್ಮವಾದ ಮನಸ್ ತತ್ವದಲ್ಲಿ-ಅಹಂಕಾರ ತತ್ವದಲ್ಲಿ, ಅಂತರಾತ್ಮ ವಾಚ್ಯನು, ಘೋಷದಿಂದ ಪ-ಫ-ಬ-ಭ-ಮ. ಪರಾದಿ ೫ ರೂಪ. ಶಾಂತದಿಂದ = ಯ ರ ಲ ವ - ೪ ಅಕ್ಷರ. ಯಜ್ಞಾದಿ ೪ ರೂಪಗಳು, ಘನಸು ತತ್ವದಿ ಪರಮ=ಮಹತ್ತತ್ವದಲ್ಲಿ, ಪರಮಾತ್ಮಾ= ಇಲ್ಲಿ ಅತಿರಾಂತ ರೂಪದಿಂದ ೫ ಅಕ್ಷರ, ಶ-ಷ-ಸ-ಹ-ಳ ಶಾಂತಾದಿ ೫ ರೂಪಗಳು, ಅವ್ಯಕ್ತ ತತ್ವ=ಆನಂದಮಯದಲ್ಲಿ ಜ್ಞಾನಾತ್ಮ ರೂಪ, ಕ+ಷ ಮಿಳಿತ ಕ್ಷ=ಕ್ಷಂ ಲಕ್ಷ್ಮೀನರಸಿಂಹ, ಜೀವೆ || ಇನಿತು = ಈ ಪ್ರಕಾರವಾಗಿ ಪಂಚಾಶದ್ವರಣವೇದ್ಯನ=೫೧ ವರಣಗಳ ಪ್ರತಿಪಾದ್ಯನಾದ-ಅಜಾದಿ ಕ್ಷಂ ಲಕ್ಷ್ಮೀ ಪರಿಯಂತವಾಗಿ ೫೧ ಮೂರ್ತಿಗಳನ್ನು ಸದಾ=ನಿರಂತರ-ಎಲ್ಲ ಕಾಲದಲ್ಲಿಯೂ, ಸರ್ವತ್ರ ದೇಹಗಳಲ್ಲಿ=ಕಾರಣರೂಪವಾದ ಲಿಂಗ ದೇಹದಲ್ಲಿ ಚಿಂತಿಸಿದಂತೆ, ಅವ್ಯಕ್ತ ಅನಿರುದ್ಧ-ಸ್ಥೂಲ ದೇಹಗಳಲ್ಲಿ ಜ್ಞಾನಿಗಳಿಂದ ವಿಶ್ವಾದಿ ಅಷ್ಟವರ್ಗ ಜನಿತ ಅಜಾದಿ ೫೧ ರೂಪಗಳ ವ್ಯಾಪ್ತಿಕಾರ್ಯವನ್ನರಿತು ಪೂಜಿಸುವದು=ಪೂಜಾ ಮಾಡುವದೆಂದು ಆಜ್ಞಾಪಿಸಿರುವರು. ಈ ರೂಪಗಳ ವಿವರ ತಂತ್ರಸಾರದಲ್ಲಿ ಸರ್ವಜ್ಞರು ಹೇಳಿದ್ದಾರೆ.

**ದ್ರೌಪದೀಶಪತಿ ವಿಠಲರು :** ಮನದೊಳಾಹಂಕಾರ, ಬಿಂದುವಿನಿಂದ ೫ ರೂಪ, ಐದು ಅಕ್ಷರ=ತ-ಥ-ದ-ಧ-ನ, ಘೋಷದಿಂದ ೫ ರೂಪ, ಐದು ಅಕ್ಷರ=ಪ-ಫ-ಬ-ಭ-ಮ, ಶಾಂತದಿಂದ ೪ ರೂಪ ನಾಲ್ಕು ಅಕ್ಷರ= ಯ-ರ-ಲ-ವ, ಅತಿಶಾಂತದಿಂದ ೫ ರೂಪ, ಐದು ಅಕ್ಷರ=ಶ-ಷ-ಸ-ಹ-ಳ, ಕ, ಷ ಸಂಯೋಗವೇಕ್ಷ, ೧ ಅಕ್ಷರ ಪ್ರತಿಪಾದ್ಯ ಲಕ್ಷ್ಮೀನರಸಿಂಹ. ಅಂತು ಐವತ್ತೊಂದು ಅಕ್ಷರ ೫೧ ರೂಪ, ೧೯—ಮೂರ್ತಿ ವಿವರ—ಲಿಂಗದಾಗ ವಿಶ್ವ ೧೬, ತೈಜಸ-ಪ್ರಾಜ್ಞ-ತುರ್ಯ ೩, ಅಂತೂ ೧೯ ಕರಣ ೧೦-ಮಾತ್ರಾ ೫ ಭೂತ ೫ ಅಂತೂ ೨೦ ಆತ್ಮರೂಪ.

ಮನ ಅಹಂಕಾರ ಎರಡಕ್ಕೆ ಅಂತರಾತ್ಮ.
ಮಹತ್ತತ್ವ=ಪರಮಾತ್ಮ.

ಅವ್ಯಕ್ತ=ಜ್ಞಾನಾತ್ಮ.

ಈ ಪಂಚಾಶದ್ವರ್ಣ ಮೂರ್ತಿಗಳು ಸರ್ವ ದೇಹದಲ್ಲಿ ಪೂಜಿಸು ಎಂದರೆ ಲಿಂಗ, ಅವ್ಯಕ್ತ, ಅನಿರುದ್ಧ, ಸ್ಥೂಲ ನಾಲ್ಕು ಶರೀರಗಳಲ್ಲಿ. ಕಾರಣ ಲಿಂಗ, ಕಾರ್ಯ ಸ್ಥೂಲ. ॥೨೬॥

**ಭಾವಸೂಚನ :** ಮನ ಇತಿ॥ ತತ್ವಸಾರ ಸಂಗ್ರಹೇ ಪ್ರಪಂಚಿತಂ॥೨೬॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಮನ ಇತಿ ॥ "ಪರಮಾತ್ಮಾ ಶೈವಗೇಹೇ ತತ್ರಾವ್ಯಕ್ತೇ ಪರಾತ್ಮಕಃ"॥ ಇತಿ ಚ ॥ ಅಜಾದಿ ಶಬ್ದ ವೃತ್ತಿಸ್ತು—ಜ್ಞೇಯಾರ್ಣೇಷು ತು ಪೂಜಕೈಃ ॥ ಅನುತ್ಪತ್ತಿ ಸುಖೈಶ್ವರ್ಯಾತ್ ಅಜ ಆನಂದ ಇಂದ್ರಕಃ॥ ರಮಾಯಾಃ ಶಾಸನಾತ್ ರುದ್ರಗ್ರಾಸಕತ್ವಾತ್ ಹರಿಃ ಮತಃ॥ ಈಶ ಉಗ್ರೋ ಬಲಂ ಚೇಷ್ಟಾ ಯದಂಗಂ ಹ್ಯೂರ್ಜ ಇತ್ಯಪಿ। ಋತುಂಭರಃ ಸತ್ಯ ಜಗದ್ಧಾರಣಾತ್ ಪುತ್ರಹತ್ಯಯಾ । ಋಂದನುಂ ಘಾತಯತ್ಯೇವ ಋಘಃಕ್ಲೇಶಂ ಪ್ರಯಚ್ಛತಿ। ಅದಿತೇಃ ಸುಖದಾತೃತ್ವಾತ್ ಲೃಶಃ ಶ್ರೀಶಃ ಹರಿಃ ಮತಃ। ಸುತಹತ್ಯಾದಿತಿಂ ನೇತಾ ಲೄಜಿರೀಶೋ ಮಹಾನಯಮ್ । ಏಕಾತ್ಮಾ ಶ್ರೇಷ್ಠಸ್ವಾಮಿತ್ವಾತ್ ಹರರಂತ್ಯೈರ ಇತ್ಯಪಿ । ಸಾಮರ್ಥ್ಯ ಧಾರಣಾತ್ ಓಜೋ ಭೃದೀಶೋಜ ಸುತೋ ಯತಃ। ಔರಸಃ ನಾಶಕಶ್ಚಾಂತ್ಯೋಽರ್ಥಾಗರ್ಭೇ ಯಸ್ಯತದ್ವಚಃ ॥ ಸುಖಾದಾತೃತ್ವಾತ್ ಪಾಲಕತ್ವಾತ್ ಕಪಿಲಃ ಲಾಲನಾತ್ ಹರಿಃ॥ ಇಂದ್ರಿಯೇಶಃ ತು ಖಪತಿಃ ಶತ್ರೂಣಾಂ ಅಂತಕೃತ್ಯತಃ। ಘರ್ಮಃ ವಿಷಯ ಸಾರತ್ವಾತ್ ಬೀಜಸಾರಃ ಸುಂದರೋ ಯತಃ। ಚಾರ್ವಂಗೋ ವೇದಗಮ್ಯತ್ವಾತ್ ಜನಾರ್ದತ್ವಾತ್ ಜನಾರ್ದನಃ। ಜನನ ಸ್ಯಾರ್ದನಾತ್ ಝೂಟಿತಾರಿಃ ದ್ರಾವಿತ ಶತ್ರುಕಃ । ಞಮೋ ಮಾನಯತಿ ಶ್ರೀಶಃ ವೇದಾದ್ಯೈರಾತ್ಮಗಾಯಕಮ್ । ಟಂಕೀ ಟಂಕ ಕರತ್ವಾತ್ ಸಃ ಮಹೇ ಶೇಂದ್ರ ಸುಖಪ್ರದಃ । ಠಲತಃ ಕೃಷ್ಣವರ್ತ್ಮೇಂದ್ವೋಃ ವಿಶೇಷಾತ್ ಕಾಂತಿ ದಾಯಕಃ। ಡರಕೋ ಮುತ್ತರಮತೋ ಬ್ರಹ್ಮಾಸೇವೇತ್ಯತೋ ಢರೀ। ಣಾತ್ಮಾ ಸುಖಾತ್ಮಕಃ ಯಸ್ಮಾತ್ ಅನಿಷ್ಟಾತ್ ತಾರಯೇತ್ ಯತಃ। ತಾರಃ ಅದ್ರಿ ಧರಣಾತ್ ಥಂಭಃ ದಂಡೀ ಗೋ ಕ್ರೀಡನಾತ್ ಹರಿಃ। ಧನ್ವೀ ನಮ್ಯತ್ವತೋ ನಮ್ಯಃ ಪೂರ್ಣತ್ವಾತ್ ಪರ ಇತ್ಯಪಿ। ಫಲೀ ಫಲಪ್ರದೋ

ದೇವಃ ಬಲಿಷ್ಠತ್ವಾತ್ ಬಲೀ ಹರಿಃ । ಭಗಃ ಷಡ್ಗುಣ ಪೂರ್ಣತ್ವಾತ್ ಬೋಧ ಪೂರ್ತೇರ್ಮನುಸ್ತಥಾ । ಸರ್ವ ಪೂಜ್ಯೋ ಯಜ್ಞನಾಮಾsಪರಿಚ್ಛಿನ್ನೋ ರವೋ ಯತಃ । ರಾಮಃ ಭಕ್ತವೃತೇಃ ಶ್ರೀಶಃ ವರೋ ಹರಿಃ । ಸುಖರೂಪಾತ್ಮಧೀಯುಕ್ತಃ ಶಾಂತಸಂವಿತ್ ಮಧುಂಹರಃ । ಷಡೈಶ್ವರ್ಯೋತ್ಕೃಷ್ಟ ಗಾತ್ರಃ ಸಾರಾತ್ಮಾ ಜಗದೀಶಿತಾ। ಸರ್ವಜ್ಞ ಸಾರೋ ಹಂಸಾಖ್ಯೋ ಮುಕ್ತಾ ಬ್ರಹ್ಮೇಂದ್ರಯೋಃ ಸುಖಮ್ । ಯಸ್ಮಾತ್ ಲಾಲುಕನಾಮಾಸೌ ಪಂಚಾಶನ್ನಾಮಭಿಃ ಶ್ರುತಃ । ನೃಸಿಂಹಃ ಇತಿ । ೨೬ ।

## ಕನ್ನಡಾರ್ಥ

“ಮಹತ್ತತ್ವದಲ್ಲಿ ಪರಮಾತ್ಮ ರೂಪದಿಂದ ಮತ್ತು ಅವ್ಯಕ್ತ ತತ್ವದಲ್ಲಿ ಜ್ಞಾನಾತ್ಮ ರೂಪದಿಂಡ ಹೀಗೆ ಎಂಟು ರೂಪಗಳನ್ನು ತಿಳಿಯಬೇಕು” ಎಂದು ಶ್ರೀಮದಾಚಾರ್ಯರ ವಚನವಿರುತ್ತದೆ.

ಅಜ ಮುಂತಾದ ಐವತ್ತು ವರ್ಣವಾಚ್ಯವಾದ ರೂಪಗಳನ್ನು ತಿಳಿಯುವದಕ್ಕೆ ಅಜ ಮುಂತಾದ ಶಬ್ದಗಳ ಅರ್ಥಗಳನ್ನು ತಿಳಿದುಕೊಳ್ಳಬೇಕು ; ಎಂದೂ ಅವರು ಹೇಳಿರುತ್ತಾರೆ. ಆದುದರಿಂದ ಆ ಅರ್ಥಗಳನ್ನು ಇಲ್ಲಿ ವಿವರಿಸುತ್ತೇವೆ.

(೧) ಅ. ಅಜ—ಜನನವಿಲ್ಲದವನು. (೨) ಆ. ಆನಂದ—ಆನಂದ ರೂಪನು. (೩) ಇ. ಇಂದ್ರ—ಪರಮೈಶ್ವರ್ಯವಂತನು. (೪) ಈ. ಈಶ—ಮಹಾಲಕ್ಷ್ಮಿಗೂ ನಿಯಾಮಕನು ; ಲಕ್ಷ್ಮೀಪತಿ. (೫) ಉ. ಉಗ್ರ—೧ ರುದ್ರನನ್ನು ಸಂಹರಿಸುವವನು, ೨. ಪಾಪಿಗಳಿಗೆ ಕ್ರೂರನು. (೬) ಊ. ಊರ್ಜ—ನಿಸ್ಸೀಮವಾದ ಬಲ-ಕ್ರಿಯಾ-ಶಕ್ತಿಗಳುಳ್ಳವನು. (೭) ಋ. ಋತಂಭರ—ಸತ್ಯ ಜಗತ್ತನ್ನು ಧರಿಸುವವನು. ( ಪೋಷಿಸುವವನು. ) (೮) ೠ. ೠಘ—ಮಕ್ಕಳನ್ನು ಸಂಹರಿಸುವದರಿಂದ ದನುವಿಗೆ ( ದಾನವರ ತಾಯಿಗೆ ಕ್ಲೇಶವನ್ನುಂಟುಮಾಡುವವನು. (೯) ಌ. ಌಶಃ– ದೇವಮಾತೆಯಾದ ಅದಿತಿಗೆ ಸುಖಪಡಿಸುವವನು. (೧೦) ೡ. ೡಜಿ—ದಿತಿ ದೇವಿಯನ್ನು ವಿಷಾದಪಡಿಸುವವನು (೧೧) ಏ. ಏಕಾತ್ಮ—ಮುಖ್ಯಸ್ವಾಮಿಯು. (೧೨) ಐ. ಐರ—ರುದ್ರನನ್ನು ಸಂತೋಷಗೊಳಿಸುವವ. (೧೩) ಓ. ಓಜೋಭೃತ್—ನಿರತಿಶಯವಾದ ಸಾಮರ್ಥ್ಯವುಳ್ಳವನು. (೧೪) ಔ. ಔರಸ—

ಬ್ರಹ್ಮನೇ ಮಗನಾಗಿ ಉಳ್ಳವನು. (೧೫) ಅಂ. ಅಂತ—ಪ್ರಳಯಕಾಲದಲ್ಲಿ ಸರ್ವ ಜಗತ್ತನ್ನೂ ಸಂಹರಿಸುವವನು. (೧೬) ಅಃ. ಅರ್ಧಗರ್ಭ—ಬ್ರಹ್ಮಾದಿಗಳು ಯಾವನ ಉದರದಲ್ಲಿರುವರೋ ಅವನು. (೧೭) ಕ. ಕಪಿಲ—ಸುಖರೂಪನು. (ಸಾರಭೋಕ್ತ್ರ)ಜಗತ್ಪಾಲಕನೂ ಕೊನೆಯಲ್ಲಿ ಸಂಹರಿಸುವವನು. (೧೮) ಖ. ಖಪತಿ—ಇಂದ್ರಿಯಗಳಿಗೆ ನಿಯಾಮಕನು-ಪ್ರೇರಕನು. (೧೯) ಗ. ಗರುಡ—ಗರುಡನ ಮೇಲೆ ಕುಳಿತವನು. (೨೦) ಘ. ಘರ್ಮ—ಶತ್ರುಗಳನ್ನು ನಾಶಗೊಳಿಸುವವನು. (೨೧) ಙ. ಙಸಾರ—ವಿಷಯಗಳಲ್ಲಿ ಸಾರರೂಪದಿಂದ ಇರುವವನು. (೨೨) ಚ. ಚಾರ್ವಾಂಗ—ಸುಂದರವಾದ ಅವಯವವುಳ್ಳವನು. (೨೩) ಛ. ಛಂದೋಗಮ್ಯ—ವೇದಗಳಿಂದ ತಿಳಿಸಲ್ಪಡುವವನು. (೨೪) ಜ. ಜನಾರ್ದನ—ಜನನವಿಲ್ಲದವನು ಹಾಗೂ ಸಂಸಾರನಾಶಕನು. (೨೫) ಝ. ಝಾಟತಾರಿ—ಶತ್ರುಗಳನ್ನು ಪರಾಭವಗೊಳಿಸುವವನು. (೨೬) ಞ—ಞಮಃ—ವೇದ ಮುಂತಾದವುಗಳಿಂದ ತನ್ನನ್ನು ಹೊಗಳುವವನನ್ನು ಮೋಕ್ಷಾದಿಗಳನ್ನು ಕೊಟ್ಟು ಸನ್ಮಾನಗೊಳಿಸುವವನು. (೨೭) ಟ. ಟಂಕೀ—ಟಂಕವೆಂಬ ಆಯುಧವನ್ನು (ಕಲ್ಲನ್ನು ಸೀಳುವದು) ಕೈಯಲ್ಲಿ ಹಿಡಿದವನು. (೨೮) ಠ. ಠಲಕ—ರುದ್ರ-ಇಂದ್ರರಿಗೆ ಸುಖವನ್ನು ಕೊಡುವವನು. (೨೯) ಡ. ಡರಕ—ಚಂದ್ರ-ಅಗ್ನಿ ಇವರಿಗೆ ವಿಶೇಷವಾದ ಕಾಂತಿಯನ್ನು ಕೊಡತಕ್ಕವನು. (೩೦) ಢ. ಢರೀ—ಮುಕ್ತರಿಗೆ ಆನಂದಿಸುವ ಬ್ರಹ್ಮನೇ ಪುತ್ರನಾಗಿ ಉಳ್ಳವನು. (೩೧) ಣ ಣಾತ್ಮಾ—ಸುಖಸ್ವರೂಪನು. (೩೨) ತ. ತಾರಃ—ಸಂಸಾರದಿಂದ ತರಿಸುವವನು; (ದಾಟಿಸುವವನು) (೩೩) ಥ. ಥಭ—ಗೋವರ್ಧನ ಪರ್ವತವನ್ನು ಧರಿಸಿದವನು. (೩೪) ದ. ದಂಡೀ—ಗೋವುಗಳನ್ನು ಆಡಿಸಲಿಕ್ಕೆ ಕೋಲನ್ನು ಹಿಡಿದವನು. (೩೫) ಧ. ಧನ್ವೀ—ಶಾರ್ಙವೆಂಬ ಧನುಸ್ಸನ್ನು ಹಿಡಿದವನು. (೩೬) ನ. ನಮ್ಯ—ಸರ್ವರಿಂದಲೂ ವಂದನೀಯನು. (೩೭) ಪ. ಪರಃ—ಗುಣಪೂರ್ಣನು. (೩೮) ಫ—ಫಲೀ—ಫಲವೀಯುವ ಸ್ವಾಮಿಯು. (೩೯) ಬ. ಬಲಿ—ಅಮಿತವಾದ ಬಲವುಳ್ಳವನು. (೪೦) ಭ. ಭಗ—ಪೂರ್ಣಜ್ಞಾನಾದಿ ಷಡ್ಗುಣೈಶ್ವರ್ಯಸಂಪನ್ನನು. (೪೧) ಮ. ಮನು—ಪೂರ್ಣಜ್ಞಾನರೂಪಿಯು. (೪೨) ಯ. ಯಜ್ಞ—ಎಲ್ಲರಿಂದಲೂ ಪೂಜಿಸಲ್ಪಡು

ವವನು. (೪೩) ರ. ರಾಮ—ಅಪರಿಮಿತವಾದ ರಮಣ (ಸುಖ)ವುಳ್ಳವನು ಅಥವಾ ಭಕ್ತರನ್ನು ಸುಖಿಸುವವನು. (೪೪) ಲ. ಲಕ್ಷ್ಮೀಪತಿ—ಮಹಾ ಲಕ್ಷ್ಮೀದೇವಿಯ ಪತಿಯು. (೪೫) ವ. ವರ—ಎಲ್ಲರಿಂದಲೂ ಮೋಕ್ಷಕ್ಕಾಗಿ ವರಿಸಲ್ಪಡುವವನು. (೪೬) ಶ. ಶಾಂತ ಸಂವಿತ್—ಸುಖರೂಪವಾದ (ಸುಖ ದಾಯಕ) ಬುದ್ಧಿಯುಳ್ಳವನು. (೪೭) ಷ. ಷಡ್ಗುಣಾತ್ಮಾ—ಶ್ರೀ ಕಾಮ ಮಾಹಾತ್ಮ್ಯ ಮುಂತಾದ ಷಡ್ಗುಣ ಸಂಪನ್ನನು. (೪೮) ಸ. ಸಾರಾತ್ಮಾ—ಅಪ್ರಾಕೃತ ಚಿದಾನಂದಮಯವಾದ ದೇಹವುಳ್ಳವನು. (೪೯) ಹ. ಹಂಸ—ಪ್ರಲಯಕಾಲದಲ್ಲಿ ಸರ್ವವನ್ನೂ ಸಂಹರಿಸುವವನು; ಸರ್ವಜ್ಞನು. (೫೦) ಳಾಳ. ಳಾಳುಕಃ–ಮುಕ್ತರಿಗೂ, ಬ್ರಹ್ಮರುದ್ರರಿಗೂ ಸುಖವನ್ನುಂಟುಮಾಡು ವವನು. ಪುರುಷೋತ್ತಮನಾದ ನಾರಾಯಣನು ಹೀಗೆ "ಅಜ"ಮುಂತಾದ ಐವತ್ತು ವರ್ಣಗಳಿಂದ ಹೇಳಲ್ಪಡುವವನು. ।೨೬।

**ಅವತರಣಿಕಾ :** ಇಪ್ಪತ್ತು ನಾಲ್ಕು ತತ್ವ-ತತ್ವ ಪತಿಗಳಲ್ಲಿ ವ್ಯಾಪ್ತವಾಗಿರುವ ಕಾರಣ ಕಾರ್ಯ ರೂಪಗಳನ್ನು ಒಟ್ಟಿಗೆ ನಿರೂಪಿಸುತ್ತಾರೆ.

**ಮೂಲ :**

**ಚತುರವಿಂಶತಿ ತತ್ವದೊಳು ತ ।**
**ತ್ಪತಿಗಳೆನಿಸುವ ಬ್ರಹ್ಮಮುಖ ದೇ ।**
**ವತೆಗಳೊಳು ಹದಿಮೂರು ಸಾವಿರದೆಂಟು ನೂರಧಿಕ ॥**
**ಚತುರ ವಿಂಶತಿ ರೂಪದಿಂದಲಿ ।**
**ವಿತತನಾಗಿದ್ದೆಲ್ಲರೊಳು ಪ್ರಾ ।**
**ಕೃತ ಪುರುಷನಂದದಲಿ ಪಂಚಾತ್ಮಕನು ರಮಿಸುವನು ॥ ೨೭ ॥**

**ಪದ್ಯಾರ್ಥ :** ಚತುರವಿಂಶತಿ ತತ್ವದೊಳು-ಇಪ್ಪತ್ತು ನಾಲ್ಕು ತತ್ವ ಗಳಲ್ಲಿ, ತತ್ಪತಿಗಳೆನಿಸುವ–ಬ್ರಹ್ಮ ಮುಖ ದೇವತೆಗಳೊಳಗೆ, ಬ್ರಹ್ಮಾದಿ ಮೊದಲು ಮಾಡಿಕೊಂಡು, ತತ್ವಾಭಿಮಾನಿ ಧರಾಶರ್ನೇಶ್ವರ ತತ್ವಗಳಲ್ಲಿ, ತತ್ವಕಲಾಭಿಮಾನಿಗಳಲ್ಲಿ ಹದಿಮೂರು ಸಾವಿರದಾ ಎಂಟುನೂರು ಅಧಿಕ, ಚತುರ ವಿಂಶತಿ ರೂಪ-೧೩೮೭೪ ರೂಪಗಳಿಂದ (ಈ ರೂಪಗಳು ಕಾರ್ಯಗಳ ವಿವರ ಜ್ಞಾನಿಗಳಿಂದೇ ತಿಳಿಯಬೇಕು. ಮನುಜರಿಂದ ಅಸಾಧ್ಯ) ವಿತತ ನಾಗಿದ್ದೆಲ್ಲರೊಳು–ವ್ಯಾಪ್ತನಾಗಿದ್ದು ಎಲ್ಲ ಜೀವಿಗಳ ಒಳಗೆ, ತಾನಿದ್ದು

ಪ್ರಾಕೃತ ಪುರುಷನಂದದಿ-ಸಚ್ಚಿದಾನಂದಾತ್ಮಕ ತಾನಾದರೂ, ಲೋಕವತ್ತು ಲೀಲಾಮಾನುಷ ಪ್ರಾಕೃತ ಮನುಷ್ಯನಂತೆ (ಈ ಶಬ್ದ ಪ್ರಯೋಗವು ಬಹು ಸಮಂಜಸವಾಗಿದೆ. ಸೂಕ್ಷ್ಮದರ್ಶಿಗೆ ಗೋಚರ) ಪಂಚಾತ್ಮಕನು-ಅನಿರುದ್ಧಾದಿ ೫ ರೂಪಗಳಿಂದ ರಮಿಸುವನು-ವಿಹಾರ ಮಾಡುತ್ತಾನೆ.

**ದ್ರೌಪದೀಶಪತಿ ವಿಠಲರು :** ಚತುರವಿಂಶತಿ ತತ್ವದೊಳು ೧೩೮೨೪ ರೂಪದಿಂದ ಪಂಚಾತ್ಮಕ ರಮಿಸುತ್ತಾನೆಂದರೆ, ಮೂಲ ನಾರಾಯಣ ಇವನಿಂದ ವಾಸುದೇವಾದಿ ೪ ಅಂಶ ಇದರಿಂದ ಬ್ರಹ್ಮಾಂಡ ಪಿಂಡಾಂಡಗಳಲ್ಲಿ ವ್ಯಾಪ್ತನಾದ ಅಂಶಾಂಶ ರೂಪಗಳು, ಅವತಾರ ರೂಪಗಳು ಸಹ ಪಂಚಾತ್ಮಕವಾದ ಪ್ರಯುಕ್ತ ವಿಹಾರ ಮಾಡುತ್ತಾನೆ.

**ಭಾವಸೂಚನ :** ಚತುರೇತಿ ॥ ತದುಕ್ತಂ ಪ್ರಮೇಯ ಭಾಸ್ಕರೇ ॥ ತ್ರಯೋದಶ ಸಹಸ್ರರೂಪೈರಷ್ಟ ಶತಾಧಿಕೈಃ ॥ ಚತುರ್ವಿಂಶತಿಭಿಃ ಶ್ರೀಶೋ ಪ್ಯಾಸ್ತೇ ಪಂಚಾತ್ಮಕಃ ಸುತೇತಿ ॥ ೨೭ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಚತುರೇತಿ" ॥ ತ್ರಯೋದಶ ಸಹಸ್ರಾಷ್ಟ ಶತರೂಪೈಶ್ಚ ತತ್ವಗಃ ॥ ಚತುರ್ವಿಂಶತಿ ರೂಪಾತ್ಮಾ ತಾತ್ವಿಕೇಷು" ॥ ಇತಿ ತತ್ವ ರಹಸ್ಯೇ ॥ ೨೭ ॥

**ಕನ್ನಡಾರ್ಥ**

ತತ್ವಾಭಿಮಾನಿ ದೇವತೆಗಳಲ್ಲಿಯೂ ತತ್ವಗಳಲ್ಲಿಯೂ ಇರುವ ಪಂಚರೂಪೀ ಹರಿಯ ರೂಪಗಳ ಸಂಖ್ಯೆಯ ಬಗ್ಗೆ "ತತ್ವ ರಹಸ್ಯ"ವೆಂಬ ಪ್ರಮಾಣ ಗ್ರಂಥದ ಆಧಾರವನ್ನು ಕೊಡುತ್ತಾರೆ. "೧೩೮೨೪ ರೂಪಗಳು" ಎಂದು ಶ್ಲೋಕದ ಅರ್ಥ.

**ವಿಶೇಷ ಸೂಚನೆ:** ಸ್ಥೂಲ ದೇಹದಲ್ಲಿ ೨೪ ತತ್ವಗಳು ಹೇಗಿವೆ, ಮತ್ತು ತತ್ವನ್ಯಾಸ ಕ್ರಮ ಹೇಗೆ ೧) ಅವ್ಯಕ್ತ, ಮಹತ್ತತ್ವ, ಅಹಂಕಾರ ತತ್ವಗಳೆಲ್ಲಿರುವವು, ೨) ಉಳಿದ ೨೦ ತತ್ವಗಳು, ಅಭಿಮಾನಿ ದೇವತೆಗಳನ್ನು ತತ್ವನ್ಯಾಸದಲ್ಲಿ ಚಿಂತನ ಮಾಡುವ ಕ್ರಮ. ಹತ್ತು-ಕರಗಳ ಅಂಗುಲಿಯಲ್ಲಿ ೧೦ ತತ್ವ. ಪಾದಾಂಗುಲಿಗಳಲ್ಲಿ ಹತ್ತು ತತ್ವ, ಏಕೆ ಚಿಂತನೆ ಮಾಡಬೇಕು, ೩) ಶಕ್ತಿ ಪ್ರತಿಷ್ಠಾ ೧೧ ರೂಪಗಳು ಮಾಲಾಕಾರವಾಗಿ ಹೃದಯದಲ್ಲಿರುವವೆಂದು ಹೃದಯದಲ್ಲಿ ಮಾಲಾಕೃತಿ ಮುಟ್ಟಿಕೊಳ್ಳುವ ಬಗೆ ಹೇಗೆ? ಇದರ

ವಿಚಾರವೇನೆಂಬುದು ಅನೇಕರು ಪ್ರಶ್ನೆ ಮಾಡಿದ್ದಾರೆ. ಅವರಿಗೆಲ್ಲ ಉತ್ತರ ಶ್ರೀ ವಿಜಯರ ವಾಕ್ಯದಂತೆ ಹೇಳುತ್ತ ನಡೆದಿದೆ. ಪ್ರಸ್ತುತ "ಚತುರವಿಂಶತಿ ತತ್ವ-ತತ್ಪತಿಗಳೆನಿಸುವ ದೇವತೆಗಳು" ಎಂಬುವಲ್ಲಿ ವಿಶೇಷ ವಿವೇಚಿಸುತ್ತದೆ.

ಸ್ಥೂಲ ದೇಹದಲ್ಲಿ ಅನ್ನಮಯಾದಿ ೫ ಕೋಶಗಳು. ಅದರಲ್ಲಿ ೨೪ ಕೋಶಗಳಿರುವವೆಂದು ಶ್ರೀ ವಿಜಯದಾಸರು ಪಂಚಕೋಶ ವಿವರ ಸುಳಾದಿ ಸೃಷ್ಟಿಪ್ರಕರಣ ಪುಟ ೧೩೧ರಲ್ಲಿ ಹೇಳಿದ್ದಾರೆ. ೧) ಪೃಥ್ವಿ, ೨) ಗಂಧ, ೩) ಘ್ರಾಣ, ೪) ಉಪಸ್ಥ, ೫) ಜಲ, ೬) ರಸ, ೭) ಜಿಂಹ್ವೆ, ೮) ಪಾಯು, ಈ ಎಂಟು ತತ್ವಗಳು ಅನ್ನಮಯದಲ್ಲಿ. ೧) ತೇಜಸ್ಸು, ೨) ರೂಪ, ೩) ಚಕ್ಷುಷ, ೪) ಪಾದ, ೫) ಮಾರುತ, ೬) ಸ್ಪರುಶ, ೭) ತ್ವಕು, ೮) ಪಾಣಿ, ೯) ಗಗನ, ೧೦) ಶಬ್ದ, ೧೧) ಶ್ರೋತ್ರ, ೧೨) ವಾಕು. ಈ ಹನ್ನೆರಡು ತತ್ವ ಪ್ರಾಣಮಯದಲ್ಲಿ. ೧) ಮನಸ್ಸು, ೨) ಅಹಂಕಾರ ಮನೋಮಯದಲ್ಲಿ. ೧ ಮಹತ್ತತ್ವ ವಿಜ್ಞಾನಮಯದಲ್ಲಿ. ೧ ಅವ್ಯಕ್ತ ತತ್ವ ಆನಂದಮಯದಲ್ಲಿ. ಹೀಗೆ ಇರುವ ಕಾಲಕ್ಕೆ ೨೪ ತತ್ವಗಳಿಗೆ ರಸ ವಿಭಾಗ ಮಾಡುವ ನಾಡಿಗಳು ಉಂಟು, ಆ ನಾಡಿಗಳು ೨೪ ತತ್ವಗಳಲ್ಲಿ ಹೇಗೆ ಇರುವವು ಎಂಬ ವಿಚಾರ ಮುಂದೆ ಸೃಷ್ಟಿ ಪ್ರಕರಣ ಸುಳಾದಿ ೪೨, ಪುಟ ೨೭೫-೨೭೬ ನಾಡಿ ಪ್ರಕರಣದಲ್ಲಿ **ಸುಳಾದಿ.**

"ಇಪ್ಪತ್ತು ನಾಲ್ಕು ನಾಡಿ ಮೊದಲಾದ ನಾಡಿಯೊಳು । ತಾ ಪ್ರಧಾನವಾಗಿ ಇಪ್ಪವು ಇದರೊಳು ತಪ್ಪದೆ ನಾಲ್ಕು ನಾಡಿ ಬಲಗಡೆ ಪೊಂದಿಪ್ಪವು । ಒಪ್ಪದಿಂದಲಿ ನೋಡಿ ಉಳಿದ ನಾಡಿಗಳು । ಇಪ್ಪತ್ತು ಇವೆ ಊರ್ಧ್ವ ಅಧೋಮುಖ ವರ್ಧಿರ್ಘಾ । ಗಪ್ಪನೆ ಮೇಲುಗಡೆ ಹಬ್ಬಿದ ಹತ್ತುನಾಡಿ । ಇಪ್ಪೆಸರು ಲಾಲಿಸುವದು ಶ್ರುತಿಸ್ಮೃತಿ ಸಮ್ಮತ"ವೆಂದು ಧ್ರುವತಾಳದಲ್ಲಿ ಹೇಳಿದ್ದಾರೆ. ೧೦ ಹತ್ತು ನಾಡಿ ಹೃದಯ ಕಂಠ ಪರಿಯಂತ ಊರ್ಧ್ವಕ್ಕೆ ಹೋಗಿ ಬಲಭುಜದಿಂದ ಬಲಕೈ ಹಸ್ತ ಬೆರಳು ಕೊನೆವರೆಗೆ ೫ ನಾಡಿಗಳು ಪಸರಿಸಿ ಇರುತ್ತವೆ. ಎಡಗೈ ಬಾಹುವಿನಿಂದ ೫ ನಾಡಿಗಳು. ಎಡಹಸ್ತ ೫ ಬೆರಳು ಕೊನೆಗೆ ಮುಟ್ಟಿವೆ. ಮತ್ತು ಅಧೋಭಾಗ ಪಸರಿಸಿದವು ೫ ನಾಡಿಗಳು ಬಲಪಾದಾ ಪಂಚಾಂಗಲಿಲಿಗೆ ಮತ್ತು ೫ ನಾಡಿಗಳು ಎಡಪಾದ ಪಂಚಾಂಗುಲಿಗಳವರೆಗೆ ಮುಟ್ಟಿವೆ.-ಎಂದು ಎರಡನೇ ಗ್ರಂಥಾಧಾರ ಜ್ಞಾನಿ

ಗಳಿಗೆ ಸಮ್ಮತವಾದ ಕಾರಣ. ಬಲಹಸ್ತ ಐದು ಅಂಗುಲಿಗಳಲ್ಲಿ ಪಂಚ ಜ್ಞಾನೇಂದ್ರಿಯಾದಿ ತ್ವಗಾದಿ ತತ್ವ ತದಭಿಮಾನಿ ದೇವತೆಗಳನ್ನು ಚಿಂತಿಸಿ ಅಂಗುಲಿಗಳನ್ನು ಸ್ಪರ್ಶ ಮಾಡುವದು, ಪಂಚಕರ್ಮೇಂದ್ರಿಯಾದಿ ವಾಗಾದಿ ಪಂಚ ತತ್ವಗಳನ್ನು ತತ್ವಪತಿಗಳನ್ನು ಚಿಂತಿಸಿ ೫ ಎಡಗೈ ಬೆರಳು ಮುಟ್ಟು ವದು. ಇದರಂತೆ ಅಧೋಮುಖವಾಗಿದ್ದ ೫ ನಾಡಿಗಳು ಬಲಪಾದ ಅಂಗು ಲಿಗೆ ಪಸರಿಸಿವೆ. ಇಲ್ಲಿ ಪಂಚತನ್ಮಾತ್ರಾ ಶಬ್ದಾದಿ ೫ ತತ್ವಗಳನ್ನು ತದಭಿ ಮಾನಿ ದೇವತೆಗಳನ್ನು ಚಿಂತಿಸಿ, ಬಲಪಾದಾಂಗುಲಿ ಐದು ಬೆರಳನ್ನು ಮುಟ್ಟು ವದು. ಉಳಿದ ೫ ನಾಡಿಗಳು ಎಡಕಾಲು ಆರಂಭಿಸಿ ಎಡಪಾದಾಂಗುಲಿಗೆ ವ್ಯಾಪಿಸಿವೆ. ಇಲ್ಲಿ ಪಂಚಭೂತ ಪ್ರಥಿವ್ಯಾದಿ ಐದು ತತ್ವಗಳು. ತತ್ಪತಿ ದೇವತೆಗಳನ್ನು ಚಿಂತಿಸಿ ಎಡಪಾದಾಂಗುಲಿಗಳನ್ನು ಮುಟ್ಟುವದೆಂದು ಶಾಸ್ತ್ರ ನಿಯಮದಂತೆ ಶ್ರೀ ಸರ್ವಜ್ಞರು ತಂತ್ರಸಾರದಲ್ಲಿ ಹೇಳಿದ್ದಾರೆ. ಈ ಇಪ್ಪತ್ತು ನಾಲ್ಕು ನಾಡಿಗಳ ಹೆಸರು ಹೇಳಿಲ್ಲ. ಇನ್ನು ತತ್ವ ಮಂತ್ರಗತ ಧ್ಯಾನ ಶ್ಲೋಕ ರೂಪಗಳು. ಮಾಲಾಕಾರವಾಗಿ ಹೃದಯದಲ್ಲಿ ಚಿಂತಿಸುವ ಬಗೆ ಏನೆಂದರೇ, ಹೃದಯಾಷ್ಟದಳ ಕಮಲಗಳಲ್ಲಿ ಈ ಹನ್ನೆರಡು ರೂಪವಿವೆ. ದಿಗ್ದಳದಲ್ಲಿ ೨-೨ ರೂಪ, ವಿದಿಕ್ಕಿನಲ್ಲಿ ೧-೧ ಹೀಗೆ ದಳ (೪) ರಲ್ಲಿ ೪ ರೂಪ ಹೀಗೆ ೧೨ ರೂಪ. ೧೧ ಸ್ತ್ರೀರೂಪ ಒಂದು ಪುರುಷ ರೂಪ ಚಿಂತಿಸ ಬೇಕೆಂದು ಆಜ್ಞಾಪಿಸಿದ್ದಾರೆ. ಇದರ ವಿವರ-ಶ್ರೀ ಪ್ರಾಣೇದಾಸಾರ್ಯರು "ಹೃದಯ ಮಂದಿರ ವಿವರ" ಧ್ಯಾನೋಪಾಸನೆ ಪದ (ಉಪಾಸನಾ ಭಾಗ ದಲ್ಲಿದೆ) ನುಡಿ ೫-೬ರಲ್ಲಿ ಶಕ್ತಿ ಪ್ರತಿಷ್ಠಾ ರೂಪ ಇರುವ ಬಗೆ ಪೇಳಿದ್ದಾರೆ. "ಮಲ್ಲರಿಪು ಅಷ್ಟಪತ್ರದೊಳಗೆ ದ್ವಿಷಡ್ರೂಪದಲ್ಲಿಹ ವಿವರ ಕೇಳಿ ಆದರದಲಿ ॥ ಎರಡೆರಡು ದಿಕ್ಕಿನಲಿ ಒಂದೊಂದು ವಿದಿಕ್ಕಿನಲಿ। ಎರಡೈದು ಒಂದು ಸ್ತ್ರೀ (೧೧) ಒಂದು ಪುರುಷಾ ॥ ಪರಮ ಪಾವನನಾದ ಈ ಹನ್ನೆರಡು ರೂಪ ಗುರು ಮಧ್ವ ಮುನಿರಾಯರೊರಣಿಸಿಹರೂ ॥ ೬ ॥

ಇವೆಲ್ಲ ರೂಪಗಳನ್ನು ವಿಶ್ವರೂಪ ಧ್ಯಾನೋಪಾಸನಾ ರೂಪ ಹೃದಯ ದಲ್ಲಿ ಮಾಲಾಕಾರ ರೂಪವಾಗಿಯೂ, ಹಸ್ತ ಪಾದಾಂಗುಲಿಗಳಲ್ಲಿ ತತ್ವಾಭಿ ಮಾನಿ ದೇವತೆಗಳನ್ನೂ, ಬಲಭುಜ, ಎಡಭುಜ ಅವ್ಯಕ್ತ ಮಹತ್ತತ್ವಾಭಿ ಮಾನಿಗಳನ್ನೂ, ಬಲತೊಡೆಯಲ್ಲಿ ಅಹಂಕಾರ ತತ್ವಾತ್ಮಕ ಗರುಡ, ಶೇಷ,

ರುದ್ರರನ್ನೂ, ಎಡತೊಡೆಯಲ್ಲಿ ಮಾನಸ ತತ್ವಾಭಿಮಾನಿ ಸ್ಕಂದೇಂಧ್ರರನ್ನು ಚಿತ್ರಿಸಿ ತೋರಿಸಿರುವ ಶ್ರೀ ಗೋಪಾಲದಾಸರ ಕರುಣೆ ಎಂತು? ಹೀಗೆ ಧ್ಯಾನೋಪಾಸನೆ ಚಿತ್ರ ನೋಡಿ ಪ್ರತಿನಿತ್ಯ ಎಲ್ಲ ರೂಪಗಳನ್ನು ಚಿಂತಿಸಲು ಸಾಧನ,ಗೈಸಿದಂತೆ ಗುರುವನುಗ್ರಹದಿಂದ ಹೃದಯದಿ ಬಿಂಬ ಪೊಳೆವ.

ತತ್ವನ್ಯಾಸದಿಂದ ದೇಹಶುದ್ಧಿ, ಮನಸ್ಸು ಪವಿತ್ರ, ಕಾರಣ ಪ್ರತಿನಿತ್ಯ ಗುರುಮಂತ್ರ, ತತ್ವನ್ಯಾಸ, ಮಾತೃಕಾನ್ಯಾಸ ಚನ್ನಾಗಿ ಅರಿತು ಗುರೂಪ ದೇಶದಿಂದ ಮಾಡುವದಾದರೆ ಹರಿಕಥಾಮೃತಸಾರ ಪಠಿಸಲು ಅಧಿಕಾರಿ ಯಾಗುವ. ಇದು ಸೃಷ್ಟಿ ಚಿಂತನ ವಿಚಾರದಲ್ಲಿ ಮುಖ್ಯ.

## ತತ್ವನ್ಯಾಸ–ಮಂತ್ರ ವಿಚಾರ

ಮೊದಲಿಗೆ ದ್ವಾದಶಗುರು ನಮಸ್ಕಾರ. ಶ್ರೀ ಗುರುಭ್ಯೋ ನಮಃ ಆರಂ ಭಿಸಿ ಶ್ರೀ ವಾಸುದೇವಾಯ ನಮಃ ಎಂದು ೧೨ ಜನ ಗುರುಗಳಿಗೆರಗಿ, ಓಂ ನಮೋನಾರಾಯಣಾಯ ನಮಃ" ಎಂದು ಮೂಲ ಮಂತ್ರದಿಂದ ೧೨ ಸಲ **ಪ್ರಾಣಾಯಾಮ** ಮಾಡಿ, ಅಂಗನ್ಯಾಸ ಮಾಡಬೇಕು. ೧) ಓಂ ಭೂ ಅಗ್ನ್ಯಾತ್ಮನೆ ಶ್ರೀ ಅನಿರುದ್ಧಾಯ ಹೃದಯಾಯ ನಮಃ ೨) ಓಂ ಭುವಃ ವಾಯ್ವಾತ್ಮನೇ ಶ್ರೀ ಪ್ರದ್ಯುಮ್ನಾಯ ಶಿರಸೇ ಸ್ವಾಹಾ ॥ ೩) ಓಂ ಸುವಃ ಸೂರ್ಯಾತ್ಮನೇ ಸಂಕರ್ಷಣಾಯ ಶಿಖಾಯೈ ವೌ ಷಟ್ ॥ ೪) ಓಂ ಭೂರ್ಭುವಸ್ವಃ ಪ್ರಜಾಪತ್ಯಾತ್ಮನೇ ಶ್ರೀ ವಾಸುದೇವಾಯ ಕವಚಾಯ ಹುಂ॥ ೫. ಓಂ ಸತ್ಯಂ ಸತ್ಯಾತ್ಮನೇ ನಾರಾಯಣಾಯ ಅಸ್ತ್ರಾಯಫಟ್ ಇತಿ ದಿಗ್ ಬಂಧಃ ॥ ಏತೇಷಾಂ ಮಾತೃ ಮಂತ್ರಾಣಾಂ ಅಂತರ್ಯಾಮಿ ಋಷಿಃ ಶಿರಸಿ । ದೇವೀ ಗಾಯತ್ರೀ ಛಂದಃ ಮುಖೇ । ಶ್ರೀ ನಾರಾಯಣ ದೇವತಾ ಹೃದಯೇ । ಧ್ಯಾನೇ ವಿನಿಯೋಗಃ ॥ "ಓಂ ಪ್ರಧಾನೋಪಮ ವರ್ಣಾನಿ ದ್ವಿಭುಜಾನ್ಯಶೇಷತಃ । ಕೃತಾಂಜಲಿ ಪುಟಾನ್ಯೇವ ಪ್ರಧಾನಂ ತಂ ಹರಿಂ ಪ್ರತಿ ॥

"ಶಕ್ತಿಃ ಪ್ರತಿಷ್ಠಾ ಸವಿಂತ ಸ್ಫೂರ್ತಿ ಪ್ರಕೃತಿರೇವ ಚ ॥ ಕಲಾ ವಿದ್ಯಾ ಮತಿ ರ್ನಿಯತಿ ಮಾಯಾ ಕಾಲಶ್ಚ ಪೂರುಷಃ ಇತಿ ಧ್ಯಾನಂ ॥ ತತ್ವಾಂತರ್ಯಾಮಿ ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ಲಕ್ಷ್ಮೀನಾರಾಯಣ ಪ್ರೇರಣಯಾ ಶ್ರೀ ನಾರಾಯಣ ಪ್ರೀತ್ಯರ್ಥಂ ತತ್ವ

ಪೂರ್ವದಲ್ಲಿ ೭ ಅಡಿ ಎತ್ತರವಾಗಿ ೧೧ ವರ್ಣದಲ್ಲಿ ಅಪರೋಕ್ಷ ಜ್ಞಾನಿಗಳಾದ



[illegible]
ಶೇಷರುದ್ರಾದಿಗಳು

೧ ಬಲಗಾಲ ಸಂಧಿಗಳಲ್ಲಿ
ಟಂಕ್ಯಾದಿ ೫ ರೂಪಗಳು

೧ ಬಲಪಾದಾಂಗುಲಿ ಶಬ್ದಾದಿ ಪಂಚ
ತನ್ಮಾತ್ರಾಭಿಮಾನಿಗಳು

ಎಡಗಾಲಿನಲ್ಲಿ

೧ ಮನಸತತ್ವಾಭಿಮಾನಿಗಳು
ಸ್ಕಂದ ಇಂದ್ರ

೧ ಎಡಕಾಲು ಸಂಧಿಯಲ್ಲಿ ತಾರಾದಿ
೫ ರೂಪಗಳು

೧ ಎಡಪಾದಾಂಗುಲಿ ಆಕಾಶಾದಿ
೫ ತತ್ವಾಭಿಮಾನಿಗಳು

ನ್ಯಾಸ ಮಹಂಕರಿಷ್ಯೇ ॥ ಇದು ಮಂತ್ರ ಮಾಡಿಕೊಳ್ಳುವ ಕ್ರಮದಲ್ಲಿ ಮಾಡಬೇಕು.

ಮುಂದಿನ ತತ್ವ ದೇವತಾ ಚಿಂತನ. ನಿತ್ಯ ಮುಂಜಾನೆ ಸೃಷ್ಟಿಕ್ರಮ, ತತ್ವ ಮಂತ್ರ ಎರಡೂ ಕಾಲ ಚಿಂತನಮಾಡಬೇಕು. ಶಕ್ತ್ಯಾದಿ ೧೨ ರೂಪಗಳು ಇರುವ ಸ್ಥಾನ ಚಿಂತಿಸಿ ಹೃದಯ ಮುಟ್ಟಬೇಕು.

೧. ಹೃತ್ಕಮಲ ಪೂರ್ವದಳ ಬಲಭಾಗ—ಓಂ ಪರಾಯ
ಶಕ್ತ್ಯಾತ್ಮನೇ ಶ್ರೀ ಲಕ್ಷ್ಮೀನಾರಾಯಣಾಭ್ಯಾನಮಃ
೨. ,, ಪೂರ್ವದಳ ಎಡಭಾಗ—ಓಂ ಪರಾಯ
ಪ್ರತಿಷ್ಠಾತ್ಮನೇ ಶ್ರೀ ಲಕ್ಷ್ಮೀನಾರಾಯಣಾಭ್ಯಾನಮಃ
೩. ,, ದಕ್ಷಿಣ ದಳದಲ್ಲಿ—ಓಂ ಪರಾಯ
ಸವಿದಾತ್ಮನೇ ಶ್ರೀ ಲಕ್ಷ್ಮೀನಾರಾಯಣಾಭ್ಯಾನಮಃ
೪. ,, ಪಶ್ಚಿಮದಳ ಬಲಭಾಗ—ಓಂ ಪರಾಯ
ಸ್ಫೂರ್ತ್ಯಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾನಮಃ
೫. ,, ಪಶ್ಚಿಮದಳ ಎಡಭಾಗ—ಓಂ ಪರಾಯ
ಪ್ರವೃತ್ತ್ಯಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾನಮಃ
೬. ,, ನೈರುತ್ಯ ದಳದಲ್ಲಿ—ಓಂ ಪರಾಯ
ಕಳಾತ್ಮನೇ ಶ್ರೀ ಲಕ್ಷ್ಮೀನಾರಾಯಣಾಭ್ಯಾನಮಃ
೭. ,, ಪಶ್ಚಿಮದಳದ ಬಲಭಾಗ—ಓಂ ಪರಾಯ
ವಿದ್ಯಾತ್ಮನೇ ಶ್ರೀ ಲಕ್ಷ್ಮೀನಾರಾಯಣಾಭ್ಯಾನಮಃ
೮. ,, ಪಶ್ಚಿಮದಳದ ಎಡಭಾಗ—ಓಂ ಪರಾಯ
ಮಾಯಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾನಮಃ
೯. ,, ವಾಯುವ್ಯ ವಿದಿಗ್‌ದಳೇ—ಓಂ ಪರಾಯ
ನಿಯತಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾನಮಃ
೧೦. ,, ಉತ್ತರ ದಿಗ್ದಳೇ ಬಲಭಾಗ—ಓಂ ಪರಾಯ
ಮಾಯಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾನಮಃ
೧೧. ,, ಉತ್ತರ ದಿಗ್ದಳೇ ಎಡಭಾಗ—ಓಂ ಪರಾಯ
ಕಾಲಾತ್ಮನೇ ಶ್ರೀ ಲಕ್ಷ್ಮೀನಾರಾಯಣಾಭ್ಯಾನಮಃ

೧೨. ಹೃತ್ಕಮಲ ಈಶಾನ್ಯ ವಿದಿಗ್ದಳೀ—ಓಂ ಪರಾಯ
ಪುರುಷಾತ್ಮನೇ ಶ್ರೀಲಕ್ಷ್ಮೀನಾರಾಯಣಾಭ್ಯಾನಮಃ

ಹೀಗೆ ಹೃದಯಾಷ್ಟ ಕಮಲದ ದಳಗಳಲ್ಲಿ ೧೧ ಸ್ತ್ರೀ ರೂಪ ಒಂದು ಪುರುಷ ರೂಪ ಶ್ರೀಹರಿ ರೂಪಗಳಿರುವವೆಂದು ಚಿಂತಿಸಬೇಕು.

**ಇನ್ನು ಮುಂದೆ ಸೃಷ್ಟಿ ಕ್ರಮದಲ್ಲಿ ಈ ಮೂರು ರೂಪ**

೧. ಹೃತ್ಕಮಲಕರ್ಣಿಕಾಗ್ರಸ್ಥಿತ ಪ್ರಾಜ್ಞನಾಮಕ ಬಿಂಬಾಯನಮಃ
೨. ಕಂಠಸ್ಥ ಸ್ವಪ್ನಾವಸ್ಥಾಪ್ರೇರಕ ತೈಜಸಾಯನಮಃ
೩. ದಕ್ಷಿಣಾಕ್ಷಿ ಸ್ಥಿತಜಾಗ್ರದವಸ್ಥಾಪ್ರೇರಕ, ವಿಶ್ವಾಯನಮಃ
ಈ ವಿಶ್ವನಿಂದಲೇ ಎಲ್ಲ ೨೪ ತತ್ವಗಳ ಕಾರ್ಯ.

ಇನ್ನೂ ಅವ್ಯಕ್ತಾದಿ ೨೪ ತತ್ವಗಳು. ತತ್ವಪತಿಗಳು. ಶ್ರೀಹರಿ ಲಕ್ಷ್ಮಿ ರೂಪಗಳನ್ನು ಚಿಂತಿಸಿ ಆಯಾ ಸ್ಥಾನ ಮುಟ್ಟಬೇಕು. ಸುಮ್ಮಗೆ ಸ್ಥಾನ ಮುಟ್ಟದರೆ ಫಲವಿಲ್ಲ. ಸೃಷ್ಟಿ ಪ್ರಕರಣದಲ್ಲಿ ಹೇಳಿದಂತೆ ೨೪ ಜಡತತ್ವಗಳ ಲಕ್ಷಣ. ಅವುಗಳ ಕಾರ್ಯವು ಶ್ರೀ ಹರಿಯು ಬ್ರಹ್ಮಾಂಡದಲ್ಲಿ ೨೪ ತತ್ವಗಳಲ್ಲಿದ್ದು ಹೇಗೆ ಮಾಡಿಸುವನು. ಪಿಂಡಾಂಡದಲ್ಲಿಯೂ ಸಕಲ ದೇಹಾದಿಗಳಲ್ಲಿಯೂ ಸೂಕ್ಷ್ಮಕಾರಣನಾಗಿ ಸ್ಥೂಲದಲ್ಲಿ ಎಲ್ಲ ಕಾರ್ಯ ಮಾಡಿಸುವನೆಂಬ ಭಾವನೆಯು ಸದಾ ಸ್ಮರಣೆಗೆ ದಾರಢ್ಯವಾಗಿ ಉಳಿಯಲು ೨೪ ತತ್ವ ಅಭಿಮಾನಿ, ೨೪ ಕೇಶವಾದಿ ಲಕ್ಷ್ಮ್ಯಾದಿ ರೂಪಗಳನ್ನು ಧ್ಯಾನಮಾಡತಕ್ಕದ್ದು. ಇದೇ ಮುಖ್ಯ ತಾತ್ಪರ್ಯ.

೨೪ ತತ್ವ ತತ್ವಮಾನಿ ಭಗವದ್ರೂಪ, ಲಕ್ಷ್ಮೀ ರೂಪ—ತತ್ವಗಳಿರುವ ಸ್ಥಾನ ಇದರ ವಿವರ ಪಟ್ಟಿ ಕೊಟ್ಟಿದೆ. ಬೇಸರಿಸದೇ ಮನವರಿತು ನಿತ್ಯ ಧ್ಯಾನಿಸುವದು.

## ೧೬. ತತ್ವನ್ಯಾಸ-ಪಟ

| ತತ್ವ ಸಂಖ್ಯಾ | ತತ್ವನಾಮ (ಓಂ ಪರಾಯ ಎಂದು ಎಲ್ಲ ತತ್ವಗಳಲ್ಲಿ ಉಚ್ಚರಿಸಬೇಕು) | ತತ್ವಾಭಿಮಾನಿಗಳು | ಭಾರತೀರಮಣ ಮುಖ್ಯ ಪ್ರಾಣಾಂತರ್ಗತ | ಲಕ್ಷ್ಮೀ ರೂಪ | ೨೪ ಕೇಶವಾದಿ ರೂಪಗಳು | ಮುಟ್ಟುವ ಸ್ಥಾನ |
|---|---|---|---|---|---|---|
| ೧ | ಅವ್ಯಕ್ತಾತ್ಮನೇ | ಶ್ರೀಲಕ್ಷ್ಮಿ ಮುಖ್ಯಾಭಿಮಾನಿ ಬ್ರಹ್ಮಾಣಿ-ಭಾರತಿ ಅಮುಖ್ಯಾಭಿಮಾನಿಗಳು | ಭಾ.ರ.ಮು. ಪ್ರಾಣ ಅಂತರ್ಗತ | ಶ್ರೀ | ಕೇಶವಾಯನಮಃ | ಬಲಭುಜ |
| ೨ | ೧-ಮಹದಾತ್ಮನೇ | ಬ್ರಹ್ಮವಾಯ್ವಂತರ್ಗತ | – | ಲಕ್ಷ್ಮೀ | ನಾರಾಯಣಾಯನಮಃ | ಎಡಬುಜ |
| | ೨-ವೈಕಾರಿಕ ಬುದ್ಧ್ಯಭಿಮಾನಿ (ಮಹತ್ವ ಪ್ರಬೇಧ) | ಸರಸ್ವತೀ ಭಾರತ್ಯಂತರ್ಗತ | ಭಾ.ರ.ಪ್ರಾ. | ,, | ,, | ,, |
| ೩ | ೧-ಅಹಂಕಾರತತ್ವಾತ್ಮನೇ ವೈಕಾರಿಕ ಮನೋಽಭಿಮಾನಿ | ಗರುಡ-ಶೇಷ ರುದ್ರಾಂತರ್ಗತ | ,, | ಕಮಲಾ | ಮಾಧವಾಯನಮಃ | ಬಲತೊಡಿ |
| | ೨-ಅಹಂಕಾರಾತ್ಮನೇ ತೈಜಸ-ಬುಧ್ಯಾಭಿಮಾನಿ | ಸೌಪರಣಿ-ವಾರುಣಿ-ಪಾರ್ವತ್ಯಂತರ್ಗತ | ,, | ,, | ,, | ,, |



| | | | | | | | |
|---|---|---|---|---|---|---|---|
| ೪ | ಮನಸ್ ತತ್ವಾತ್ಮನೇ ತೈಜಸ ಮನೋಭಿಮಾನಿ | ಇಂದ್ರ-ಕಾಮಾಂತರ್ಗತ | ಭಾ.ರ.ಮು. | ಪದ್ಮಾ | ಗೋವಿಂದಾಯನಮಃ | | ಎಡತೊಡಿ |

## ಪಂಚ ಜ್ಞಾನೇಂದ್ರಿಯ

| | | | | | | | |
|---|---|---|---|---|---|---|---|
| ೫ | ಶ್ರೋತ್ರಾತ್ಮನೇ | ದಿಗ್ ದೇವಾಂತರ್ಗತ | ಭಾ.ರ ಮು. | ಪದ್ಮಿನಿ | ವಿಷ್ಣವೇನಮಃ | ಬಲಗೈ | ಅಂಗುಷ್ಠ |
| ೬ | ತ್ವಗಾತ್ಮನೇ | ಅಹಂಕಾರಿಕ ಪ್ರಾಣಾಂತರ್ಗತ | ,, | ಕಮಲಾಲಯೆ | ಮಧುಸೂದನಾಯನಮಃ | ,, | ತರ್ಜನಿ |
| ೭ | ಚಕ್ಷುರಾತ್ಮನೇ | ಸೂರ್ಯಾಂತರ್ಗತ | ಭಾ.ರ.ಮು. | ರಮಾ | ತ್ರಿವಿಕ್ರಮಾಯನಮಃ | ,, | ಮಧ್ಯಬೆರಳು |
| ೮ | ಜಿಂಹ್ವಾತ್ಮನೇ | ವರುಣಾಂತರ್ಗತ | ,, | ವೃಷಾಕಪಿ | ವಾಮನಾಯನಮಃ | ,, | ಅನಾಮಿಕಾ |
| ೯ | ಘ್ರಾಣಾತ್ಮನೇ | ಅಶ್ವಿನೀ ದೇವಾಂತರ್ಗತ | ,, | ಧನ್ಯಾ | ಶ್ರೀಧರಾಯನಮಃ | ,, | ಕನಿಷ್ಠ ಬೆರಳು |

## ಪಂಚ ಕರ್ಮೇಂದ್ರಿಯ

| | | | | | | | |
|---|---|---|---|---|---|---|---|
| ೧೦ | ವಾಗಾತ್ಮನೇ | ವಹ್ನ್ಯಂತರ್ಗತ | ಭಾ.ರ.ಮು. | ಮಂಗಳೆ | ಹೃಷೀಕೇಶಾಯನಮಃ | ಎಡಗೈ | ಅಂಗುಷ್ಠ |
| ೧೧ | ಪಾಣ್ಯಾತ್ಮನೇ | ದಕ್ಷ ಪ್ರಜೇಶ್ವರಾಂತರ್ಗತ | ,, | ಬುದ್ಧಿ | ಪದ್ಮನಾಭಾಯನಮಃ | ,, | ತರ್ಜನಿ |
| ೧೨ | ಪಾದಾತ್ಮನೇ | ಜಯಂತಾಂತರ್ಗತ | ,, | ಇಂದಿರಾ | ದಾಮೋದರಾಯನಮಃ | ,, | ಮಧ್ಯಬೆರಳು |
| ೧೩ | ಪಾಯ್ವಾತ್ಮನೇ | ಮಿತ್ರನಾಮಕಸೂರ್ಯಾಂತರ್ಗತ | ,, | ಹರಿಣಿ | ಸಂಕರ್ಷಣಾಯನಮಃ | ,, | ಅನಾಮಿಕಾ |
| ೧೪ | ಉಪಸ್ಥಾತ್ಮನೆ | ಸ್ವಾಯಂಭುವ ಮನ್ವಂತರ್ಗತ | ,, | ದಕ್ಷಿಣಾ | ವಾಸುದೇವಾಯನಮಃ | ,, | ಕನಿಷ್ಠ ಬೆರಳು |

## ಶಬ್ದಾದಿ ಪಂಚ ತನ್ಮಾತ್ರಾ

| | | | | | | |
|---|---|---|---|---|---|---|
| ೧೫ ಶಬ್ದಾತ್ಮನೇ | ಬೃಹಸ್ಪತಿ(ದಾಸ)ಪ್ರಾಣಾಂತರ್ಗತ | ಭಾ.ರ.ಮು. | ನಿತ್ಯಾ | ಪ್ರದ್ಯುಮ್ನಾಯನಮಃ | ಬಲಪಾದ | ಅಂಗುಷ್ಠ |
| ೧೬ ಸ್ಪರ್ಶಾತ್ಮನೇ | ಬೃಹಸ್ಪತಿ(ದಾಸ)ಅಪಾನಾಂತರ್ಗತ | ,, | ಆನಂದಾ | ಅನಿರುದ್ಧಾಯನಮಃ | ,, | ತರ್ಜನಿ |
| ೧೭ ರೂಪಾತ್ಮನೇ | ಬೃಹಸ್ಪತಿ(ದಾಸ)ವ್ಯಾನಾಂತರ್ಗತ | ,, | ಸದಾಶ್ರಯೆ | ಪುರುಷೋತ್ತಮಾಯನಮಃ | ,, | ಮಧ್ಯಬೆರಳು |
| ೧೮ ರಸಾತ್ಮನೇ | ಬೃಹಸ್ಪತಿ(ದಾಸ)ಉದಾನಾಂತರ್ಗತ | ,, | ಶುಭಾ | ಅಧೋಕ್ಷಜಾಯನಮಃ | ,, | ಅನಾಮಿಕಾ |
| ೧೯ ಗಂಧಾತ್ಮನೇ | ಬೃಹಸ್ಪತಿ(ದಾಸ)ಸಮಾನಾಂತರ್ಗತ | ,, | ಯಜ್ಞಾ | ನಾರಸಿಂಹಾಯನಮಃ | ,, | ಕನಿಷ್ಠಬೆರಳು |

## ಆಕಾಶಾದಿ ಪಂಚಭೂತ

| | | | | | | |
|---|---|---|---|---|---|---|
| ೨೦ ಆಕಾಶಾತ್ಮನೇ | ಮಹಾಗಣಪತ್ಯಂತರ್ಗತ | ಭಾ.ರ.ಮು. | ಸುಖ | ಅಚ್ಯುತಾಯನಮಃ | ಎಡಪಾದ | ಅಂಗುಷ್ಠ |
| ೨೧ ವಾಯ್ವಾತ್ಮನೇ | ಪ್ರವಾಹ ವಾಯ್ವಂತರ್ಗತ | ,, | ಸೌಗಂಧೀ | ಜನಾರ್ದನಾಯನಮಃ | ,, | ತರ್ಜನಿ |
| ೨೨ ತೇಜಾತ್ಮನೇ | ವಹ್ನ್ಯಂತರ್ಗತ | ,, | ಸುಂದರೀ | ಉಪೇಂದ್ರಾಯನಮಃ | ,, | ಮಧ್ಯಬೆರಳು |
| ೨೩ ಆಬಾತ್ಮನೇ | ವರುಣ ಬುಧಾಂತರ್ಗತ | ,, | ವಿದ್ಯಾ | ಹರಯೇನಮಃ | ,, | ಅನಾಮಿಕಾ |
| ೨೪ ಪೃಥಿವ್ಯಾತ್ಮನೇ | ಧರಾಶನೇಶ್ಚರಾಂತರ್ಗತ | ,, | ಸುಶೀಲಾ | ಶ್ರೀ ಕೃಷ್ಣಾಯನಮಃ | ,, | ಕನಿಷ್ಠಬೆರಳು |

ನಮೋಸ್ತು ತಾತ್ವಿಕಾಃ ದೇವಾಃ ವಿಷ್ಣುಭಕ್ತಿ ಪರಾಯಣಾಃ ।
ಧರ್ಮಮಾರ್ಗೇ ಪ್ರೇರಯಂತು ಭವಂತಃ ಸರ್ವ ಏವಹಿ ॥ ಈ ಪ್ರಕಾರ ನಿತ್ಯಸ್ತೋತ್ರ ಮಾಡುವದು.

ತತ್ವಪತಿ ಮಧ್ವೇಶ–ಶ್ರೀ ಕೃಷ್ಣಾರ್ಪಣಮಸ್ತು.

**ಅವತರಣಿಕಾ :** ಸ್ಥೂಲ ದೇಹ ಪರಿಶುದ್ಧಿಗೋಸುವ ಹಚ್ಚುವ ದ್ವಾದಶ ನಾಮಗಳಲ್ಲಿರುವ ರೂಪಗಳು, ಮಾಸ-ಋತು, ದಿವಸ ಸಾಧನಗೋಸುಗವಾದ ಕಾಲದಲ್ಲಿ, ಕಾಲನಾಮಕನ ರೂಪಗಳನ್ನು ವಿವರಿಸುತ್ತಾರೆ.

**ಮೂಲ :**

**ಕೇಶವಾದಿ ಸುಮೂರ್ತಿ ದ್ವಾದಶ ।**
**ಮಾಸ ಪುಂಡ್ರಗಳಲ್ಲಿ ವೇದ ।**
**ವ್ಯಾಸ ಅನಿರುದ್ಧಾದಿ ರೂಪಗಳಾರು ಋತುಗಳಲಿ ॥**
**ವಾಸವಾಗಿಹವೆಂದು ತ್ರಿಂಶತಿ ।**
**ವಾಸರದಿ ಸತ್ಕರ್ಮಧರ್ಮ ನಿ ।**
**ರಾಶೆಯಿಂದಲಿ ಮಾಡು ಕರುಣವ ಬೇಡು ಕೊಂಡಾಡು ॥೨೮॥**

**ಪದ್ಯಾರ್ಥ :** ಕೇಶವಾದಿ ದಾಮೋದರ ಪರಿಯಂತ ೧೨ ಮೂರ್ತಿಗಳು. ಪುಂಡ್ರಗಳು=೧೨ ನಾಮಗಳಲ್ಲಿ-ಶುಕ್ಲಪಕ್ಷದಲ್ಲಿ ಕೇಶವಾದಿ-೧೨. ಕೃಷ್ಣಪಕ್ಷದಲ್ಲಿ ಸಂಕರ್ಷಣಾದಿ ಕೃಷ್ಣಾಂತ ೧೨ ಹೀಗೆ ೨೪ ಕೇಶವಾದಿ ಮೂರ್ತಿಗಳೇ ಬಹಿರದಲ್ಲಿ ದೇಹ ಶುದ್ಧಿಕರವಾಗಿ ದ್ವಾದಶ ನಾಮಗಳಲ್ಲಿರುವವು. ಮಾರ್ಗಶೀರ್ಷಾದಿ ಕಾರ್ತೀಕ ಮಾಸಾಂತ ೧೨ ಮಾಸಗಳಲ್ಲಿ ಕೇಶವಾದಿ ಹನ್ನೆರಡು ರೂಪಗಳಿರುವವೆಂದು ಚಿಂತಿಸಬೇಕು. ಆರು ಋತುಗಳು. ವಸಂತ-ಗ್ರೀಷ್ಮ-ವರ್ಷ-ಶತದೃತು, ಹೈಮಂತ-ಶಶಿಋತು, ಇವುಗಳಲ್ಲಿ ಕ್ರಮವಾಗಿ ಅನಿರುದ್ಧ-ಪ್ರದ್ಯುಮ್ನ-ಸಂಕರ್ಷಣ-ವಾಸುದೇವ-ನಾರಾಯಣ-ವೇದವ್ಯಾಸ, ಈ ಆರು ರೂಪಗಳು. ಇನ್ನು ತ್ರಿಂಶತಿ=ಮೂವತ್ತು, ವಾಸರದಿ=ದಿವಸಗಳಲ್ಲಿ, ೨೪ ಕೇಶವಾದಿ ರೂಪ, ವೇದವ್ಯಾಸ ೧ ಅನಿರುದ್ಧಾದಿ ೫ ಹೀಗೆ ೩೦ ರೂಪಗಳು, ವಾಸವಾಗಿಹವೆಂದು-ಇರುವವೆಂದು, ಚಿಂತಿಸುತ್ತ, ಊರ್ಧ್ವಪುಂಡ್ರಾದಿಗಳನ್ನು ಧಾರಣ ಮಾಡುತ್ತ, ಕೇಶವಾದಿ ರೂಪ, ತ್ರಿದಿವಸ ೩ ದಿನಗಳಲ್ಲಿ, ರೂಪ-ಮಾಸ-ಋತುಗಳಲ್ಲಿರುವ ರೂಪ ಸಂಕಲ್ಪದಲ್ಲಿ ಧ್ಯಾನ ಮಾಡುತ್ತಾ, ನಿರಾಶೆಯಿಂದಲಿ=ಯಾವ ತರದ ಆಶಾ ಇಲ್ಲದೇ ಫಲಾಪೇಕ್ಷಾ ರಹಿತನಾಗಿ, ಕರುಣವ ಬೇಡು=ಶ್ರೀಹರಿ ಪ್ರೀತ್ಯರ್ಥವಾಗಿ ಸತ್ಕರ್ಮ ಧರ್ಮಗಳನ್ನು ಮಾಡುತ್ತ ಶ್ರೀಹರಿಯ ಪ್ರಸಾದ ಬೇಡು, ಶ್ರೀಹರಿಯನ್ನು ಕೊಂಡಾಡು=ಸ್ತೋತ್ರ ಮಾಡು.

**ದ್ರೌಪದೀಶಪತಿ ವಿಠಲರು: ಕೇಶವಾದಿ ಸುಮೂರ್ತಿ.**

೧೨ ಪುಂಡ್ರದಲ್ಲಿ ಎರಡೆರಡು ಕೇಶವಾದಿ ದ್ವಾದಶ

೧೨ ಮಾಸಗಳಲ್ಲಿ-ಕೇಶವಾದಿ ದಾಮೋದರ

೬ ಋತುಗಳಲಿ, ನಾರಾಯಣಾದಿ ೫- ವೇದವ್ಯಾಸ (೧)

೩೦ ತ್ರಿಂಶತಿ ವಾಸರದಿ=೨೪ ಕೇಶವಾದಿ-೫ ನಾರಾಯಣಾದಿ ೧ ವೇದ ವ್ಯಾಸ-೩೦ ದಿವಸಗಳಲ್ಲಿ ಚಿಂತಿಸುವದು ॥ ೨೮ ॥

**ಭಾವಸೂಚನ : ಕೇಶವೇತಿ ॥ ೨೮ ॥**

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

**ಕೇಶವೇತಿ ॥** ಪ್ರದ್ಯುಮ್ನಾದ್ಯಾಸ್ತು ಚತ್ವಾರಃ ದ್ವಿಷಣ್ಮಾಸೇಷು ಸಂಸ್ಥಿತಾಃ ॥ ಚಿತ್ರಾದಿ ಯೋಗ ದಾತೃತ್ವಾತ್ ಮಾಸನಾಮಾ ಸ್ವಯಂ ಹರಿಃ ॥ ತ್ರಿಶಃ ತ್ರಿಶಃ ಕೇಶವಾದ್ಯಾಃ ವಸಂತಾದಿಷು ಪಂಚಮಃ ಇತಿ ಛಾಂದೋಗ್ಯಭಾಷ್ಯೇ ॥ ವ್ಯಾಸಃಜ* ವಸು ಸಹಸ್ರೇಣೇವ ಮಂಹತೇ ಶತಾ ನೀಕಾ ಹೇತಯೋ ಅಸ್ಯ ದುಷ್ಟರಾ ಇಂದ್ರಸ್ಯ ಸರ್ಮಿಷೋ ಮಹೀಃ ಗಿರಿರ್ನ ಭುಜ್ಮಾ ॥ *ಓಮ್ ॥ ಭಕ್ತಾಭೀಷ್ಟಾನಿ ವಿಸ್ತಾರಯತಿ ಇತಿ ವ್ಯಾಸಃ ॥

## ಕನ್ನಡಾರ್ಥ

ಪ್ರದ್ಯುಮ್ನನೇ ಮೊದಲಾಗಿ ನಾಲ್ಕು ರೂಪಗಳು ಹನ್ನೆರಡು ಮಾಸ ಗಳಲ್ಲಿರುವನು. ಚಿತ್ರಾದಿ ಯೋಗ ಸಾಮರ್ಥ್ಯವನ್ನು ಕೊಡುವನಾದುದ ರಿಂದ ಚೈತ್ರಾದಿ ಹನ್ನೆರಡು ಮಾಸ ನಾಮದಿಂದ ಬಿಂಬರೂಪಿಯಾದ ಹರಿಯು ತಾನೆ, ಆಯಾ ಪೆಸರಿನಿಂದ ಇರುವನು. ವಸಂತಾದಿ ೬ ಋತು ಗಳಲ್ಲಿ ಅನಿರುದ್ಧಾದಿ-೫ ರೂಪಗಳು ವೇದವ್ಯಾಸ (೧) ಹೀಗೆ ೬ ರೂಪಗಳು, ತ್ರಿಂಶತಿ ದಿವಸಗಳಲ್ಲಿಯೂ ಈ ಅನಿರುದ್ಧಾದಿ ೬+೨೪ ಕೇಶವಾದಿ ರೂಪ ಗಳನ್ನು ಚಿಂತಿಸಬೇಕೆಂದು ಛಾಂದೋಗ್ಯ ಭಾಷ್ಯದಲ್ಲಿ ಹೇಳಿರುತ್ತಾರೆ. ಭಕ್ತರ ಅಭೀಷ್ಟಗಳನ್ನು ವಿಸ್ತರಿಸುವನಾದುದರಿಂದ ವ್ಯಾಸ ಎಂದು ಹೆಸರು. ಬೃಹತಿ ಋಕ್ ಉದಹರಿಸುತ್ತಾರೆ.

**ಅವತರಣಿಕಾ :** ಕಲ್ಲು ಮಣ್ಣು, ಬಂಗಾರ ಲೋಹ, ಕಾಷ್ಟ ಮೊದಲಾದ ಜಡ ಪದಾರ್ಥಗಳಲ್ಲಿ, ತೃಣಾದಿ, ಸ್ಥಾವರ ಜೀವರಲ್ಲಿ, ಜಂಗಮ ಜೀವರಾರಂಭಿಸಿ ಬ್ರಹ್ಮ

ದೇವರ ಪರಿಯಂತ ತಾರತಮ್ಯದಿಂದ ಶ್ರೀಹರಿಯು ವ್ಯಾಪಾರ ಮಾಡುವದು ವಿವರಿಸುವರು.

ಮೂಲ :

**ಲೋಷ್ಠಕಾಂಚನ ಲೋಹ ಶೈಲಜ ।**
**ಕಾಷ್ಟ ಮೊದಲಾದಖಿಳ ಜಡ ಪರ ।**
**ಮೇಷ್ಠಿ ಮೊದಲಾದಖಿಳ ಚೇತನರೊಳಗೆ ಅನುದಿನವು ॥**
**ಚೇಷ್ಟೆಗಳ ಮಾಡಿಸುತ ತಿಳಿಸದೆ ।**
**ಪ್ರೇಷ್ಠನಾಗಿದ್ದೆಲ್ಲರಿಗೆ ಸ ।**
**ರ್ವೇಷ್ಟದಾಯಕ ಸಂತಯಿಸುವನು ಸರ್ವ ಜೀವರನು ॥ ೨೯ ॥**

**ಪದ್ಯಾರ್ಥ :** ಲೋಷ್ಠ=ಮಣ್ಣು ಹೆಂಟೆ, ಕಾಂಚನ=ಬಂಗಾರ ಲೋಹ-ಕಬ್ಬಿಣ,ಶೈಲಜ=ಗುಡ್ಡದ ಕಲ್ಲು, ಕಾಷ್ಟ=ಕಟ್ಟಿಗೆ ಮುಂತಾದ ಜಡ ಪದಾರ್ಥಗಳಲ್ಲಿ ಆಯಾ ಗುಣ ಧರ್ಮಗಳನ್ನು ವ್ಯಕ್ತ ಮಾಡುತ್ತಾನೆ. ಚೇತನರು=ಸ್ಥಾವರ ಜೀವರಾದ, ತೃಣಾದಿ ವೃಕ್ಷ ಜೀವರಲ್ಲಿದ್ದು ಆಯಾ ಜೀವಿಗಳ ಸ್ವರೂಪ ಸ್ವಭಾವಾನುಸರಿಸಿ ಚೇಷ್ಟಾಪ್ರದನಾಗಿರುವನು. ಪರಮೇಷ್ಠಿ ಮೊದಲಾದಖಿಳ ಚೇತನರೊಳಗೆ ಸ್ಥಾವರ ಜೀವರಕಿಂತಲೂ, ಜಂಗಮ ಜೀವರಲ್ಲಿ ಬ್ರಹ್ಮಾದಿ ಸಕಲ ಜಂಗಮ ಜೀವರಲ್ಲಿದ್ದು, ಅವರಿಗೆ ತನ್ನ ಇರುವಿಕೆಯನ್ನು ತಿಳಿಸದಲೇ ಪ್ರೇಷ್ಠನಾಗಿ=ಬಹು ಪ್ರೀತಿಯುಳ್ಳವ, ಎಲ್ಲ ಮುಕ್ತಿಯೋಗ್ಯರಿಗೆ, ಪ್ರೀತನಾಗಿ ಎಲ್ಲರಿಗೆ, ಸರ್ವೇಷ್ಟದಾಯಕ=ಅವರವರ ಇಷ್ಟಾನುಸಾರವಾಗಿ (ತ್ರಿವಿಧ ಜೀವರ ಗುಣ ಕರ್ಮವನುಸರಿಸಿ) ಸರ್ವಜೀವರ ಇಚ್ಛಾ-ಪೂರೈಸುವನು, ಸಂತೈಸುವನು=ಸಮಾಧಾನಮಾಡುವನು.

**ದ್ರೌಪದೀಶಪತಿ ವಿಠಲರು :** ಲೋಷ್ಠ ಕಾಂಚನ ೧ ಲೋಷ್ಠ= ಮಣ್ಣು—೧ ಕಾಂಚನ ಬಂಗಾರ, ೧ ಲೋಹ=ಕಬ್ಬಿಣ, ೧ ಶೈಲ=ಕಲ್ಲು, ೧ ಕಾಷ್ಟ=ಕಟ್ಟಿಗಿ, ಇವೇ ಮೊದಲಾದ ಜಡಗಳಲ್ಲಿ ವ್ಯಾಪ್ತ.

**ಭಾವಸೂಚನ:** ಲೋಷ್ಠೇತಿ.

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಲೋಷ್ಠ" ಇತಿ ॥ "ಶಿಲಾದ್ಯೇಷು ಸ್ಥಿತಃ ವಿಷ್ಣುಃ ಭಾರದಾರ್ಢ್ಯಾದಿ ಕಾರಣಮ್ ॥ ನೈವ ಚಿತ್ತಾಧಿಕಸ್ಯಾತೋ ವೃಕ್ಷಾದ್ಯಾಃ ಉತ್ತಮಾಃ

ಮತಾಃ ॥ ವೃಕ್ಷೇಭ್ಯಃ ಅಧಿಕಂ ವಿಷ್ಣುಃ ಜಂಗಮೇಷು ಪ್ರಕಾಶಿತಃ ॥ ತತೋಽಪಿ ಪುರುಷೇ ವಿಷ್ಣುಃ ಗುಣಾಧಿಕ್ಯ ಪ್ರಕಾಶಕಃ" ॥ ಇತಿ ಐತರೇಯೇ ॥ ೨೯ ॥

## ಕನ್ನಡಾರ್ಥ

"ಲೋಷ್ಠಕಾಂಚನ ಮುಂತಾದ ಸಕಲ ವಸ್ತುಗಳಲ್ಲಿ ಪರಮಾತ್ಮ ಇರುತ್ತಾನೆ; ತನ್ನ ಇರವನ್ನು ತಿಳಿಯಗೊಡನು" ಎಂದು ದಾಸವರ್ಯರು ಅಪ್ಪಣೆ ಕೊಡಿಸಿರುತ್ತಾರೆ. ಈ ಸಂಗತಿಗೆ ತಕ್ಕ ಆಧಾರವನ್ನು ವ್ಯಾಖ್ಯಾನಕಾರರು ಉದಾಹರಿಸಿರುತ್ತಾರೆ. ಐತರೇಯ ಭಾಷ್ಯದಲ್ಲಿ-"ಶಿಲೆ ಮುಂತಾದವುಗಳಲ್ಲಿ ಪರಮಾತ್ಮನಿದ್ದು-ಭಾರ ಹಾಗೂ ದೃಢತೆಗಳಿಗೆ ಕಾರಣನಾಗಿ ಅವುಗಳಲ್ಲಿ ಅವುಗಳನ್ನು ಅಭಿವ್ಯಕ್ತಿ ಮಾಡುತ್ತಾನೆ. "ಚಿತ್ತ ಮುಂತಾದವುಗಳ ವ್ಯಾಪಾರಗಳಿಗೆ ಕಾರಣನಾಗಿ ಹರಿಯು ಅಲ್ಲಿ ಇರುವದಿಲ್ಲ. ಆದುದರಿಂದ ಕಲ್ಲು ಮುಂತಾದ ವಸ್ತು(ಜಡ)ಗಳಿಗಿಂತಲೂ ವೃಕ್ಷ ಮುಂತಾದ ಸಚೇತನ ಪ್ರಾಣಿಗಳು ಶ್ರೇಷ್ಠವೆನಿಸುತ್ತವೆ. ವೃಕ್ಷಗಳಲ್ಲಿಯಗಿಂತಲೂ ಚರಪ್ರಾಣಿಗಳಲ್ಲಿ ಪರಮಾತ್ಮನು ತನ್ನ ಗುಣಗಳೊಡನೆ ಹೆಚ್ಚಿಗೆ ಪ್ರಕಾಶಿತನಾಗುತ್ತಾನೆ. ಎಲ್ಲ ಚರಪ್ರಾಣಿಗಳಲ್ಲಿ ಪುರುಷನಲ್ಲಿ ತನ್ನ ಗುಣಗಳನ್ನು ಅತ್ಯಧಿಕವಾಗಿ ಪ್ರಕಾಶಪಡಿಸುತ್ತಾನೆ. (ಆದುದರಿಂದ ಪುರುಷನು ಹೆಚ್ಚಿನ ಗುಣವಂತನೆಂದು ಪ್ರಸಿದ್ಧನಾಗಿರುತ್ತಾನೆ)'' ಎಂದು ಶ್ರೀಮದಾಚಾರ್ಯರು ನಿರೂಪಿಸಿರುತ್ತಾರೆ ॥ ೨೯ ॥

ಅವತರಣಿಕಾ : ಇಲ್ಲಿ ಪರಿಯಂತವಾಗಿ ದೇಹ ಸೃಷ್ಟಿ ತತ್ವಗಳು, ಅಲ್ಲಿಪ್ಪ ರೂಪಗಳು ಹೇಳಿ ಪುರುಷ ಸ್ತ್ರೀಯರಲ್ಲಿ ಅನಿರುದ್ಧಾದಿ ೫ ರೂಪಗಳನ್ನು ನಿರೂಪಿಸುತ್ತಾರೆ.

ಮೂಲ :

ವಾಸುದೇವನಿರುದ್ಧರೂಪದಿ ।
ಪುಂಶರೀರದೊಳಿಹನು ಸರ್ವದ ।
ಸ್ತ್ರೀ ಶರೀರದೊಳಿಹನು ಸಂಕರುಷಣನು ಪ್ರದ್ಯುಮ್ನ ॥
ದ್ವಾಸುಪರ್ಣಶ್ರುತಿ ವಿನುತ ಸ ।
ರ್ವಾಸು ನಿಲಯನರಾಯಣನ ಸದು ।
ಪಾಸನೆಯಗೈವವರು ಜೀವನ್ಮುಕ್ತರೆನಿಸುವರು ॥ ೩೦ ॥

**ಪದ್ಯಾರ್ಥ :** ಪುಂಶರೀರದೊಳು=ಪುರುಷರ ಶರೀರದಲ್ಲಿ, ಅನಿರುದ್ಧ-ವಾಸುದೇವ ರೂಪದಿಂದ ಸರ್ವದಾ ಇರುವನು. ಮತ್ತು ಸ್ತ್ರೀ ಶರೀರದೊಳಿಹನು ಪ್ರದ್ಯುಮ್ನ-ಸಂಕರ್ಷಣ ಈ ಎರಡು ರೂಪದಿಂದ ಸರ್ವದಾ=ಯಾವಾಗಲೂ ಇರುವನು. ದ್ವಾಸುಪರ್ಣ ಶ್ರುತಿವಿನುತ "ದ್ವಾಸುಪರ್ಣೌ ಸಹಜಾಸಖಾಯಾ=ದೇಹಾಖ್ಯ ವೃಕ್ಷದಲ್ಲಿ ಎರಡು ಪಕ್ಷಿಗಳು ಇರುವರು; ಅಂದರೆ ಸಕಲ ಜೀವರಲ್ಲಿರುವ ಒಂದು ಪಕ್ಷಿ ಪುಷ್ಟವಾದದು. ನಾರಾಯಣನು ಅಥವಾ ಆ ಪಕ್ಷಿಗೆ ಪುರುಷ ಒಂದು ಭಾಗ ಪರ್ಣ=ರೆಕ್ಕೆ, ಸ್ತ್ರೀ ಎಡಭಾಗದ ರೆಕ್ಕೆ. ಹೀಗೆ ನಾರಾಯಣನಿಗೆ ಪುಂ ಸ್ತ್ರೀ ಭೇದದಿಂದ-ಎರಡು ರೆಕ್ಕೆಗಳೆಂತಲೂ, ಪುರುಷ ರೂಪದಲ್ಲಿ ಆನಂದಮಯ ನಾರಾಯಣನೂ, ತನ್ನ ಸ್ತ್ರೀ ರೂಪದಲ್ಲಿ ವಿಜ್ಞಾನಮಯನಿರುವನೆಂತಲೂ, ಹೀಗೆ ದ್ವಾಸುಪರ್ಣ ಎಂಬ ಶ್ರುತಿ ಪ್ರತಿಪಾದ್ಯನಾದ ಹರಿಯು ಸರ್ವಾಸುನಿಲಯು, ನಾರಾಯಣನ=ಸರ್ವಾಸುನಿಲಯ ಎಂಬುವ ನಾಮವು ಸಹಸ್ರನಾಮಗತವಾದುದು. ಸರ್ವ ಅಂದರೆ ಎಲ್ಲ ಪ್ರಾಣಿಗಳು, ಬ್ರಹ್ಮಾದಿ ಜೀವರ-ಅಸು ಪ್ರಾಣ, ಅಸು ಇಂದ್ರಿಯಗಳು, ಶ್ರೀಹರಿಯ ಇಂದ್ರಿಯಗಳಲ್ಲಿ ಲಯ ಪೊಂದುತ್ತಾರಾದದಕಾರಣ ಶ್ರೀಹರಿಗೆ ಸರ್ವಾಸುನಿಲಯನೆಂದು ನಾಮ. ಅಥವಾ ಸರ್ವಾಸುನಿಲಯ=ಸಕಲ ಅಸುರರನ್ನು ನಾಶಗೈಸುವವನು. ಇಂಥ ನಾರಾಯಣನನ್ನು ಸದುಪಾಸನೆಯಗೈವವರು=ಮೇಲೆ ಹೇಳಿದಂದದಲ್ಲಿ ಗುರುಗಳಿಂದ ಚೆನ್ನಾಗಿ ತಿಳಿದು, ಉಪಾಸನೆ=ಧ್ಯಾನಗೈವವರು ಜೀವನ್ಮುಕ್ತರೆನಿಸುವರು.

**ದ್ರೌಪದೀಶಪತಿ ವಿಠಲರು :** ಪುರುಷರಲ್ಲಿ ಅನಿರುದ್ಧ-ವಾಸುದೇವ=ಬಲದ ಪಕ್ಕ. ಸ್ತ್ರೀಯರಲ್ಲಿ ಸಂಕರ್ಷಣ ಪ್ರದ್ಯುಮ್ನ=ವಾಮಪಕ್ಕ. ನಾರಾಯಣದ್ವಾಸುಪರ್ಣ ಶ್ರುತಿವಿನುತ, ಪಕ್ಷಿಗೆ ಪುರುಷ ಒಂದು ಪಕ್ಕ, ಸ್ತ್ರೀ ಒಂದು ಪಕ್ಕ ಹೀಗೆ ಜಾಪಾಸನ ॥ ೩೦ ॥

**ಭಾವಸೂಚನ :** ವಾಸುದೇವೇತಿ ॥ ತದುಕ್ತಂ ಪ್ರಾಕೃತ ಅಧ್ಯಾತ್ಮೇ ॥ ಅನಿರುದ್ಧಸ್ತನುರ್ದೇಹೇ ಪ್ರದ್ಯುಮ್ನಃ ಸ್ತ್ರೀಗತ ಸದೇದಿತಿ ॥ ದ್ವೇತಿ ಪ್ರಸಿದ್ಧಂ ಚೈತತ್ ಸರ್ವಾಸುನಿಲಯೋನಯ ಇತಿ ಚ ॥ ೩೦ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ವಾಸುದೇವ" ಇತಿ ॥ ಭೋಗ್ಯ ಭೋಕ್ತ್ರಾತ್ಮ(ನಾ) ಸ್ಥಿತಿಃ ಉದಾ

ಹೃತತೈತ್ತಿರೀಯ ವಚನ ಸಿದ್ಧಾ || "ಸರ್ವಾಸುನಿಲಯಃ"-ಓಮ್*ಸಹಸ್ರಂ ಮಹಿಷಾಮಧಃ ಆದಿತ್ತ ಇಂದ್ರಿಯಂ ಮಹಿ ಪ್ರವಾನ್ನಥೇ ಇಂದ್ರಃ ಸೂರ್ಯಸ್ಯ ರಶ್ಮಿಭಿಃ ನ್ಯರ್ಶಸಾನ ಮೋಷಧಿತಿ || ಓಂ× * ಸರ್ವೇಷಾಂ ಬ್ರಹ್ಮಾದೀನಾಂ ಅಸವಃ ಪ್ರಾಣಾಃ ಇಂದ್ರಿಯಾಣಿ ನಿಲೀಯಂತೇ ಭಗವದಿಂದ್ರಿಯೇಷು ಅಂತ ರ್ಗತಾಃ ಭವಂತಿ ಇತಿ ಸತಥೋಕ್ತಃ || ಯದ್ವಾ-ಸರ್ವೇಸವಃ ಪ್ರಾಣಮಾತ್ರ ಪೋಷಕಾಃ ಸರ್ವಾಸುರಜನಾಃ | ತೇ ನಿತರಾಂಲೀಯಂತೇ ಕ್ಷೀಯಂತೇ ಇತಿ ವಾ ತಥೋಕ್ತಃ || ಗೈವವರು=ಮಾಡುವವರು || ೩೦ ||

## ಕನ್ನಡಾರ್ಥ

"ಭೋಗ್ಯ-ಭೋಕ್ತ್ರ ವಸ್ತುಗಳಲ್ಲಿ ಪರಮಾತ್ಮನು ನಾಲ್ಕು ರೂಪ ಗಳಿಂದ ಇರುತ್ತಾನೆ" ಎಂಬ ಪ್ರಮೇಯವು ಉದಾಹರಿಸಲ್ಪಟ್ಟ ತೈತ್ತಿರೀಯ ಭಾಷ್ಯ ವಚನಗಳಿಂದ ಸಿದ್ಧವೇ ಆಗಿರುತ್ತದೆ.

"ಸರ್ವಾಸು ನಿಲಯ" ಈ ನಾಮವು ಸಹಸ್ರನಾಮಗಳಲ್ಲಿ ಸೇರಿದ್ದು. ಇದರ ಅರ್ಥವನ್ನೇ "ಸಹಸ್ರಂ" ಎಂಬ ಬೃಹತೀ ಮಂತ್ರವು ವಿವರಿಸುತ್ತದೆ. ಆ ಮಂತ್ರಾರ್ಥವನ್ನು ಸಂಗ್ರಹಿಸಿ ಬರೆದಿರುತ್ತಾರೆ. (೧) ಸರ್ವರ-ಬ್ರಹ್ಮಾದಿ ಗಳ, ಅಸುಗಳು-ಪ್ರಾಣ ಇಂದ್ರಿಯಗಳು. ಭಗವಂತನ ಇಂದ್ರಿಯಗಳಲ್ಲಿ ಲಯ ಹೊಂದುವದರಿಂದ ಶ್ರೀಹರಿಯು "ಸರ್ವಾಸು ನಿಲಯ." (೨) ಸಕಲ ಅಸುರರನ್ನೂ ನಾಶಗೊಳಿಸುವವನು. ಗೈವವರು=ಮಾಡುವವರು.

ಅವತರಣಿಕಾ: ಶ್ರೀ ಹರಿಯು ಅನಂತಾನಂತ ರೂಪಿಯು, ಬ್ರಹ್ಮಾದಿಗಳ ಮೇಲೆ ಕರುಣಾ ಮಾಡುತ್ತ ಅವರ ಎಲ್ಲ ವ್ಯಾಪಾರ ಮಾಡಿಸಿ ದೇವತೆಗಳನ್ನು ಧನ್ಯ ಮಾನ್ಯರೆನಿಸುತ್ತಾನೆಂದು ಪೇಳುತ್ತಾರೆ.

ಮೂಲ:

ತನ್ನನಂತಾನಂತ ರೂಪ ಹಿ |
ರಣ್ಯ ಗರ್ಭಾದಿಗಳೊಳಗೆ ಕಾ |
ರುಣ್ಯ ಸಾಗರ ಹರಹಿ ಅವರವರಖಿಳ ವ್ಯಾಪಾರ ||
ಬನ್ನ ಬಡದಲೆ ಮಾಡಿ ಮಾಡಿಸಿ |
ಧನ್ಯರೆನಿಸಿ ಸಮಸ್ತ ದಿವಿಜರ |
ಪುಣ್ಯ ಕರ್ಮವ ಸ್ವೀಕರಿಸಿ ಸುಖವಿತ್ತು ಪಾಲಿಸುವ || ೩೧ ||

**ಪದ್ಯಾರ್ಥ :** ಶ್ರೀ ಹರಿಯು, ತನ್ನ ಅನಂತಾನಂತ ರೂಪಗಳನ್ನು ಹಿರಣ್ಯ ಗರ್ಭಾದಿಗಳೊಳಗೆ = ಬಂಗಾರ ಒಡಲನಾದ ಬ್ರಹ್ಮಾದಿಗಳಲ್ಲಿ, ಹರಹಿ=ಪಸರಿಸಿ, ಅವರವರಖಿಳ ವ್ಯಾಪಾರ=ಬ್ರಹ್ಮ, ರುದ್ರ, ಇಂದ್ರ, ಕಾಮಾದಿ ಎಲ್ಲ ದೇವತೆಗಳ, ಅಖಿಳ=ಸಮಸ್ತ, ವ್ಯಾಪಾರ=ಕ್ರಿಯೆಗಳನ್ನೂ, ಬನ್ನಬಡದಲೇ=ಆಯಾಸ ಬಡದಲೇ, ತಾನು ಮಾಡಿ, ಬ್ರಹ್ಮಾದಿಗಳಿಂದ ಮಾಡಿಸಿ, ಸಮಸ್ತ ದಿವಿಜರ, ಎಲ್ಲ ದೇವತೆಗಳನ್ನೂ, ಧನ್ಯರೆನಿಸಿ=ಪುಣ್ಯ ವಂತರೆಂಬೋ ಕೀರ್ತಿಶಾಲಿಗಳನ್ನಾಗಿ ಮಾಡಿ, ಅವರ ಪುಣ್ಯ ಕರ್ಮಗಳನ್ನು ಸ್ವೀಕಾರ ಮಾಡುತ್ತಾ, ಸುಖವಿತ್ತು=ನಿತ್ಯಾನಂದವಾದ ಮುಕ್ತಿಯನ್ನು ಕೊಟ್ಟು, ಪಾಲಿಸುವ=ರಕ್ಷಿಸುವನು.

**ದ್ರೌಪದೀಶಪತಿ ವಿಠಲರು :** ತನ್ನನಂತಾನಂತ ರೂಪ ||

**ಭಾವಸೂಚನ :** ತನ್ನೇತಿ || ಬನ್ನ=ದುಃಖ || ೩೧ ||

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ತನ್ನ" ಇತಿ ಹರಹಿ—ಹರವಿ. ಪನ್ನ—ಕ್ಲೇಶಃ "ನಾನಾ ರೂಪ ಧರೋಽಹಂ ವೈ ನಾನಾ ದೇವೇಷು ಸಂಸ್ಥಿತಃ || ಯದಾ ದೇವಾಃ ಮಹಾ ಯಜ್ಞಾನ್ ವಿತನ್ವಂತಿ ಸಹಸ್ರಶಃ || ತದಾಽಹಮೇವ ಸರ್ವೇಷಾಂ ಯಜ್ಞ ಭೋಕ್ತಾ ಭವಾಮಿ ವೈ || ಅಹಮಗ್ನಿರಹಂ ಭಾನುಃ ಅಹಂ ಸೋಮೋ ಬೃಹಸ್ಪತಿಃ || ಬ್ರಹ್ಮಾ ವಾಯುಃ ತತೋ ರುದ್ರಃ ವರುಣೋ ಮಿತ್ರ ಏವಚ|| ಇಂದ್ರೋಽಶ್ವಿನೌ ಚ ವಸವೋ ವಿಶ್ವೇದೇವಾ ಅಹಮೇವತು||ಯಜಮಾನೋ ಹವಿಸ್ಥೋಽಹಂ ಸರ್ವಂ ಸರ್ವಸ್ಥತಾ ಯತಃ ||" ಇತಿ ದ್ವಾದಶಾಧ್ಯಾಯ ವಿಷ್ಣು ರಹಸ್ಯೇ || ೩೦ ||

**ಕನ್ನಡಾರ್ಥ**

"ತನ್ನನಂತಾನಂತ ರೂಪ" ಎಂಬ ಪದ್ಯದಲ್ಲಿ ಹರಿಯು ತನ್ನ ರೂಪ ಗಳನ್ನು ವಿಸ್ತರಿಸಿ ಹಿರಣ್ಯಗರ್ಭ (ಬ್ರಹ್ಮ) ಮುಂತಾದವರಲ್ಲಿ ಇಟ್ಟು ಅವರವ ರಿಂದ ಅಖಿಲ ವ್ಯಾಪಾರಗಳನ್ನೂ ಅವರಿಗೆ ಕ್ಲೇಶವಾಗದಂತೆಯೇ ಮಾಡಿಸಿ, ಸಾರಭಾಗವನ್ನು ತಾನು ಸ್ವೀಕರಿಸಿ ಅವರಿಗೆ ಫಲವಿತ್ತು ಪಾಲಿಸುವನು ; ಎಂದು ಹೇಳುತ್ತಾರೆ.

ಪರಮಾತ್ಮನು ಅನಂತರೂಪಧರನು ಮತ್ತು ಆಯಾ ನಾಮಗಳಿಂದ

ವಾಚ್ಯನಾಗಿ ಅವರವರಲ್ಲಿ ವ್ಯಾಪಾರಗಳನ್ನು ಮಾಡಿಸುವನು. ಈ ವಿಷಯ ದಲ್ಲಿ ವಿಷ್ಣು ರಹಸ್ಯದ ಹನ್ನೆರಡನೆಯ ಅಧ್ಯಾಯದಲ್ಲಿರುವ ಹರಿಯ ವಚನ ಗಳೇ ಆಧಾರಗಳು. "ನಾನಾ ರೂಪಗಳನ್ನು ಧರಿಸಿ ನಾನು ನಾನಾ ದೇವತೆ ಗಳಲ್ಲಿ ಇರುತ್ತೇನೆ. ದೇವತೆಗಳು ಸಾವಿರಾರು ಮಹಾಯಜ್ಞಗಳನ್ನು ಮಾಡು ವಾಗ ಅವರ ಯಜ್ಞ ಫಲವೆಲ್ಲವನ್ನೂ ನಾನೇ ಆಗ ಸ್ವೀಕರಿಸತಕ್ಕವನು, ನಾನೇ ಮುಖ್ಯವಾಗಿ ಅಗ್ನಿ, ಸೂರ್ಯ, ಚಂದ್ರ, ಬೃಹಸ್ಪತಿ, ಬ್ರಹ್ಮ, ವಾಯು, ರುದ್ರ, ವರುಣ, ಮಿತ್ರ, ಇಂದ್ರ, ಅಶ್ವಿನೀ, ವಸು, ವಿಶ್ವೇದೇವಾ, ಯಜ ಮಾನ ಇತ್ಯಾದಿ ಶಬ್ದಗಳಿಂದ ಮುಖ್ಯವಾಗಿ ಕರೆಯಲ್ಪಡತಕ್ಕವನು. ನಾನು ಎಲ್ಲರಲ್ಲಿಯೂ ಇರುವದರಿಂದ ಸರ್ವನಾಮಗಳಿಂದ (ಶಬ್ದಗಳಿಂದ) ವಾಚ್ಯನು" ಎಂದು ಪ್ರಮಾಣಗಳ ಅರ್ಥ.

**ಅವತರಣಿಕಾ :** ಭಗವಂತನ ಗುಣಗಳನ್ನು ಸುಜ್ಞಾನಿಗಳಾದ ಅಗಮಜ್ಞರೆ ಬಲ್ಲರು ಎಂಬುದನ್ನು ದೃಷ್ಟಾಂತಪೂರ್ವಕವಾಗಿ ವಿವರಿಸುತ್ತಾರೆ.

**ಮೂಲ :**

**ಸಾಗರದೊಳಿಹ ನದಿಯ ಜಲ ಭೇ ।**
**ದಾಗಸದೊಳಿಪ್ಪಬ್ದ ಬಲ್ಲವು ।**
**ಕಾಗೆ ಗುಬ್ಬಿಗಳರಿಯಬಲ್ಲವೆ ನದಿಯ ಜಲಸ್ಥಿತಿಯ ॥**
**ಭೋಗಿ ವರ ಪರಿಯಂಕ ಶಯನನೊ ।**
**ಳೀ ಗುಣತ್ರಯ ಬದ್ಧ ಜಗವಿಹು ।**
**ದಾಗಮಜ್ಞರು ತಿಳಿವರಜ್ಞಾನಿಗಳಿಗಳವಡದು ॥ ೩೨ ॥**

**ಪದ್ಯಾರ್ಥ :** ಸಾಗರದೊಳಿಹ=ಸಮುದ್ರದೊಳಗೆ ಇರುವ, ಸಮುದ್ರ ದಲ್ಲಿ ಕೂಡಿದ ನದಿಯು ಬೇರೆ ಬೇರೆಯಾಗಿ ಹರಿಯುವದನ್ನು ಆ ನದಿಯ ಜಲ ಭೇದವನ್ನು, ಆಗಸ—ಆಕಾಶದೊಳಗಿರುವ, ಆಕಾಶದಲ್ಲಿ ಸಂಚಾರ ಮಾಡುವ ಅಬ್ದ=ಮೇಘಗಳು ಬಲ್ಲವು, ಏಕಂದರೆ ಮೇಘಗಳು ಸಮುದ್ರ ಕ್ಕೆರಗಿ, ಸಮುದ್ರದಲ್ಲಿರುವ ಬೇರೆ ಪ್ರವಹಿಸುವ ನದಿಗಳ ಸಿಹಿ ನೀರನ್ನು ತುಂಬಿ ಕೊಂಡು, ಮಳೆಗರೆಯುವ, ಮೇಘಗಳೇ ಬಲ್ಲವು. ಹೊರತಾಗಿ, ಕಾಗೆ ಗುಬ್ಬಿಗಳು ಆಕಾಶದಲ್ಲಿ ಚರಿಸುವವಾದರೂ ಈ ಕ್ಷುದ್ರ ಪ್ರಾಣಿಗಳು, ಬೇರೆ ಬೇರೆಯಾಗಿ ಪ್ರವಹಿಸುವ ನದಿಯ ಜಲ ಸ್ಥಿತಿಯನ್ನು ಅರಿಯಬಲ್ಲವೆ?

ಎಂದಿಗಾದರೂ ತಿಳಿಯುವವೆ? ಎಂದಿಗೂ ತಿಳಿಯಲಾರವು. ಇದರಂತೆ ಭೋಗಿವರಪರಿಯಂಕಶಯನನೊಳು=ಪಾಲ್ಗಡಲ ಶೇಷಶಯನನಾದವನಲ್ಲಿ, ಈ ಗುಣತ್ರಯ ಬದ್ಧ ಜಗವಿಹದು=ಸತ್ವ-ರಜ-ತಮೋ ಗುಣಗಳಿಂದ ಕೂಡಿದ ಜಗತ್ತು ಸಾಗರೋಪಮನಾದ ಶ್ರೀ ಹರಿಯಲ್ಲಿ ನದಿಗಳಂತೆ ಬೇರೆ ಇರುವದು. ಜಗತ್ತಿನಲ್ಲಿ ಶ್ರೀ ಹರಿಯು ವ್ಯಾಪಿಸಿರುವನು. ಇದನ್ನು ಅಂದರೆ, ಜಗತ್ತಿಗೂ ಪರಮಾತ್ಮನಿಗೂ ಭೇದವಿದೇ ಎಂದು, ಅಜ್ಞಾನಿಗಳು ತಿಳಿಯುವದಿಲ್ಲ. ಆದರೆ ಆಗಮಜ್ಞರು=ವೇದ ಆಗಮಗಳನ್ನು ಚೆನ್ನಾಗಿ ಬಲ್ಲ ಜ್ಞಾನಿಗಳು ಜಗತ್ತಿಗೂ, ಪರಮಾತ್ಮಗೂ, ಜೀವರಿಗೂ ಪರಮಾತ್ಮನಿಗೂ ನಿತ್ಯವಾಗಿ ಭೇದವಿದೆ ಎಂದು ತಿಳಿಯುವರು.

**ದ್ರೌಪದೀಶಪತಿ ವಿಠಲರು :** ಸಾಗರದೊಳಿಹ.

**ಭಾವಸೂಚನ :** ಸಾಗರೇತಿ ॥ ಅಳವಡದು। ತಿಳಿಯದು ॥ ೩೨ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸಾಗರೇತಿ" ಆಗಸ-ಆಕಾಶ. "ಸ್ವಕೀಯಮುದಕಂ ನದ್ಯಃ ಸಮುದ್ರೇ ನೈವ ಜಾನತೇ ।। ವಾಯುಸ್ತು ತತ್ ಪೃಥಕ್ ಜ್ಞಾತ್ವಾ ಮೇಘೇ ಕೃತ್ವಾ ಪ್ರವರ್ಷತಿ ಇತ್ಯುಕ್ತೇಃ ನ ತದ್ ಭೇದಜ್ಞಾನಂ ತತ್ತದೇವಾಧಮ ಮೇಷಾನಾಮ್ ॥ 'ಇಹದು-ಇರುವದು ; ಅಳವಡದು-ತಿಳಿಯದು ॥ ೩೨ ॥

### ಕನ್ನಡಾರ್ಥ

"ಸಾಗರದೊಳಿಹ" ಎಂಬ ಪದ್ಯದಲ್ಲಿ ಸಮುದ್ರದಲ್ಲಿ ಸೇರಿ ಬೇರೆಯಾಗಿ ತೋರದಿರುವ ನದಿಯ ಜಲದಂತೆ ಸಮಸ್ತವಾದ ತ್ರಿಗುಣಮಯ ವಿಶ್ವವು ಆ ನಾರಾಯಣನಲ್ಲಿ ಆಶ್ರಯಿಸಿದೆ; ಇದನ್ನು ಬೇರೆಬೇರೆಯಾಗಿ ನಾರಾಯಣ ವಿಶ್ವವನ್ನು ಬಲ್ಲವರು ಬಲ್ಲರೇ ವಿನಃ ಅಜ್ಞರಲ್ಲ ಎಂಬುದನ್ನು ದೃಷ್ಟಾಂತದಿಂದ ವಿಶದಪಡಿಸುತ್ತಾರೆ.

"ಸಮುದ್ರದಲ್ಲಿ ಸೇರಿಸಿರುವ ತಮ್ಮ ನೀರನ್ನೇ ನದಿಗಳು ಬೇರ್ಪಡಿಸಲಾರವು ; ಆಕಾಶದಲ್ಲಿರುವ ವಾಯುವು ಅದನ್ನು ಪೃಥಕ್ಕರಿಸಿ ಮೇಘದಲ್ಲಿಟ್ಟು ಮಳೆಯ ರೂಪದಿಂದ ಅದೇ ನೀರನ್ನೇ ಸುರಿಸುತ್ತದೆ" ಎಂದು ಹೇಳಿರುವದರಿಂದ ಅಧಮ-ಬುದ್ಧಿಯವರಿಗೆ ಇದರಂತೆ ಜಗತ್-ಪರಮಾತ್ಮಾ ಇವರುಗಳ ಭೇದ ಜ್ಞಾನವು ಹಿಡಿಸುವದಿಲ್ಲ. ಜ್ಞಾನಿಗಳಿಗೆ ಮಾತ್ರ ಇದು ಸಮ್ಮತವು ॥ ೩೨ ॥

**ಅವತರಣಿಕಾ :** ಇಂದ್ರಿಯಗಳು, ಸತ್ವಾದಿ ಗುಣಗಳಲ್ಲಿ ಮತ್ತು ಪೃಥಿವ್ಯಾದಿ ಪಂಚಭೂತಗಳಲ್ಲಿ, ಇವುಗಳಿಗೆ ಅಭಿಮಾನಿಗಳಾದ ಬ್ರಹ್ಮಾದಿ ದೇವತೆಗಳಲ್ಲಿ ನಾಲ್ಕು ವಿಧವಾದ ರೂಪಗಳ ವಿವರಿಸುವರು.




**ಮೂಲ :**

**ಕರಣ ಗುಣ ಭೂತಗಳೊಳಗೆ ತ ।**
**ದ್ವರನೆನಿಪ ಬ್ರಹ್ಮಾದಿ ದಿವಿಜರೊ ।**
**ಳರಿತು ರೂಪ ಚತುಷ್ಟಯಗಳನುದಿನದಿ ಸರ್ವತ್ರ ॥**
**ಸ್ಮರಿಸುತನುಮೋದಿಸುತ ಹಿಗ್ಗುತ ।**
**ಪರವಶದಿ ಪಾಡುವರಿಗೆ ತ ।**
**ನ್ನಿರವ ತೋರಿಸಿ ಭವ ವಿಮುಕ್ತರ ಮಾಡಿ ಪೋಷಿಸುವ ॥ ೩೩ ॥**

**ಪದ್ಯಾರ್ಥ :** ೧. ಕರಣ=ದೇಹಗತವಾದ–ಏಕಾದಶ ಇಂದ್ರಿಯಗಳು ೨. ಗುಣ ದೇಹದಲ್ಲಿಪ್ಪ=ಸತ್ವ-ರಜ–ತಮೋ ಗುಣಗಳಲ್ಲಿ, ೩. ಭೂತಗಳೊಳು ದೇಹಗತ ಪೃಥ್ವಿ ಅಪ್ಪು ತೇಜ ವಾಯು ಆಕಾಶ ಈ ಪಂಚ ಭೂತಗಳಲ್ಲಿ ಈ ಮೂರು ಇಂದ್ರಿಯ ಗುಣ ಭೂತಗಳಿಗೆ, ೪ ತದ್ವರರೆನಿಪ=ಇವುಗಳಿಗೆ ಅಭಿಮಾನಿಗಳಾಗಿ ಶ್ರೇಷ್ಠರೆನಿಸುವ, ಬ್ರಹ್ಮಾದಿ ದೇವತೆಗಳೊಳು ರೂಪ ಚತುಷ್ಟಯಗಳನ್ನು ನಾಲ್ಕು ವಿಧವಾದ ರೂಪಗಳನ್ನು-ಅಂದರೆ ಇಂದ್ರಿಯಗತ, ಗುಣಗತ, ಭೂತಗತ, ತದಭಿಮಾನಿ ದೇವತಾಗತ ನಾಲ್ಕು ರೂಪಗಳು ಅಂಶಾಂಶದಿಂದ ಬೇರೆ ಇದ್ದರೂ, ಮೂಲ ಅಂಶಿಯಾದ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವರಿಗೆ ಅಭೇದವಾಗಿರುವವು. ಪರಮಾತ್ಮನ ರೂಪಗಳೆಲ್ಲ ಒಂದೇ ಎಂದು, ಅನುದಿನದಿ=ಪ್ರತಿನಿತ್ಯದಲ್ಲಿ, ಸರ್ವತ್ರ ಸ್ಮರಿಸು. ೪ ದೇಹಗಳಲ್ಲಿ, ಪಿಂಡಾಂಡ ಬ್ರಹ್ಮಾಂಡಗಳಲ್ಲಿ ಸ್ಮರಣೆ ಮಾಡು, ಚಿಂತಿಸು. ಅನುಮೋದಿಸು=ಒಡಂಬಟ್ಟು ತಿಳಿದು, ಹಿಗ್ಗುತ್ತ=ಸಂತೋಷಪಡುತ್ತ, ಪರವಶದಿ ಪಾಡುವವರಿಗೆ, ಶ್ರೀ ಹರಿಯಲ್ಲೇ ಅನನ್ಯ ಭಕ್ತಿಯಿಂದ ಇತರ ವಿಷಯಗಳಿಂದ ವೈಮರೆದು, ಪಾಡುವರಿಗೆ=ಹಾಡುವರಿಗೆ, ಗಾನ ಮಾಡಿ ಸ್ತೋತ್ರ ಮಾಡುವರಿಗೆ, ತನ್ನಿರವು ತೋರಿಸಿ=ಶ್ರೀ ಹರಿಯು ಜಗತ್ತಿನಲ್ಲಿ ಬೇರೆ ಬೇರೆ ರೂಪಗಳಿಂದ ವ್ಯಾಪಿಸಿರುವ ಮತ್ತು ಹೃದಯಸ್ಥನಾಗಿರುವ ತನ್ನ ಇರುವಿಕೆಯನ್ನು ತೋರಿಸಿ, ಅಂದರೆ ಅಪರೋಕ್ಷೀಕರಿಸಿ, ಭವ ವಿಮು

ಕ್ತರ ಮಾಡಿ ಪಾಲಿಸುವ=ಪುನಃ ಸಂಸಾರಕ್ಕೆ ಬಾರದಂತೆ ಬಿಡುಗಡೆ ಮಾಡಿ, ನಿತ್ಯ ಸಂರಕ್ಷಿಸುವ.

**ದ್ರೌಪದೀಶಪತಿ ನಿಕರಲರು:** ಕರಣ, ಗುಣ, ಭೂತ, ಅಭಿಮಾನಿ ದೇವತೆ=ಬ್ರಹ್ಮಾದಿ || ೩೩ ||

**ಭಾವಸೂಚನ:** ಕರಣೇತಿ || ೩೩ ||

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಕರಣೇತಿ" ಇನಿತು ಉಕ್ತರೀತ್ಯಾ ಪಾಡು-ಹಾಡು || ೩೩ ||

**ಕನ್ನಡಾರ್ಥ**

ಪದ್ಯಾರ್ಥವು ಸುಲಭವಿರುವದರಿಂದ ವ್ಯಾಖ್ಯಾನಿಸಿರುವದಿಲ್ಲ || ೩೩ ||

**ಅವತರಣಿಕಾ:** ಇನ್ನು ೩೪-೩೫ ಈ ಎರಡು ಪದ್ಯಗಳಿಂದ ಅನಿರುದ್ಧಾದಿ ಪಂಚ ರೂಪಗಳಲ್ಲದೆ, ನಾರಾಯಣನ ಅಂಶರಾದ ಮತ್ಸ್ಯಾದಿ ದಶರೂಪಗಳು ಸ್ವರೂಪ ಇಂದ್ರಿಯದಲ್ಲಿ ಇದ್ದು ಸ್ಥೂಲೇಂದ್ರಿಯ ನಿಮಿಸುತ್ತಾರೆ.

ಮೂಲ:

**ಮೂಲರೂಪನು ಮನದೊಳಿಹ ಶ್ರವ ।**
**ಣಾಲಿಯೊಳಗಿಹ ಮತ್ಸ್ಯ ಕೂರ್ಮನು ।**
**ಕೋಲ ರೂಪನು ತ್ವಗ್ರಸನದೊಳಗಿಪ್ಪ ನರಸಿಂಹ ॥**
**ಬಾಲ ವಟು ವಾಮನನು ನಾಶಿಕ ।**
**ನಾಳದೊಳು ವದನದಲಿ ಭಾರ್ಗವ ।**
**ವಾಲಿಭಂಜನ ಹಸ್ತದೊಳು ಪಾದದಲಿ ಶ್ರೀ ಕೃಷ್ಣ ॥ ೩೪ ॥**

**ಪದ್ಯಾರ್ಥ:** ಮೂಲರೂಪನು ಮನದೊಳಿಹ=ಮೂಲರೂಪಿ ನಾರಾಯಣನು, ಸ್ವರೂಪೇಂದ್ರಿಯ ಮನಸ್ಸಿನಲ್ಲಿರುವನು. ಶ್ರವಣಾಲಿಯೊಳು ಶ್ರವಣ-ಕಿವಿ, ಆಲಿ, ಕಣ್ಣು, ಮತ್ಸ್ಯ-ಕೂರ್ಮರೂಪ ಎರಡು, ತ್ವಕ್ಕಿನಲ್ಲಿ= ಕೋಲರೂಪಿ (ವರಾಹ) ರಸನ=ಜಿಹ್ವೆಯಲ್ಲಿ ನರಸಿಂಹ, ನಾಶಿಕ ನಾಳ ದೊಳು=ಎರಡೂ ಮೂಗಿನ ಹೊಳ್ಳೆಗಳು. ಘ್ರಾಣದಲ್ಲಿ, ವಾಮನದೇವರು ಇರುವರು. ವದನದಲಿ=ಮುಖದಲ್ಲಿ=ಭಾರ್ಗವ=ಭೃಗು ಕುಲೋದ್ಭವ ಪರಶುರಾಮನು ಇರುವನು. ಹಸ್ತದಲ್ಲಿ ವಾಲಿಭಂಜನ=ವಾಲಿ ಎಂಬ ವಾನರನನ್ನು ಸಂಹರಿಸಿದ ರಾಮದೇವರು. ಹಸ್ತಗಳಲ್ಲಿ (ಪಾಣಿಯಲ್ಲಿ)

ಪಾದದಲಿ, ಶ್ರೀ ಕೃಷ್ಣಾ=ಸ್ವರೂಪೇಂದ್ರಿಯ ಪಾದಗಳಲ್ಲಿ ಶ್ರೀ ಕೃಷ್ಣರೂಪಿ ಹರಿಯು ಇರುತ್ತಾನೆ. ಉತ್ತಮಾನಾಂ ಸ್ವರೂಪಂತು ಪಾದ ಶಬ್ದೇನ ಭಣ್ಯತೇ=ಪಾದಶಬ್ದವು ಉತ್ತಮರೆಂದು ಸೂಚಿಸಲು ಹೇಳಿದೆ. ಸರ್ವೋತ್ತಮನಾದ ಶ್ರೀ ಕೃಷ್ಣನು ಜೀವನಸ್ವರೂಪ ಇಂದ್ರಿಯ ಪಾದದಲ್ಲಿರುವ ಕಾರಣ ಸಕಲ ಯುಗಗಳಲ್ಲಿ ಸಕಲ ಸಜ್ಜನರು ಸಕಲ ಕ್ರಿಯೆಗಳನ್ನು ಶ್ರೀ ಕೃಷ್ಣಾರ್ಪಣವೆಂದು ಅರ್ಪಿಸುತ್ತಾರೆ. ಈ ಕೃಷ್ಣನೇ ಪ್ರಾಜ್ಞಸ್ಥೂಲ ಬಿಂಬ ಸ್ವರೂಪೇಂದ್ರಿಯ ದ್ವಾರಾ ಸ್ಥೂಲೇಂದ್ರಿಯಕ್ಕೆ ಪ್ರೇರಿಸುವನೆಂಬ ಭಾವ ಅನೇಕ ಉಪನಿಷದಾರ್ಥಗಳನ್ನು ಮಾನಸ ಸ್ಮೃತಿಯಲ್ಲಿ ವಿಸ್ತಾರವಾಗಿ ವರ್ಣಿಸಿದ್ದಾರೆ.

**ದ್ರೌಪದೀಶಪತಿ ವಿಠಲರು :** ಮೂಲರೂಪನು.

**ಭಾವಸೂಚನ :** ಮೂಲೇತಿ ॥ ೩೪ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಮೂಲೇತಿ" ನಾರಾಯಣೋ ಮನಸಿ ಶ್ರೋತ್ರಗತೌ ಸುಮೀನ ಕೂರ್ಮೌ ಧೃತಾಚ್ಚವರ ಕೋಲಹರಿ ತ್ವಚಿಸ್ಥಃ॥ ಜಿಹ್ವಾಗತೋ ನೃಹರಿಃ ದೇವವರೋ ನಸಿಸ್ಥಃ ಇಂದ್ರಾನುಜೋ ವದನಗಃ ಖಲು ಭಾರ್ಗವೋಽಜಃ॥ ಹಸ್ತಗೋ ರಾಘವಃ ಕೃಷ್ಣಃ ಪಾದಗೋ ಮಧ್ವವಲ್ಲಭಃ ॥ ಇತಿ ದೇಹ ಸಂಸ್ಥಾನೇ ॥ ೩೪ ॥

## ಕನ್ನಡಾರ್ಥ

"ಮೂಲರೂಪನು ಮನದೊಳಿಹ" ಎಂಬ ಪದ್ಯದಲ್ಲಿ ಹೇಳಿದ ನಾರಾಯಣನ ರೂಪಗಳು ಯಾವಯಾವ ಅವಯವಗಳಲ್ಲಿ ಎಂತಹವು ಇರುವವು" ಎಂಬ ವಿಷಯದಲ್ಲಿ ಪ್ರಮಾಣಗಳನ್ನು ಉದಾಹರಿಸುತ್ತಾರೆ. "ಮನಸ್ಸಿನಲ್ಲಿ ನಾರಾಯಣನು, ಎರಡೂ ಕಿವಿಗಳು ಮತ್ತು ಕಣ್ಣುಗಳಲ್ಲಿ ಮೀನ ಮತ್ತು ಕೂರ್ಮ ರೂಪಗಳು, ತ್ವಚದಲ್ಲಿ ವರಾಹನು, ಜಿಹ್ವೆಯಲ್ಲಿ ನರಸಿಂಹನು, ಮೂಗಿನಲ್ಲಿ ಇಂದ್ರಾನುಜನಾದ ವಾಮನನು (ಉಪೇಂದ್ರ), ಮುಖದಲ್ಲಿ ಭಾರ್ಗವರಾಮ (ಪರಶುರಾಮ), ಕೈಗಳಲ್ಲಿ ರಘುರಾಮನು, ।ಪಾದಗಳಲ್ಲಿ ಮಧ್ವಪತಿಯಾದ ಶ್ರೀ ಕೃಷ್ಣನು, ಹೀಗೆ ರೂಪಗಳಿವೆ" ಎಂದು "ದೇಹ ಸಂಸ್ಥಾನ" ಎಂಬ ಪ್ರಮಾಣ ವಚನದ ಅರ್ಥ ॥ ೩೪ ॥

ಅವತರಣಿಕಾ: ಬುದ್ಧ ಕಲ್ಕಿ ರೂಪಗಳು ಇರುವಿಕೆಯನ್ನು ಹೇಳಿ ಈ ಪಂಚ ಮಹಾಯಜ್ಞ ಸಂಧಿ ಉಪಸಂಹಾರಗೈಸುತ್ತಾರೆ.

ಮೂಲ:

**ಜಿನ ವಿಮೋಹಕ ಬುದ್ಧ ಪಾಯುಗ ।**
**ದನುಜ ಭಂಜನ ಕಲ್ಕಿ ಮೇಢ್ರದಿ ।**
**ಇನಿತು ದಶರೂಪಗಳ ದಶಕರಣಂಗಳಲಿ ತಿಳಿದು ॥**
**ಅನುಭವಿಪ ವಿಷಯಗಳು ಕೃಷ್ಣಾ ।**
**ರ್ಪಣವೆನಲು ಕೈಕೊಂಬ ವೃಜಿನಾ ।**
**ರ್ದನ ವರ ಜಗನ್ನಾಥ ವಿಟ್ಠಲ ವಿಶ್ವವ್ಯಾಪಕನು ॥ ೩೫ ॥**

ಅಂತು ಸಂಧಿ ೬ ಪದ್ಯ ೧೮೧ ಪಂಚಾಗ್ನಿಹೋತ್ರ ಸಂಧಿ ಸಮಾಪ್ತ
ಮಂಗಳವಾಹ ಶ್ರೀ ಗುರುಮಧ್ವೇಶಾರ್ಪಣಮಸ್ತು.

**ಪದ್ಯಾರ್ಥ**: ಜಿನ ವಿಮೋಹಕ ಬುದ್ಧ ಪಾಯುಗ=ಜಿನನೆಂಬೋ ದೈತ್ಯನಿಗೆ, ಅವನ ಸ್ವರೂಪಕ್ಕೆ ಅಯೋಗ್ಯವಾದ ಜ್ಞಾನವಾಗಿರಲು, ಶ್ರೀ ಹರಿಯು ಬುದ್ಧ ರೂಪವನ್ನು ತಾಳಿ ಅವನಿಗೆ ತಕ್ಕ ಅಜ್ಞಾನವನ್ನೇ ಕೊಟ್ಟನು. ಅನೃತನಾದರೂ ಋತ=ಸತ್ಯನೆನಿಸಿದ ಬುದ್ಧರೂಪಿಯು, ಪಾಯುತತ್ವದಲ್ಲಿ (ಗುದ) ಇರುವನು. ಧನುಜಭಂಜನ ಕಲ್ಕಿ ಮೇಢ್ರದಿ=ದೈತ್ಯರನ್ನು ಸಂಹರಿಸಿದ ಕಲ್ಕಿಯು, ಶಿಶ್ನ ಉಪಸ್ಥದಲ್ಲಿರುವನು. ಇನಿತು ದಶರೂಪಗಳ ದಶಕರಣಂಗಳಲಿ ತಿಳಿದು ಈ ಪ್ರಕಾರವಾಗಿ ಹತ್ತು ರೂಪಗಳನ್ನು, ಆ ಹತ್ತು ರೂಪಗಳ ಕಾರ್ಯವನ್ನು ಹತ್ತು ಇಂದ್ರಿಯಗಳಲ್ಲಿ ಗುರುಗಳಿಂದ ಚೆನ್ನಾಗಿ ತಿಳಿದುಕೊಂಡು, ಅನುಭವಿಪ ವಿಷಯಗಳ ಕೃಷ್ಣಾರ್ಪಣವೆನಲು ಕೈಕೊಂಬ= ನಾವು ಪ್ರತಿನಿತ್ಯ ಪ್ರತಿ ಕಾಲದಲ್ಲಿ ಅನುಭೋಗ ಮಾಡತಕ್ಕ ಸಕಲ ಇಂದ್ರಿಯ ವಿಷಯಗಳನ್ನು ಶ್ರೀ ಹರಿಯೇ ನೀನಿಂತು ಪ್ರೇರಿಸಿ ಮಾಡಿಸಿದ್ದು. ಮಧ್ವೇಶನಾದ ಕೃಷ್ಣಾ ನಿನಗೆ ಅರ್ಪಿತವಾಗಲಿ ಪ್ರೀತನಾಗು ಎಂದು ಸಮರ್ಪಿಸಲು, ವೃಜಿನಾರ್ದನ=ಪಾಪಗಳನ್ನು ಭಸ್ಮಮಾಡುವ ದೋಷದೂರನಾದ ಹರಿಯು, ಕೈಕೊಂಡು=ಸ್ವೀಕರಿಸುವನು. ವರಶ್ರೇಷ್ಠನಾದ, ಜಗತ್ತಿಗೆ ಒಡೆಯನಾದ ಜಗನ್ನಾಥವಿಠಲನು ಜಗತ್ತಿಗೆ ನಿಯಾಮಕ ಒಡೆಯನಾದರೂ ಜಗತ್ತಿನಲ್ಲಿ ವ್ಯಾಪಿಸಿರುವನು. ಸ್ವೀಕರಿಸುವ=ಆದರಿಸುವ.

**ದ್ರೌಪದೀಶಪತಿ ವಿಠಲರು : ಜಿನವಿಮೋಹಕಬುದ್ಧ.**

೬ನೇ ಸಂಧಿ ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು

**ಭಾವಸೂಚನ:** ಜಿನೇತಿ ।। ೩೫ ।।

ಇತಿ ಶ್ರೀಮತ್ಕವಿಕುಲ ತಿಲಕ ಶ್ರೀಮಜ್ಜಗನ್ನಾಥ ದಾಸಾರ್ಯ ವಿರಚಿತ ಹರಿಕಥಾಮೃತಸಾರ ಭಾವಸೂಚನೆ ಜಂಬುಖಂಡಿ ವಾದಿರಾಜ ವಿರಚಿತೇ ಪಂಚಮಹಾಯಜ್ಞ ಸಂಧಿ ಸಮಾಪ್ತ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಉಪಸಂಹರತಿ—"ಜಿನೇತಿ" ಬುದ್ಧಃ ಪಾಯುಗ ದೇವೋಽತ್ರ ಕಲ್ಕೀ ಮೇಢ್ರಗತೋ ಹರಿಃ ॥ ಇನಿತು-ಹೀಗೆ ಇತಿ ಶ್ರೀಮದ್ ಹರಿಕಥಾಮೃತಸಾರ ಟೀಕಾಯಾಂ ವ್ಯಾಸದಾಸ ಸಿದ್ಧಾಂತ ಕೌಮುದ್ಯಾಂ ವಿದ್ಯಾಧೀಶ ತೀರ್ಥ ವಿನೇಯ ಜಂಬುಖಂಡ್ಯುಪಪದ ವಾದಿರಾಜಾರ್ಯ ವಿರಚಿತಾಯಾಂ ಪಂಚಮಹಾ ಯಜ್ಞ ಸಂಧಿಃ ಸಮಾಪ್ತಃ

ಶ್ರೀ ಮಧ್ವೇಶಾರ್ಪಣಮಸ್ತು.

## ಕನ್ನಡಾರ್ಥ

ದಶೇಂದ್ರಿಯಗಳಲ್ಲಿ ತಿಳಿಯಬೇಕಾದ ಭಗವದ್ರೂಪಗಳನ್ನು ವಿವರಿಸಿ ಉಪಸಂಹರಿಸುತ್ತಾರೆ. "ಜಿನ" ಎಂಬ ಪದ್ಯದಿಂದ ಬುದ್ಧನು ಪಾಯುವಿನಲ್ಲಿ, ಕಲ್ಕಿಯು ಉಪಸ್ಥದಲ್ಲಿ ಮೇಢ್ರದಲ್ಲಿ, ಹೀಗೆ ದಶರೂಪಗಳನ್ನು ತಿಳಿಯ ಬೇಕು ಎಂದು ಅರ್ಥ ॥ ೩೫ ॥

ಶ್ರೀ ಹರಿಕಥಾಮೃತಸಾರ ಟೀಕಾ ವ್ಯಾಸದಾಸ ಸಿದ್ಧಾಂತ ಕೌಮುದಿಯ ಕನ್ನಡಾರ್ಥಾನುವಾದದಲ್ಲಿ ಪಂಚಮಹಾಯಜ್ಞ ಸಂಧಿಯು ಮುಗಿದುದು.

ಶ್ರೀ ಕೃಷ್ಣಾರ್ಪಿತವಾಗಲಿ.

॥ ಶ್ರೀ ಗುರುರಾಜೋ ವಿಜಯತೇ ॥

# ೭ನೇ ಪಂಚತನ್ಮಾತ್ರಾ ಸಂಧಿಯ ಸಾರ

ಪರಮ ಕರುಣಾಳುಗಳಾದ ಶ್ರೀ ದಾಸಾರ್ಯರು ಹಿಂದೆ ಆರನೇ ಸಂಧಿಯಲ್ಲಿ ಜೀವರಿಗೆ ಸ್ಥೂಲದೇಹ ಬರುವದು ಹೇಗೆ-ಆ ಸ್ಥೂಲ ದೇಹಸೃಷ್ಟಿ ವಿವರ-ಆದರಲ್ಲಿರುವ ೨೪ ತತ್ವಗಳು-ತತ್ವಾಭಿಮಾನಿ ದೇವತೆಗಳು. ಭಗವದ್ರೂಪಗಳ ಕಾರಣಕಾರ್ಯ, ಸಕಲವನ್ನೂ ಪಂಚರೂಪಿ ಭಗವಂತನಿಗೆ ಅರ್ಪಿಸುವ ಬಗೆಯನ್ನು ವಿವರಿಸುತ್ತಾ, ಏಕಾತ್ಮನಾದ ಬಿಂಬರೂಪಿ ಹರಿಯು, ಜೀವನ ಸ್ವರೂಪೇಂದ್ರಿಯುಗಳಲ್ಲಿ ಮತ್ಸ್ಯಾದಿ ದಶರೂಪಗಳನ್ನೆತ್ತುವ ಕಾರ್ಯ ವಿಸ್ತರಿಸಿ ಹೇಳಿದ್ದಾರೆ.

ಈಗ ೭ನೇಯ ಸಂಧಿಯಲ್ಲಿ ಸ್ಥೂಲದೇಹಗತವಾದ ಪಂಚ ಮಹಾಭೂತಗಳು ಇವುಗಳಲ್ಲಿ ಪಂಚ ತನ್ಮಾತ್ರಾಗಳಲ್ಲಿರುವ ಭಗವದ್ರೂಪ ಮಹಿಮೆಯನ್ನು ಸವಿಸ್ತರವಾಗಿ ಹೇಳುತ್ತಾರೆ. ಏಕೆಂದರೆ ಇಂಥ ಮಹಿಮೋಪೇತನಾದ ಶ್ರೀ ಹರಿಯ ಮಹಾಮಹಿಮೆಯನ್ನು ತಿಳಿದರೆ ಬಂಧವಿಮೋಚನಕ್ಕೆ ಕಾರಣವಾಗುವದೆಂದು ಶ್ರೀ ವಿಜಯದಾಸಾರ್ಯರ ವಚನ. ಇದೇ ಹಿಂದಿನ ಸಂಧಿಗೂ ಈ ಪಂಚತನ್ಮಾತ್ರಾ ಸಂಧಿಗೂ ಸಂಬಂಧ. ಪಂಚ ತನ್ಮಾತ್ರಾಗಳಿಂದ ಜನಿಸುವ ಮೋಹಾದಿಗಳನ್ನು ಪರಿಹರಿಸಲು ಉಪಾಯ ಹೇಳಿದ್ದಾರೆ.

ಈ ಸಂಧಿಯಲ್ಲಿರತಕ್ಕ ಪ್ರಮೇಯವು ಬಹುಗೂಢವೂ ಸೂಕ್ಷ್ಮತರವೂ ಆದುದು. ಅದನ್ನು ಶ್ರೀ ದ್ರೌಪದೀಶ ಪತಿವಿಠಲರೂ ಶ್ರೀ ಜಂಬುಖಂಡಿ ವಾದಿರಾಜಾಚಾರ್ಯರೂ ಪ್ರಮೇಯರಹಸ್ಯಗಳನ್ನು ಉಪನಿಷತ್ತು ಆಧಾರಗಳೊಂದಿಗೆ ವಿಸ್ತರಿಸಿರುತ್ತಾರೆ.

೧ನೇ ಪದ್ಯದಲ್ಲಿ ಮೊದಲಿಗೆ ಸ್ಥೂಲ ದೇಹಗತ ಪಂಚಭೂತಗಳ ಪಂಚವೃತ್ತೀಕರಣವನ್ನು ದಿಙ್ಮಾತ್ರದಿಂದ ಪೇಳುತ್ತಾ, ಪಂಚಭೂತ ತಮೋಗುಣೋತ್ಪನ್ನ ಶಬ್ದಸ್ಪರುಶ-ರೂಪ-ರಸಗಂಧ ಗುಣಗಳು, ವ್ಯಾಮೋಹಕವಾದ ಬಂಧಕಗಳಿವು. ಇವುಗಳಲ್ಲಿಪ್ಪ ಶ್ರೀ ಹರಿಯ ರೂಪಗಳ ಗುಣೋಪಾಸನೆ ಮಾಡಿದರೆ ಬಂಧ ನಿವೃತ್ತಿಯಾಗುವದೆಂದು ದಾಸಾರ್ಯರು ಪೇಳುತ್ತಾರೆ.

ಭೂ=ಪೃಥ್ವಿ, ಸಲಿಲ=ಅಪ್ಪು, ಶಿಖಿ=ತೇಜ, ಪವನ=ವಾಯು, ಭೂತಾಕಾಶ=ಸಮಸ್ತ ಜಗತ್ತಿನಲ್ಲಿ ವ್ಯಾಪಿಸಿದ, ಸ್ಥೂಲವಾದ ಆಕಾಶ, ಈ ಐದೂ ಭೂತಗಳಲ್ಲಿ ಒಂದರೊಳಗೊಂದು ಸಂಸೃಷ್ಟವಾಗಿ ಕೂಡಿಕೊಂಡಿರುವವು. ಸೃಷ್ಟಿಯಲ್ಲಿ ಪಂಚಭೂತಗಳು ಒಂದೊಂದರಲ್ಲಿ ೨೦ ಅಂಶದಿಂದ ಕೂಡಿಸಿ ಕಾರ್ಯವಾಡುವನು ಶ್ರೀಹರಿಯು. ಪೃಥ್ವಿಯಲ್ಲಿ ಪೃಥ್ವಿ-ಅಪ್ಪು-ತೇಜ-ವಾಯು-ಆಕಾಶ ಗುಣಾಂಶಗಳು ಕೂಡಿರುವವು. ಇದರಂತೆ ಆಕಾಶ, ವಾಯು, ತೇಜ, ಸಲಿಲ, ಪೃಥ್ವಿ ಗುಣಗಳಲ್ಲಿ ಐದು ಪ್ರಕಾರವಾದರೆ ೨೫ ಗುಣಗಳು ಮಿಳಿತವಾಗಿರುವವು. ಇದರಂತೆ ತಮೋ ಗುಣದಿಂದ ಬದ್ಧವಾದ ಪಂಚ ತನ್ಮಾತ್ರಾ. ಆಕಾಶದಿಂದ ಶಬ್ದ, ಗುಣ, ಸ್ತ್ರೀಯರ ಸಂಗೀತಾದಿ ಕೇಳುವದರಿಂದ ಬಂಧಕವು. ವಾಯುವಿನಿಂದ=ಸ್ಪರ್ಶ ಗುಣ=ಸ್ತ್ರೀ ಆಲಿಂಗನಾದಿ ವ್ಯಾಮೋಹ, ತೇಜದಿಂದ=ರೂಪ, ಸ್ತ್ರೀ ಮುಖಾಲಂಕಾರಗಳನ್ನು ನೋಡುವದು ಬಂಧಕ. ಅಪ್ಪುವಿನಿಂದ ರಸೋತ್ಪತ್ತಿ. ರಸನವಾದ ಜಿಹ್ವೇಂದ್ರಿಯದಿಂದ ಒಳ್ಳೆ ರುಚಿಕರವಾದ ಪದಾರ್ಥ ಮೆಲ್ಲುವದು. ಪೃಥ್ವಿಯಿಂದ=ಗಂಧ ಗುಣ. ಇದರಿಂದ ಸರಸ ಕಾಮೋಪವಿಹಾರವಾದ ಸುಗಂಧಾದಿಗಳನ್ನು ಮೂಸಿ ನೋಡುವಿಕೆ. ಈ ಪಂಚ ತನ್ಮಾತ್ರಾ, ತತ್ತದ್ಗುಣಗಳಲ್ಲಿಯೂ ಒಂದು ಶಬ್ದದಲ್ಲಿ ಪೃಥಿವ್ಯಾದಿ ೫ ಭೂತಗುಣಗಳು ಸಮ್ಮಿಳಿತವಾಗಿವೆ. ಒಟ್ಟಿಗೆ ಶಬ್ದಾದಿ ಐದರಲ್ಲಿ ಪೃಥಿವ್ಯಾದಿ ೫ ರಂತೆ ೨೫ ಗುಣಗಳು, ಒಟ್ಟಿಗೆ ಐವತ್ತು ಗುಣಗಳು, ಅಜಾದಿ ಶ್ರೀ ಹರಿಯ ರೂಪಗಳು. ಳಂ ಲಾಳೂಕ=ಪ್ರಾಣೇ ಎಂಬುವಂತೆ ೫೦ ಗುಣಗಳಲ್ಲಿ ೫೦ ರೂಪಗಳು. ಕ್ಷಂ=ಲಕ್ಷ್ಮೀನರಸಿಂಹಾಯನಮಃ=ಜೀವೆ, ಬಿಂಬರೂಪನಾದ ಹರಿಯು ಅಜಾದಿ ೫೧ ವರ್ಣಗಳಿಂದ ಪಂಚ ಭೂತ, ಪಂಚ ತನ್ಮಾತ್ರಾ ಗುಣಗಳಲ್ಲಿ ಮತ್ತು ಶರೀರಗಳಲ್ಲಿ, ಶರೀರಗತ ಕಮಲಗಳಲ್ಲಿ ವ್ಯಾಪಿಸಿದ್ದು, ರೂಪಗಳನ್ನೂ ತತ್ತದ್ರೂಪ ಕಾರ್ಯಪ್ರವೃತ್ತಿ ಗುಣಧರ್ಮಗಳನ್ನೂ ಜ್ಞಾನಿಗಳಾದ ಗುರುಗಳಿಂದ ತಿಳಿದು, ಉಪಾಸನೆ ಮಾಡಿದರೆ, ಸುರರಾದ ದೇವತೆಗಳಿಗೂ, ಮುಕ್ತಿಯೋಗ್ಯರಾದ ತೃಣಜೀವ ಪರಿಯಂತವಾಗಿ ಸುಜೀವರಿಗೂ ನಿತ್ಯಾನಂದಾವಿರ್ಭಾವ ಲಕ್ಷಣ ಸುಖರೂಪ ಮುಕ್ತಿಯನ್ನೂ, ಅಸುರರಾದ ದೈತ್ಯರಾರಂಭಿಸಿ ಮನುಜಾಧಮಾದಿ ತಮೋ ಜೀವಿಗಳಿಗೆ ಅವರ ಸಾಧನದಂತೆ ಅಸುಖ=ದುಃಖ

ವಾದ ತಮಸ್ಸನ್ನೂ ಕೊಡುವನು. ಭಗವದ್ಭಕ್ತರಾದ ಭಕ್ತರಲ್ಲಿ ತನ್ನಲ್ಲಿ ದ್ವೇಷ ಮಾಡುವವರನ್ನು ಬಂಧಿಸುವನೆಂದು, ದಾಸಾರ್ಯರು ಈ ಸಂಧಿಯ ಪೀಠಿಕಾ ರೂಪವಾಗಿ ಹೇಳುತ್ತಾರೆ. ಮುಂದೆ ಈ ಅಜಾದಿ ೫೧ ವರ್ಣಗಳಿಗೆ ಉತ್ಪತ್ತಿ ಪ್ರಣವ ಓಂಕಾರ ರೂಪದಿಂದಲೇ ಆಗುತ್ತದೆಂಬುದನ್ನೂ ಮರೆಯಕೂಡದೆಂದು ದಾಸಾರ್ಯರು ಪ್ರಣವ=ಓಂಕಾರ ಪ್ರತಿಪಾದ್ಯನಾಹ ಶ್ರೀಹರಿಯು, ಓಂಕಾರ ಗತವಾದ ಅಕಾರ, ಉಕಾರ, ಮಕಾರ ಮೂರು ರೂಪಗಳಿಂದ ದೇಹಗತವಾದ ಮೂರು ಸ್ಥಾನಗಳಲ್ಲಿ ಅಂದರೆ ನೇತ್ರದಲ್ಲಿ ಅಕಾರ ವಾಚ್ಯ ವಿಶ್ವ, ಕಂಠದಲ್ಲಿ ಉಕಾರ ವಾಚ್ಯ ತೈಜಸನು, ಹೃದಯದಲ್ಲಿ ಮಕಾರ ವಾಚ್ಯ ಪ್ರಾಜ್ಞನು, ಮೂರು ಸ್ಥಾನಗಳಲ್ಲಿರುವನು. (ಈ ವಿಶ್ವಾದಿ ೮ ರೂಪಗಳಿಂದಲೇ ಅಜಾದಿ ೮ ವರ್ಗ ವರ್ಣಗಳ ಉತ್ಪತ್ತಿ ಎಂಬುದು ತಂತ್ರಸಾರ ವಾಕ್ಯವನ್ನು ಮರೆಯ ಲಾಗದು) ಇವೇ ಅವಸ್ಥಾತ್ರಯ ರೂಪಗಳು.

ಈತನೇ ಅನಿರುದ್ಧನು. ತ್ರಿಪಂಚಕ=೧೫ ರೂಪನು. ಅಂದರೆ ಈ ಅನಿರುದ್ಧ-ಪ್ರದ್ಯುಮ್ನ-ಸಂಕರ್ಷಣ-ವಾಸುದೇವ-ನಾರಾಯಣ ಈ ಐದು ಅಂಶ ರೂಪಗಳಿಂದ ಕಣ್ಣಿನಲ್ಲಿ ೫ ರೂಪ, ಕಂಠದಲ್ಲಿ ೫ ರೂಪ, ಹೃದಯದಲ್ಲಿ ೫ ರೂಪದಿಂದ ಇರುವನು. ಏಕವಿಂಶತಿ ೨೧ ರೂಪದಿಂದ ಅಂದರೆ ಪಂಚ ಜ್ಞಾನೇಂದ್ರಿಯ (೫) ಪಂಚ ಕರ್ಮೇಂದ್ರಿಯದಲ್ಲಿ (೫) ಪಂಚ ಭೂತ ಗಳಲ್ಲಿ (೫) ಪಂಚತನ್ಮಾತ್ರಾದಿಗಳಲ್ಲಿ (೫) ಮನಸ್ಸಿನಲ್ಲಿ (೧) ಹೀಗೆ ೨೧ ರೂಪ ಗಳಿಂದ ಆಯಾ ಕಾರ್ಯಪ್ರವೃತ್ತಿ ಮಾಡುವನು. (ಸೃಷ್ಟಿ ಪ್ರಕರಣ ವೈಜ್ಞಾ ನಿಕ ಸೂಕ್ಷ್ಮ ವಿಷಯವಿದು.)

(ಚತುರ ವಿಂಶತಿಗಳೆಂದರೆ ಮೇಲಿನವು ೨೧ ತತ್ವ ರೂಪಗಳು; ಮೂಲ ಮೂರ್ತಿ ೧ ಹೀಗೆ ೨೫ ರೂಪಗಳು, ಹೀಗೆಂದು ಕೆಲವರ ಅಭಿಪ್ರಾಯ) ಇನ್ನು ಇವೇ ರೂಪ ೨೪ಕ್ಕೆ ಮತ್ತು ಸತ್ವಗುಣ ನಿಯಾಮಕ ವಿಷ್ಣು, ರಜೋಗುಣ ನಿಯಾಮಕ ಬ್ರಹ್ಮ, ತಮೋಗುಣ ನಿಯಾಮಕ ರುದ್ರನಾಮಕ ಹರಿ ಹೀಗೆ ಮೂರರಿಂದ ೨೪ × ೩ = ೭೨ ರೂಪ. ಇದಕ್ಕೆ ಬೃಹತೀ ಸಹಸ್ರ ಋಕ್ಕಿನಿಂದ ಹೆಚ್ಚಿದರೆ ೭೨೦೦೦ ಸಹಸ್ರ ನಾಡಿಗಳಲ್ಲಿ ಓಂಕಾರ ಪ್ರತಿಪಾದ್ಯನೆ ನಿಯಾಮಿ ಸುತ್ತ ಇರುತ್ತಾನೆ. ಈತನೇ ಇಡಾ, ಬಲಭಾಗ ನಾಡಿಗಳಲ್ಲಿ ೫೦೦ ರೂಪ. ಪಿಂಗಳಾ ಎಡನಾಡಿಗಳಲ್ಲಿ ೫೦೦ ರೂಪದಿಂದ ದೇಹಗತನಾಗಿರುವ ಬಹಿರ್ಮ

ರ್ಯನ ಸಹಸ್ರ ಕಿರಣಗಳಲ್ಲಿದ್ದು, ಸರ್ವತ್ರ ಪ್ರಕಾಶ ಮಾಡುತ್ತಾನೆ. ಇದು ಐತರೇಯೋಪನಿಷತ್ ವಿಚಾರ ಹೇಳಿದ್ದಾರೆ. ಅಜಾದಿ ರೂಪಗಳ ಕಾರ್ಯ ಜ್ಞಾನಿಗಳಿಂದ ತಿಳಿವುದು.

ಈ ಪ್ರಣವ ಪ್ರತಿಪಾದ್ಯ ಓಂಕಾರ ವಾಚ್ಯನೆ ಅನೇಕ ಅಂಶಗಳಿಂದ, ಜೀವ, ಲಿಂಗ, ಅನಿರುದ್ಧ, ಸ್ಥೂಲ ಈ ನಾಲ್ಕು ದೇಹಗಳ ನಾಲ್ಕು ಸ್ಥಾನಗಳಲ್ಲಿ ನೇತ್ರ, ಕಂಠ, ಹೃದಯ, ಶಿರಸ್ಸಿನ ಮೇಲೆ ಕ್ರಮವಾಗಿ ೧) ವಿಶ್ವ, ೨) ಹಯಗ್ರೀವ, ೩) ಮೂಲೇಶ-ವಿಷ್ಣು, ೪) ಅಚ್ಯುತ, ೫) ಅನಂತ, ೬) ಗೋವಿಂದ, ೭) ಹಂಸ, ಈ ಪ್ರಕಾರ ನಾಲ್ಕು ಸ್ಥಾನಗಳಲ್ಲಿ ಶಾಂತಿಪತಿಯಾದ ಅನಿರುದ್ಧನ ಅಂಶವೆ ೧) ಅನಿರುದ್ಧ-ಪ್ರದ್ಯುಮ್ನ, ೨) ಅನಿರುದ್ಧ-ಸಂಕರ್ಷಣ, ೩) ಅನಿರುದ್ಧ-ವಾಸುದೇವ, ೪) ಅನಿರುದ್ಧ-ನಾರಾಯಣ ನಾಲ್ಕು ಅನಿರುದ್ಧನ ಅಂಶರೂಪ, ಹೀಗೆ (೧೧) ರೂಪಗಳು. ವಿಶ್ವನ ಅಂಶಗಳು. ೧) ವಿಶ್ವ, ೨) ತೈಜಸ, ೩) ಪ್ರಾಜ್ಞ, ೪) ತುರ್ಯ, ೫) ಆತ್ಮ ೬) ಅಂತರಾತ್ಮ, ೭) ಜ್ಞಾನಾತ್ಮ, ೮) ಪರಮಾತ್ಮ ಹೀಗೆ ಒಟ್ಟಿಗೆ ೧೧+೮= ೧೯ ರೂಪಗಳಿಂದ ಸರ್ವತ್ರ ವ್ಯಾಪಿಸಿ ಕಾರ್ಯಪ್ರವರ್ತಕ ರೂಪಗಳನ್ನು ಜ್ಞಾನಿಗಳಿಂದೆ ತಿಳಿಯುವದೆಂದು ದಾಸರಾಯರ ಅಭಿಪ್ರಾಯ.

ಶ್ರೀಹರಿಯು ಹೇಗೆ ವ್ಯಾಪಿಸಿ ಕಾರ್ಯಗಳನ್ನು ಮಾಡುತ್ತಾನೆಂದರೆ, ನಿರ್ಮಲನಾದ, ನಿರ್ದೋಷ ನಿರ್ವಿಕಾರನಾದ ಬಿಂಬರೂಪಿ ಹರಿಯು, ಸ್ವಚ್ಛವಾದ ನಿಲುಕನ್ನಡಿಯಲ್ಲಿ ಸರ್ವ ಪದಾರ್ಥಗಳು ತೋರುವ ಪ್ರಕಾರ ಬಿಂಬರೂಪಿಯಾದ ಹರಿಯು ನಿರ್ಮಲರಾದ ನಿರ್ವಿಕಾರರಾದ ಜೀವರಂತರ್ಯಾಮಿಯಾಗಿರುವನು, ಮತ್ತು ಜಡಗತ ಸ್ಥಾವರ ಜೀವರಂತರ್ಯಾಮಿಯಾಗಿಯೂ, ಜಡವಸ್ತುಗಳಿಗೆ ಅಸ್ತಿತ್ವಕ್ಕೆ ಕಾರಣನಾಗಿ ಬಿಂಬನಾದ ಹರಿಯು ಪೊಳೆಯುವನು. ಬಿಂಬನೇ ಸಜ್ಜನರ (ಜ್ಞಾನಿಗಳ) ನಿರ್ಮಲವಾದ ಮನಸ್ಸೆಂಬ ಸ್ವಚ್ಛವಾದ ಕನ್ನಡಿಯಲ್ಲಿ ಹೊಳೆಯುವನು. ಈ ಬಿಂಬನು ನಿರಾಶ್ರಯನು. ಬೇರೊಬ್ಬರ ಆಶ್ರಯ ಈತನಿಗಿಲ್ಲ.

ಈ ಹಂಸರೂಪಿ ಹರಿಯು ಜೀವ ಸ್ವರೂಪ ದೇಹ, ಲಿಂಗ, ಅನಿರುದ್ಧ, ಸ್ಥೂಲದೇಹನಾಲ್ಕರಲ್ಲಿ ಇದ್ದು, ವಾಯು ಭಾರತೀಪತಿ ಅಂತರ್ಯಾಮಿಯಾಗಿ ಶುಚಿಯಾದ ಹಂಸನು ವಾಯುದ್ವಾರಾ ನಾಲ್ಕು ದೇಹಗಳಲ್ಲಿ ಪ್ರತ್ಪ್ರತ್ಯೇಕ

ಒಂದೊಂದು ದಿನದಲ್ಲಿ ತ್ರಿವಿಧ ಜೀವರಲ್ಲಿ ಬೇರೆ ವಿಧವಾಗಿ ೨೧,೬೦೦ ಹಂಸ ಮಂತ್ರಗಳನ್ನು ಮಾಡಿ, ವಾಯುದೇವರು, ಭಾಸ್ಕರ-ಸೂರ್ಯ ಭೇಶ=ಚಂದ್ರಮರಲ್ಲಿ ಅಂದರೆ ಎಡಬಲ ಶ್ವಾಸಗಳ ಕಾರ್ಯ ಮಾಡಿಸುತ್ತಾ, ವಾಯು ಅಂತರ್ಯಾಮಿ ಹಂಸನು ಬ್ರಹ್ಮಾಂಡದಲ್ಲಿ ಸರ್ವತ್ರ ತುಂಬಿಕೊಂಡಿರುವ ನೆಂದು ಕರುಣಾಳುಗಳಾದ ದಾಸಾರ್ಯರು ಐತರೇಯ ಷಟ್ ಪ್ರಶ್ನಗಳ ಪ್ರಮೇಯವನ್ನು ಉದಾಹರಿಸಿದ್ದಾರೆ.

ಇನ್ನು ಬಿಂಬನಾದ ಹರಿಯೇ ದೇಹಗತ. ಅನ್ನ, ಪ್ರಾಣ, ಮನೋ ವಿಜ್ಞಾನ, ಆನಂದಮಯ ೫ ಕೋಶಗಳಲ್ಲಿ ಶಿರಸ್ಸು ಹತ್ತು, ಬಾಹು ಎರಡು, ಎರಡು ಪಾದ, ಮಧ್ಯೋದರ ಒಂದು. ಈ ಮಹತ್ತರವಾದ ರೂಪದಿಂದ, ವಾಂ ಓಂ ವಾಚಾಗತನಾಗಿ ಶಬ್ದಾದಿಗಳ ಉಚ್ಚಾರ ಶಕ್ತಿ, ಮನದಲ್ಲಿ-ಮನೋ ವ್ಯಾಪಾರ ಮಾಡುವ ಶಕ್ತಿಪ್ರದನಾಗಿ ಮನೋಮಯ ವಾಙ್ಮಯ ನೆಂದು ಕರೆಸುತ್ತಾನೆ. ಮತ್ತು ೧೧ ಇಂದ್ರಿಯಗಳಲ್ಲಿ ೭ ಧಾತುಗಳಲ್ಲಿ ೭೨ ಸಹಸ್ರ ನಾಡಿಗಳಲ್ಲಿ ದೋಷದೂರನಾಗಿರುವ ಬಿಂಬರೂಪಿ ಹರಿಯೇ ಭಾರತ ಗತವಾದ ಬೃಹತೀ ಸಹಸ್ರ ಛಂದೋಮಯನಾಗಿ ದೇಹಗಳೊಳಗೆ ಶೋಭಿಸು ತ್ತಾನೆ. ಈ ವಿಷಯ ತೈತ್ತಿರೀಯ ಮತ್ತು ಬೃಹದಾರಣ್ಯಕದಲ್ಲಿ ವಿಶದೀ ಕರಿಸಿದಂತೆ ಶ್ರೀ ವಿಜಯದಾಸಾರ್ಯರು ವಾಙ್ಮನೋರೂಪಿ ಹರಿಯ ರೂಪ ಗುಣ ಸ್ತೋತ್ರಗಳನ್ನು ಒಂದು ಉಗಾಭೋಗದಲ್ಲಿ ರಚಿಸಿದ್ದಾರೆ.

ಉಗಾ. ೨೨, ವಾಙ್ಮನೋಮಯಾದಿ ಉಪಾಸನೆ ಕ್ರಮ-ಸ್ತೋತ್ರ ಸುಳಾದಿ ಪುಟ ೧೯೭ :

ಪರಮ ರಹಸ್ಯವಿದು ಕೇಳಿರಿ ಸಜ್ಜನರು । ಅರುಹುವೆ ಸಿರಿಪತಿಯ ವ್ಯಾಪಾರವಾ । ಕರುಣಿಸಿ ವಾಕುಮಯನೆನಿಸಿ । ಶಿರದಶ ತೋಳೆರಡು, ಪದ ವೆರಡು ಧರಿಸುತ್ತ । ಶಿರದೇಹದಲ್ಲಿ ನಿಂತು ತ್ರಿವಿಧರ ಮನದಲ್ಲಿಪ್ಪ । ಸುರರಿಗೆ ಬಲಭಾಗ ಪಂಚಾಸ್ಯದಿ । ಇವರಿವರ ಸ್ತ್ರೀಯರಿಗೆ ವಾಮ ಪಂಚಾಸ್ಯದಿಂದ ಪ್ರೇರಣೆ ಮಾಡುತ್ತ ಸದಕಾಲವಾ । ಶರಣವತ್ಸಲ ಸಿರಿ ವಿಜಯ ವಿಠ್ಠಲ ರೇಯ ಈ ಪರಿ ಪ್ರಾಂತಕ್ಕೆ ಕೊಡುತಿಪ್ಪ ಇವರ ಗತಿ ॥ ೧ ॥

ಈ ಪ್ರಕಾರ ವಾಙ್ಮನೋ ರೂಪನಲ್ಲದೇ ಈರೆರಡು ದೇಹ, ಜೀವ, ಲಿಂಗ, ಅನಿರುದ್ಧ ಸ್ಥೂಲ ದೇಹಗಳಲ್ಲಿ ಊರ್ಮಿ-ಷಡೂರ್ಮಿಗಳಲ್ಲಿ ಭೂತ

ಗಳಲ್ಲಿ ೧೬ ರೂಪದಿಂದ ನಾಲ್ಕು ದೇಹದಲ್ಲಿ, ೧೬ × ೪ = ೬೪ ರೂಪದಿಂದ ೬೪ ಕಲೆಗಳಿಗೆ ಪ್ರವರ್ತಕನಾಗಿ, ೧೬ ಋಕ್ ಪ್ರತಿಪಾದ್ಯ ಪುರುಷಸೂಕ್ತಮೇಯನಾಗಿ ಶ್ರೀ ವಿಷ್ಣು ನಾಮದಿಂದ ಕರೆಸುತ್ತಾ ಬ್ರಹ್ಮ ರುದ್ರ ಮೊದಲಾದ ದೇವತೆಗಳ ದೇಹದಲ್ಲಿಯೂ, ಪ್ರಾಚುರ್ಯದಿಂದ ಇದ್ದು ವಿಹರಿಸುವನು. ಹೀಗೆ ನಾಲ್ಕು ದೇಹಗಳಲ್ಲಿ ಸರ್ವ ಜೀವರಲ್ಲಿ ವಿಹಾರ ಮಾಡುವನಾದ ಕಾರಣ ಚತುಷ್ಪಾದಾಹ್ವಯ = ಚತುಷ್ಪಾದ ನಾಮದಿಂದ ಕರೆಸುತ್ತಾನೆಂದು ಹೇಳುತ್ತಾರೆ.

ಇನ್ನು ಶಬ್ದಾದಿ ಐದು ತನ್ಮಾತ್ರಾಗಳ ಅಭಿಮಾನಿ ದೇವತೆಗಳಲ್ಲಿ ಶ್ರೀಹರಿಯು ನಾರಾಯಣ ರೂಪದಿಂದ ಪ್ರವಿಷ್ಟನಾಗಿರುವನೆಂದೂ, ತೃಣ ಜೀವರಾರಂಭಿಸಿ ಬ್ರಹ್ಮದೇವರ ಪರಿಯಂತವಾಗಿ, ಲಿಂಗ–ಅನಿರುದ್ಧ–ಸ್ಥೂಲ ಮೂರು ದೇಹಗಳಲ್ಲಿ ನಾರಾಯಣ ಶಬ್ದ ವಾಚ್ಯನಾಗಿ ಪ್ರಕೃತಿ ಪರಮಾಣುಗಳಂತೆ ೧೫೨೬ ರೂಪಗಳಿಂದ ಇರುವನೆಂದೂ ತಿಳಿಯುವದು. ಈ ನಾರಾಯಣನೇ ಸೂರ್ಯ ಮಂಡಲ ಮಧ್ಯದಲ್ಲಿದ್ದು ಕರುಣಾಳುವಾದುದರಿಂದ ಘೃಣಿ ಎಂದು ಜ್ಞಾನದಿಂದ ತಿಳಿಯುವದರಿಂದ ಅಥವಾ ಜ್ಞಾನಿಗಮ್ಯನಾದುದರಿಂದ ಆದಿತ್ಯ ಅಥವಾ ಸರ್ವ ವ್ಯಾಧಿಗಳನ್ನು ನಾಶಮಾಡುವದರಿಂದ ಆದಿತ್ಯನೆಂದೂ, "ಸೂರ್ಯ ಮಂತ್ರಗತ ನಾರಾಯಣನೇ "ಘೃಣಿ–ಸೂರ್ಯ–ಆದಿತ್ಯ"ನೆಂಬ ಈ ಸೂರ್ಯ ಮಂತ್ರ ನಿತ್ಯದಲ್ಲಿ ಬಿಡದೇ ಜಪಿಸುವವರಿಗೆ ಆರೋಗ್ಯ ಭಾಗ್ಯವನ್ನು ಕೊಡುವನೆಂದು ಹೇಳುತ್ತಾರೆ. (ತಂತ್ರಸಾರ)

ಈ ಘೃಣಿ ರೂಪವು ಲಿಂಗದೇಹದಲ್ಲಿ, ಸೂರ್ಯ ರೂಪವು ಅನಿರುದ್ಧ ದೇಹದಲ್ಲಿ, ಆದಿತ್ಯ ರೂಪವು ಸ್ಥೂಲದೇಹದಲ್ಲಿರುವುದೆಂದು ದ್ರೌಪದೀಶಪತಿ ವಿಠಲರ ಸೂಚನೆ. ಅನಾರೋಗ್ಯವಾದ ತಾಪತ್ರಯಾದಿ ಆದಿಭೌತಿಕದಲ್ಲಿ ೫೭೪, ಅಧ್ಯಾತ್ಮದಲ್ಲಿ ೧೦೨೧, ಅಧಿದೈವದಲ್ಲಿ ೨೩೧, ಪ್ರಕೃತಿ ಪರಮಾಣುಗಳಂತೆ ವಿಪ್ರರು ತಿಳಿಯಬೇಕೆಂದು ಉಪದೇಶಿಸುತ್ತಾರೆ. ಮುಂದೆ ಈ ಆರೋಗ್ಯಭಾಗ್ಯ ಕೊಡುವ, ಸೂರ್ಯ ಚಂದ್ರಾದಿಗಳಲ್ಲಿಪ್ಪ ರೂಪಗಳನ್ನು ವಿಸ್ತರಿಸುತ್ತಾರೆ. ಸುರುಚಿ ಪರಮಾತ್ಮನಿಗೆ ಸೂರ್ಯನಲ್ಲಿ ಪ್ರೀತಿ ಉಳ್ಳವನಾಗಿ ರುಚಿ ಕಾಂತಿ ಪ್ರದನಾದುದರಿಂದ ಸೂರ್ಯನಲ್ಲಿ ಸುರುಚಿ ನಾಮಕ ಸಂಕರ್ಷಣ, ಶಾರ್ವರಿಕರ = ರಾತ್ರಿಯನ್ನು ಬೆಳಗಿಸುವನು. ಶೃ–ಹಿಂಸಾ ಎಂಬ

ಅರ್ಥ ಅಸುರರ ಹಿಂಸೆಯನ್ನು ಮಾಡುವದರಿಂದ ಶರ್ವರೀಕರ, ಚಂದ್ರನಲ್ಲಿ ಪ್ರದ್ಯುಮ್ನ ರೂಪ, ಹೀಗೆ ಚಂದ್ರ ಸೂರ್ಯಾದಿಗಳಲ್ಲಿ ಪ್ರಕೃತಿ ಪರಮಾಣು ಗಳಂತೆ, ೩೬೦ ರೂಪಗಳಿಂದ-ಅಹನಾಮದಿಂದ ಪದಾರ್ಥಗಳಿಗೆ ಪ್ರಕಾಶ ವನ್ನು ಕೊಡುವದರಿಂದ "ಅಹಃ"ವೆಂತಲೂ ಅಹ ಸಂವತ್ಸರ=ಸಮ್ಯಕ್ಸ್ವಹ್ನಃ ಪ್ರವರ್ತಕನಾದುದರಿಂದ ಅಹಃ ಸಂವರ್ತಕನೆಂತಲೂ, ಸಂವತ್ಸರ=ಸಂವಸಂತಿ ಭೂತಾನ್ಯಸ್ಮಿನ್ನಿತಿ, ಸಂವತ್ಸರನೆಂತಲೂ, ಈ ಪ್ರಕಾರ ತಿಳಿದು ಜಪಿಸುವವರಿಗೆ ಅಧ್ಯಾತ್ಮಾದಿ ತಾಪತ್ರಯ ಕಳೆದು ಆರೋಗ್ಯ ಭಾಗ್ಯವನ್ನು ಕೊಡುವನಾದ ಆನಂದಮಯ ನಾಮಕನನ್ನು ಚಿಂತಿಸಿ ಜಪಿಸಬೇಕು. ಈ ಪ್ರಕಾರದಿಂದ ಅಜಾದಿ ೫೧ ವರ್ಣ ಪ್ರತಿಪಾದ್ಯನಾದ ಶ್ರೀ ಲಕ್ಷ್ಮೀಪತಿಯಾದ ಹರಿಯು, ಸರ್ವರೊಳಗೆ ಮತ್ತು ಬಾಹಿರದಲ್ಲಿ ಬ್ರಹ್ಮಾಂಡದಲ್ಲಿ-ಬಹಿರ್ಬ್ರಹ್ಮಾಂಡನವಾ ವರಣದಲ್ಲಿಯೂ, ನವಾವರಣ ಮೀರಿದ ಅವ್ಯಾಕೃತಾಕಾಶದಲ್ಲಿಯೂ ಅಪ್ರತಿಘ ನಾಗಿ ಓತಪ್ರೋತ ರೂಪದಿಂದ ವ್ಯಾಪಿಸಿ ಸಮಸ್ತ ವೇದ ವೇದಾಕ್ಷರ ಸನ್ನಿಹಿತ ನಾಗಿ, ವ್ಯಾಕರಣ ಶಾಸ್ತ್ರದಲ್ಲಿ ಅಜಾದಿ ೫೧ ರೂಪದಿಂದ ಪ್ರವರ್ತಕ. ಭಾರತವೇ ಮುಖ್ಯವಾಗಿ ಅನೇಕ ಶಾಸ್ತ್ರ ಪುರಾಣಗಳು-ತದ್ಭಾಷ್ಯಗಳ ಸಮೂಹಗಳಲ್ಲಿ ಅಜಾದಿ ೫೧ ವರ್ಣದಿಂದಲೇ ಬಾದರಾಯಣ ದೇವರು ರಚಿಸಿರುತ್ತಾರೆ. ಈ ರೂಪಗಳೆಲ್ಲ, ಮನೋವಾಙ್ಮಯವೆಂದು ಕರೆಸಿಕೊಳ್ಳು ತ್ತವೆ. ಈ ಪರಮಾತ್ಮ ಭಾರಭೃನ್ನಾಮಕನಾಗಿ ಎಂದು, ವಿಷ್ಣು ಸಹಸ್ರ ನಾಮದಲ್ಲಿ ದೇವರಿಗೆ ಹೆಸರು. ಭಾರ=ರಮಾದೇವಿಯನ್ನು ಭೃತ=ಧರಿಸಿ, ಪೋಷಿಸಿ ರಮೆಗೆ ಆನಂದವನ್ನು ಕೊಡುವನಾದುದರಿಂದ ಭಾರಭೃತುಯೆಂದು ಹೆಸರುಳ್ಳ ಭಾ=೪, ರ=೨. ಭ=೪ ರ=೨ ಭೃ=೬ ತ=೧ ಹೀಗೆ ಗುರು ವೃತ್ತ ನಿಯಮ ೧೬೨೪ ರೂಪ ಪ್ರಕೃತಿ ಪರಮಾಣುಗಳಂತೆ ಇಷ್ಟು ರೂಪ ಗಳಿಂದ ಚರ=ಚೇತನ, ಅಚರ=ಜಡಗಳಲ್ಲಿ ಸರ್ವತ್ರ ತುಂಬಿಕೊಂಡಿರು ವನು. ೬×೪=ಇಪ್ಪತ್ತು ನಾಲ್ಕು ತತ್ವ ಜಡಭೂತವಾದವುಗಳಲ್ಲಿ ೨೪ ರೂಪದಿಂದ ಇರುವನು. ಚೇತನರಲ್ಲಿ ೧೬ ಹದಿನಾರು ರೂಪ ಪ್ರತಿಯೊಬ್ಬರ ಸ್ಥೂಲ ದೇಹದಲ್ಲಿ ಅವರವರ ಗುಣ ನಾಮರೂಪ ಕ್ರಿಯಾ ಅನ್ನಾದಿ ೧೬ ಕಲೆ ಗಳಲ್ಲಿ ೧೬ ರೂಪವಿದೆಂದು ಶ್ರೀ ವಿಜಯದಾಸರ ವಚನದಂತೆ ಚಿಂತನೆ ಮಾಡಿ ದರೆ ಶ್ರೀಹರಿಯು ತನ್ನ ರೂಪಗಳನ್ನು ಸರ್ವತ್ರದಲ್ಲಿ ಜ್ಞಾನಿಗಳಿಗೆ ತೋರು

ವನು. ಬಂಗಾರ ವಸ್ತುಗಳಲ್ಲಿ ನವರತ್ನಾದಿ ಮಣಿಗಳು ಶೋಭಿಸುವಂತೆ ಬ್ರಹ್ಮಾಂಡಕ್ಕೆ ಆಧಾರನಾಗಿಯೂ, ಆಧೇಯ=ಆಶ್ರಯ ಕೊಡುವನಾಗಿ ಬ್ರಹ್ಮಾಂಡಗತ ವಸ್ತುಗಳಲ್ಲಿದ್ದು ಆಧಾರ=ಮೂಲ, ಆಧೇಯ=ಆಶ್ರಯ ಹೊಂದುವನಾಗಿ ಆ=೨ ಧಾ=೪ ರ=೨ ಹೀಗೆ ೨೪೨ ರೂಪ, ಆ=೨ ಧೇ=೪ ಯ=೧, ೨೪೧ ರೂಪಗಳಿಂದ ಪ್ರಕೃತಿ ಪರಮಾಣುಗಳಂತೆ ರೂಪವನ್ನು ಧರಿಸಿ ಕೊಂಡಿಹನೆಂದು ಅರಿವುದು ಅಧಮಾಧಿಕಾರಿಗಳ ಯೋಗ್ಯತೆ. ರೂಪಗಳನ್ನು ನೋಡುವದು. ಕಿಂಚಿತ ಮಧ್ಯಮಾಧಿಕಾರಿಗಳ ಯೋಗ್ಯತಾನುಗುಣ. ರೂಪ ನೋಡಿ ತತ್ತತ್ ಕಾರ್ಯಗುಣ ತಿಳಿದು ಕೊಂಡಾಡುವದು ಉತ್ತಮಾಧಿಕಾರಿ ಗಳ ಅಧಿಕಾರ.

ಒಟ್ಟಿಗೆ ಎಲ್ಲ ರೂಪಗಳ ಸಂಖ್ಯಾಮಿಳನ ಮಾಡಿದರೆ ಸರ್ವ ಪದಾರ್ಥ ಗಳಲ್ಲಿ ೨೦೦೪ ರೂಪಗಳಾಗುವವು. ಹೀಗೆ ಸರ್ವ ಪದಾರ್ಥಗಳಲ್ಲಿ ಶ್ರೀವರನ ರೂಪಗಳ ನೋಡುತ್ತಾ ಪೂಜಾ ಮಾಡಬೇಕು. ಇಷ್ಟಾರ್ಥವಾದ ಮುಕ್ತಿ ಸಾಧನವಾದ ಯೋಗ್ಯ ವರಗಳನ್ನು ಬೇಡಬೇಕು. ಶ್ರೀಹರಿಯನ್ನು ತುತಿಸ ಬೇಕಲ್ಲದೆ, ವ್ಯರ್ಥವಾಗಿ ಸುಮ್ಮನೆ ಏನು ತಿಳಿಯದೇ ಮುಂಜಾವಿನಲ್ಲಿ ನದ್ಯಾದಿ ಜಲಗಳಲ್ಲಿ ಮುಳುಗಿ ಬಿಸಿಲೊಳಗೆ ತಪಿಸುತ್ತಾ, ಬೆರಳುಗಳು ಎಣಿಸಿ ಜಪ ಮಾಡಿದರೆ ಏನೂ ಫಲವಿಲ್ಲ. ಹಿರಿಯರಾದ ಜ್ಞಾನಿಗಳನ್ನು ಅನುಸರಿಸಿ ಈ ವಿಧವಾದ ಎಲ್ಲ ಉಪನಿಷತ್ ರಹಸ್ಯವಾದ ಪ್ರಮೇಯ ಗುಟ್ಟನ್ನು ಅರಿ ಯದ ನರನು, ಜಲದಲ್ಲಿ ಮುಳುಗಿ ಬಿಸಿಲಲ್ಲಿ ತಪಸ್ಸು ಮಾಡಿದರೂ ಏನೂ ಪ್ರಯೋಜನವಿಲ್ಲ. ಈ ಎಲ್ಲ ಅಧ್ಯಾತ್ಮ ಆಧಿಭೌತಿಕ ಆಧಿದೈವಿಕ ತಾಪತ್ರಯ ಪರಿಹರಿಸಲು, ಇಷ್ಟು ರೂಪಗಳಿಂದ ಕಾರ್ಯ ಮಾಡುವನಲ್ಲದೆ ಎಲ್ಲಕ್ಕೂ ಮೂಲ ಭೂತವಾದ ಜೀವನ ಚಿದ್ದೇಹ=ಸ್ವರೂಪ ದೇಹದಲ್ಲಿ ನರಸಿಂಹ ರೂಪ ದಿಂದ ೮೦೭೨೫ ರೂಪದಲ್ಲಿದ್ದು, ಜೀವರಿಗೆ ಹಗಲು ರಾತ್ರಿಯಲ್ಲಿ ನಿತ್ಯ ಬರುವ ಅಪಮೃತ್ಯು, ಅಕಸ್ಮಾತ್ತಾಗಿ ಒದಗುವ ಮೃತ್ಯುವಿಗೆ, ನರಸಿಂಹನು ಮೃತ್ಯು ವೆನಿಸುತ್ತಾನೆ. ಕಾರಣ ಭೃತ್ಯ ಭಕ್ತವತ್ಸಲನು, ಭಕ್ತರ ಭಯ ವಿನಾಶ ಕನೂ, ತಾನು ನಿತ್ಯದಲ್ಲಿ ಕ್ಷರ ಅಕ್ಷರರಲ್ಲಿ ಬಿಡದೇ ಇರುವ ಭಾಗ್ಯ ಸಂಪ ನ್ನನೂ ಆದ ಶ್ರೀ ನರಸಿಂಹನು ಭೃತ್ಯರನ್ನು ಸಂರಕ್ಷಿಸುವನು. ಇನ್ನು ಇದೇ ನರಸಿಂಹ ರೂಪಿಯೇ ಜ್ವರದಲ್ಲಿ ೨೭ ರೂಪದಿಂದ ಹರನೊಳಗೆ ೨೮ ರೂ

ದಿಂದಲೂ, ಒಟ್ಟಿಗೆ ಮಿಳಿತ ೫೮೨೭ ರೂಪದಿಂದ ಜ್ವರ ಹರ ನಾಮದಿಂದ ಶ್ರೀ ನರಸಿಂಹನ ಸ್ಮರಣೆ ಮಾಡಿದರೆ, ಹಿಮಪರ್ವತವು ಸೂರ್ಯನ ಕಿರಣಗಳಿಗೆ ಕರಗುವಂತೆ ದುರಿತ ಸಮೂಹಗಳು ಇರದೇ ಹೋಗುವವು. ಈ ಕಾರಣದಿಂದ ಒಂದು ಮಾಸ ಪರಿಯಂತರವಾಗಿ, ಕೃಷ್ಣಾಜಿನಾದಿ ಜಿತಾಸನದಲ್ಲಿ ಕುಳಿತು ನಿಷ್ಕಪಟ ಬುದ್ಧಿಯಿಂದ ಏಕಾಗ್ರ ಚಿತ್ತನಾಗಿ ಶ್ರೀ ನೃಸಿಂಹ ಮಹಾಮಂತ್ರವನ್ನು ಜಪಿಸಬೇಕು. ಇದರಲ್ಲಿ ಬೇಸರಗೊಳ್ಳಬಾರದು. ಹೀಗೆ ಏಕಾಗ್ರತೆಯಿಂದ ಒಂದು ತಿಂಗಳ ಪರಿಯಂತವಾಗಿ ಸದಾಚಾರದಿಂದ ಜಪ ಮಾಡಲು, ಸಮಸ್ತ ಪಾಪಗಳನ್ನು ನಾಶಮಾಡಿ ಕಡೆಗೆ ಪರಗತಿಯಾದ ಮುಕ್ತಿಯನ್ನು ಕೊಡುವನು. ಈ ನೃಸಿಂಹಗೆ ಅಭಿನ್ನರಾದ ಕಾಲ ಪ್ರವರ್ತಕರಾದ ವಾಸುದೇವಾದಿ ನಾಲ್ಕು ರೂಪಗಳಿಂದ ೩೦ ರೂಪದಿಂದ ಬ್ರಹ್ಮದೇವರಲ್ಲಿ ವಾಸುದೇವ, ೨೭ ರೂಪದಿಂದ ವಾಯುದೇವರಲ್ಲಿ ಸಂಕರ್ಷಣ, ೨೫ ರೂಪದಿಂದ ಸರಸ್ವತಿ ದೇವಿಯರಲ್ಲಿ ಪ್ರದ್ಯುಮ್ನ, ೧೮ ರೂಪದಿಂದ ಭಾರತೀದೇವಿಯಲ್ಲಿ ಅನಿರುದ್ಧ, ೧೦೦. ಈ ಪ್ರಕಾರ ೧೦೦ ವರುಷಗಳಲ್ಲಿ ಚತುರಾತ್ಮಕನ ಪಾದವನ್ನು ಸ್ಮರಿಸಬೇಕು. ಅಂದರೆ ೩೦ ವರ್ಷದವರೆಗೆ ಬ್ರಹ್ಮಾಂತರ್ಗತ ವಾಸುದೇವ, ೨೭ ವರ್ಷ-ವಾಯ್ವಂತರ್ಯಾಮಿ ಸಂಕರ್ಷಣ, ೨೫ ಸರಸ್ವತೀ ದೇವಿ ಅಂತಸ್ಥ ಪ್ರದ್ಯುಮ್ನನ ಕಾರ್ಯ, ೧೮ ವರ್ಷದಲ್ಲಿ ಭಾರತಿಯಂತರ್ಗತ ಅನಿರುದ್ಧನ ಕಾರ್ಯ ಇವುಗಳನ್ನು ಯ್ಯುತ್ಕ್ರಮದಿಂದ ಚಿಂತಿಸಿದರೆ ನೂರು ವರ್ಷ ಸಾಧನ ಕಾರ್ಯ ಸಿದ್ಧಿ ಲಭಿಸುವದು. ಈ ರೂಪಗಳೆಲ್ಲ ಅತುಳ= ಹೆಚ್ಚುವಿಕೆ, ವರ್ಧಮಾನ ರೂಪಗಳಾದ ಕಾರಣ ಮೊದಲನೇ ೧೮ರಿಂದ ಪ್ರಾರಂಭಿಸಿ ಅನಿರುದ್ಧಾದಿ ರೂಪ ಚಿಂತಿಸಬೇಕು. ಈ ಪ್ರಕಾರ ಒಂದು ನೂರು ವರುಷಕ್ಕೆ ಮೂವತ್ತಾರು ಸಾವಿರ ದಿವಸಗಳಾಗುವವು. ಈ ಮೂವತ್ತು ಆರು ಸಾವಿರ ಹಗಲು ರಾತ್ರಿಗೆ ಬೃಹತೀ ಛಂದಸ್ಸು ಪ್ರತಿಪಾದ್ಯ ರೂಪಗಳು. ಹಗಲು ನಿಯಾಮಕ ರೂಪಗಳು-ಪುರುಷ ರೂಪಗಳು ೩೬ ಸಾವಿರ. ರಾತ್ರಿ ನಿಯಾಮಕ ರೂಪಗಳು-ಸ್ತ್ರೀ ರೂಪಗಳು ೩೬ ಸಾವಿರ. ಹೀಗೆ ಒಟ್ಟಿಗೆ ೭೨ ಸಹಸ್ರ ರೂಪಗಳು. ೭೨ ಸಾವಿರ ನಾಡಿಗಳಲ್ಲಿಯೂ, ೭೨ ಸಹಸ್ರ ರೂಪಗಳಿಂದ ಸರ್ವತ್ರದಲ್ಲಿ ಸರ್ವಾಧಾರಕನೂ ಪರಿಪೂರ್ಣನೂ ಆಗಿರುವ

ನೆಂದು ನೆನೆನೆನೆದು ಪೂಜಿಸಿದರೆ, ನೂರು ವರ್ಷ ಆಯು ಅಭಿವೃದ್ಧಿ (ಪೂರ್ಣ) ಯಾಗುವಲ್ಲಿ ಸಂದೇಹವಿಲ್ಲ.

ಇಂತು, ಜೀವಾಂತರ್ಯಾಮಿ ಹರಿಯು, ಕಾಲಾನುಸಾರವಾಗಿ ಜೀವರ ಕರ್ಮಾನುಸರಿಸಿ, ಜೀವರ ಗುಣಸ್ವಭಾವಗಳಿಗೆ, ಕಾಲರೂಪಿ ಹರಿಯೇ ಮನೆಯಾಗಿದ್ದು, ಲಕ್ಷ್ಮೀಲೋಲನಾದ ಹರಿಯು ತತ್ತದ್ರೂಪನಾಗಿ ತತ್ತನ್ನಾಮಗಳಿಂದ ಎಲ್ಲರೊಳಗಿದ್ದು, ಯಾವ ಶ್ರಮವಿಲ್ಲದೇ ಲೀಲಾ ಮಾತ್ರದಿಂದ ಸರ್ವ ಜೀವರನ್ನು ಸೃಷ್ಟಿಮಾಡುವ ಪಾಲಿಸಿ ಸಂರಕ್ಷಿಸುವನು, ಸಂಹಾರ ಮಾಡುವನು. ಇದಕ್ಕೆಲ್ಲ ಪ್ರಕೃತಿ ಬಂಧಕತ್ವಕ್ಕೆ ಶ್ರೀಹರಿಯ ಇಚ್ಛೆಯೇ ಮೂಲ ಕಾರಣ. ಶ್ರೀಹರಿಯೇ ಸರ್ವಕ್ಕೂ ಮೂಲಕಾರಣನಾದುದರಿಂದ, ಹೇಗೆ ಪ್ರಣತಿಯಲ್ಲಿದ್ದ ಎಣ್ಣೆ ಬತ್ತಿ ಎಷ್ಟು ದಪ್ಪ ಸಣ್ಣದಿರುತ್ತದೆಯೋ, ಎಣ್ಣೆ ಇರುವ ಪರಿಯಂತ ಬತ್ತಿಗನುಸಾರವಾಗಿ ಹೆಚ್ಚು ಕಡಿಮೆ ಪ್ರಕಾಶ ತೋರುತ್ತ ದೀಪಗಳು ಮನೆಗಳಲ್ಲಿದ್ದ ಕತ್ತಲೆ ಓಡಿಸಿ ಮನೆಯಲ್ಲಿದ್ದ ಪದಾರ್ಥಗಳನ್ನು ತೋರುವಂತೆ ಕಮಲ ಪತ್ರೇಕ್ಷಣ ವಿಶಾಲ ಕರುಣಾಮಯ ದೃಷ್ಟಿಯುಳ್ಳ ಶ್ರೀಹರಿಯು ತನ್ನ ಭಕ್ತರ ಯೋಗ್ಯತೆಯನುಸರಿಸಿ, ಅವರವರ ಎಣ್ಣೆ=ಸ್ನಿಗ್ಧ ಸದೃಶವಾದ ಭಕ್ತಿ ತೈಲಧಾರಾ ಅವಿಚ್ಛಿನ್ನವಾಗಿಪ್ಪ ಪ್ರೇಮ ವಿಶಿಷ್ಟವಾದ ಜ್ಞಾನ. ಜ್ಞಾನ ಪೂರ್ವಕವಾದ ನಿವೃತ್ತ ಕರ್ಮಕ್ಕೆ ತಾನು ಸಂಪ್ರೀತನಾಗಿ ಒಲಿದು, ಅವರವರ ಯೋಗ್ಯತೆಯಂತೆ ಮನದೊಳಗೆ ದೀಪ ಪ್ರಕಾಶದಂತೆ ಪೊಳೆಯುವನು. ತನ್ನ ರೂಪವನ್ನು ಅವರವರ ಯೋಗ್ಯತೆಯಂತೆ ತೋರಿದ ಮೇಲೆ, ತನ್ನ ಗುಣರೂಪ ಕ್ರಿಯಾದಿಗಳನ್ನು ತಿಳಿಸುವನು.

ಶ್ರೀಹರಿಯು ಯಾವ ದೇಹವನ್ನಾದರೂ ಕೊಡಲಿ ಮತ್ತು ಯಾವ ಲೋಕದಲ್ಲಾದರೂ ಇಡಲಿ ಯಾವ ದೇಶದೊಳಿರಲಿ, ಯಾವಾವ ಅವಸ್ಥೆಗಳು ಕೊಡಲಿ ಶ್ರೀಹರಿ ವಿಸ್ಮರಣೆ ಇಲ್ಲದೇ ಮೇಲೆ ವಿವರಿಸಿದ ಪ್ರಕಾರ ಜಡ ಪದಾರ್ಥಗಳಲ್ಲಿ, ಚೇತನರಾದ ಸ್ಥಾವರ ಜಂಗಮ ಜೀವರಲ್ಲಿ, ಪರಾವರೇಶ= ತನ್ನಿಂದ ಅವರರಾದ ರಮಾ ಬ್ರಹ್ಮಾದಿ ಜಗತ್ತಿಗೆಲ್ಲ ಉತ್ತಮನೂ, ಈಶನೂ ಒಡೆಯನೂ ಆಗಿ, ತನ್ನಾಧೀನದಲ್ಲಿ ಸರ್ವರನ್ನೂ ವಶಮಾಡಿಕೊಂಡಿರುವ ಶ್ರೀಹರಿಯ ರೂಪಗಳನ್ನೂ ಗುಣಗಳನ್ನೂ ಆಲೋಚಿಸುತ್ತ ಚನ್ನಾಗಿ ತಿಳಿದು, ಒಳ್ಳೇ ಜ್ಞಾನ ಭಕುತಿಯನ್ನೇ ಬೇಡು. (ಜ್ಞಾನ ಭಕ್ತಿ ವಿನಾ ಇನ್ನೊಂದು

ಶ್ರೀಹರಿಯನ್ನು ಬೇಡಬೇಡ). ಶ್ರೀಹರಿಯೇ ಪರಾವರೇಶನಾದ ಶ್ರೀಕೃಷ್ಣ ವೆಂಕಟೇಶನೇ ಅನಂತ ಮಹಿಮನೇ ಎಂದು ಕೊಂಡಾಡುತ್ತಲಿರಬೇಕು. **ಶ್ರೀ ಗೋಪಾಲ ದಾಸರಾಯರು** ಯಾವ ದೇಹವು ಕೊಟ್ಟರೂ ಭಗವಂತನ ಪೂಜೆಗೆ ಸಾಧನವಾದ ದೇಹವೆಂದು ತಿಳಿದು ಷೋಡಶೋಪಚಾರ ಪೂಜೆ ಯೆಂದು ಸಮರ್ಪಿಸು ಎಂದು ಹೇಳಿದ್ದಾರೆ. ಮತ್ತು ಸುಳಾದಿ ೨೯, ಪುಟ ೧೧೪ ಝಂಪೆತಾಳದಲ್ಲಿ–"ಎನಗೆ ಪಶುಜನ್ಮವು ಬಂದಾಗ್ಗೆ ನೀನಿದ್ದು । ಎನಗೆ ಶ್ವಾನಸೂಕರ ಜನ್ಮ ಬಂದಾಗ್ಗೆ ನೀನಿದ್ದು । ಎನಗೆ ಜಲಚರ ಜನುಮ ಬಂದಾಗಿದ್ದು । ಎನಗೆ ಈಗ ಆವಾವ ದೇಹದಲ್ಲನುಭೋಗ । ಅನುವಾಗಿ ನೀನಿದ್ದು ಅಲ್ಲಿ ಉಣಿಸಿ । ದಣಿಸಿ ನೋಡಿದಿ ಅಲ್ಲವೇನೋ ಕೃಪಾಳು । ಎನಗೆ ನಿನ್ನ ಮಹಿಮೆ ಎಣಿಸಲಾಗೋದರುವು । ದಣಿದೆ ದಣಿದೆ ನಾನಾ ಜನುಮಗಳಲ್ಲಿ ಬಂದು । ಎನಗೀಗ ಮಾನಿಸಾ ಜನುಮ ಲಾಭವಿನ್ನು । ಅನುವಾಗಿ ಇತ್ತ ದಕ್ಕನುಕೂಲವಾಗಿನ್ನು । ಘನದೇವ ಕೇಳೊ ಗೋಪಾಲ ವಿಠ್ಠಲರೇಯ ಎನಗೆ ನಿನ್ನರ್ಚಿಸೋ ಗುಣ ಉಪಾಸನೆ ಈಯೊ ॥ ೪ ॥

ಶ್ರೀಹರಿಯು ಒಬ್ಬನೇ ಅನಂತರೂಪ ನಾಮ ಗುಣಕ್ರಿಯೆಯುಳ್ಳ ಅನಂತನು. ಒಂದು ರೂಪದೊಳಗೆ ಅನಂತ ರೂಪಗಳು ಬೆರೆತುಕೊಂಡಿರುವ ಅನಂತನು ಒಬ್ಬನಾದ ಕಾರಣ ಶ್ರೀ ಇಂದಿರಾಪತಿಯ ರೂಪಗಳು ಯಾವೇ ಆಗಲಿ, ಮನಸ್ಸಿಗೆ ಬಂದಂತೆ ಚಿಂತಿಸಿದರೂ, ಏನು ಅನುಮಾನವಿಲ್ಲ. ಎಲ್ಲ ತತ್ವ ತನ್ಮಾತ್ರಾ, ಜೀವ ಜಡಾದಿಗಳಲ್ಲಿ ಬ್ರಹ್ಮಾಂಡದಲ್ಲಿ ನಾನಾ ರೂಪಗಳಿಂದ ವಿಹಾರ ಮಾಡುತ್ತಾನೆ. ಹೇಗೆಂದರೆ, ಸಮುದ್ರ ರಾಜನಲ್ಲಿ ಅರಿವೆಯ ಗುಡಿಸಲು (ಡೇರೆ) ಹಾಕಿದರೆ, ಆ ಅರಿವೆಯ ಪ್ರತಿ ತಂತು ದಾರಗಳಲ್ಲಿ ಅನೇಕ ಉದಕ ಬಿಂದು ವ್ಯಾಪಿಸಿದಂತೆ ಓತಪ್ರೋತನಾಗಿ ಚರಾಚರ ಜೀವ ಜಡಾತ್ಮಕವಾದ ಬ್ರಹ್ಮಾಂಡದೊಳಗೆ ಇರುವನು. ಶ್ರೀಹರಿಯ ಅನಂತ ರೂಪಗಳಿಗೆ ಕಿಂಚಿತ್ತಾದರೂ ಭೇದವಿಲ್ಲ.

ಈ ಕಾರಣದಿಂದಲೇ ಒಂದು ರೂಪದೊಳಗೆ ಒಂದು ಅವಯವ. ಈ ಅವಯವಗಳಲ್ಲಿ ಒಂದು ರೋಮ. ಈ ರೋಮದ ಒಂದು ಪ್ರದೇಶದಿ ಅನೇಕ ಅನಂತಾನಂತ ಕೋಟಿ ಬ್ರಹ್ಮಾಂಡಗಳು ಸೂಕ್ಷ್ಮದಿಂದ ಹೊಂದಿಕೊಂಡಿರುವವು. ಅಂದರೆ ಅನಂತ ರೂಪಗಳಿದ್ದರೂ ಶ್ರೀಹರಿಯು–ವಾಸು

ದೇವ ಒಂದೇ ರೂಪದಿಂದ ರೋಮಗಳಲ್ಲಿ ಬ್ರಹ್ಮಾಂಡ ಅನಂತಗಳನ್ನು ಧರಿಸಿರುತ್ತಾನೆಂದು ಪ್ರಕಾಶ ಸಂಹಿತೆ ವಾಕ್ಯದಂತೆ ಶ್ರೀ ವಿಜಯದಾಸರ ಸುಳಾದಿ ಅರ್ಥ ಮರೆಯ ಕೂಡದು. ಭಗವದ್ಭಕ್ತರಾದ ಮಾರ್ಕಾಂಡೇಯ ಋಷಿಗಳು ಹಿಂದಿನ ಯುಗದಲ್ಲಿ ತಪಸ್ಸುಮಾಡಿ ಶ್ರೀಹರಿಯನ್ನು ಮೆಚ್ಚಿಸಿ ನಿನ್ನ ಸೃಷ್ಟಿ ಸ್ಥಿತಿ ಲಯಾದಿ ವ್ಯಾಪಾರ ತೋರಿಸಬೇಕೆಂದು ಯಾಚಿಸಲು ಭಕ್ತರ ಮನೋರಥ ಪೂರೈಸಲು ಅವರ ಆಶ್ರಮದಲ್ಲಿ ಪ್ರಳಯೋದಕವನ್ನು ಸೃಜಿಸಿ ಸೃಷ್ಟಿ-ಸ್ಥಿತಿ ಲಯಾದಿ ವ್ಯಾಪಾರಗಳನ್ನು ತೋರಿದ ಮಹಾಮಹಿಮನಲ್ಲಿ ಇಂಥ ಸಮರ್ಥತೆಯುಂಟು. ಇಂದಿರೇಶನಲ್ಲಿ ಇದೇನು ಅಚ್ಚರಿಯಲ್ಲ, ಅಪ್ರಮೇಯನು. ಇಂದಿರಾ ಬ್ರಹ್ಮಾದಿಗಳಿಂದ ತಿಳಿಯಲಶಕ್ಯನು ಮತ್ತು ಇಂಥ ಅತ್ಯದ್ಭುತ ರೂಪವನ್ನು ರಣರಂಗದಲ್ಲಿ ಇಂದ್ರಾತ್ಮಜನಾದ ಅರ್ಜುನಗೆ ವಿರಾಟರೂಪ ದರ್ಶನ ಮಾಡಿಸಿದ್ದಾನೆ. ಅನಂತಾನಂತ ರೂಪಗಳು ಒಂದೇ ರೂಪದಲ್ಲಿ ಅಡಗಿ ಲೋಕಗಳನ್ನು ಒಂದೇ ರೂಪದಿಂದ ಧರಿಸಿರುವನು. ಒಂದೇ ರೂಪದಿ ಸೃಷ್ಟಿ ಸ್ಥಿತಿ ಲಯಾದಿ ವ್ಯಾಪಾರಗಳನ್ನು ಒಂದೇ ಕಾಲದಲ್ಲಿ ಮಾಡುತ್ತಾನೆ. ಇದನ್ನು ಅಜ್ಞರಿಗೆ ತಿಳಿಯಗೊಡನು. ತನ್ನ ಅನಂತಾನಂತ ರೂಪಗಳಿಂದ ವ್ಯಾಪಿಸಿದ ರೂಪ ದೇವಶ್ರೇಷ್ಠನಾದ ಅರ್ಜುನಗೆ ತೋರಿಸಿದನು. ಇಂಥ ಅನಂತ ಮಹಾ ಮಹಿಮೋಪೇತನಾದ ಹರಿಯಲ್ಲಿ ಅನಂತ ಬ್ರಹ್ಮಾಂಡಗಳನ್ನು ಒಂದೇ ಕಾಲದಲ್ಲಿ ಸೃಜಿಸುವ ಸಾಮರ್ಥ್ಯವಿದ್ದರೂ, ಶ್ರೀಹರಿಯು ತಾನು ಸತ್ಯಸಂಕಲ್ಪನು. ತನ್ನ ಸಂಕಲ್ಪದಂತೆ ಒಂದು ಕಾಲದಲ್ಲಿ ಅಂದರೆ ಬ್ರಹ್ಮಮಾನದಿಂದ ಇನ್ನೂರು ಕಲ್ಪಕ್ಕೊಮ್ಮೆ, ಒಂದೇ ಬ್ರಹ್ಮಾಂಡವನ್ನು ಸೃಜಿಸುವನೆಂದು ಪ್ರಕಾಶ ಸಂಹಿತೆ ವಾಕ್ಯ ಮರೆಯಕೂಡದು. ಇದು ನಿಜವಾದ ರಹಸ್ಯ.

ಶ್ರೀ ರಮೇಶ ಮೂರ್ತಿಗಳನೇಕಗಳಿದ್ದರೂ, ಸೃಷ್ಟಿ ಸ್ಥಿತಿ ಲಯಾದಿ ವ್ಯಾಪಾರ ಬೇರೆಬೇರೆ ರೂಪಗಳಿಂದ ಇದ್ದರೂ, ಪ್ರಳಯ ಕಾಲದಲ್ಲಿ ವಿಶ್ಲೇಷ ಐಕ್ಯ ಮೂಲ ರೂಪದಲ್ಲಿ ಹೊಂದುವವು, (ಅಂದರೆ ಧಾನ್ಯಗಳು ಒಂದು ಚೀಲದಲ್ಲಿ ತುಂಬಿದ್ದರೆ ಧಾನ್ಯ ಒಂದೊಂದು ಬೇರೆ ಬೇರೆಯಾಗಿಪ್ಪವು.) ಅದರಂತೆ ಪ್ರತಿಯೊಂದು ರೂಪಗಳು ಬೇರೆಬೇರೆಯಾಗಿರುವವು. ಆದರೂ ಒಂದೇ ಎಂದು, ದೃಷ್ಟಾಂತದಿಂದ ಹೇಳುತ್ತಾರೆ.

ಶ್ರೀ ರಮಾದೇವಿಗೆ ಈಶನಾದ ಶ್ರೀಹರಿಯ ಮೂರ್ತಿಗಳು, ನವನಾರಿ ಕುಂಜರ–ಒಂಭತ್ತು ಸ್ತ್ರೀಯರುಗಳಿಂದ ಕೂಡಿ ಬರೆದ ಒಂದು ಆನೆಯ ಚಿತ್ರವು ಲೋಕ ಪ್ರಸಿದ್ಧವು. ಇದಕ್ಕೆ ಮೂಲ ಹೇತುವೇನು. ಈ ಒಂಭತ್ತು ಸ್ತ್ರೀಯರಾರು ಎಂದು ಶ್ರೀ ಸರ್ವಜ್ಞರ ತಂತ್ರಸಾರ ವಿಚಾರ ಮಾಡಿದರೆ, ಜೀವನ ಶ್ವೇತವರ್ಣ ಜೀವ ಸ್ವರೂಪ ಭೂತವಾದ ಕಮಲಗಳಲ್ಲಿ ಒಂಭತ್ತು ಶ್ರೀಹರಿಯ ರೂಪಗಳು–ಸ್ತ್ರೀ ರೂಪಗಳು. ೧) ವಿಮಲ, ೨) ಉತ್ಕರ್ಷಣೀ, ೩) ಜ್ಞಾನ, ೪) ಕ್ರಿಯಾ, ೫) ಯೋಗ, ೬) ಪ್ರಹ್ವೀ, ೭) ಸತ್ಯಾ, ೮) ಈಶಾನ, ೯) ಅನುಗ್ರಹ ಎಂಬ ಸ್ತ್ರೀ ರೂಪವು ಮಧ್ಯದಲ್ಲಿ ರುವದು. ಇವೆಲ್ಲ ಸ್ತ್ರೀ ರೂಪಗಳು. ಬಿಂಬನಿಗೆ ಸೇವಕ ರೂಪಗಳು ಸರ್ವತ್ರ ವ್ಯಾಪಿಸಿವೆ. ಒಂದೊಂದು ರೂಪಗಳು ಮೂಲದಲ್ಲಿ ಐಕ್ಯವಾದರೂ ಬೇರೆ ಬೇರೆ ಇರುತ್ತವೆ. ಈ ನವನಾರಿ ರೂಪಗಳು ಕುಂಜರ ರೂಪದಲ್ಲಿ ಶ್ರೇಷ್ಠವಾದವು. ಒಂದು ಅನೆಯಲ್ಲಿ ಒಂಭತ್ತು ಸ್ತ್ರೀ ರೂಪಗಳೂ ಕೂಡಿ ಒಂದು ಕುಂಜರ ರೂಪ ಮತ್ತು ಚರಣ ಶುಂಡ ಬಾಲ ಮಧ್ಯೋರು ಕಣ್ಣು ಕಿವಿ ಕುಂಭ ಸ್ಥಳಾದಿ ಅವಯವಗಳಲ್ಲಿ ಬೇರೆ ರೀತಿಯಿಂದ ಇದ್ದರೂ ಕೂಡಿ ಕೊಂಡು ಪೂರ್ಣ ಕುಂಜರ ದೇಹವುಳ್ಳದ್ದಾಗಿವೆ. ಇದರಂತೆ ನಾನಾ ರೂಪ ದಿಂದ ಶರೀರದಲ್ಲಿ ಸೇರಿಕೊಂಡಿರುತ್ತಾನೆ. ಈತನು ವಿಕಾರ ಶೂನ್ಯನಾಗಿ ವಿರಾಟರೂಪ ಹರಿಯು ಪದುಮಜಾಂಡವಲ್ಲಿ ವ್ಯಾಪಿಸಿದ್ದಾನೆ. ಸಾಗರದೊಳ ಗಿರುವ ತೆರೆಗಳು ಹೇಗೆ ಅನಂತವಾಗಿರುವುವೋ ಹಾಗೆ ಶ್ರೀಹರಿಯ ಅನಂತ ರೂಪಗಳು ಬ್ರಹ್ಮಾಂಡದಲ್ಲಿ ವ್ಯಾಪಿಸಿ ತುಂಬಿಕೊಂಡಿರುವವು. ಮೂಲ ಪ್ರಕೃತಿ ಗತಕಾರಣ ರೂಪಗಳು ಅಂಶ–ಅಂಶಿ ರೂಪಗಳು, ಪೃಥು–ಬಲ ರಾಮ ಅರ್ಜುನ ಮುಂತಾದವರಲ್ಲಿ ಆವೇಶ ರೂಪಗಳು, ವ್ಯಾಪ್ತ ರೂಪಗಳು ಮೂರು ವಿಧ. ಸಮಗ್ರ ದೇಶ ಕಾಲಗಳಲ್ಲಿ ಅಪ್ರತಿಘವಾಗಿ ವ್ಯಾಪಿಸಿರುವ ರೂಪ ಒಂದು. ಜಡವಾದ ತತ್ತತ್ ಪದಾರ್ಥಗತವಾಗಿ ಪದಾರ್ಥಗಳಂತೆ ವ್ಯಾಪ್ತರೂಪ ಎರಡನೇದು, ಕರಚರಣಾದಿ ಅವಯವಗಳಿಂದ ಶೋಭಿತವಾಗಿ ಪ್ರತೀಕಗಳಲ್ಲಿ ವ್ಯಾಪಿಸಿರುವ ರೂಪ ಮೂರು ಎಂದು ಶ್ರೀ ವಿಜಯದಾಸರ ವಚನ. ಮತ್ಸ ಕೂರ್ಮಾದಿ ರಾಮಕೃಷ್ಣಾದಿ ಅನಂತ ಅವತಾರ ರೂಪ ಗಳು ತತ್ವಗತವಾಗಿ ಕಾರ್ಯ ನಡೆಸತಕ್ಕ ಕಾರ್ಯ ರೂಪಗಳು, ವ್ಯಕ್ತ

ರೂಪಗಳು, ಅಂದರೆ ಪೃಥಿವ್ಯಾದಿ ಮಹತ್ತತ್ವದಲ್ಲಿ ವ್ಯಕ್ತ ರೂಪಗಳು ಅವ್ಯಕ್ತ ಸೂಕ್ಷ್ಮ ತತ್ವದಲ್ಲಿ ಅವ್ಯಕ್ತವಾಗಿರುವ ರೂಪಗಳು. ಅವ್ಯಕ್ತದಲ್ಲಿ ಇನ್ನು ಅನೇಕ ವಿಶೇಷಗಳುಂಟು. ಭೃಗುರಾಮ, ವೇದವ್ಯಾಸ, ದತ್ತ, ಕಪಿಲ, ಹಯಾಸ್ಯ, ಹಂಸಾದಿ ವಕ್ಷಸ್ಥಿತಳಾದ ಲಕ್ಷ್ಮಿ ಅಂತರ್ಗತ ಶ್ರೀರೂಪ ಅವ್ಯಕ್ತರೂಪ, ಹತ್ತು ದಶ ವಿಭೂತಿ ರೂಪಗಳು, ಸಕಲ ಜೀವ ಜಡಾಂತರ್ಯಾಮಿ ಬಿಂಬರೂಪಗಳು ಬೇರೆ ಇದ್ದರೂ ಈ ಎಲ್ಲ ರೂಪಗಳು ಒಂದೇ! ಈ ಪ್ರಕಾರವಾಗಿ ಜೀವನ ಚಿದ್ದೇಹಗತ ನಾರಸಿಂಹ ಸ್ವರೂಪಾಂಶ ಗುಣಗಳು ಬ್ರಹ್ಮಾಂಡದಲ್ಲಿ ಸಮುದ್ರ ತೆರೆಯಂತೆ ತುಂಬಿವೆ.

ಇಂತಹ ಅನಂತ ರೂಪಿಯಾದ ಶ್ರೀಹರಿಯು ಒಬ್ಬನೇ ಓಂಕಾರ ಪ್ರತಿ ಪಾದ್ಯನು. ಒಂದು ದಾರದಲ್ಲಿ ಪೋಣಿಸಿದ ಅನೇಕ ಮಣಿಗಳಿಗೆ, ದಾರವು (ಸೂತ್ರ) ಆಧಾರವಾಗಿರುವಂತೆ, ಸಕಲ ಜಗತ್ತಿಗೆ ಓತಪ್ರೋತ ಆಧಾರನಾಗಿರು ವನಲ್ಲದೇ ಚೇತನಾಚೇತನ ಜಗತ್ತಿಗೆ ಅಂತರ್ಯಾಮಿಯೂ ಆಗಿದ್ದು ಅನಾ ಯಾಸ ವಿಹಾರ ಮಾಡುತ್ತ ತತ್ತತ್‌ಕಾರ್ಯ ಮಾಡಿಸುವನು. ಈತನು ಸುಖಪೂರ್ಣನು. ಎಷ್ಟು ಕಾರ್ಯ ಮಾಡಿದರೂ ಈತನಿಗೆ ದಣುವಿಕೆ ಇಲ್ಲ. ಬಹು ಕರುಣಾಶಾಲಿಯು. ಅನಂತಾನಂತ ಜೀವರಾಶಿಗಳೊಳಗೆ ಏಕಾಂಶಾಂಶ= ಒಂದು ಅಂಶಿ ಮೂಲಕ್ಕೆ ಅನೇಕ ಅಂಶಗಳ ರೂಪದಿಂದ ಇದ್ದು ನಿಯಮನ ಮಾಡುವ ಪ್ರಭುವಿಗೆ ಸರಿಮಿಗಿಲಿಲ್ಲ.

ಇನ್ನು ದೇವರ ಒಂದೇ ರೂಪವಾದರೂ ಸದಾ ಈ ಜಗತ್ತು ಪಂಚ ಭೇದ ಯುಕ್ತವಾಗಿರುವುದು. ಜಗತ್ತಿನಲ್ಲಿರುವ ಸರ್ವಜೀವರೂ ಒಬ್ಬರಿ ಗೊಬ್ಬರು ಭಿನ್ನರು. ಅನೇಕ ಜಡಗಳಿದ್ದರೂ ಆ ಜಡಗಳಲ್ಲಿ ಪರಸ್ಪರ ಭೇದ. ಜೀವ ಜಡಗಳಿಗೂ ಭೇದ. ಜೀವ ಜಡ ಪರಮಾತ್ಮಗೂ ಭಿನ್ನ. ಹೀಗೆ ಶ್ರೀವರನು ಜೀವ ಜಡಗಳಿಗೆ ಅತ್ಯಂತ ಭಿನ್ನನು. ವಿಲಕ್ಷಣನು=ಸಚ್ಚಿದಾ ನಂದ ರೂಪಿ-ನಿರ್ದೋಷ ಸ್ವತಂತ್ರನಾಗಿರುವನು. ಇನ್ನು ಜೀವ ಜಡ ಪರ ಮಾತ್ಮನಿಂದ ಶ್ರೀ ಲಕ್ಷ್ಮಿಯು ಈಶಕೋಟಿ ಪ್ರವಿಷ್ಟಳಾದರೂ, ಶ್ರೀಹರಿ ಯಾಧೀನಳು-ಅಸ್ವತಂತ್ರಳು. ನಿತ್ಯಮುಕ್ತಳಾದರೂ ಶ್ರೀಹರಿಗೆ ಭಿನ್ನಳು. ಶ್ರೀಹರಿಗೆ ಸಕಲ ಕಾಲದಲ್ಲಿ ದೇಶದಲ್ಲಿ ಸಮಳು-ಗುಣಗಳಿಂದ ಅಸಮಳು. ಪರಮಾತ್ಮನ ತರುವಾಯ ಸಕಲರಿಂದ ಉತ್ತಮಳಾದ ಶ್ರೀ ಲಕ್ಷ್ಮೀ ಸಹಿತ

ನಾಗಿರುವ ಬಿಂಬರೂಪಿ ಹರಿಯನ್ನು, "ಸಾವಧಿಕ ಸಮಶೂನ್ಯನೆಂದರಿದು ಶ್ರೀ ಲಕ್ಷ್ಮೀಸಹಿತನಾಗಿರುವ-ಶ್ರೀ ಲಕ್ಷ್ಮೀನಾರಾಯಣರಿಬ್ಬರನ್ನೂ ಭಜಿಸ ಬೇಕು. ಏಕೆಂದರೆ ಅಸೃಜ್ಯ-ಸೃಜ್ಯ ಮುಕ್ತಾ ಅವಸ್ಥೆಯಲ್ಲಿ ಸರ್ವದೇಶ ಕಾಲಗಳಲ್ಲಿ ಹರಿಯೊಡನೆ ವಿಹಾರಮಾಡಿ ಹರಿ ಆಜ್ಞೆಯಂತೆ ಕಾರ್ಯ ನಡಿ ಸುವಳಾದುದರಿಂದ ಸಂತತ ಶ್ರೀ ರಮಾ ಸಮೇತನಾಗಿರುವ, ಮಧ್ವಾಂತ ರ್ಯಾಮಿ ಶ್ರೀಹರಿಯನ್ನೇ ಭಜಿಸಿದರೆ ಬಂಧ ನಿವೃತ್ತಿಯಾಗಿ ಸ್ವರೂಪಾ ನಂದಾವಿರ್ಭಾವವಾಗುವುದು.

ಇನ್ನು ಶ್ರೀಹರಿಯೇ ಸರ್ವೋತ್ತಮನೆಂದು ಏಕೆ ಭಜಿಸಬೇಕೆಂದು ಕೇಳಿದರೆ, ಆದಿತೇಯರು-ಅದಿತ ಮಕ್ಕಳಾದ ಸಕಲ ದೇವತೆಗಳು ಶ್ರೀಹರಿಯ ಕೆಲವು ಗುಣಗಳನ್ನು ತಿಳಿದಿರುವರು. ಈ ದೇವತೆಗಳು ತಿಳಿಯದೇ ಇರುವ ಅನೇಕ ಹರಿಗುಣಗಳನ್ನು ವೇದಾಭಿಮಾನಿಗಳಾದ ಶ್ರೀ ಭಾರತಿ-ಸರಸ್ವತಿ ದೇವಿಯರು ಬಲ್ಲರು. ಈ ವಾಣ್ಯಾದಿಗಳು ಬಲ್ಲ ಗುಣಗಳಿಗಿಂತ ಶ್ರೀ ವಾಯು ಬ್ರಹ್ಮದೇವರು ಹೆಚ್ಚಿನ ಹರಿಯ ಗುಣಗಳನ್ನು ತಿಳಿದಿರುತ್ತಾರೆ. ಶ್ರೀ ಬ್ರಹ್ಮ ದೇವರು ಅರಿಯದ ಅಗಾಧ ಗುಣಗಳನ್ನು ಶ್ರೀ ಲಕ್ಷ್ಮೀದೇವಿಯೂ ಬಲ್ಲ ಳಾದರೂ, ಶ್ರೀಹರಿಯ ಅನಂತ ಗುಣಗಳನ್ನು ಪೂರ್ಣ ತಿಳಿಯಳು. ಸದಾ ಲಕ್ಷ್ಮೀದೇವಿಯನ್ನು ವಕ್ಷ ಸ್ಥಳದಲ್ಲಿ ಧರಿಸಿ, ಶ್ರೀಧರ ಒಬ್ಬನೇ ಅನಂತಗುಣ ಪರಿಪೂರ್ಣ-ತನ್ನ ಗುಣಗಳನ್ನು ತಾನೆ ಬಲ್ಲನಾದ ಕಾರಣ ಈ ಶ್ರೀಧರ ನೊಬ್ಬನೇ ಉಪಾಸ್ಯನು. ಸರ್ವರಿಂದ ಉಪಾಸನೆ ಮಾಡಿಸಿಕೊಳ್ಳುವ ಬಿಂಬ ನಾದ ಹರಿಯು, ಸದ್ಗುಣ ಪೂರ್ಣನೆಂದು ಉಪಾಸನೆ ಮಾಡಿದರೆ ಬಂಧಕ ನಿವೃತ್ತಿ.

ಇಂತು ಅನಂತಾನಂತ ಕಲ್ಯಾಣಗುಣ ಪರಿಪೂರ್ಣನಾದ ಶ್ರೀಹರಿಯ ಗುಣಗಳ ಕೊನೆಗಾಣದಲೇ ಶ್ರೀ ಮಹಾಲಕ್ಷ್ಮೀ ದೇವಿಯು ಭಗವಂತನಿಗೆ ಅನೇಕ ಆಭರಣಾದಿ ಆಯುಧಗಳು-ಪೀತ ಶುಕ್ಲಾಂಬರಾದಿ ವಸನಗಳು, ಮುಕ್ತ ಸ್ಥಾನಗಳಾದ ತ್ರಿಧಾಮ ಆಲಯಗಳೂ ಆಗಿ ಸಂತತವಾಗಿ ಶ್ರೀಹರಿಯ ಬದಿಯಲ್ಲಿ ಕಿಂಬಹುನಾ ವಕ್ಷಸ್ಥಳದಲ್ಲಿಯೂ ಇರುವಳು. ಇಂತಹ ಪರಮ ಉತ್ಕೃಷ್ಟ, ದುರಂತ ಮಹಾ ಪರಾಕ್ರಮಶಾಲಿಯಾದ ಅನಂತ ಮಹಿಮೆಯುಳ್ಳ ಶ್ರೀಹರಿಯ ದೂತಿಯಾಗಿ ನಿರ್ವ್ಯಾಜದಿಂದ ಹರಿಯ ಕರುಣಾ

ಎನ್ನಮೇಲೆ ಇದೆ ಎಂಬ ಪ್ರೀತಿಯಿಂದ ಅನೇಕ ದಾಸ್ಯ ವೃತ್ತಿಗಳನ್ನು ಮಾಡುತ್ತಲೇ ಇದ್ದಾಳೆ. ಆದಿತ್ಯ ಪುರಾಣ್ಕ್ಯವೆಂಕಟೇಶ ಮಹತ್ಮೆಯೇ ಇದಕ್ಕೆ ಸಾಕ್ಷಿಯಾಗಿದೆ. ಹೀಗೆ ನಿರಂತರದಲ್ಲಿ ದಾಸ್ಯ ಕರ್ಮಗಳನ್ನು ಅದ್ಯಾಪಿ ಮಾಡುತ್ತಾ ಆ ಪರಮಾತ್ಮನಿಗೆ ಅಧೀನಳಾಗಿರುವಳು. ಇಂತಹ ಅಪಾರ ಮಹಿಮನ ಗುಣಗಳನ್ನು ಒಂದು ಗುಣದೊಳಗೆ ಅನಂತ ಗುಣಗಳನ್ನು ನೋಡುತ್ತ, ಪ್ರಳಯ ಕಾಲದಲ್ಲಿರುವ ಮಹೋದಕದಲ್ಲಿ, ನಾವೆಯು ಸ್ಥಳವನ್ನು ಸೇರಲಿಕ್ಕೆ ದಂಡೆಯನ್ನು ಕಾಣದೇ ಮಧ್ಯ ಜಲದಲ್ಲಿಯೇ ಸುತ್ತು ಸುತ್ತುತಿರುವಂತೆ ಕಮಲೇಕ್ಷಣನಾದ ಶ್ರೀಹರಿಯ ಅಪಾರ ಗುಣಗಳನ್ನು ಚಿಂತಿಸುತ್ತಾ, ಒಂದು ಗುಣದೊಳಗೆ ಅನಂತ ಗುಣಗಳು ಇರುವಿಕೆಯನ್ನು ಕೊನೆಗಾಣದೇ ಅತ್ಯಾಶ್ಚರ್ಯದಿಂದ ಮನ ಸ್ಥಿರಗೊಳ್ಳದೇ ಇರುವಳೆಂದ ಮೇಲೆ, ಅಲ್ಪರಾದ ಜೀವರಿಗೆ ಪರಮಾತ್ಮನ ಮಹಾಮಹಿಮೆ ಗೊತ್ತಾಗುವದೆ? ಗೊತ್ತಾಗುವುದಿಲ್ಲ. ಈ ಮೂರು ಲೋಕದಲ್ಲಿ ಆ ಮಹಾಮಹಿಮನಾದ ಶ್ರೀಹರಿಯ ಗುಣ ಮಾಹಾತ್ಮೆ ಪೂರ್ಣವಾಗಿ ಯಾರೂ ಅರಿಯರು. ಇಂತಹ ಮಹಾಮಹಿಮನ ಅನೇಕ ಗುಣರೂಪ ಕ್ರಿಯೆಗಳನ್ನು ಸ್ತೋತ್ರಗೈಯ್ಯುತ್ತಾ ಸಂಧಿಯ ಉಪಸಂಹಾರ ಮಾಡುತ್ತಾರೆ. ಶ್ರೀನಿಕೇತನ–ರಮಾದೇವಿಗೆ ವಕ್ಷ ಸ್ಥಳವೆ ಮನೆಯಾಗಿಯುಳ್ಳವನು, ಅಥವಾ ನಿತ್ಯ ಮುಕ್ತವಾದ ಶ್ರೀಭಾಗಧಾಮತ್ರಯದಲ್ಲಿ ವಾಸ ಮಾಡಿದವನೇ, ಸಾತ್ವತಾಂಪತಿ=ಯಾದವ ಕುಲಕ್ಕೆ ಶ್ರೇಷ್ಠನಾದವನು ಅಥವಾ ಬಲಯುಕ್ತ ಶರೀರವುಳ್ಳವನು. ಜ್ಞಾನದಿಂದಲೇ ಶ್ರೀಹರಿಯನು ಹೊಂದುವದರಿಂದ ಜ್ಞಾನಗಮ್ಯನು. ಮಾನದನು ಜ್ಞಾನವನ್ನು ಕೊಡುವನು ಅಥವಾ "ಮಾನಮಹಂಕಾರಂ, ಸತ್ಕಾರಂವಾ, ಯಥಾ ಸಂಭವಂ-ದದಾತೀತಿ ಮಾನದ" ಗಯನೆಂಬ ಅಸುರನನ್ನು ಸಂಹರಿಸಿದನೆಂದು ಹೇಳುವ ಕಾರಣವೇನೆಂದರೆ, ಅಹಂಕಾರಯುಕ್ತರಾದ ದೈತ್ಯಾದಿಗಳನ್ನು ಸಂಹರಿಸಿದ ಶ್ರೀಹರಿಯು, ಸರ್ವರ ಅಹಂಕಾರವನ್ನೂ ಸಂಹರಿಸುವನು. ಮೌನಿಕುಲ ಸನ್ಮಾನ್ಯ=ಭೃಗುಕುಲೋದ್ಭವ-ಪರಶುರಾಮಾದಿ ಮತ್ತು ವೇದವ್ಯಾಸ ಕಪಿಲ ದತ್ತ ಇತರಾಸೂನು ರೂಪಗಳುಳ್ಳವನು. ಮುನಿಕುಲಕ್ಕೆ ಮಾನ್ಯನಾಗಿರುವನು. ಅಥವಾ ಮಾನ್ಯ=ಸರ್ವೇಶ್ವರತ್ವೇನ ಸರ್ವೈಃ ಪೂಜನೀಯತ್ವಾತ್ ಮಾನ್ಯನೆಂದು. ಶ್ರೀ ವಿಷ್ಣು ಸಹಸ್ರನಾಮ ವಿಧ್ಯಾಧಿರಾಜೀಯ

ದಲ್ಲಿ ಉಕ್ತವಾಗಿದೆ. ಮಾತುಲಧ್ವಂಸಿ ಸೋದರ ಮಾವನಾದ ಕಂಸಾಸುರನನ್ನು ಕೊಂದು ದೀನರಾದ ವಸುದೇವ-ದೇವಕಿಯರಿಗೆ ಸುರತರುವಾದವನೇ "ಪ್ರಕೃಷ್ಟಾನಂದ ಬಲವೀರ್ಯಂದದಾತೀತಿ ಪ್ರಾಣದಃ=ವಿಶೇಷಾನಂದ ಬಲವೀರ್ಯವನ್ನು ಕೊಡುವನಾದುದರಿಂದ ಪ್ರಾಣನೆಂತಲೂ, ಮಧುರಿಪು= ಮಧುನಾಮಕ ದೈತ್ಯನನ್ನು ಸಂಹರಿಸಿದವನಾದ-ಜಗತ್ತಿಗೆ ಒಡೆಯನಾದ ವಿಠ್ಠಲನಾಮಕ ಶ್ರೀ ದಾಸಾರ್ಯರ ಬಿಂಬಮೂರುತಿ ತನ್ನ ವಿನಾ ಬೇರೊಬ್ಬರು ಗತಿ ಇಲ್ಲವೆಂದು ನಂಬಿದವರನ್ನು ಅನುದಿನ ಮುಕ್ತಿಯಲ್ಲಿ ಸಹ ಪೊರೆವನೆಂದು ಮಂಗಳ ಮಾಡಿದ್ದಾರೆ.

ಸಾರಾಂಶವೇನೆಂದರೆ ಈ ಪಂಚತನ್ಮಾತ್ರಾ ಸಂಧಿಯಲ್ಲಿ ಸ್ಥೂಲದೇಹಕ್ಕೆ ಒದಗುವ ತಮೋಗುಣಾಭಿವೃದ್ಧಿಯಾದ, ಶಬ್ದ-ಸ್ಪರುಶ-ರೂಪ-ರಸ-ಗಂಧ-ತುರಂಗ-ಮಾತಂಗ-ಪತಂಗ-ಮೀನ-ಭೃಂಗವೆಂಬಂತೆ ೫ ವಿಷಯಗಳ ಮೋಹಕ್ಕೆ ಶಿಲ್ಕಿಸಿ ಬಂಧ ಬಿಡಿಸುವದು. ಮತ್ತು ದೇಹಕ್ಕೆ ಷಡೂರ್ಮಿಗಳ ತಪ್ಪಿಸುವದು-ಆಧ್ಯಾತ್ಮಾದಿ ತಾಪತ್ರಯಗಳನ್ನು ಪರಿಹರಿಸುವುದು. ಜ್ವರ ರೋಗಾದಿಗಳನ್ನು ಪರಿಹರಿಸುವದು. ಅಪಮೃತ್ಯು ಪರಿಹಾರವಾಗುವ ಉಪಾಯ. ಒಟ್ಟಿಗೆ ಅನಿಷ್ಟವಾದ ಲಿಂಗದೇಹ ಬಿಡುಗಡೆಗೆ ಕಾರಣವಾದ ರೂಪಗಳನ್ನು ಧ್ಯಾನಿಸುವದೇ ಪಂಚತನ್ಮಾತ್ರಾ ವಿಷಯ ದೂರವಾಡುವದೇ ಮುಖ್ಯ ತಾತ್ಪರ್ಯ. ಈ ಸಂಧಿಯನ್ನು ೧೦೮ ಸಲ ಪಠಿಸಿ ಎಷ್ಟೋ ಜ್ಞಾನಿಗಳು ಅನೇಕ ಆಮಯಗಳನ್ನು ಪರಿಹರಿಸಿದ್ದಾರೆ. ಎನ್ನ ಅನುಭವಸಿದ್ಧ ಅಜ್ಞಾನ ದೂರಗೈಸಿ ಮುಂದೆ ಮುಕ್ತಿಗೆ ಸಾಧನವಾದ ಮಾತೃಕಾ ಸಂಧಿ ಪ್ರಾರಂಭಿಸುತ್ತಾರೆ.

ಓಂ ಶಾಂತಿಃ ಶಾಂತಿಃ ಶಾಂತಿಃ

॥ ಶ್ರೀ ರಾಘವೇಂದ್ರ ಗುರು-ಶ್ರೀವರದೇಂದ್ರ ಗುರು ॥

# ೭. ಪಂಚತನ್ಮಾತ್ರಾ ಸಂಧಿ

ಹರಿಕಥಾಮೃತಸಾರ ಗುರುಗಳ । ಕರುಣದಿಂದಾಪನಿತು ಪೇಳುವೆ ।
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ ಪಲ್ಲ ॥

ಮೂಲ :

**ಭೂಸಲಿಲ ಶಿಖಿ ಪವನ ಭೂತಾ ।**
**ಕಾಶದೊಳಗೈದೈದು ತನ್ಮಾ ।**
**ತ್ರಾ ಸಹಿತ ಒಂದಧಿಕ ಪಂಚಾಶದ್ವರಣ ವೇದ್ಯ ॥**
**ಈ ಶರೀರದಿ ವ್ಯಾಪಿಸಿದ್ದು ಸು ।**
**ರಾಸುರರಿಗೆ ನಿರಂತರದಲಿ ಸು ।**
**ಖಾಸುಖಪ್ರದನಾಗಿ ಆಡುವ ದ್ವೇಷಿಪರ ಬಡಿವ ॥ ೧ ॥**

**ಅವತರಣಿಕಾ :** ಈ ಪಂಚತನ್ಮಾತ್ರಾ ಸಂಧಿಯಲ್ಲಿ ಸ್ಥೂಲ ದೇಹದಲ್ಲಿರುವ ಪಂಚಭೂತಗಳು-ಈ ಪಂಚಭೂತಗಳ ತಮೋಗುಣದಿಂದ ಉತ್ಪತ್ತಿಯಾದ ಶಬ್ದಾದಿ ವಿಷಯಗಳ ಬಂಧಕತ್ವವು ಹೇಗೆ, ದೇಹಕ್ಕೆ ಬರುವ ಆರು ಊರ್ಮಿಗಳು, ಅಧ್ಯಾತ್ಮಾದಿ ತಾಪತ್ರಯಗಳು. ಜ್ವರ-ಅಪಸ್ಮಾರಾದಿ ಮಹಾ ರೋಗಗಳು, ಜೀವನ ಕರ್ಮ ವಿಪಾಕದಿಂದ ಶ್ರೀಹರಿಯು ದೇಶ ಕಾಲಾನುಗುಣವಾಗಿ ಒದಗಿಸುವದು ಹೇಗೆ? ಅಪ ಮೃತ್ಯುವೇನು? ಈ ಅಪಮೃತ್ಯು ಭಯಾದಿಗಳನ್ನು ಪರಿಹರಿಸುವ ನರಸಿಂಹ ಮಂತ್ರ ಜಪ, ಬಂಧಕವಾದ ಅನಿಷ್ಟ ಪರಿಹಾರಕ್ಕೆ ಭಗವದುಪಾಸನಾ, ಅಲ್ಲಲ್ಲಿಪ್ಪ ಭಗವನ್ಮೂರ್ತಿಗಳ ಕಾರ್ಯಗಳನ್ನು ವಿವರಿಸುತ್ತಾ ಭಗವನ್ಮಾಹಾತ್ಮೆ ವರ್ಣಿಸಿದ ಕರುಣಾಗಳ ಪಾದಕ್ಕೆ ಶಿರವೆರಗಲಿ.

**ಪದ್ಯಾರ್ಥ :** ಭೂ=ಭೂಮಿ-ಪೃಥ್ವಿ, ಸಲಿಲ=ಉದಕ ಅಪ್ಪು, ಶಿಖಿ=ಅಗ್ನಿ, ತೇಜ, ಪವನ=ವಾಯು, ಭೂತಾಕಾಶ=ಬ್ರಹ್ಮಾಂಡದಲ್ಲಿಪ್ಪ ಸರ್ವ ಅವಕಾಶ ಪ್ರದವಾದ ಬೈಲು=ಆಕಾಶ (ಹೃದಯಾಕಾಶ-ಅವ್ಯಾಕೃತಾ ಕಾಶ ಇವೆರಡು ಬೇರೆ). ಇಂಥ ಐದು ಭೂತಗಳಲ್ಲಿ ಒಂದರೊಳಗೊಂದ ರಂತೆ ಐದೈದು. ಆಕಾಶದಲ್ಲಿ ಆಕಾಶ-ಆಕಾಶ, ಆಕಾಶ ವಾಯು, ಆಕಾಶ ತೇಜ, ಆಕಾಶ ಅಪ್ಪು, ಆಕಾಶ ಪೃಥ್ವಿ, ಒಂದೊಂದು ೨೦-೨೦ ಅಂಶ ಪಂಚೀಕರಣ ರೀತ್ಯಾ ಇರುವವು. ಇದರಂತೆ ವಾಯು-ತೇಜ-ಅಪ್ಪು-

ಪೃಥ್ವಿ ಒಂದರೊಳಗೈದರಂತೆ ೫×೫=೨೫ ಸಂಸೃಷ್ಟ ಅಂಶಗಳು ಸ್ಥೂಲ ದೇಹದಲ್ಲಿ ಬ್ರಹ್ಮಾಂಡದಲ್ಲಿ ಇರುವವು. ಮತ್ತು ಆಕಾಶ ತಮೋ ಅಂಶಗುಣ ಶಬ್ದಾದಿ, ಶಬ್ದ-ಸ್ಪರುಶ-ರೂಪ-ರಸ-ಗಂಧ ಗುಣವೇ ಪಂಚತನ್ಮಾತ್ರಾಗಳು. ಇವುಗಳಲ್ಲಿಯೂ; ಆಕಾಶಾದಿ ೫ ಭೂತಗಳ ಗುಣಗಳು ಸೂಕ್ಷ್ಮಾಂಶದಿಂದ ೫×೫=೨೫ ಒಟ್ಟಿಗೆ ಭೂತಾದಿ ೨೫ ಪಂಚತನ್ಮಾತ್ರಾದಲ್ಲಿ ೨೫. ೫೦ ಗುಣ ಗಳಲ್ಲಿ ೫೦ ಅಜಾದಿ ಮೂರ್ತಿಗಳು. ಕ್ಷಂ ಲಕ್ಷ್ಮೀನೃಸಿಂಹ ಜೀವನಲ್ಲಿ-ಹೀಗೆ ೫೧ ವರಣ ಪ್ರತಿಪಾದ್ಯ ೫೧ ಮೂರ್ತಿಗಳು ಲಕ್ಷಣ, ತಂತ್ರ ಸಾರದಲ್ಲಿ ಸರ್ವ ಜ್ಞರು ಹೇಳಿದ್ದಾರೆ. ಈ ಅಜಾದಿ ಐವತ್ತೊಂದು ಭಗವದ್ರೂಪಗಳು ಈ ಶರೀರದಲ್ಲಿ ವ್ಯಾಪಿಸಿದ್ದು, ಸುರರಿಗೆ=ತತ್ವ ದೇವತೆಗಳಿಗೆ ನಿತ್ಯವಾದ ಸುಖ ವನ್ನು ಅಸುರರಾದ ತತ್ವ ತಮೋಗುಣಾಭಿಮಾನಿಗಳಿಗೆ, ಅಸುಖ=ನಿತ್ಯ ದುಃಖ ನರಕಾದಿಗಳನ್ನು ಕೊಟ್ಟು ಕ್ರೀಡೆಯಾಡುತ್ತಲಿದ್ದು, ತನ್ನಲ್ಲಿ ತನ್ನ ಭಕ್ತರಾದ ದೇವತೆಗಳಲ್ಲಿ ಮುಕ್ತಿಯೋಗ್ಯರಾದ ಸಜ್ಜೀವರಲ್ಲಿ ನಿತ್ಯ ದ್ವೇಷ ಮಾಡುವವರನ್ನು ಮರ್ದಿಸುತ್ತಾನೆ. ಈ ೫೧ ಅಜಾದಿ ಭಗವದ್ರೂಪಗಳ ಕಾರ್ಯಗಳು ಯಾವ ವ್ಯಾಖ್ಯಾನಕಾರರು ಬರೆದಿಲ್ಲ. ಜ್ಞಾನಿಗಳಾದ ಸದ್ಗುರು ಗಳಿಂದ ತಿಳಿಯುವದು.

ದ್ರೌಪದೀಶಪತಿ ವಿಠಲರು: ಭೂಸಲಿಲ ಪವನ ಭೂತಾಕಾಶದೊಳ ಗೈದೈದು ತನ್ಮಾತ್ರಾ ಸಹಿತ ವಂದಧಿಕ ಪಂಚಾಶದ್ವಗಣ ||

೧) ಪೃಥ್ವಿ=ಪಂಚಭೂತ, ಅನಿರುದ್ಧ-೧) ಪೃಥ್ವಿ-ಪೃಥ್ವೀ, ೨) ಪೃಥ್ವಿ, ಅಪ್ಪು, ೩) ಪೃಥ್ವಿ-ತೇಜ, ೪) ಪೃಥ್ವಿ-ವಾಯು, ೫) ಪೃಥ್ವಿ-ಆಕಾಶ.

೨) ಅಪ್ಪು=ಅಪ್ಪು-ಪ್ರದ್ಯುಮ್ನ-೧) ಅಪ್ಪು-ಪೃಥ್ವಿ, ೨) ಅಪ್ಪು-ಅಪ್ಪು, ೩) ಅಪ್ಪು-ತೇಜ, ೩) ಅಪ್ಪು-ವಾಯು, ೫) ಅಪ್ಪು-ಆಕಾಶ.

೩) ತೇಜ=ಅನಿರುದ್ಧ-ಸಂಕರುಷಣ-೧) ತೇಜ-ಪೃಥ್ವಿ, ೨) ತೇಜ-ಅಪ್ಪು, ೩) ತೇಜ-ತೇಜ, ೪) ತೇಜ-ವಾಯು, ೫) ತೇಜ-ಆಕಾಶ.

೪) ವಾಯು=ಅನಿರುದ್ಧ-ವಾಸುದೇವ-೧) ವಾಯು-ಪೃಥ್ವಿ, ೨) ವಾಯು-ಅಪ್ಪು, ೩) ವಾಯು-ತೇಜ, ೪) ವಾಯು-ವಾಯು, ೫) ವಾಯು-ಆಕಾಶ.

೫) ಆಕಾಶ = ಅನಿರುದ್ಧ-ನಾರಾಯಣ-೧) ಆಕಾಶ-ಪೃಥ್ವಿ, ೨) ಆಕಾಶ-ಅಪ್ಪು, ೩) ಆಕಾಶ-ತೇಜ, ೪) ಆಕಾಶ-ವಾಯು, ೫) ಆಕಾಶ-ಆಕಾಶ.

ಪಂಚತನ್ಮಾತ್ರಾ ೧) ಪೃಥ್ವಿಯಿಂದ ಗಂಧ, ೨) ಅಪ್ಪು-ರಸ, ೩) ತೇಜ-ರೂಪ, ೪) ವಾಯು-ಸ್ಪರ್ಶ, ೫) ಆಕಾಶ-ಶಬ್ದ.

೧) ಗಂಧ=ಅನಿರುದ್ಧ-ಅನಿರುದ್ಧ, ೧) ಪೃಥ್ವಿ-ಗಂಧ, ೨) ಅಪ್ಪು-ಗಂಧ, ೩) ತೇಜ-ಗಂಧ, ೪) ವಾಯು-ಗಂಧ, ೫) ಆಕಾಶ-ಗಂಧ.

೨) ರಸ=ಅನಿರುದ್ಧ-ಪ್ರದ್ಯುಮ್ನ-೧) ಪೃಥ್ವಿ-ರಸ, ೨) ಅಪ್ಪು-ರಸ, ೩) ತೇಜ-ರಸ, ೪) ವಾಯು-ರಸ, ೫) ಆಕಾಶ-ರಸ.

೩) ರೂಪ=ಅನಿರುದ್ಧ-ಸಂಕರ್ಷಣ-೧) ಪೃಥ್ವಿ-ರೂಪ, ೨) ಅಪ್ಪು-ರೂಪ, ೩) ತೇಜ-ರೂಪ, ೪) ವಾಯು-ರೂಪ, ೫) ಆಕಾಶ-ರೂಪ.

೪) ಸ್ಪರ್ಶ=ಅನಿರುದ್ಧ-ವಾಸುದೇವ ೧) ಪೃಥ್ವಿ-ಸ್ಪರ್ಶ, ೨) ಅಪ್ಪು-ಸ್ಪರ್ಶ, ೩) ತೇಜ-ಸ್ಪರ್ಶ, ೪) ವಾಯು-ಸ್ಪರ್ಶ, ೫) ಆಕಾಶ-ಸ್ಪರ್ಶ.

೫) ಶಬ್ದ=ಅನಿರುದ್ಧ-ನಾರಾಯಣ-೧) ಪೃಥ್ವಿ-ಶಬ್ದ, ೨) ಅಪ್ಪು-ಶಬ್ದ, ೩) ತೇಜ-ಶಬ್ದ, ೪) ವಾಯು-ಶಬ್ದ, ೫) ಆಕಾಶ-ಶಬ್ದ.

ಇದರೊಳಗೆ ಐದೈದು ಪ್ರಕಾರ ಹೆಚ್ಚಿಸಿದರೆ ೫೦ ರೂಪವಾಯಿತು. ಕ್ಷ ಅಕ್ಷರ ಪ್ರತಿಪಾದ್ಯ ನರಸಿಂಹ ೫೧. ಏಕ ಪಂಚಾಶದ್ವರಣಗಳ ಪ್ರತಿಪಾದ್ಯ. ಇದರೊಳಗೆ ವ್ಯಾಪಿಸಿದ ವಿವರ ಮಾತೃಕಾಮಂತ್ರ ೫೧ಕ್ಕೆ ಅ ಆರಂಭಮಾಡಿ ಅಂ ಅಃ ತನಕಾ, ಮುಖದಲ್ಲಿದ್ದ ಅಂಗಗಳು. ೧) ಶಿರಸ್ಸು, ೨) ನೇತ್ರ, ೩) ಶ್ರೋತ್ರ, ೪) ರಸನ, ೫) ವಾಕ್ಕು, ೬) ನಾಶಿಕಾದಿಯಲ್ಲಿ ೧೬ ಅಕ್ಷರ. ದಕ್ಷಿಣಬಾಹು ಕ ವರ್ಗ-೫, ವಾಮಬಾಹು ಚ ವರ್ಗ-೫, ದಕ್ಷಿಣಪಾದ ಟ ವರ್ಗ-೫, ವಾಮಪಾದ ತ ವರ್ಗ-೫, ದಕ್ಷಿಣ ಕಕ್ಷ ಪ-೧, ವಾಮ ಕಕ್ಷ ಫ-೧, ಬೆನ್ನು ಭಾಗ ೧, ಬಲಿ-ಗುದ ೧, ಭಗ-ಉಪಸ್ಥ-ಮನವೇ ೧ ಹೀಗೆ ಪ ವರ್ಗ-೨೫ ಅಕ್ಷರ. ಯ-ರ-ಲ-ವ-ಶ-ಷ-ಸ-ಹ-ಳ-ಕ್ಷ, ಹೃದಯಾದಿ ಸಪ್ತಧಾತು ಕ್ಷಂ ಜೀವ ೧೦, ಒಟ್ಟಿಗೆ ೫೧.

## ೫೧ ಅಕ್ಷರ ವಿವರ ಭೂಲೋಕಾದಿ ಕಮಲಗತ

೧) ಮೂಲಾಧಾರ ಕಮಲದಳ ೪. ೧) ಸೋಮ, ೨) ಬುಧ, ೩) ಬೃಹಸ್ಪತೀ, ೪) ಶನೇಶ್ಚರ=ವಂ-ಲಂ-ಶಂ-ಷಂ ೪ ಭೂಲೋಕ.

೨) ನಾಭಿಯಲ್ಲಿ ೬ ದಳ ಕಮಲ. ಷಣ್ಮಹಿಷಿಯರು ೬ ಜನ= ಯಂ-ರಂ-ಲಂ-ವಂ-ಶಂ-ಷಂ ಇದೇ ಭುವರ್ಲೋಕ.

೩) ಹೃದಯುದಿ ೮ ದಳ ಕಮಲ. ಇಂದ್ರಾದಿ ಅಷ್ಟದಿಕ್ಪಾಲಕರು= ಡಂ-ಢಂ-ಣಂ-ತಂ-ಥಂ-ದಂ-ನಂ-೮ ಅಕ್ಷರ= ಇದೇ ಸ್ವರ್ಗಲೋಕ.

೪) ಹೃದಯಸ್ಥಾನ ೧೨ ದಳ ಕಮಲ. ದ್ವಾದಶಾದಿತ್ಯರು ೧೨ ಅಕ್ಷರ= ಕಂ-ಖಂ-ಗಂ-ಘಂ-ಙಂ-ಚಂ-ಛಂ-ಜಂ-ಝಂ-ಞಂ-ಟಂ-ಠಂ ಇದೇ ಮಹ ರ್ಲೋಕ.

೫) ಕಂಠಸ್ಥಾನ ೧೬ ದಳ ಕಮಲ. ೧೬ ಚಂದ್ರಕಲಾಭಿಮಾನಿ ದೇವತೆಗಳು. ೧೬ ಅಕ್ಷರ = ಅಂ-ಆಂ-ಇಂ-ಈಂ-ಉಂ-ಊಂ-ಋಂ-ೠಂ-ಌಂ-ೡಂ-ಎಂ-ಏಂ-ಒಂ-ಔಂ-ಅಂ-ಅಃ ೧೬ ರೂಪಗಳು - ಇದೇ ಜನೋ ಲೋಕ.

೬) ಭ್ರೂಮಧ್ಯಸ್ಥಾನ ೨ ದಳ ಕಮಲ. ಗರುಡ-೨ ಅಕ್ಷರ ಷಂ. ಸಂ-ಇದೇ ತಪೋಲೋಕ.

೭) ಶಿರಸ್ಸಿನಲ್ಲಿ ಸಹಸ್ರದಳಕಮಲ ಬ್ರಹ್ಮ-ಅಕ್ಷರ ೩. ಓಂಕಾರವರ್ತು ಳಾಕಾರ-೧ ಅಕಾರ, ೨ ಉಕಾರ, ೩ ಮಕಾರ.

(೫೧) ಏಕಪಂಚಾಶದ್ವರಣನೆಂದು ಹೇಳುತ್ತಾರೆ.

**ಭಾವಸೂಚನ :** ತದುಕ್ತಂ ಮಂಜೂಷಾಯಾಂ ||

ಭಾಮಿನಿ || ಮೋಕ್ಷಪಂಥಕೆ ಸ್ವಕಿಯ ದೇಹದ |
ವೀಕ್ಷಣವೆ ಮುಖ್ಯಾದ ಕಾರಣ |
ಲಕ್ಷ್ಮಿಯಿಂದಲಿ ದೇಹಚತುಷ್ಟಯ ವಿವರಿಸಿದರಲ್ಲಿ ||
ಲಕ್ಷ್ಮಿನಿಲಯನ ರೂಪ ಜ್ಞಾನ ಸು |
ಚಕ್ಷುಯಿಂ (ದಿಂ) ದಲಿ ನೋಳ್ಪಗೋಸುಗ |
ಪಕ್ಷಪಾತದಿ ನುಡಿದ ಸುಜನರ ಮೌಳಿ ಕರುಣದಲಿ || ೭ || ಇತಿ.

ಬಡಿವಾ- ಪರಿಹರಿಸುವಾ || ೧ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಪಂಚಭೂತ ತನ್ಮಾತ್ರಾಗತ ರೂಪ ಮಹಿಮಾನಂ ವಕ್ತುಂ ತನ್ಮಾತ್ರಾ ಸಂಧಿಂ ವಿರಚಯತಿ "ಭೂ ಸಲಿಲೇತಿ" ಬಡಿವಾ= ಹೊಡೆಯುವಾ || ೧ ||

## ಕನ್ನಡಾರ್ಥ

ಪಂಚ ಮಹಾಭೂತಗಳು ಅದರಲ್ಲಿರುವ ಅಸಾಧಾರಣ ಗುಣಗಳು ಇವುಗಳಲ್ಲಿರುವ ಭಗವದ್ರೂಪಗಳ ಮಹಿಮೆಯನ್ನು ಹೇಳಲು ಪಂಚತನ್ಮಾತ್ರಾ ಸಂಧಿಯನ್ನು ದಾಸವರ್ಯರು ವಿರಚಿಸುತ್ತಾರೆ. "ಭೂ ಸಲಿಲ" ಎಂಬ ಪದ್ಯದಿಂದ ಆರಂಭಿಸುತ್ತಾರೆ. ॥ ೧ ॥

**ಅವತರಣಿಕಾ :** ಅಜಾದಿ ೧ ವರ್ಣಗಳು ಓಂಕಾರದಿಂದ ಉತ್ಪತ್ತಿ. ಅಕಾರ-ವಿಶ್ವ, ಉಕಾರ-ತೈಜಸ, ಮಕಾರ-ಪ್ರಾಜ್ಞ ರೂಪಗಳು ದೇಹದಲ್ಲಿ ಯಾವ ಸ್ಥಳದಲ್ಲಿದ್ದು ಏನೇನು ಕಾರ್ಯ ಎಷ್ಟು ರೂಪಗಳಿಂದ ಮಾಡುತ್ತಾರೆಂಬುದನ್ನು ಹೇಳುತ್ತಾರೆ.

ಮೂಲ :

**ಪ್ರಣವ ಪ್ರತಿಪಾದ್ಯ ತ್ರಿ ನಾಮದಿ ।**
**ತನುವಿನೊಳು ತ್ರಿಸ್ಥಾನಗನಿರು ।**
**ದ್ಧನು ತ್ರಿಪಂಚಕ ಯೇಕವಿಂಶತಿ ಚತುರವಿಂಶತಿಗ ॥**
**ನೆನಿಸಿ ಎಪ್ಪತ್ತೆರಡು ಸಾವಿರ ।**
**ಇನಿತು ನಾಡಿಗಳೊಳು ನಿಯಾಮಿಸು ।**
**ತಿನಗಭಸ್ಥಿಗ ಲೋಕದೊಳು ಸರ್ವತ್ರ ಬೆಳಗುವನು ॥ ೨ ॥**

**ಪದ್ಯಾರ್ಥ :** ಪ್ರಣವಪ್ರತಿಪಾದ್ಯ=ಓಂಕಾರದಿಂದ ಮೇಯಸ್ತುತ್ಯನಾದ ಹರಿಯು, ತನುವಿನೊಳು=ಈ ಸ್ಥೂಲ ದೇಹದಲ್ಲಿ ಅನಿರುದ್ಧಾಂಶ ೧ ಅಕಾರ ಪ್ರತಿಪಾದ್ಯ ವಿಶ್ವನು ಬಲಕಣ್ಣಿನಲ್ಲಿ ಜಾಗ್ರದವಸ್ಥಾ ಪ್ರೇರಕನಾಗಿಯೂ, ೨ ಉಕಾರ ಪ್ರತಿಪಾದ್ಯ ತೈಜಸನು ಪ್ರದ್ಯುಮ್ನಾಂಶದಿಂದ ಕಂಠದಲ್ಲಿದ್ದು ತೈಜಸ ನಾಮಕನಾಗಿರುವನು. ಜೀವನಿಗೆ ಸ್ವಪ್ನಾವಸ್ಥಾಪ್ರದನು. ಈ ವಿಶ್ವನು ಶುಭ್ರವರ್ಣ ವಿಶಿಷ್ಟನು ಚತುರ್ಬಾಹುವುಳ್ಳವನು. ೧೯ ಮುಖವೆಂದರೆ ಮಧ್ಯದಲ್ಲಿಯ ಮುಖ ಸೊಂಡಿಲಾಕೃತಿಯ ಮುಖ, ಬಲಗಡೆ ೯ ಮುಖ-ಎಡಗಡೆ ೯ ಮುಖ. ಬಲಗಡೆ ೩-೩ ಮುಖದಿಂದ ಸತ್ವ-ರಜ-ತಮೋ ಪುರುಷ ಜೀವರಿಗೆ ಜಾಗ್ರದವಸ್ಥಾಪ್ರೇರಕ ಮತ್ತು ಎಡಗಡೆಯ ಒಂಭತ್ತು ಮುಖದಿಂದ ಸತ್ವಜೀವ ಸ್ತ್ರೀಯರಿಗೆ ೩ ಮುಖದಿಂದ ರಜೋ ಸ್ತ್ರೀ ಜೀವರಿಗೆ. ೩ ಮುಖದಿಂದ ತಮೋ ಸ್ತ್ರೀ ಜೀವರಿಗೆ ಜಾಗ್ರದಾವಸ್ಥಾ ಕೊಡುವನು. ಇದರಂತೆ ಕಂಠಗತ ತೈಜಸನ ಮುಖಗಳು ೧೯ ಇರುವವು.

ಈತನು ಅರುಣವರ್ಣ ವಿಶಿಷ್ಟನಾಗಿ ಮೇಲಿನಂತೆ ತ್ರಿವಿಧ ಪುರುಷ ಸ್ತ್ರೀಯರಿಗೆ ಕಂಠದಲ್ಲಿ ಸ್ವಪ್ನಾವಸ್ಥಾ ತಂದುಕೊಡುವನು. ಪ್ರದ್ಯುಮ್ನನಾದ ತೈಜಸನು ಹೃದಯದಲ್ಲಿ ಜೀವನನ್ನು ಪ್ರವೇಶಮಾಡಿಸಲು ಹೃದಯದಲ್ಲಿಪ್ಪ. ಪ್ರಾಜ್ಞರೂಪಿ ಹರಿಯು ಜೀವರಿಗೆ ಸುಷುಪ್ತಿ-ನಿದ್ರಾವಸ್ಥಾ ಕೊಡುವನೆಂದು ಮಾಂಡುಕ ಉಪನಿಷದ್ ರಹಸ್ಯ. ಈತನೇ ತ್ರಿಪಂಚಕ ಅಂದರೆ ೧೫ ರೂಪ, ಚಕ್ಷುಗತ ವಿಶ್ವ ಅನಿರುದ್ಧನ ೫ ಅನಿರುದ್ಧಾದಿ ಅಂಶಗಳು. ಕಂಠಗತ ತೈಜಸ ಪ್ರದ್ಯುಮ್ನನ ಪ್ರದ್ಯುಮ್ನಾದಿ ೫ ಅಂಶಗಳು, ಹೃದಯುಗತ ಪ್ರಾಜ್ಞ ಸಂಕರ್ಷಣಾದಿ ೫ ರೂಪಾಂಶ ೧೫ ರೂಪಗಳು. ಇವೇ ರೂಪಗಳಿಂದಲೇ ಏಕವಿಂಶತಿ= ಪಂಚ ಜ್ಞಾನೇಂದ್ರಿಯ ೫, ಪಂಚ ಕರ್ಮೇಂದ್ರಿಯ ೫, ಪಂಚತನ್ಮಾತ್ರ ೫, ಪಂಚ ಭೂತಗಳೈದು ಹೀಗೆ ೨೦ ಒಂದು ಮನಸ್ಸಿನಲ್ಲಿ, ಇಪ್ಪತ್ತೊಂದು ರೂಪಗಳಿಂದಲೂ, ಚತುರವಿಂಶತಿಗ=ಮೇಲಿನ ೨೧ ರೂಪಗಳಲ್ಲದೆ ೧ ಅಹಂಕಾರ, ೨ ಮಹತತ್ವ, ೩ ಅವ್ಯಕ್ತ ತತ್ವ ಮೂರು ಕೂಡಿಸಿದರೆ ಇಪ್ಪತ್ತುನಾಲ್ಕು ರೂಪಗಳಿಂದಲೂ ಸಂಸೃಷ್ಟವಾಗಿರುವ ೨೪ ತತ್ವಗಳಲ್ಲಿರುವ ರೂಪಗಳೆಂದು ತಿಳಿದು ಪೂಜಿಸಬೇಕು. ಈ ಇಪ್ಪತ್ತುನಾಲ್ಕು ತತ್ವಗಳಲ್ಲಿ ಸತ್ವ=ವಿಶ್ವ, ರಜ=ತೈಜಸ, ತಮ=ಪ್ರಾಜ್ಞ ಈ ಮೂರು ರೂಪಗಳಿಂದ ೨೪ ಹೆಚ್ಚಿಸಲು ೨೪ × ೩=೭೨ ರೂಪಗಳು. ಇವು ಬೃಹತೀ ಸಹಸ್ರ ಋಕ್ ಪ್ರತಿಪಾದ್ಯ ೧೦೦೦ ರೂಪಗಳಿಂದ ಹೆಚ್ಚಿಸಿದರೆ ೭೨೦೦೦ ಆಗುವವು. ಹೀಗೆ ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿ ನಿಯಾಮಿಸುತ್ತ=ನಿಯಮನ ಮಾಡುತ್ತಲಿರುವನು. ಈ ಬೃಹತೀ ಸಹಸ್ರ ಋಕ್ ಪ್ರತಿಪಾದ್ಯ ಸಹಸ್ರ ರೂಪಗಳೇ ಬಹಿರಂಗದಲ್ಲಿ ಕಾಲ ನಾಮಕ ಸೂರ್ಯನ ಕಿರಣಗಳಲ್ಲಿದ್ದು ಸರ್ವತ್ರದಲ್ಲಿಯೂ, ಸರ್ವ ಲೋಕಗಳನ್ನೂ ಬೆಳಗುವನು=ಪ್ರಕಾಶಿಸುವನು ॥ ೨ ॥

ದ್ರೌಪದೀಶಪತಿ ವಿಠಲರು : ಪ್ರಣವ ಪ್ರತಿಪಾದ್ಯ ತ್ರಿಸಾಮದಿ ॥ ಅಕಾರ ಪ್ರತಿಪಾದ್ಯ ವಿಶ್ವ ೧, ಉಕಾರ ಪ್ರತಿಪಾದ್ಯ ತೈಜಸ ೨, ಮಕಾರ ಪ್ರತಿಪಾದ್ಯ ಪ್ರಾಜ್ಞ ೩. ತನುವಿನೊಳು ತ್ರಿಸ್ಥಾನಗನಿರುದ್ಧನು ಎಂದರೆ ನೇತ್ರ-ಕಂಠ-ಹೃದಯ. ವಿಶ್ವ ಕಣ್ಣಿನೊಳಗೆ ಬಿಂಬ-ಆತಗ ಆವರಣ ೧ ಅನಿರುದ್ಧ, ೨ ಪ್ರದ್ಯುಮ್ನ, ೩ ಸಂಕರ್ಷಣ, ೪ ವಾಸುದೇವ, ೫ ನಾರಾಯಣ ಇದೇ ಪ್ರಕಾರ ಕಂಠಗತ ತೈಜಸ ೫ ಅಂಶ, ಹೃದಯ ಪ್ರಾಜ್ಞನ ಅಂಶ ೫ ಇದೇ

ತ್ರಿಪಂಚಕ, ೧೫ ಏಕವಿಂಶತಿಗ=ಕರ್ಮೇಂದ್ರಿಯ ೫, ಜ್ಞಾನೇಂದ್ರಿಯ ೫, ಭೂತ ೫, ತನ್ಮಾತ್ರ ೫, ಮನಸ್ಸು ೧ ಅಂತೂ ಇಪ್ಪತ್ತೊಂದು ೨೧-ಚತುರ್ವಿಂಶತಿಗ=ಅಹಂಕಾರ ತತ್ವ, ಗರುಡ ಶೇಷ ರುದ್ರ ೨೨, ಮಹತತ್ವ ಬ್ರಹ ವಾಯು ೨೩ ಅವ್ಯಕ್ತತತ್ವ ಅಮುಖ್ಯಾಭಿಮಾನಿಗಳು. ಭಾರತೀ ಸರಸ್ವತೀ ಮುಖ್ಯಾಭಿಮಾನಿ ಶ್ರೀ ಮಹಾಲಕ್ಷ್ಮಿ ೨೪-ಈ ಇಪ್ಪತ್ತು ನಾಲ್ಕು ತತ್ವಗಳು ಗುಣತ್ರಯಾತ್ಮಕವಾದ ಪ್ರಯುಕ್ತ, ಸತ್ವ ಗುಣದಲ್ಲಿ ವಿಷ್ಣು ರೂಪ, ರಜೋ ಗುಣದಲ್ಲಿ ಬ್ರಹ್ಮಮೂರ್ತಿ, ತಮೋಗುಣದಲ್ಲಿ ರುದ್ರಮೂರ್ತಿ, ಇಪ್ಪತ್ತು ನಾಲ್ಕು ಈ ಮೂರರಿಂದ ಹೆಚ್ಚಿಸಿದರೆ ೭೨ ಆಯಿತು. ಈ ೭೨ ಬೃಹತೀ ಸಹಸ್ರ ಋಕ್ಕಿನಿಂದ ಹೆಚ್ಚಿಸಿದರೆ ೭೨ ಸಾವಿರವಾಯಿತು. ಈ ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿ ೭೨ ಸಹಸ್ರ ರೂಪ. ಇಡಾಗಳೊಳಗೆ ೫೦೦ ಉತ್ತರಾಯಣ ನಾಡಿ, ಪಿಂಗಳಾ ನಾಡಿಗಳೊಳಗೆ ೫೦೦ ದಕ್ಷಿಣಾಯಣ ನಾಡಿ-ಇದರೊಳಗೆ ಇನಗಭಸ್ತಿಗ ಲೋಕದೊಳು ಸರ್ವತ್ರ ಬೆಳಗುವನೆಂದರೆ, ಸೂರ್ಯನ ಕಿರಣಗಳು ವ್ಯಾಪ್ತವಾಗಿವೆ ಎಂತ ಹೇಳುತ್ತಾರೆ.

**ಭಾವಸೂಚನ:** ಪ್ರಣವೇತಿ ॥ ತ್ರಿವೃತ್=ತ್ರಿರೂಪದಿಂದ ಇರುವಾ । ತ್ರಿಭಿಃ ರೂಪೈ ವರ್ತತೇ ॥ ಅಥವಾ ಶ್ವೇತದ್ವೀಪಾದಿ ತ್ರಿಸ್ಥಾನೇಷು ವರ್ತತೇ। ಯದ್ವಾ ತ್ರಿಷುಋಗಾದಿಷು ವರ್ತತೇ ತಾತ್ಪರ್ಯ ವಿಷಯಃ ॥ ಉಕ್ತಂ ಚ ಮಧ್ವ ಮಂತ್ರಾರ್ಥ ಮಂಜರಿಯೋ ॥ ಅಥವಾ ತ್ರಿವೃತ್ ॥ ತ್ರಿಷು ಶ್ವೇತ ದ್ವೀಪ ಅನಂತಾಸನ ವೈಕುಂಠೇತು ವರ್ತತೇ ತದೇತದ್ ಬ್ರಹ್ಮೇತಿ ॥ ಅಥವಾ ತ್ರಿವೃತ್ ತ್ರಿಷು ವೇದೇಷು ವರ್ತಮಾನಂ ತತ್ಪಾರ್ಯ ವಿಷಯಭೂತಂ ಚೇತಿ॥ ಅಭೀ ದ್ವಿಜ(ಮ್ನಾ)ನ್ಮನಾ ತ್ರಿವೃದಿತಿ ಸೂತ್ರ ವ್ಯಾಖ್ಯಾವಸರೆ ॥ ೨ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಮಹೈತರೇಯೋಪನಿಷದರ್ಥಮಾಹ "ಪ್ರಣವ" ಇತಿ ॥ ಓಂ ಯದೇ ತನ್ಮಹದುಕ್ಥಂ ತದೇತತ್ ಪಂಚವಿಧಂ ತ್ರಿವೃತ್ ಪಂಚದಶಂ ಸಪ್ತದಶಂ ಏಕವಿಂಶಂ ಪಂಚವಿಂಶಮ್" ಇತಿ ॥ ತದ್ಭಾಷ್ಯಂ ಚ "ಅನ್ಯತ್ವಾತ್ ಸರ್ವ ಜೀವೇಭ್ಯಃ ಜಡೇಭ್ಯಃ ಚ ಸದೈವ ಹಿ ॥ ಸರ್ವದೋಷೋಜ್ಝಿತತ್ವಾಚ್ಚ ಸರ್ವತೋ ಪೃಥಿಕತ್ವತಃ ॥ ನಿರಾಸನಾಚ್ಚ ದೋಷಾಣಾಂ ಸ್ವಭಕ್ತೇಭ್ಯಃ ಸಮಂತತಃ ॥ ಸರ್ವದೋಷ ವಿರುದ್ಧೋರು-ಗುಣಪೂರ್ಣ ಸ್ವರೂಪತಃ ॥

ನಾಲಾಯಣಃ ಇತಿ ಪ್ರೋಕ್ತಃ ಹ್ಯಕಾರಾರ್ಥೋऽಯ ಮೇವಹಿ ॥ ತಸ್ಮಾದ ಕಾರ ಬೀಜೇಯಂ ವಿಷ್ಣೋಃ ನಾರಾಯಣಾಭಿಧಾ॥ ಪ್ರಣವಶ್ಚ ತಥೋಕಾರಃ ಪ್ರಧಾನಂ ನಾಮ ಚಕ್ರಿಯಾಃ ॥ ತ್ರಿವಿಧೋಹ್ಯನಿರುದ್ಧೋऽಸೌ ಅಧ್ಯಾತ್ಮಾದಿ ವಿಭೇದಗಃ ಅತಃ ತ್ರಿವೃದಿತಿ ಪ್ರೋಕ್ತಃ ತಥಾ ಪಂಚದಶಾತ್ಮಕಃ॥ ಪ್ರದ್ಯುಮ್ನಃ ಪಂಚರೂಪೇಷು ಹ್ಯಧ್ಯಾತ್ಮಾದಿ ವಿಭೇದತಃ ॥ ಸಪ್ತಧಾತುಷು ಸಂಸ್ಥಃ ಸನ್ ಅಧ್ಯಾತ್ಮಾದಿ ವಿಭೇದತಃ ॥ ಏಕವಿಂಶೋ ವಾಸುದೇವೋ ಮನ ಆದಿ ಚತುಷ್ಟಯೇ ॥ ಗುಣತ್ರಯೇ ಚ ಪ್ರಕೃತೌ ಅಧ್ಯಾತ್ಮಾದಿ ವಿಭೇದತಃ ॥ ಮೂಲ ರೂಪೇಣ ಚ ಸಹ ಪಂಚವಿಂಶಾತ್ಮಾಕಃ ಪ್ರಭುಃ ॥ ನಾರಾಯಣಃ ತ್ವಚಿಂತ್ಯಾತ್ಮಾ ಸ ಏಕೋऽಪಿ ಹ್ಯನಂತಧಾ" ॥ ಇತಿ ॥ ಅಧಿಭೂತಂ ದೇಹಗ ಪಂಚಭೂತೇಷು, ಅಧ್ಯಾತ್ಮಂ ಜೀವ ಶರೀರಗ ಪಂಚಭೂತೇಷು ; ಅಧಿದೈವಂ ದೇವ ಶರೀರಗ ಭೂತ ಪಂಚ ಕೇ ಚತುರ್ವಿಂಶದ್ರೂಪ ಪ್ರಬಂಧೇ ಭೂತೇಷು ಅಷ್ಟಕ ಪ್ರವೇಶಃ ಕಥಂ ಚೇತ್ ? ಉಚ್ಯತೇ ತಾವನ್ರುಪಣ್ಯಾಂ ಚ "ಮನೋ ಬುದ್ಧ್ಯಹಂಕಾರ ಚಿತ್ತ ಗುಣತ್ರಯ ಪ್ರಕೃತ್ಯಾತ್ಮಾಷ್ಟಕಂ ॥ ಪ್ರಕೃತಿಃ ಸ್ವಾತ್ಮ ಸಂಶ್ಲಿಷ್ಟಾನ್ ಗುಣಾನ್ ಸತ್ವಾದಿಕಾನ್ ಅಪಿ" ॥ ಇತ್ಯುಕ್ತ ನ್ಯಾಯೇನ ವರ್ತತೆ ॥ ಭೂತೇಷ್ವಪಿ ॥ ವ್ಯಾಪ್ತಂ ಕಾರ್ಯೇಷು ಕಾರಣಮ್ ಇತ್ಯುಕ್ತ ನ್ಯಾಯೇನ ಭೂತಾನಾಂ ಪರಂಪರಯಾ ಗುಣತ್ರಯ ಪ್ರಕೃತಿ ಕಾರ್ಯತ್ವಾತ್ ಪ್ರಾಣಾ ಏವ ಇದಮುಗ್ರ ಅಸುಃ ಇತ್ಯುಕ್ತ ನ್ಯಾಯೇನ ಮನ ಆದಿ ಕಾರ್ಯತ್ವಾತ್ ಅಧಿದೈವಂ ಮನ ಆದ್ಯಷ್ಟಕಂ ಬೋಧ್ಯಮ್ ॥ ಯದ್ವಾ ಅಧ್ಯಾತ್ಮಂ ಪ್ರಾಣಿ ಶರೀರಗೇಷು ದೇವೇಷು ಭೂತಾಭಿಮಾನಿಷು ಸ್ವರ್ಲೋಕಸ್ಥಿತೇಷು ಚ ದೇವೇಷು ಇತಿ ಸ್ಥಾನತ್ರಯೇಪಿ ಮನ ಆದ್ಯಷ್ಟಕಾವಸ್ಥಾನಂ ಸುಕರಮೇವ ॥ ಇನಿತು-ಹೀಗೆ ; ಇನ=ಸೂರ್ಯ ॥ ೨೩

## ಕನ್ನಡಾರ್ಥ

ಶ್ರೀಮನ್ ಮಹೈತರೇಯ (ಐತರೇ) ಉಪನಿಷತ್ತಿನಲ್ಲಿ ನಿರೂಪಿತವಾಗಿರುವ ರಹಸ್ಯಮಯ ಪ್ರಮೇಯವನ್ನು ದಾಸವರ್ಯರು ನಿರೂಪಿಸುತ್ತಾರೆ "ಪ್ರಣವ ಪ್ರತಿಪಾದ್ಯ" ಎಂಬ ಪದ್ಯದಿಂದ.

ಶ್ರೀ ಐತರೇಯೋಪನಿಷತ್ತಿನಲ್ಲಿ ೨ನೆಯ ಅರಣ್ಯಕದ ೩ನೇ ಅಧ್ಯಾಯದ ೮ನೆಯ ವರ್ಗದಲ್ಲಿ ಈ ವಿಷಯವು ನಿರೂಪಿತವಾಗಿರುತ್ತದೆ. "ದಶಪೂರ್ಣ

ಮಾಸ ಚಾತುರ್ಮಾಸ್ಯ ಪಶು ಸೋಮ" ಎಂಬ ಐದು ವಿಧ ಯಜ್ಞಗಳಲ್ಲಿರುವ ಯಜ್ಞನಾಮಕ ಭಗವದ್ರೂಪವೇ ಬೃಹತೀ ಸಹಸ್ರ ಮಂತ್ರಗಳಲ್ಲಿ ಇರುವದು" ಎಂದು ಹೇಳಲು ಈ ಸಂದರ್ಭವು ಪ್ರಾರಂಭವಾಗಿರುತ್ತದೆ. "ಯಜ್ಞಗಳಲ್ಲಿ ರುವದೆಂಬುದಾಗಿ ಪೂರ್ವದಲ್ಲಿ ಹೇಳಲಾಗಿರುವ "ಉತ್ಥ"ವೆಂದು ಕರೆಯ ಲ್ಪಡುವ ಪರಮಾತ್ಮನ ರೂಪವು ಬೃಹತೀ ಸಹಸ್ರದಲ್ಲಿ ಇರುತ್ತದೆ. ಬೃಹತೀ ಸಹಸ್ರದಲ್ಲಿ ಇರತಕ್ಕ ರೂಪಕ್ಕೆ "ಉತ್ಥ"ವೆಂದು ಕರೆಯುತ್ತಾರೆ. ಪರಿಪೂರ್ಣ ನಾದುದರಿಂದ "ಮಹತ್" ಎನ್ನುತ್ತಾರೆ. ಸರ್ವರನ್ನೂ ಉತ್ಥಾಪಿಸುವನು- ಮೇಲಕ್ಕೆ ಎಬ್ಬಿಸುವನು; ಆದುದರಿಂದ "ಉತ್ಥ"ನೆಂದು ಶ್ರೀಹರಿಯನ್ನು ಕರೆಯುತ್ತಾರೆ" ಎಂದು ಉಪನಿಷತ್ತಿನ ಅರ್ಥ. ಇದಕ್ಕೆ ಸಂಬಂಧಿಸಿದ ಭಾಷ್ಯಾರ್ಥವನ್ನೂ ಬರೆಯುತ್ತೇವೆ.

"ಸರ್ವಜೀವ ಜಡಗಳಿಂದ ವಿಭಿನ್ನ (ಬೇರೆಯಾಗಿ)ನಾಗಿರುವದರಿಂದ ೧) ೨) ಸರ್ವದೋಷಗಳಿಲ್ಲದವನಾದುದರಿಂದ, ೩) ಸರ್ವರಿಂದಲೂ ಅಧಿಕ- ಉತ್ತಮನಾದುದರಿಂದ, ೪) ಭಕ್ತರಿಗೂ ದೋಷಗಳನ್ನು ಕಳೆಯುವದರಿಂದ, ೫) ದೋಷ ವಿರುದ್ಧವಾದ ಗುಣಪರಿಪೂರ್ಣನಾದುದರಿಂದ ಹರಿಯು "ನಾರಾ ಯಣ" ಶಬ್ದದಿಂದ ಕರೆಯಲ್ಪಡುತ್ತಾನೆ. ಈ ನಾರಾಯಣನೇ "ಅ" ಶಬ್ದ ವಾಚ್ಯನು. "ಅಕಾರವು ಪರಬ್ರಹ್ಮನಾದ ನಾರಾಯಣನನ್ನು ಹೇಳುತ್ತದೆ"; ಎಂದು ಬೇರೆ ಗ್ರಂಥಗಳಲ್ಲಿಯೂ ಶ್ರೀಮದಾಚಾರ್ಯರು ನಿರೂಪಿಸಿರುತ್ತಾರೆ. ನಾರಾಯಣ ನಾಮಕ್ಕೆ ಅಕಾರವು ಬೀಜಾಕ್ಷರದಂತಿರುತ್ತದೆ. ಅಂದರೆ, ನಾರಾಯಣ ನಾಮಕ್ಕೆ ಮೂಲವಾಗಿರುತ್ತದೆ. ಓಂಕಾರ ರೂಪವಾದ ಪ್ರಣವವು ಇದೇ ಅರ್ಥವನ್ನು ಹೇಳುತ್ತದೆ. ಹೀಗೆ ನಾರಾಯಣನು "ಮಹ ದುತ್ಥ"ನೆಂದು ಕರೆಯಿಸಿಕೊಳ್ಳುತ್ತಾನೆ. ಅನಿರುದ್ಧ ಮುಂತಾದ ಐದು ರೂಪಗಳಿಂದ ಆ ನಾರಾಯಣನು ಬೃಹತೀ ಛಂದಸ್ಸಿನ ಮಂತ್ರಗಳಲ್ಲಿರು ತ್ತಾನೆ. ೧) ಸ್ತೋಮ, ೨) ಸಾಮ, ೩) ಚಿತಿ, ೪) ಛಂದಸ್ಸು, ೫) ಶಸ್ತ್ರ; ಇವುಗಳಲ್ಲಿ ಐದು ರೂಪಗಳಿಂದ ಇರುತ್ತಾನೆ. ಸ್ತೋಮದಲ್ಲಿ (ಅಧಿಷ್ಠಾನ ರೂಪದಿಂದ) ಇರುವ ಭಗವಂತನ ಅನಿರುದ್ಧ ರೂಪವು "ಅಧ್ಯಾತ್ಮ-ಆದಿದೈವ ಅಧಿಭೂತ"ಗಳಲ್ಲಿ ಇರುವದರಿಂದ ಮೂರು ವಿಧವಾಗಿ ಇರುತ್ತದೆ. (೧) ೨) ಪ್ರದ್ಯುಮ್ನವೆಂಬ ರೂಪವು ಪಂಚಭೂತಗಳಲ್ಲಿ ಪ್ರತ್ಯೇಕವಾಗಿ ಅಧ್ಯಾತ್ಮ

ಮುಂತಾದವುಗಳಿಗನುಸಾರವಾಗಿ ಮೂರು ರೂಪಗಳಿಂದ ಇರುವದರಿಂದ ೧೫ (ಹದಿನೈದು) ವಿಧಗಳುಳ್ಳದ್ದು ೩) ಸಂಕರ್ಷಣವೆಂಬ ರೂಪವು ಷೋಡಶ ಕಲಾತ್ಮಕವಾದ ಲಿಂಗಶರೀರದಲ್ಲಿಯೂ, ಷೋಡಶ (೧೬) ಕಳೆಗಳಲ್ಲಿಯೂ ಇರುವದರಿಂದ ೧೬ ವಿಧವೆಂದು ಹೇಳಲ್ಪಡುತ್ತದೆ. ೪) ವಾಸುದೇವ ರೂಪವು ಸಪ್ತಧಾತುಗಳಲ್ಲಿ ಪ್ರತ್ಯೇಕವಾಗಿ ಅಧ್ಯಾತ್ಮ-ಅಧಿಭೂತ-ಅಧಿದೈವಗಳಿಗನು ಸಾರವಾಗಿ ಮೂರು ರೂಪಗಳಿಂದ ಇರುವದರಿಂದ ಇಪ್ಪತ್ತೊಂದು ವಿಧವಾಗಿ ಇರುತ್ತದೆ. ೫) ನಾರಾಯಣ ರೂಪವು ೧) ಮನಸ್ಸು, ೨) ಬುದ್ಧಿ, ೩) ಅಹಂಕಾರ, ೪) ಚಿತ್ತ, ೫-೬-೭) ಗುಣತ್ರಯ (ಸತ್ವ, ರಜ, ತಮಗಳು) ಪ್ರಕೃತಿ; ಹೀಗೆ ಎಂಟು ತತ್ವಗಳಲ್ಲಿ ಅಧ್ಯಾತ್ಮ ಮುಂತಾದವುಗಳಿಗನುಸಾರ ವಾಗಿ ಪ್ರತ್ಯೇಕವಾಗಿ ಮೂರು ರೂಪಗಳಿಂದ ಇರುವದರಿಂದ ಇಪ್ಪತ್ತುನಾಲ್ಕು (೨೪) ವಿಧವಾಗಿ ಇರುತ್ತದೆ. ಮೂಲರೂಪದೊಡನೆ ಸೇರಿಸಿದರೆ "ಪಂಚ ವಿಂಶ" (೨೫) ಎಂದು ಕರೆಯಲ್ಪಡುತ್ತದೆ. ಸ್ತೋಮುಗಳಿಂದ ಸ್ತುತನಾಗು ವದರಿಂದ "ಸ್ತೋಮು" ಎಂದು ಕರೆಯಲ್ಪಡುತ್ತಾನೆ. ಸ್ತೋಮುದಲ್ಲಿ ಇರುವ ಅನಿರುದ್ಧನ ರೂಪಗಳಂತೆ ಸಾಮ ಚಿತಿ ಛಂದಸ್ಸು ಶಸ್ತ್ರಗಳಲ್ಲಿಯೂ ಅವಾಂ ತರ ವಿಧ ರೂಪಗಳನ್ನು ತಿಳಿಯಬೇಕು.

ಇನ್ನು ೨೪ ರೂಪಗಳ ಸಂದರ್ಭದಲ್ಲಿ ಭೂತಗಳು ಮನ ಆದಿ ಅಷ್ಟಕ (ಎಂಟು) ಹೇಗೆ ಸೇರುತ್ತವೆ? ಎಂಬುದು ವಿಚಾರಣೀಯವೆನಿಸುತ್ತದೆ. ಆದರೆ ಶ್ರೀ ತಾಮ್ರಪರ್ಣೀ ಆಚಾರ್ಯರು ತಮ್ಮ ಟಿಪ್ಪಣಿಯಲ್ಲಿ ಇದಕ್ಕೆ ಸಮಾಧಾನವನ್ನು ಹೇಳಿರುತ್ತಾರೆ. ಮನಸ್ಸು-ಬುದ್ಧಿ-ಅಹಂಕಾರ-ಚಿತ್ತ-ಗುಣತ್ರಯ-ಪ್ರಕೃತಿ ಇದು ಅಷ್ಟಕವೆನಿಸುತ್ತದೆ. "ಪ್ರಕೃತಿಯು ತನ್ನಿಂದ ಹುಟ್ಟಿಸಲಾಗಿರುವ ಸತ್ವ ಮುಂತಾದವುಗಳನ್ನೂ ಒಳಗೊಂಡಿರುತ್ತದೆ" ಎಂಬ ವಾಕ್ಯಗಳಿಗೆ ಅನುಸಾರವಾಗಿ ಗುಣತ್ರಯಗಳು ಪ್ರಕೃತಿಯಲ್ಲಿ ಪರಸ್ಪರ ಇರು ತ್ತವೆ. "ಕಾರಣವು ಕಾರ್ಯಗಳಲ್ಲಿ ವ್ಯಾಪ್ತವಾದುದರಿಂದ ಇರುತ್ತದೆ; ಕಾರ್ಯವೂ ಸಹ ಮೂಲಾಂಶದಿಂದ ಕಾರಣಗಳಲ್ಲಿ ಇರುತ್ತದೆ" ಎಂಬ ಪ್ರಮಾಣದಲ್ಲಿ (ಗೀತಾ ತಾತ್ಪರ್ಯ) ಉದಾಹರಿಸಿರುವ ಯುಕ್ತಿಯಿಂದ ಕಾರಣವಾದ ಪ್ರಕೃತಿ ಹಾಗೂ ಗುಣತ್ರಯಗಳಲ್ಲಿ ಭೂತಗಳು ಪರಸ್ಪರ ಪ್ರವಿಷ್ಟ ವಾಗಿರುತ್ತವೆ. "ಪ್ರಾಣಾ ಏವ ಇದಮಗ್ರ ಆಸುಃ" ಎಂದು ಮುಂತಾಗಿರುವ

ಪ್ರಮಾಣಗಳಲ್ಲಿ ಉದಾಹೃತವಾದ ಯುಕ್ತಿಯಿಂದ ಮನ ಮುಂತಾದವುಗಳು ಇಂದ್ರಿಯಗಳಿಗೆ ಪರಸ್ಪರ ಸಂಬಂಧವಿರುವದೆಂದು ಸಿದ್ಧವಾಗುತ್ತದೆ. ಪ್ರಾಣಿ ಶರೀರದಲ್ಲಿರುವ ದೇವತೆಗಳು ಭೂತಾಭಿಮಾನಿ ದೇವತೆಗಳು, ಸ್ವರ್ಗಲೋಕ ದಲ್ಲಿರುವ ದೇವತೆಗಳನ್ನು ಸಂಗ್ರಹಿಸಿ ಎಣಿಸಿದರೆ ಮನ ಮುಂತಾದ ಎಂಟರಲ್ಲಿ "ಅಧ್ಯಾತ್ಮ-ಅಧಿಭೂತ-ಅಧಿದೈವ" ಎಂಬುವವು ಸಂಬಂಧಿಸುತ್ತವೆ ಎಂದು ತಿಳಿಯಬೇಕು ॥ ೨ ॥

**ಅವತರಣಿಕಾ :** ಹಿಂದಿನ ಪದ್ಯದಲ್ಲಿ ಸ್ಥೂಲ ದೇಹಗತ ರೂಪಗಳನ್ನು ಹೇಳಿ, ಈಗ ಸ್ವರೂಪ-ಲಿಂಗ-ಅನಿರುದ್ಧ-ಸ್ಥೂಲ ದೇಹಗತ ೧೯ ರೂಪಗಳು ಮತ್ತು ತತ್ತ ತ್ಕಾರ್ಯವನ್ನು ನಿರೂಪಿಸುತ್ತಾರೆ.

**ಮೂಲ :**

**ಜೀವಲಿಂಗನಿರುದ್ಧ ಸ್ಥೂಲ ಕ ।**
**ಳೇವರಗಳಲಿ ವಿಶ್ವ ತುರಗ ।**
**ಗ್ರೀವ ಮೂಲೇಶಾಚ್ಯುತತ್ರಯ ಹಂಸ ಮೂರ್ತಿಗಳ ॥**
**ಈ ವಿಧ ಚತುಸ್ಥಾನದಲಿ ಶಾಂ ।**
**ತೀ ವರನ ಈರೆರಡು ರೂಪ ದಿ ।**
**ಭಾವಿಸುವದೇಕೋ ನವಿಂಶತಿ ಮೂರ್ತಿ ಸರ್ವತ್ರ ॥ ೩ ॥**

**ಪದ್ಯಾರ್ಥ :** ಜೀವ=ಜೀವನ ಸ್ವರೂಪ ದೇಹದಲ್ಲಿ; ಲಿಂಗ=ಲಿಂಗ ದೇಹದಲ್ಲಿ, ಅನಿರುದ್ಧ=ದೇಹದಲ್ಲಿ ಸ್ಥೂಲ ಕಳೇವರಗಳಲಿ=ಸ್ಥೂಲ ಶರೀರಾದಿ ಈ ನಾಲ್ಕು ದೇಹಗಳಲ್ಲಿ-ಜೀವ ಸ್ವರೂಪದಿ ವಿಶ್ವ, ಲಿಂಗದಲ್ಲಿ ತುರಗಗ್ರೀವ= ಹಯವದನ, ಮೂಲೇಶ, ನಾರಾಯಣ-ವಿಷ್ಣು,ಅನಿರುದ್ಧ ದೇಹದಲ್ಲಿ, ಸ್ಥೂಲ ದಲ್ಲಿ ಅಚ್ಯುತಾನಂತ ಗೋವಿಂದ ಹಂಸ ಈ ಪ್ರಕಾರ ೪ ದೇಹಗಳಲ್ಲಿ ಚತು ಸ್ಥಾನದಲ್ಲಿ ಅಂದರೆ ನೇತ್ರ, ಕಂಠ, ಹೃದಯ, ಶಿರಸ್ಸಿನ ಮೇಲೆ ಶಾಂತೀವರನ= ಶಾಂತೀಪತಿಯಾದ ಅನಿರುದ್ಧನ ಈರೆರಡು ರೂಪ, ೧) ಅನಿರುದ್ಧ-ಪ್ರದ್ಯುಮ್ನ, ೨) ಅನಿರುದ್ಧ-ಸಂಕರ್ಷಣ, ೩)ಅನಿರುದ್ಧ-ವಾಸುದೇವ, ೪) ಅನಿರುದ್ಧ-ನಾರಾ ಯಣನ ಮತ್ತು ಈ ಅನಿರುದ್ಧನ ಅಂಶವೇ ೧) ವಿಶ್ವ, ೨) ತೈಜಸ, ೩) ಪ್ರಾಜ್ಞ, ೪) ತುರ್ಯ, ೫) ಆತ್ಮ, ೬) ಅಂತರಾತ್ಮ, ೭) ಜ್ಞಾನಾತ್ಮ ೮) ಪರಮಾತ್ಮ ಹೀಗೆ ವಿಶ್ವನ ಅಂಶ ಒಟ್ಟಿಗೆ ೧೨. ಮೇಲಿನ ೧) ವಿಶ್ವ,

೨) ಹಯುವದನ, ೩) ವಿಷ್ಣು, ೪) ಅಚ್ಯುತ, ೫) ಅನಂತ, ೬) ಗೋವಿಂದ, ೭) ಹಂಸ ಇವೆಲ್ಲವೂ ಕೂಡಿಸಿದರೆ ೧೯ ರೂಪಗಳು, ಅನಿರುದ್ಧನಾದ ವಿಶ್ವನ ೧೯ ರೂಪಗಳನ್ನು ಸರ್ವತ್ರ ನಾಲ್ಕು ದೇಹಗಳಲ್ಲಿ ೧೯-೧೯ ರೂಪಗಳನ್ನು ಚಿಂತಿಸುವದೆಂದು ದಾಸರಾಯರ ಅಭಿಪ್ರಾಯ. ಇವು ಜೀವನಿಗೆ ಕವಚಾ ಕೃತಿಗಳೆಂದು ಹೇಳಿದ್ದಾರೆ. ೧) ಚಿದ್ದೇಹಾಕಾರ, ೨) ಲಿಂಗ, ೩) ಅನಿ ರುದ್ಧ, ೪) ಸ್ಥೂಲ ದೇಹಗಳು ಕವಚಾಕಾರವಾಗಿವೆ. ಅಥವಾ ಅಚ್ಯುತ ತ್ರಯ ೩, ಅನಿರುದ್ಧ ೪ ಎಂದೂ ಹೇಳಲಾಗುತ್ತದೆ. ಮತ್ತು ಪಂಚ ಜ್ಞಾನೇಂದ್ರಿಯ ೫, ಕರ್ಮೇಂದ್ರಿಯ ೫, ಪಂಚತನ್ಮಾತ್ರಾ ಮನೋಬುದ್ಧಿ ರಹಂಕಾರ ಚಿತ್ತ ಇವುಗಳಲ್ಲಿ ೧೯ ರೂಪವೆಂದೂ ಕೆಲವರ ಅಭಿಪ್ರಾಯುವಿದೆ.

**ದ್ರೌಪದೀಶಪತಿ ವಿಠಲರು:** ಜೀವ ಲಿಂಗನಿರುದ್ಧ ಸ್ಥೂಲ॥ ೧) ಜೀವ, ೨) ಲಿಂಗ, ೩) ಅನಿರುದ್ಧ, ೪) ಸ್ಥೂಲ ಶರೀರಗಳಲ್ಲಿ ಒಂದೊಂದು ದೇಹದಲ್ಲಿ ನಾಲ್ಕು ಸ್ಥಾನ ೧) ನೇತ್ರ, ೨) ಕಂಠ, ೩) ಹೃದಯ, ೪) ಶಿರಸ್ಸಿನ ಮೇಲೆ ಭಗವನ್ಮೂರ್ತಿಗಳ ವಿವರ ಅನಿರುದ್ಧ ವಿಶ್ವನ ಅಂಶವೇ=೧) ಹಯಗ್ರೀವ, ೨) ಮೂಲೇಶ ಎಂದರೆ ವಿಷ್ಣು, ೩) ಅಚ್ಯುತ, ೪) ಅನಂತ, ೫) ಗೋವಿಂದ ೬) ಹಂಸ, ಶಾಂತೀವರನ ಈರೆರಡು ರೂಪವೆಂದರೆ ೧) ಅನಿರುದ್ಧ-ಅನಿರುದ್ಧ, ೨) ಅನಿರುದ್ಧ-ಪ್ರದ್ಯುಮ್ನ, ೩) ಅನಿರುದ್ಧ-ಸಂಕರ್ಷಣ, ೪) ಅನಿರುದ್ಧ-ವಾಸುದೇವ, ೫) ಅನಿರುದ್ಧ-ನಾರಾಯಣ (ಹೀಗೆ ೧೧ ರೂಪಗಳು) ಮತ್ತು ಈ ಅನಿರುದ್ಧ ಇವನ ಅಂಶ ೧) ವಿಶ್ವ, ೨) ತೈಜಸ, ೩) ಪ್ರಾಜ್ಞ, ೪) ತುರ್ಯ ಮತ್ತು ಇವನ ಅಂಶ ೧) ಆತ್ಮ, ೨) ಅಂತರಾತ್ಮ, ೩) ಜ್ಞಾನಾತ್ಮ ೪) ಪರಮಾತ್ಮ ಒಟ್ಟು ೧೩ ರೂಪಗಳು. ಮೇಲಿನವು ೬. ಅಂತೂ ೧೯ ರೂಪ ನಾಲ್ಕು ಶರೀರದಲ್ಲಿ ತಿಳಿಯಬೇಕು. (ಮೇಲಿನ ೧೧+೮=೧೯).

**ಭಾವಸೂಚನ:** ಜೀವೇತಿ ॥ ಉಕ್ತಂಚಾಧ್ಯಾತ್ಮೆ ॥ "ಅನಿರುದ್ಧಾದಿ ಭಿಃ ಸೂಕ್ಷ್ಮ ನಿರ್ಮಿತ ತನ್ನಾಮುಕ ಲಿಂಗಾದಿ ಶರೀರಾಣಿ ಚತ್ವಾರಿ ಕವಚ ರೂಪೇಣ ಸಂತಿ ಇತಿ ॥ ೩ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಜೀವ" ಇತಿ ॥ ಅಚ್ಯುತತ್ರಯ ಅನಂತ ಗೋವಿಂದಾಭ್ಯಾಮ್ ॥ ಅನಿರುದ್ಧಃ ಏಕಃ ॥ ತಸ್ಯೈವ ಹಂಸಾದ್ಯಷ್ಟಾದಶ। ಏವಮೇಕೋನ ವಿಂಶತಿಃ।

ಸರ್ವತ್ರ ದೇಹಚತುಷ್ಟಯೇ । ಅಷ್ಟಾದಶ ಶಬ್ದಾನ್ ಸ್ವಯಮೇವ ನಿರ್ವಕ್ತಿ ಉತ್ತರತ್ರ ॥ ೩ ॥

### ಕನ್ನಡಾರ್ಥ

ಜೀವ ಸ್ವರೂಪ ಲಿಂಗ, ಅನಿರುದ್ಧ, ಸ್ಥೂಲ ದೇಹಗಳಲ್ಲಿ ಭಗವಂತನನ್ನು ಉಪಾಸಿಸಬೇಕು. ಅಚ್ಯುತತ್ರಯ ಅಂದರೆ, ಅಚ್ಯುತ, ಅನಂತ, ಗೋವಿಂದ ಈ ಮೂವರು ಅನಿರುದ್ಧನೊಬ್ಬನು, ಹೀಗೆ ತಿಳಿಯಬೇಕು. ಈ ನಾಲ್ಕು ದೇಹ ಕರ್ಮ ಜ್ಞಾನೇಂದ್ರಿಯಗಳು ಮಾತ್ರ ಮನೋಬುದ್ಧಿ ಅಹಂಕಾರ ಚಿತ್ತಗಳಲ್ಲಿ ೧೯ ರೂಪಗಳನ್ನು ತಿಳಿಯಬೇಕು. ೧೮ ರೂಪಗಳನ್ನು ಮುಂದೆ ತಾವೇ ವಿವರಿಸುತ್ತಾರೆ.

**ಅವತರಣಿಕಾ :** ಬಿಂಬನಾಮಕ ಶ್ರೀಹರಿಯೇ ಇಷ್ಟು ರೂಪಗಳಿಂದ ಆಯಾ ದೇಹಗಳಲ್ಲಿ ವ್ಯಾಪ್ತನೂ ನಿಯಾಮಕನೂ ಆಗಿ ಕಾರ್ಯಮಾಡಿಸುವನು. ಇದು ಜ್ಞಾನಿಗಳಿಗೆ ಗೋಚರವೆಂದು ಹೇಳುತ್ತಾರೆ.

**ಮೂಲ :**

**ಕಲುಷವಿಲ್ಲದ ದರ್ಪಣದಿ ಪ್ರತಿ ।**
**ಫಲಿಸಿ ಸರ್ವ ಪದಾರ್ಥಗಳು ಕಂ ।**
**ಗೊಳಿಸುವಂದದಿ ಬಿಂಬ ಜಡಚೇತನಗಳೊಳಗಿದ್ದು ॥**
**ಪೊಳೆವ ಬಹು ರೂಪದಲಿ ಸಜ್ಜನ ।**
**ರೊಳಗೆ ಮನದರ್ಪಣದಿ ತಾ ನಿ ।**
**ಶ್ಚಲ ನಿರಾಮಯ ನಿರ್ವಿಕಾರ ನಿರಾಶ್ರಯಾನಂತ ॥ ೪ ॥**

**ಪದ್ಯಾರ್ಥ :** ಕಲುಷವಿಲ್ಲದ ದರ್ಪಣದಿ=ಕಲುಷ-ಪಾಪ, ದೋಷ, ಮಲಿನವಿಲ್ಲದಿರುವ ನಿಲುಗನ್ನಡಿಯಲ್ಲಿ ಅಂದರೆ, ಸ್ವಚ್ಛವಾದ ಕನ್ನಡಿಯಲ್ಲಿ ಪ್ರತಿಫಲಿಸಿರುವ=ಅಪಸವ್ಯದಿ ಕಾಣುತ್ತಿರುವ ಸರ್ವ ಪದಾರ್ಥಗಳು, ಮನೆಯಲ್ಲಿಪ್ಪ ಸರ್ವವಸ್ತು, ಕಂಗೊಳಿಸುವಂದದಿ=ಕಾಣುತ್ತಿರುವಂತೆ, ಸರ್ವರ ಬಿಂಬನಾದ ಶ್ರೀಹರಿಯು ಒಬ್ಬನಾದರೂ, ಜಡಚೇತನಗಳಲ್ಲಿ ವ್ಯಾಪ್ತನಾದ ಶ್ರೀಹರಿಯು, ಬಹು ರೂಪಗಳಿಂದ ಪೊಳೆವ=ಪ್ರಕಾಶಮಾನನಾದರೂ, ಸುಜ್ಞಾನಿಗಳ ನಿರ್ಮಲ ಮನವೆಂಬೋ ನಿಲುಕನ್ನಡಿಯಲ್ಲಿ ಅಂದರೆ ಜ್ಞಾನಿ

ಗಳಿಗೆ ಇಷ್ಟು ರೂಪದಿಂದಲೂ ಗೋಚರನಾಗುತ್ತಾನೆ. ಶ್ರೀಹರಿಯು ಬಿಂಬ ರೂಪವಾದ ತಾನು ನಿಶ್ಚಲ=ಸ್ಥಿರ, ಜೀವನನ್ನು ಒಂದು ಲವತೃಟಿಯೂ ಅಗಲದೇ ಸ್ಥಿರವಾಗಿ ಜೀವಾಂತರ್ಯಾಮಿಯಾಗಿ ಇರುವನು. ನಿರಾಮಯ= ಆಮಯ-ದೋಷದೂರನು, ನಿರ್ವಿಕಾರ=ವಿಕಾರ ರಹಿತನೂ, ನಿರಾಶ್ರಯ= ತನಗೆ ತಾನೇ ಆಶ್ರಯನು ಹೊರತಾಗಿ ಬೇರೊಬ್ಬರು ಶ್ರೀಹರಿಗೆ ಆಶ್ರಯ ರಿಲ್ಲದ ಮಹಾಮಹಿಮನು. ಸಜ್ಜನರ ನಿಷ್ಕಲುಷ ಕನ್ನಡಿಯೆಂಬ ಮನಸ್ಸಿ ನಲ್ಲಿ ತೋರುವನು. ಜ್ಞಾನಿಗೆ ಈ ರೂಪಗಳ ಗೋಚರವೇ ಹೊರ್ತಾಗಿ ಅಜ್ಞಾನಿಗಳಿಗಲ್ಲ.

**ದ್ರೌಪದೀಶಪತಿ ವಿಠಲರು :** ಕಲುಷವಿಲ್ಲದ॥ ಜ್ಞಾನಿಗಳ ಮನಸ್ಸೆಂಬ ಮಲಿನರಹಿತ ಕನ್ನಡಿಯೊಳಗೆ, ಪೊಳೆವ ಬಹು ರೂಪದಿಂದ ಎಂಬೋ ಅಭಿಪ್ರಾಯ ॥

**ಭಾವಸೂಚನ:** ಕಲುಷೇತಿ ॥ ಕಲುಷ ಇತಿ ॥ ೪ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಕಲುಷ" ಇತಿ ॥ ಕಂಗೊಳಿಸಿ-ತೋರಿ. ಪೊಳೆವ=ಹೊಳೆವ.

**ಕನ್ನಡಾರ್ಥ**

ನಿರ್ಮಲ-ನಿರಾಮಯ ನಿರ್ವಿಕಾರನಾದ ಶ್ರೀಹರಿಯು (ಬಿಂಬ ರೂಪಿಯು) ಸ್ವಚ್ಛವಾದ ಆದರ್ಶದಲ್ಲಿ ತೋರುವ ವಸ್ತುಗಳಂತೆ ಪ್ರತಿಬಿಂಬ ರಾದ ಜಡ ಚೇತನರಲ್ಲಿ ಬಹು ರೂಪಗಳಿಂದ ಸಜ್ಜನರಲ್ಲಿ ವಿಶೇಷವಾಗಿ ಪ್ರಕಾಶಿತನಾಗುತ್ತಾನೆ ಎಂಬುದು ಪದ್ಯದ ತಾತ್ಪರ್ಯ. ಕಂಗೊಳಿಸು=ತೋರು. ಪೊಳೆವ=ಹೊಳೆಯುವ ॥ ೪ ॥

**ಅವತರಣಿಕಾ :** ಹಿಂದಿನ ಪದ್ಯದಲ್ಲಿ ಹೇಳಿದಂತೆ ಶ್ರೀ ಹಂಸನಾಮಕ ಹರಿಯು ಪಂಚಕೋಶ-ಸಪ್ತ ಧಾತುಗಳಲ್ಲಿ ಪ್ರಾಣಾಂತರ್ಯಾಮಿಯಾಗಿ ನಾಲ್ಕು ಶರೀರಗಳಲ್ಲಿ ಬೇರೆ ಬೇರೆ ೨೧೬೦೦ ಶ್ವಾಸ ಜಪಗಳನ್ನು ಮಾಡಿಸುತ್ತಾನೆ.

**ಮೂಲ :**

**ಈ ಶರೀರ ಚತುಷ್ಟಯಗಳೊಳು ।**
**ಕೋಶ ಧಾತುಗ ಭಾರತಿಪ ಪ್ರಾ ।**
**ಣೇಶ ಇಪ್ಪತ್ತೊಂದು ಸಾವಿರದಾರು ನೂರೆನಿಪ ॥**

**ಶ್ವಾಸರೂಪಕ ಹಂಸ ಭಾಸ್ಕರ ।**
**ಭೇಶರೊಳಗಿದ್ದವರ ಕೈವಿಡಿ ।**
**ದೀ ಸರೋಜ ಭವಾಂಡದೊಳು ಸರ್ವತ್ರ ತುಂಬಿಹನು ॥ ೫ ॥**

**ಪದ್ಯಾರ್ಥ :** ಈ ಶರೀರ ಚತುಷ್ಟಗಳೊಳು=ಜೀವ, ಲಿಂಗ, ಅನಿರುದ್ಧ, ಸ್ಥೂಲ ಶರೀರಗಳಲ್ಲಿ ಮತ್ತು ಪಂಚಕೋಶ ಅನ್ನಮಯಾದಿ ಕೋಶಗಳಲ್ಲಿ ತ್ವಕ್ ಚರ್ಮಾದಿ ೭ ಧಾತುಗಳಲ್ಲಿರುವ ಭಾರತಿಪ ಪ್ರಾಣೇಶ=ಭಾರತೀದೇವಿಯರ ಪತಿಯಾದ ಪ್ರಾಣೇಶ=ಸಮಸ್ತ ಜೀವರಿಗೆ, ಅಸು-ಪ್ರಾಣಕ್ಕೆ ಆಧಾರನಾದ ಶ್ರೀ ವಾಯುದೇವರು, ಒಂದು ದಿವಸದಲ್ಲಿ ಇಪ್ಪತ್ತೊಂದು ಸಾವಿರದಾ ಆರುನೂರು ಶ್ವಾಸರೂಪವಾದ ಜಪವನ್ನು, ಭಾಸ್ಕರ=ಸೂರ್ಯ ಶ್ವಾಸ-ಬಲ ಮೂಗಿನಲ್ಲಿ, ಭೇಶ=ಚಂದ್ರನು ಎಡಮೂಗಿನಲ್ಲಿ ಇರುವರು. ಈ ಸೂರ್ಯ ಚಂದ್ರರೊಳಗೆ ತಾನಿದ್ದು ಹಂಸ ಮಂತ್ರ ಜಪ ಮಾಡುತ್ತಾನಲ್ಲದೇ ಈ ಬ್ರಹ್ಮಾಂಡದಲ್ಲಿ ಸರ್ವತ್ರ=ಎಲ್ಲ ಕಡೆಯಲ್ಲಿಯೂ ತುಂಬಿಕೊಂಡು ಇಹನು. "ಯತ್ರ ಹರಿಸ್ತತ್ರ ವಾಯು"ವೆಂಬಂತೆ ಶ್ರೀಹರಿಯು ಇದ್ದಲ್ಲೆ ಬ್ರಹ್ಮಾಂಡದಲ್ಲೆಲ್ಲಾ ಹನುಮನು ತುಂಬಿಕೊಂಡು ವ್ಯಾಪ್ತನಾಗಿರುವನು ॥೫॥

**ದ್ರೌಪದೀಶಪತಿ ವಿಠಲರು :** ಈ ಶರೀರ ಚತುಷ್ಟಯ ॥ ಚಂದ್ರ ಸೂರ್ಯ ಸ್ವರಾದಿಗಳಿಂದ ೨೧೬೦೦ ಜಪ-ವಾಯುದೇವರು ಹಂಸಮಂತ್ರ ಜಪಿಸುತ್ತಾರೆ. ಜೀವ, ಲಿಂಗ, ಅನಿರುದ್ಧ, ಸ್ಥೂಲ-ಈ ೪ ನಾಲ್ಕು ಶರೀರದಲ್ಲಿ ॥ ೫ ॥

**ಭಾವಸೂಚನ :** ಈ ಶರೀರೇತಿ ॥ ೫ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಈ ಶರೀರ" ಇತಿ ॥ ಶ್ವಾಸರೂಪ ಮಂತ್ರ ಜಗಕರ್ತಾ ಹಂಸಃ । ತದ್ರೂಪಃ । "ಏವಂ ವಾಯುಂ ಚ ದದೃಶುಃ ತತ್ರ ಹಂಸ ಸ್ವರೂಪಿಣಮ್ ॥ ಹಂಸರೂಪೌ ಚ ತೌ ದೇವೌ ಶ್ವಾಸೋಚ್ಛ್ವಾಸ ಪ್ರವರ್ತಕೌ" ॥ ಇತಿ ಚ ಐತರೇಯೇ ॥ ಭೇಶಃ ಇಂದುಃ ॥ ವಾಯೋಃ ಸ್ಥಿತಿಃ ಷಟ್‌ಪ್ರಶ್ನೇ ಕಥಿತಾ ॥ ಹರೇಶ್ಚ । "ಪ್ರಭಾಸ್ಮಿ ಶಶಿ ಸೂರ್ಯಯೋಃ" ಇತ್ಯನ್ಯತ್ರ ಸಿದ್ಧಾ ॥ ೫ ॥

**ಕನ್ನಡಾರ್ಥ**

"ಈ ಶರೀರ ಚತುಷ್ಟಯಗಳೊಳು" ಎಂಬ ಪದ್ಯದಲ್ಲಿ ೨೧೬೦೦ ಶ್ವಾಸ

ಮಂತ್ರಗಳನ್ನು ಜಪಿಸುವವನು "ಹಂಸ"ನೆಂದು ಹೇಳಿರುತ್ತಾರೆ. ಹಂಸ ರೂಪೀ ಪರಮಾತ್ಮನೇ ವಾಯುದೇವರಲ್ಲಿದ್ದು ಶ್ವಾಸ ಜಪಗಳನ್ನು ಅವರಿಂದ ಮಾಡಿ ಮಾಡಿಸುತ್ತಾನೆ." ಐತರೇಯ ಭಾಷ್ಯದಲ್ಲಿ "ವಾಯುವನ್ನೂ-ಅಲ್ಲಿ ವಿರಾಜಮಾನನಾಗಿರುವ ಶ್ರೀ ಹಂಸರೂಪೀ ಪರಮಾತ್ಮನನ್ನೂ ನೋಡಿದರು. ಹಂಸರೂಪೀ ಹರಿಯೂ ಅವನ ಪ್ರತೀಕೋತ್ತಮರಾದ ಶ್ರೀ ವಾಯು ದೇವರೂ "ಹಂಸ" ಎಂದು ಕರೆಯಲ್ಪಡುತ್ತಾರೆ. ಶ್ರೀ ಹಂಸ ವಾಯುಗಳೀ ರ್ವರೂ ಶ್ವಾಸ ಪ್ರವರ್ತಕರು" ಎಂದು ಹೇಳಿರುತ್ತಾರೆ. ಭೇಶ=ಚಂದ್ರ. "ವಾಯುದೇವರು ಚಂದ್ರನಲ್ಲಿ ಇರುವರು" ಎಂಬುದು ಷಟ್ ಪ್ರಶ್ನ ಉಪ ನಿಷತ್ತಿನಲ್ಲಿ ನಿರೂಪಿತವಾಗಿರುತ್ತದೆ. ಹರಿಯು ಚಂದ್ರನಲ್ಲಿರುವ ವಿಷಯ ದಲ್ಲಿ "ಪ್ರಭಾಸ್ಮಿ ಶಶಿ ಸೂರ್ಯಯೋಃ" ಎಂಬ ಗೀತಾ ವಾಕ್ಯಗಳಲ್ಲಿ ಪ್ರಸಿದ್ಧವೇ ಇದೆ ॥ ೫ ॥

ಅವತರಣಿಕಾ: ಈ ಪ್ರಾಣನ ದ್ವಾರ ಹಂಸ ಮಂತ್ರ ಜಪಿಸುವದರಿಂದಲೇ ವಾಕ್ ಮನೋಕಾರ್ಯ ಸಾಗುತ್ತವೆ. ವಾಙ್ಮನಸ್ಸಿನಲ್ಲಿಯೂ, ಪ್ರಾಣಾಂತರ್ಯಾಮಿ ವಾಙ್ಮನೋ ರೂಪವನ್ನು ಹೇಳುತ್ತಾರೆ.

ಮೂಲ:

ಶಿರಗಳೈದೈದೆರಡು ಬಾಹುಗ ।
ಳೆರಡು ಪಾದಗಳೊಂದು ಮಧ್ಯೋ ।
ದರದಿ ಶೋಭಿಪ ವಾಙ್ಮನೋಮಯನೆನಿಸಿ ನಿತ್ಯದಲಿ ॥
ಕರಣ ಧಾತುಗಳಲ್ಲಿ ಎಪ್ಪ
ತ್ತೆರಡು ಸಾವಿರ ನಾಡಿಗಳಲಿ ।
ಪ್ಪರವಿದೂರನು ಭಾರತ ಪ್ರತಿಪಾದ್ಯನೆಂದೆನಿಸಿ ॥ ೬ ॥

ಪದ್ಯಾರ್ಥ: ಈ ಪದ್ಯದಲ್ಲಿ ವಾಙ್ಮನೋ ರೂಪ ಎಂಥದೆಂದು ವರ್ಣಿ ಸುತ್ತಾರೆ. ಶಿರಗಳೈದೈದು=೫+೫=೧೦ ಶಿರಸ್ಸು, ಎರಡು ಬಾಹುಗಳು, ಎರಡು ಪಾದಗಳು-೧ ಮಧ್ಯೋದರ. ಈ ಪ್ರಕಾರದಿಂದ ಶೋಭಿಸುವ ವಾಕ್=ಮಾತಾಡಲಿಕ್ಕೆ ಶಕ್ತಿ ಕೊಡುವ ಪ್ರಾಣಾಂತರ್ಯಾಮಿ ರೂಪ- ಪ್ರೇರಕ ರೂಪ-ವಾಙ್ಮನೋಮಯ ರೂಪದಿಂದ ನಿತ್ಯದಲ್ಲಿರುವನಲ್ಲದೇ,

ಮನಸ್ಸೇ ಮುಖ್ಯವಾದ ಇಂದ್ರಿಯ (೧) ೧೦ ಇಂದ್ರಿಯಗಳಲ್ಲಿ ಸಪ್ತ ಧಾತುಗಳಲ್ಲಿ-೭೨ ಸಹಸ್ರ ನಾಡಿಗಳಲ್ಲಿಯೂ, ಆಯಾ ಕಾರ್ಯ ಪ್ರಚೋದಕನಾಗಿ ವಾಙ್ಮನೋಮಯನು ; ಅರವಿದೂರ-ದೋಷದೂರನು ಇರುವನು. ವಾಕ್ ವ್ಯಾಪಾರ ಅಜಾದಿ ಪಂಚಾಶದ್ವರಣ ಉಚ್ಚಾರ ಈ ವರಣಗಳಿಗೆ ಉಚ್ಚಾರ ವ್ಯಂಜಕ ಶಕ್ತಿ ಕೊಟ್ಟು, ಭಾರತದಿಂದ ಪ್ರತಿಪಾದ್ಯ ಸ್ತುತ್ಯನಾಗಿದ್ದಾನೆ. (ಶ್ರೀ ವಿಜಯದಾಸರು ರಚಿಸಿದ ಉಗಾಭೋಗ ಸಂಧಿಯ ಸಾರದಲ್ಲಿ ಕೊಟ್ಟಿದೆ. ಆತನ ಕಾರ್ಯವೂ ದಾಸರು ವಿಶದೀಕರಿಸಿದ್ದಾರೆ. ನೋಡುವುದು) ಮತ್ತು ಬೃಹದಾರಣ್ಯ ಉಪನಿಷತ್ ೭ನೇ ಅಧ್ಯಾಯ, ಷಟ್‌ಬ್ರಾಹ್ಮಣದಲ್ಲಿರುವಂತೆ ಶ್ರೀ ಸರ್ವಜ್ಞರ ಭಾಷ್ಯ ॥ "ಮನೋಮಯೋ ಜ್ಞಾನಮಯ ಪ್ರಧಾನಂ ಮಯ ಉಚ್ಯತೇ । ಮಹಾ ಜ್ಞಾನಾತ್ಮಕಶ್ಚೈವ ಭಾರೂಪಾಃ ಸದ್ಗುಣಾತ್ಮಕಃ ॥ ಸರ್ವ ಪ್ರಶಾಸಕೋ ವಿಷ್ಣುಃ ಇತಿ ॥ ವಿಷ್ಣುವು ಮನೋಮಯ ಜ್ಞಾನಮಯನು ಮಯಃ ಪ್ರಧಾನನು. ತದಾತ್ಮ್ಯವು ತಥಾಚ ಮಹಾ ಜ್ಞಾನ ಸ್ವರೂಪನು. ಪ್ರಕಾಶ ಸ್ವರೂಪನು. ನಿರ್ದುಷ್ಟ ಗುಣಸಮೂಹ ಸ್ವರೂಪನು. ಎಲ್ಲರನ್ನೂ ಆಳುವನು. ಇದೇ ವಿಷಯವೇ ಮಾನಸ ಸ್ಮೃತಿಯಲ್ಲಿ ಹೇಳಿದ್ದಾರೆ.

ದ್ರೌಪದೀಶಪತಿ ವಿಠಲರು : ಶಿರಗಳೈದ್ಯೆದೆರಡು=ತಲೆಯು ಹತ್ತು-ಬಾಹುಗಳು ಎರಡು. ಎರಡು ಪಾದ, ೧ ಮಧ್ಯೋದರ ವಾಙ್ಮನೋಮಯ ರೂಪ, ಕರಣ ೧೧, ಧಾತು ೭, ಅಂತೂ ೧೮. ಇದರಿಂದ ಎರಡು ಪ್ರಕಾರ ಹೆಚ್ಚಿಸಬೇಕು. ಮಹತ್ತತ್ವಾತ್ಮಕ ಇಡಾನಾಡಿ ೩೬ ಸಾವಿರ-ಅಹಂಕಾರ ತತ್ವಾತ್ಮಕ ಪಿಂಗಳಾನಾಡಿ ೩೬ ಸಾವಿರ. ಒಟ್ಟಿಗೆ ೭೨ ಸಾವಿರವಾಯಿತು. ಸ್ವರ ವ್ಯಂಜನಾತ್ಮಕ ಭಾರತ ಪ್ರತಿಪಾದ್ಯನೆಂದೆನಿಸಿ ॥ ೬ ॥

ಭಾವಸೂಚನ : ಶಿರ ಇತಿ ॥ ೬ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಶಿರ" ಇತಿ ॥ ತೈತ್ತಿರೀಯ ನ್ಯಾಯೇನ ಅಂತರಂತಸ್ಥಾನ್ನಮಯಾದೀನಾಂ ಪಂಚ ಶಿರಾಂಸಿ, ದಶಬಾಹವಃ । ವಾಚಿಸ್ಥ ವಕ್ತ್ರತ್ವ ಪ್ರಾಚುರ್ಯಾತ್ ವಾಙ್ಮಯಾಖ್ಯಃ ಏಕಃ । ಮಂತೃತ್ವ ಪ್ರಾಚುರ್ಯಾತ್ ಮನೋ

ಗತ ಮನೋಮಯಾಖ್ಯಃ ತು ಅಪರಃ ॥ ಕರಣಂ ಇಂದ್ರಿಯಂ ॥ "ಭಾರತ ಸಿದ್ಧಂ ಚ" ಇತ್ಯಾಹ "ಭಾರತ" ಇತಿ ॥ ೬ ॥

## ಕನ್ನಡಾರ್ಥ

ತೈತ್ತಿರೀಯೋಪಷತ್ತಿನಲ್ಲಿ ಹೇಳಿದಂತೆ "ಒಂದೊಂದರೊಳಗೆ ಒಂದರಂತೆ ಅಂತಃ ಪ್ರವಿಷ್ಟವಾಗಿರುವ ಅನ್ನ-ಪ್ರಾಣ ಮನೋಮಯ ಮುಂತಾದ ಪಂಚ ರೂಪಗಳಿಗೆ ಐದು ಶಿರಸ್ಸು, ಹತ್ತು ಬಾಹುಗಳು; ಎಂಬುದು ಸಿದ್ಧವೇ ಇರುತ್ತದೆ. ವಾಗಿಂದ್ರಿಯಗಳಲ್ಲಿ ಇದ್ದು ಬಹುವಚನ ವ್ಯಾಪಾರಗಳನ್ನು ಮಾಡಿ ನಿರ್ವಹಿಸಿ ಕೊಡುವದರಿಂದ ವಾಙ್ಮಯನೆಂದೂ ಮಹಾಜ್ಞಾನವಂತನಾಗಿ ಮನಸ್ಸಿನಲ್ಲಿ ಬಹು ಮಾನಸ ವ್ಯಾಪಾರಗಳನ್ನು ಮಾಡಿಸುವದರಿಂದ ಮನಸ್ಸಿನಲ್ಲಿದ್ದು ಮನೋಮಯನೆಂದೂ ಶ್ರೀಹರಿಯು ಕರೆಯಲ್ಪಡುತ್ತಾನೆ. ಪಾದವೆಂದರೆ ಒಂದು ಅಂಶ. ಭಿನ್ನಾಭಿನ್ನಗಳನ್ನು ಸಂದರ್ಭಾನುಸಾರವಾಗಿ ತಿಳಿಯಬೇಕು. ಕರಣ-ಇಂದ್ರಿಯ. ಇದು ಭಾರತದಲ್ಲಿ ಸಿದ್ಧವಾಗಿರುತ್ತದೆ ॥ ೬ ॥

**ಅವತರಣಿಕಾ :** ನಾಲ್ಕು ದೇಹಗಳಿಂದ ಕೂಡಿದ ಸ್ಥೂಲ ಶರೀರಕ್ಕೆ ಒದಗುವ ಷಡೂರ್ಮಿಗಳು ಅಲ್ಲಿಪ್ಪ ರೂಪಗಳು ೪ ದೇಹಗಳೊಳು ೧೬ ಪುರುಷ ಸೂಕ್ತ ಪ್ರತಿಪಾದ್ಯ ೬೪ ಕಳಾ ರೂಪಗಳಲ್ಲಿ ಭಗವಂತನಿರುವ ವಿಚಾರ ತದುಪಾಸನಾಕ್ರಮ ಹೇಳುತ್ತಾರೆ.

**ಮೂಲ :**

**ಈರೆರಡು ದೇಹೋರ್ಮಿ ಭೂತಗ ।**
**ಆ(ಳಾ)ರಧಿಕ ದಶ ಋಗ್ವಿನುತ ಲ ।**
**ಕ್ಷ್ಮೀರಮಣ ವಿಷ್ಣ್ವಾಖ್ಯ ರೂಪದಿ ಚತುಃ ಷಷ್ಟಿಕಲಾ ॥**
**ಧಾರಕನು ತಾನಾಗಿ ಬ್ರಹ್ಮ ಪು ।**
**ರಾರಿ ಮುಖ್ಯರೊಳಿದ್ದು ಸತತ ವಿ ।**
**ಹಾರ ಮಾಳ್ಪನು ಚತುಷ್ಪ್ರದಾಹ್ವಯದಿ ಲೋಕದೊಳು ॥ ೭ ॥**

**ಪದ್ಯಾರ್ಥ :** ಈರೆರಡು=ನಾಲ್ಕು ದೇಹ ಜೀವ, ಲಿಂಗ, ಅನಿರುದ್ಧ, ಸ್ಥೂಲದಲ್ಲಿ, ಊರ್ಮಿ=ತೆರೆಗಳು. ಅಂದರೆ ೧) ಅಸ್ತಿತ್ವ ಇರುವದು, ೨)

ಜಾಯತೇ ಹುಟ್ಟುವದು, ೩) ಪರಿಣಮಿತೆ=ಪರಿಣಾಮವಾಗಿ ಬಾಲ್ಯಾವಸ್ಥಾ ಪ್ರಾಪ್ತಿ, ೪) ವರ್ಧತೇ=ಹೆಚ್ಚುವದು ಯವ್ವನಾವಸ್ಥೆ, ೫) ಅಪಕ್ಷೀಯತೆ= ದೇಹ ಕ್ಷೀಣವಾಗುವದು-ವೃದ್ಧಾಪ್ಯ, ೬) ವಿನಸ್ಯತಿ=ದೇಹ ಪತನ ಹೊಂದುವದೆಂದು ಕೆಲವರ ಅಭಿಪ್ರಾಯ. ಇದು ಸರಿಹೋಗುವದಿಲ್ಲ. ನಾಲ್ಕು ದೇಹೋರ್ವಿ ಭೂತಗಳ ಕಲಾಗಳು ಆರಧಿಕ=ಭೂತ ಪದವು ಷೋಡಕಲೋಪ ಲಕ್ಷಕವ್ ಎಂದು ಜ್ಞಾನಿಗಳ ವಚನದಂತೆ ಈ ತೆರೆಗಳು ೧೬ ಬೇರೆ ಬೇರೆ ಉಂಟೆಂದು ಶ್ರೀ ವಿಜಯ ದಾಸರ ಸೃಷ್ಟಿ ಪ್ರಕರಣ ಸುಳಾದಿ ೧೫ "ಅಂದು ಮಹಾ ಪ್ರಳಯರಾತ್ರಿ ಸಂಪೂರ್ಣೋದಯ" ಈ ಸುಳಾದಿ ಆದಿ ತಾಳದ ಕೊನೆಯಭಾಗ ಪುಟ (೬೦)ರಲ್ಲಿ "ಅಸಂಭಾವಿತವಲ್ಲ ಇದರ ವಿನಾ ಇನ್ನು। ಯಸಳು ಶರೀರ ಉಂಟು. ೧) ಜ್ಞಾನ, ೨) ವಿಜ್ಞಾನ, ೩) ಚಿತ್ತ, ೪) ಬುದ್ಧಿ, ೫) ಅಶ್ರದ್ಧ, ೬) ವೈರಾಗ್ಯ, ೭) ಬಲ, ೮) ವೀರ್ಯ, ೯) ಲೋಕ, ೧೦) ಮಂತ್ರ, ೧೧) ಪೆಸರು, ೧೨) ತಪ, ೧೩) ಅನ್ನ, ೧೪) ತಪ, ೧೫) ರೂಪಗುಣ, ೧೬) ಕರ್ಮ ಕಲಾದಿಯುಲ್ಯುಂಟು. ಹಸನಾಗಿ ಇವು ಎಲ್ಲ ಸಪ್ತಾವರ್ಕದೊಳಗೆನ್ನಿ। ತ್ರಿಸರದ ಗುಣಕಾರ್ಯ ಚತುರವಿಂಶತಿ ತತ್ವವಿ ಸರಿಯಾದ ಮೇಲೆ" ಎಂದು ವಿರಳವಾಗಿ ೧೬ ಕಲೆ ದೇಹಗಳ ವಿವರ ಬಣ್ಣಿಸಿದ್ದಾರೆ. ಈ ಹದಿನಾರು ದೇಹಗಳು ಕಲೆಗಳು ಬ್ರಹ್ಮದೇವರಿಗೆ ಮಾತ್ರ ಬೇರೆ ಬೇರೆಯಾಗಿ ಇರುವವು. ಇತರರಿಗೆ ಸಮ್ಮಿಶ್ರವಾಗಿ ತೋರುವವು. ಈ ಕಲೆಗಳು ಮನುಜಾದಿಗಳಲ್ಲಿ ತೋರುವವು. ಒಬ್ಬರಂತೆ ರೂಪ ಇನ್ನೊಬ್ಬರದಿಲ್ಲ. ಬೇರೆ ಬೇರೆ ಹೆಸರು-ಗುಣ, ಕರ್ಮ, ಅನ್ನ, ಅವರ ತಪಶ್ಶಕ್ತಿ ಬಲ, ವೀರ್ಯ, ಜ್ಞಾನ-ವಿಜ್ಞಾನಾದಿ ಬೇರೆ ಇಪ್ಪ ಕಲೆಗಳಲ್ಲಿ ಆರಧಿಕ ದಶ=ವೆಂದರೆ ೧೬ ಕಲೆಗಳಲ್ಲಿ ಇರುವರು. ೧೬ ಋಕ್ ಪ್ರತಿಪಾದ್ಯ ಪುರುಷ ಸೂಕ್ತಗತ ವಿಷ್ಣುವು ಈ ಕಲೆಗಳಿಗೆ ಆಧಾರನಾಗಿ ಶ್ರೀ ಲಕ್ಷ್ಮೀ ಸಹಿತನಾಗಿ ಶ್ರೀ ವಿಷ್ಣುವು ಒಂದು ದೇಹದೊಳಗೆ ೧೬ರಂತೆ ೪ ದೇಹದಲ್ಲಿ ೬೪ ಕಲಾರೂಪದಿಂದ ಈ ೧೬ ಕಲೆಗಳಿಗೆ ಆಧಾರನಾಗಿ ಇರುವನು. ಬ್ರಹ್ಮರುದ್ರಾದಿ ಮೊದಲಾದ ದೇವತೆಗಳಲ್ಲಿ ಸಂತತವಾಗಿ ವಿಹಾರ ಮಾಡುತ್ತಾನೆ. ಈ "ಶನ್ನೋ ಅಸ್ತು ದ್ವಿಪದೇಶ ನ್ ಚತುಷ್ಪದೇ" ಎನ್ನುವಂತೆ ೮ ದೇಹಗಳಲ್ಲಿ ಅನಿರುದ್ಧ, ಪ್ರದ್ಯುಮ್ನ, ಸಂಕರುಷಣ, ವಾಸುದೇವ ಈ ನಾಲ್ಕು ರೂಪದಿಂದ ವಿಹಾರ

ಮಾಡುತ್ತಾನೆಂದು ಶ್ರೀ ವಿಜಯದಾಸರ ಭಾವಗರ್ಭವನ್ನು ದಾಸವರ್ಯರು ವರ್ಣಿಸಿದ್ದಾರೆ. ಬಹಿರಂಗ ೬೪ ಕಲೆಗಳು-ದೇಹೋರ್ವಿ ಭೂತಗಳಲ್ಲ.

**ದ್ರೌಪದೀಶಪತಿ ವಿಠಲರು :** ಈರೆರಡು ದೇಹೋರ್ವಿ ಭೂತಗಳ ಶರೀರದಿ ಭೂತಗ ಕಲಾಲಕ್ಷಿತವಾದದು. ನಾಲ್ಕು ಶರೀರ (ಲಿಂಗ ಶರೀರ ವ್ಯತಿರಿಕ್ತ ಈರೆರಡು ದೇಹವೆಂದು ಬರೆದಿರುವನು. ಇದು ವಿಚಾರಾಂಶ ವಾಗಿದೆ). ಇಲ್ಲಿ ಲಿಂಗವ್ಯತಿರಿಕ್ತವಾದರೆ ಅವ್ಯಕ್ತ-ಅನಿರುದ್ಧ-ಪ್ರಾಕೃತ-ಸ್ಥೂಲವೆಂತ ನಾಲ್ಕು ಶರೀರ ಅರ್ಥ ಸರಿಹೋಗುತ್ತದೆ. ೫ ಭೂತ ಆಶ್ರೈಸಿಯಿದ ೧೬ ಕಲೆಗಳಲ್ಲಿ ೧೬ ಋಕ್ ಪ್ರತಿಪಾದ್ಯ ವಿಷ್ಣು ೧೬×೪=೬೪ ಕಳಾ ಧಾರಣಮಾಡಿ, ಬ್ರಹ್ಮಾದಿಗಳೊಳಗಿದ್ದು ಚತುಷ್ಪಾದನೆಂದು ಕರೆಸುತ್ತಾನೆ.

**ಭಾವಸೂಚನ :** ಈರೆರಡೇತಿ ॥ ಆರಧಿಕದಶೇತಿ । ಷೋಡಶ ಋಗೋಪೇತ ಪುರುಷ ಸೂಕ್ತ ಪ್ರತಿಪಾದ್ಯ ॥ ೭ ॥

8222

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಈರೆರಡು" ಇತಿ ॥ ಚತುಷ್ಪಾದಃ ದೇಹ ಚತುಷ್ಟಯೇ ॥ ಊರ್ವಿ=ತೆರೆ. ಭೂತಪದಂ ಷೋಡಶಕಲೋಪ ಲಕ್ಷಕಮ್ ॥ ತತ್ರ । ಆರು ಷೋಡಶ ಋಕ್ ಪುರುಷಸೂಕ್ತಂ ॥ ಸರ್ವವ್ಯಾಪ್ತೇಃ ವಿಷ್ಣುನಾಮಾ ॥ ಸರ್ವತ್ರ ಮೇಲನೇ ಚತುಃಷಷ್ಟಿಃ(ಷ್ಟವಃ) ಭವತಿ ॥ ಪುರಾರಿಃ=ಶಿವಃ ॥ ೭ ॥

## ಕನ್ನಡಾರ್ಥ

ಚತುಷ್ಪಾದ ರೂಪಿಯಾದ ಹರಿಯು ನಾಲ್ಕು ದೇಹಗಳಲ್ಲಿ ಇರುತ್ತಾನೆ. "ಭೂತ"ವೆಂಬ ಪದವು ಹದಿನಾರು ಕಳೆಗಳನ್ನು ಸಂಗ್ರಹಿಸುತ್ತದೆ. ಆರಧಿಕ ದಶವೆಂದರೆ "ಹದಿನಾರು" ಎಂದರ್ಥ. ಪುರುಷಸೂಕ್ತ ಪ್ರತಿಪಾದ್ಯನಾದ ಶ್ರೀ ವಿಷ್ಣುವು ಸರ್ವವ್ಯಾಪ್ತನಾದುದರಿಂದ ವಿಷ್ಣುವೆನಿಸಿಕೊಂಡಿರುತ್ತಾನೆ. ಒಂದು ದೇಹದಲ್ಲಿ ೧೬ ರೂಪಗಳಂತೆ ಒಟ್ಟಿಗೆ ಸೇರಿಸಿದರೆ ೬೪ ರೂಪಗಳು ಆಗುತ್ತವೆ.

ಪುರಾರಿ ಅಂದರೆ ತ್ರಿಪುರಾಸುರನನ್ನು ಸಂಹರಿಸಿರುವ ಶಿವನು. ॥ ೭ ॥

**ಅವತರಣಿಕಾ :** ಶಬ್ದಾದಿ ವಿಷಯು ಐದರಲ್ಲಿಯೇ ಅನೇಕ ವ್ಯಾಧಿ ಉತ್ಪತ್ತಿ, ಅವು ಲಿಂಗದೇಹದಲ್ಲಿ ಕಾರಣವಾಗಿಪ್ಪವು. ಲಿಂಗ-ಅನಿರುದ್ಧ-ಸ್ಥೂಲ ದೇಹಗತನಾದ

ನಾರಾಯಣನೇ ಸೂರ್ಯಮಂಡಲ ಸಂಸ್ಥಿತ. ಅವನನ್ನು ಜಪಿಸಲು ವ್ಯಾಧಿ ಪರಿಹಾರವೆಂದು ಹೇಳುತ್ತಾರೆ.

ಮೂಲ :

**ತೃಣ ಮೊದಲು ಬ್ರಹ್ಮಾಂತ ಜೀವರ।**
**ತನುಗಳ ತ್ರಯುಗಳಲಿ ನಾರಾ।**
**ಯಣನ ಸಾವಿರದೈದುನೂರಿಪ್ಪತ್ತು ಮೇಲಾರು॥**
**ಗಣನೆ ಮಾಳ್ಪದು ಬುಧರು ರೂಪವ।**
**ಘೃಣಿಯು ಸೂರ್ಯಾದಿತ್ಯ ನಾಮಗ।**
**ಳನುದಿನದಿ ಜಪಿಸುವರಿಗೀವಾರೋಗ್ಯ ಸಂಪದವ ॥ ೮ ॥**

**ಪದ್ಯಾರ್ಥ :** ತೃಣ ಮೊದಲು ಬ್ರಹ್ಮಾಂತ ಜೀವರ=ತೃಣಜೀವರು ಮೊದಲು ಮಾಡಿ, ಬ್ರಹ್ಮದೇವರ ಪರಿಯಂತರ, ಎಲ್ಲ ಜೀವರ=ತನುಗಳ ತ್ರಯುಗಳಲಿ, ಲಿಂಗ-ಅನಿರುದ್ಧ-ಸ್ಥೂಲ ದೇಹಗಳಲ್ಲಿ, ಶಬ್ದಾದಿ ಪಂಚ ವಿಷಯ ತನ್ಮಾತ್ರಾಲಿಂಗ ತಮೋ ಆವರಣದಲ್ಲಿ ಕಾರಣವಾಗಿ ಅನಿರುದ್ಧದಲ್ಲಿ ನೆಲಸಿಪ್ಪ ತತ್ತದಭಿಮಾನಿಗಳ ದ್ವಾರಾ ಸ್ಥೂಲದಲ್ಲಿ ಕಾರ್ಯೋನ್ಮುಖವಾಗಿಪ್ಪವು. ಇವೆಲ್ಲ ಬಂಧಕಗಳು ಸಕಲ ಆಧಿವ್ಯಾಧಿ ರೋಗ ಉಪದ್ರವಗಳಿಗೆ ಕಾರಣವಾಗಿ ಅನಾರೋಗ್ಯ ಗೈಸುವವು. ಆಧಿವ್ಯಾಧಿ ಪರಿಹಾರ ಮಾಡುವ ನಾರಾಯಣನು ಸಾವಿರದೈದುನೂರಿಪ್ಪತ್ತು ಮೇಲಾರು=ಒಂದು ಸಾವಿರದಾ ಐದುನೂರಾ ಇಪ್ಪತ್ತು ಆರು ೧೫೨೬ ರೂಪಗಳಿಂದ ಇರುವದನ್ನು ಬುಧರು=ಜ್ಞಾನಿಗಳು ಗಣನೆ ಮಾಳ್ಪದು=ಲೆಕ್ಕಮಾಡಿ ತಿಳಿವುದು. ಈ ನಾರಾಯಣನೇ ಬಾಹಿರದಲ್ಲಿಪ್ಪ ಸೂರ್ಯಮಂಡಲದಲ್ಲಿರುವ ಘೃಣಿ-ಸೂರ್ಯ-ಆದಿತ್ಯವೆಂಬ ನಾಮದಿಂದಿರುವ ಘೃಣಿಃ ಸೂರ್ಯ ಆದಿತ್ಯವೆಂಬ ಸೂರ್ಯ ಮಂಡಲಗತ ನಾಮಗಳನ್ನು ತಿಳಿದು, ಅನುದಿನದಿ=ನಿತ್ಯದಲ್ಲಿ ಜಪಿಸುವವರಿಗೆ, ಆರೋಗ್ಯ ಸಂಪದವೀವ=ಆರೋಗ್ಯಭಾಗ್ಯ ಐಶ್ವರ್ಯಾದಿ ಸಂಪತ್ತು, ಅಥವಾ ಆರೋಗವೆಂಬುದೇ ದೇಹಸಂಪತ್ತನ್ನು ಕೊಡುವನು.

**ಸೂಚನೆ :** ಈ ಪದ್ಯದಲ್ಲಿ ಅನೇಕ ಪಾಠಾಂತರಗಳಿವೆ, ತನುಗಳ ತ್ರಯುಗಳಲಿ ಎಂಬ ದಾಸರಾಯರ ಮೂಲ ಪ್ರತಿಪಾಠ ಉಳಿದ ೧೦-೧ಳ ಪ್ರತಿಗಳಲ್ಲಿ ತನುಚತುಷ್ಟಯ ಎಂಬುದು ಹೊಂದುವದಿಲ್ಲ. ಮೂಲಪಾಠ ತನು

ಗಳ ತ್ರಯುವೆಂಬುದಕ್ಕೆ ದ್ರೌಪದೀಶ ಪತಿ ವಿಠಲರು ಮೂರು ದೇಹ ಲಿಂಗ-ಅನಿರುದ್ಧ-ಸ್ಥೂಲವೆಂದೇ ಅರ್ಥಮಾಡಿದ್ದಾರೆ. ಜಂಬುಖಂಡಿ ಆಚಾರ್ಯರು ಇದರಂತೆ ಅರ್ಥಮಾಡಿದ್ದಾರೆ. ಮತ್ತು ಮೂಲದಲ್ಲಿ "ಸಾವಿರದೈನೂರಿಪ್ಪತ್ತು ಮೇಲಾರು ರೂಪಸಂಖ್ಯಾ ೧೫೨೬ ಎಂದು ದ್ರೌಪದೀಶ ಪತಿ ವಿಠಲರು ಬರೆದಿದ್ದಾರೆ. ವ್ಯಾಸದಾಸ ಸಿದ್ಧಾಂತ ಕೌಮುದೀಕಾರರು "ನಾರಾಯಣ ಸಹಸ್ರಂತು ಷಟ್ ಶತಂ ಷಟ್ ಸುಸಪ್ತತಿಂ ॥ ಭಜತೇ ತತ್ವಗಃ ಶ್ರೀಶ ॥" ಇತಿ ವೈಭವೇ ಎಂದು ಗ್ರಂಥ ಪ್ರಮಾಣ ಕೊಟ್ಟಿದ್ದಾರೆ. ೧೬೭೬ ರೂಪಗಳೆಂದು ಮೂಲಕ್ಕೆ ವಿರೋಧ ಬರುತ್ತದೆ. ಇದು ವಿಚಾರಾಂಶವಾಗಿದೆ. ಹಿಂದಿನ ವ್ಯಾಖ್ಯಾನಕಾರರಂತೂ ಏನೇನೋ ತಮ್ಮ ಮನಬಂದಂತೆ ೫೧೨೬ ಎಂದು ಬರೆದಿರುವರು. ಈ ರೂಪಗಳ ಸಂಖ್ಯಾ ತಿಳಿಯುವದು ಅಸ್ಮದಾದಿಗಳ ಯೋಗ್ಯತೆಯಲ್ಲ. ದಾಸರೇ ನಿಜವಾದ ಪ್ರಮೇಯ ಸಾಧಕರಿಗೆ ತಿಳಿಸಬೇಕು. ಬಹುಶಃ ಈ ರೂಪಗಳು ಘೃಣಿ-ಸೂರ್ಯ-ಆದಿತ್ಯ ನಾಮದಿ ಎಂದು ಮೂಲದಲ್ಲಿ ಹೇಳಿದಂತೆ ಈ ನಾಮ ಸಂಖ್ಯಾ ಗಣನೆಮಾಡುವದೆಂದು ತೋರುತ್ತದೆ. ಜ್ಞಾನಿಗಳು ವಿಚಾರಮಾಡುವದು.

**ದ್ರೌಪದೀಶಪತಿ ವಿಠಲರು:** ತೃಣ ಮೊದಲು ಬ್ರಹ್ಮಾಂತ ಜೀವರ ಮೂರು ಶರೀರಗಳಲ್ಲಿ ೧೫೨೬—ಲಿಂಗದಲ್ಲಿ=ಘೃಣಿ, ಅನಿರುದ್ಧದಲ್ಲಿ=ಸೂರ್ಯ, ಸ್ಥೂಲದಲ್ಲಿ=ಆದಿತ್ಯ.

**ಭಾವಸೂಚನ:** ತೃಣೇತಿ ಘೃಣೇತಿ । ಘೃಣಿಃ ಸೂರ್ಯ ಆದಿತ್ಯ ಇತಿ ಮಂತ್ರ ಮುದ್ಧೃತಂಭವತಿ । ಆರೋಗ್ಯೇತಿ ಸರ್ವವ್ಯಾಧಿಹರ ಶ್ರೀದೋವೃಷ್ಟಿದೋಯಂ ಮನುರಿತಿಸಾರ ಸಂಗ್ರಹೇ ॥ ೮ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಶಬ್ದಾದ್ಯಾಃ ವಿಷಯಾಃ ಪಂಚ ತತ್ರಾವಿಷ್ಟಾಸ್ತು ದೇವತಾಃ ॥ ಬಹುಧಾ ಜಾಯಮಾನೋಹಂ ತತ್ರಾಪಿ ಪ್ರಾವಿಶಂ ಕ್ರಮಾತ್ ॥ ಇತಿ ವಿಷ್ಣು ರಹಸ್ಯೋಕ್ತೇಃ ॥ ತೃಣೇತಿ ॥

ನಾರಾಯಣ ಸಹಸ್ರಂ ತು ಷಟ್ ಶತಂ ಷಟ್ ಸು ಸಪ್ತತಿಂ ॥ ಭಜತೇ ತತ್ವಗಃ ಶ್ರೀಶಃ ॥" ಇತಿ ವೈಭವೇ ॥ "ಕೃಪೋದಧಿಃ ಘೃಣಿಃ ಜ್ಞಾನಮೇಯಃ

ಸೂರ್ಯೋಽದಿತೇಃ ಸುತಃ ॥" ಆದಿತ್ಯ ಇತಿ ಚ ॥ ಸರ್ವ ವ್ಯಾಧಿಹರಃ ಇತಿ ಚ ॥ "ತತ್ರ ತತ್ರ ಸ್ಥಿತೋ ವಿಷ್ಣುಃ ॥" ಇತಿ ಚ ॥ ೮ ॥

**ಕನ್ನಡಾರ್ಥ**

ಶಬ್ದ ಮುಂತಾದ ಐದು ವಿಷಯಗಳು ; ಅವುಗಳಲ್ಲಿ ತತ್ವದೇವತೆಗಳು ಸೇರಿರುತ್ತಾರೆ. "ಬಹು ರೂಪಗಳನ್ನು ತಾಳುತ್ತ ನಾನು ಅವೆಲ್ಲವುಗಳಲ್ಲಿ ಪ್ರವೇಶಿಸಿದ್ದೇನೆ" ಎಂದು ವಿಷ್ಣು ರಹಸ್ಯದಲ್ಲಿ ಹೇಳಲಾಗಿರುತ್ತದೆ.

ಅದರಂತೆ "ತೃಣ ಮೊದಲು" ಎಂಬ ಪದ್ಯದಲ್ಲಿ ನಾರಾಯಣನು ಮೂರು ದೇಹಗಳಲ್ಲಿ ೧೬೭೬ ರೂಪಗಳಿಂದ ಇರುತ್ತಾನೆ" ಎಂದು "ವೈಭವ" ವೆಂಬ ಗ್ರಂಥದಲ್ಲಿ ಹೇಳಿರುತ್ತದೆ. ಕೃಪಾ ಸಮುದ್ರನಾದ ಹರಿಗೆ "ಘೃಣಿ" ಎಂದೂ, ಜ್ಞಾನದಿಂದ ತಿಳಿಯಲ್ಪಡುವದರಿಂದ ಸೂರ್ಯನೆಂದೂ ಅದಿತಿಯ ಪುತ್ರನಾದುದರಿಂದ ಆದಿತ್ಯನೆಂದೂ ಕರೆಯುತ್ತಾರೆ. ಇದರಂತೆ ಸರ್ವ ವ್ಯಾಧಿಗಳನ್ನೂ ನಾಶಿಸುವದರಿಂದ ಆದಿತ್ಯನೆಂದೂ ಕರೆಯುತ್ತಾರೆ. ಅಲ್ಲಲ್ಲಿ ಇರುವವನಾಗಿ ಶ್ರೀ ವಿಷ್ಣುವು ಅವರವರಲ್ಲಿರುವ ಸುಪ್ತ ಶಕ್ತಿಗಳನ್ನು ಉದ್ಬೋಧಿಸುತ್ತಾನೆ ಎಂದೂ ಶ್ರೀಮದಾಚಾರ್ಯರು ಉಪದೇಶಿಸಿರುತ್ತಾರೆ ॥ ೮ ॥

ಅವತರಣಿಕಾ : ಅಧ್ಯಾತ್ಮಾದಿ ಕಾರಣಗಳಿಂದಾಗುವ, ಅನೇಕ ತಾಪತ್ರಯ ಪರಿಹಾರಗೋಸುಗ ಆದಿಭೌತಿಕಾದಿಗಳಲ್ಲಿಪ್ಪ ಶ್ರೀಹರಿಯ ರೂಪಗಳ ತಿಳಿದು ಭಜಿಸಬೇಕೆಂದು ಪೇಳುತ್ತಾರೆ.

ಮೂಲ :

ಐದು ನೂರೆಪ್ಪತ್ತು ನಾಲಕು ।
ಆದಿ ಭೌತಿಕದಲ್ಲಿ ತಿಳಿವುದು ।
ಐದೆರಡು ಶತ ಏಕವಿಂಶತಿ ರೂಪವಧ್ಯಾತ್ಮ ॥
ಭೇದಗಳಲಿನ್ನೂರು ಮೂವ ।
ತ್ತಾದ ಮೇಲೊಂದಧಿಕ ಮೂರ್ತಿಗ ।
ಳಾದರದಲಧಿದೈವದೊಳು ಚಿಂತಿಪುದು ಭೂಸುರರು ॥ ೯ ॥

ಪದ್ಯಾರ್ಥ : ಆಧಿಭೌತಿಕದಲ್ಲಿ=೫೭೪ ರೂಪಗಳನ್ನು ತಿಳಿಯಬೇಕು. ಅಧ್ಯಾತ್ಮದಲ್ಲಿ=ಐದೆರಡು ಶತ ಏಕವಿಂಶತಿ ೧೦೨೧ ರೂಪ ಅಧಿದೈವದೊಳು=

ಇನ್ನೂರು ಮುವತ್ತಾದ ಮೇಲೊಂದಧಿಕ, ೨೩೧=ಅಧ್ಯಾತ್ಮಾದಿ ೩ ವಿಧ ತಾಪತ್ರಯಗಳು ಬೇಧವಿದ್ದರೂ, ಶ್ರೀಹರಿಯ ರೂಪಗಳಿಗೆ ಭೇದವಿಲ್ಲವೆಂದು, ಈ ಮೂರ್ತಿಗಳನ್ನು, ಆದರದಿ=ಆದರ ಭಕ್ತಿ ಪೂರ್ವಕವಾಗಿ ಭೂಸುರರು-ಬ್ರಾಹ್ಮಣೋತ್ತಮರು ಚಿಂತಿಸಬೇಕು. "ತಾಪತ್ರಯಗಳು ಬಹು ದೀಪನವಾಗಿವೆ । ನೀ ಪರಿ ಪಾಲಿಸು ಶ್ರೀಪತಿ" ಎಂದು ವಿಜಯರಾಯರ ಸ್ತೋತ್ರದಲ್ಲಿ ಶ್ರೀ ವೇಣುಗೋಪಾಲದಾಸರು ಪ್ರಾರ್ಥಿಸಿದ್ದಾರೆ.

ದ್ರೌಪದೀಶಪತಿ ವಿಠಲರು : ಐದುನೂರೆಪ್ಪತ್ತು ನಾಲ್ಕು ಆದಿಭೌತಿಕ ೫೭೪ ಅಧಿದೈವಕ ೨೩೧ ಅಧ್ಯಾತ್ಮಿಕ ೧೦೨೧ ॥ ೯ ॥

ಭಾವಸೂಚನ: ಐದೇತಿ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಐದು" ಇತಿ ॥ ಅಧಿಭೂತೇ ಪಂಚಯುಕ್ತ ವಿಂಶತಿಂ ಶತಪಂಚಕಂ ॥ ಹರಿಃ ಪ್ರಾಪ ಶತಾನಾಂ ತು ಸಪ್ತಕಂ ಚೈಕ ವಿಂಶತಿಮ್ ॥ ಅಧ್ಯಾತ್ಮಗಃ ಶತದ್ವಂದ್ವಂ ಏಕತ್ರಿಂಶಚ್ಚ ದೇವಗಃ ॥ ೯ ॥

## ಕನ್ನಡಾರ್ಥ

ಅಧಿಭೂತ (ಭೂತಗಳಲ್ಲಿ)ಕ್ಕೆ ೫೨೫ ರೂಪಗಳು, ೭೨೧ ರೂಪಗಳು ಅಧ್ಯಾತ್ಮದಲ್ಲಿ, ೨೩೧ ರೂಪಗಳು-ಅಧಿದೈವದಲ್ಲಿ, ಹೀಗಿರುವ ವಚನಗಳು ಆಧಾರವಾಗಿರುತ್ತವೆ ॥ ೯ ॥

ಅವತರಣಿಕಾ : ಅಧ್ಯಾತ್ಮಾದಿ ತಾಪತ್ರಯಗಳನ್ನು ಓಡಿಸಲು ಅಧ್ಯಾತ್ಮಾದಿಗತ ರೂಪೋಪಾಸನೆ ಹಿಂದಿನ ಪದ್ಯದಲ್ಲಿ ಹೇಳಿ-ಈ ಪದ್ಯದಲ್ಲಿ ಸೂರ್ಯ ಚಂದ್ರ ಅಹಃ ದಿನಗಳಲ್ಲಿಪ್ಪ ರೂಪ ಉಪಾಸನೆ ಮಾಡುವ ಕ್ರಮ ತತ್ಫಲ-ಆರೋಗ್ಯ ಭಾಗ್ಯವೆಂದು ಕರುಣಾಳುಗಳು ಉಪದೇಶಗೈಯ್ಯುತ್ತಾರೆ.

ಮೂಲ :

ಸುರುಚಿ ಶಾರ್ವರಿಕರನೆನಿಸಿ ಸಂ ।
ಕರುಷಣ ಪ್ರದ್ಯುಮ್ನ ಶಶಿ ಭಾ ।
ಸ್ಕರರೊಳಗೆ ಅರವತ್ತಧಿಕ ಮುನ್ನೂರು ರೂಪದಲಿ ॥
ಕರೆಸಿಕೊಂಬನು ಅಹ ಸ್ಸಂವ ।
ತ್ಸರನೆನಿಪ ಸುವಿಶಿಷ್ಟ (ಶೇಷ) ನಾಮದಿ ।
ಅರಿತವರಿಗಾರೋಗ್ಯ ಭಾಗ್ಯವ ನೀವನಂದಮಯ ॥ ೧೦ ॥

**ಪದ್ಯಾರ್ಥ :** ಸುರುಚಿ=ಸೂರ್ಯನಲ್ಲಿ ಶ್ರೀಹರಿಗೆ ಪ್ರೀತಿಯು ಇದ್ದುದರಿಂದ ಸೂರ್ಯನಲ್ಲಿ ಕಾಂತಿಪ್ರದನಾದ ಸಂಕರ್ಷಣನು ಶಾರ್ವರೀಕರ=ಶೃಹಿಂಸಾ ಎಂದು ಅರ್ಥ. ರಾತ್ರಿ ಸಂಚಾರ ಮಾಡುವ ಅಸುರರನ್ನು ನುಗ್ಗೊತ್ತಿ, ಶಾರ್ವರೀಕರ=ರಾತ್ರಿ ಸಂಚರಿಸುವ ಚಂದ್ರಮನಲ್ಲಿದ್ದು ರಾತ್ರಿಯನ್ನು ಬೆಳಗಿಸುವನು. ಪ್ರದ್ಯುಮ್ನ ರೂಪಿ ಹರಿಯು ಹೀಗೆ ಶಶಿ-ಭಾಸ್ಕರರೊಳಗೆ ಅಹ ಸಂವತ್ಸರನೆನಿಸಿ—ಪದಾರ್ಥಗಳಿಗೆ ಪ್ರಕಾಶವನ್ನು ಕೊಡುವದರಿಂದ ಅಹಃ ಎಂತ ಶ್ರೀಹರಿಯ ನಾಮ. ಅಹಃ ಸಂವತ್ಸರ=ಸಮೀಚೀನವಾಗಿ ಅನ್ಹಃ ಹಗಲು ಪ್ರಕಾಶಿಸಲು ಪ್ರವರ್ತಕನಾದುದರಿಂದ ಅಹಃ ಸಂವತ್ಸರನೆಂತಲೂ, ಶ್ರೀಹರಿಗೆ ನಾಮ. ೩೬೦ ಅಹಸ್ಸು ಹಗಲು ರಾತ್ರಿ ಕೂಡಿದರೆ ೧ ದಿನವಾದರೆ ೧ ವರ್ಷದಲ್ಲಿ ೩೬೦ ದಿನಗಳಿಗೆ ೩೬೦ ರೂಪನಾಗಿ ಅಹಃ ಸಂವತ್ಸರೋ ಎಂದು ವಿಷ್ಣು ಸಹಸ್ರನಾಮ, ವಿಧ್ಯಾಧಿರಾಜೀಯ "ಸಮ್ಯಕ್‌ಅನ್ಹ ಪ್ರವರ್ತಕತ್ವಾತ್ ಅಹ ಸಂವರ್ತಕ, ಸಂವತ್ಸರೋ ಇಂತಹ ವಿಶೇಷವಾದ ನಾಮಗಳನ್ನು ತಿಳಿದವರಿಗೆ ತಾನು ಆನಂದಮಯನಾದುದರಿಂದ ಆರೋಗ್ಯ= ದೇಹಾರೋಗ್ಯವೆಂಬ ಸಂಪತ್ತು ಐಶ್ವರ್ಯವನ್ನು ಕೊಡುವನು. ತಾಪತ್ರಯ ಕಳೆದು ಸುಖವೀವನು.

**ದ್ರೌಪದೀಶಪತಿ ವಿಠಲರು :** ಸುರುಚಿ ಶಾರ್ವರಿ ಕರ ॥ ಸೂರ್ಯ-ಸಂಕರ್ಷಣ-ಸುರುಚಿ, ಚಂದ್ರ-ಪ್ರದ್ಯುಮ್ನ-ಶಾರ್ವರೀಕರ ॥ ೩೬೦ ರೂಪದಿಂದ ಅಹಃ ಸಂವತ್ಸರನೆನಿಸಿ "ಅಹಾಯ ನಮಃ ಸಂವತ್ಸರಾಯ ನಮಃ" ಎಂದು ವಿಷ್ಣು ಸಹಸ್ರನಾಮ.

**ಭಾವಸೂಚನ :** ಸುರುಚಿರಿತಿ॥ ಸುರುಚಿರಹುತ ಭುಗಿತಿ ವಚನಾತ್। ಶಶರ ಶಾರ್ವರೀಕರ ಇತಿವಾ ॥ ೧೦ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸುರುಚಿ" ಇತಿ ॥ ಓಂ* ಪುರಾಸಿಥ ಯೋ ವಾ ನೂನಂ ಹಿತೇ ಧನಂ (ನೇ) ಹವ್ಯಃ ಸುಶ್ರುಧೀ ಹವಾಂ ತಾಭಿರವಧ್ಬಿರರ್ವತೋ ವಾಜಾ(ಂ) ಇಂದ್ರ ಶ್ರವಾಯಾನ್ ॥* ಓಂ ॥ ಅನೇನ ರೋಚತೇ ಇತಿ ಸ್ತುತಿಃ ॥ ಸು ಸಮೀಚೀನಾ ಸ್ತುತಿಃ ಯಸ್ಮಿನ್ ಸ ಸುರುಚಿಃ ಇತಿ ॥ ಓಂ ನಭಂತಾಮನ್ಯತೇ ಸಮೇನಹಿ ವಾಂ ವವ್ರಯಾ ಮಹೇ ಅಥೇಂದ್ರ ಜಿದ್ಯಜಾಮಹೇ ಶವಿಷ್ಟಂ

ನರಂ ನೃಣಾಂ ಸ ನಃ ಕದಾಚಿದರ್ವತ ॥* ಓಂ ॥ ಶೃ ಹಿಂ ಸಾಯಾಮ್ । ಶರ್ವರೀ ಹಿಂಸಾ ॥ ತಾಂ ಕರೋತಿ ಇತಿ ತಥೋಕ್ತಃ । ಸಂಕರ್ಷಣಶ್ಚ ಪ್ರದ್ಯುಮ್ನಃ ಶಶಿ ಭಾಸ್ಕರಗೋ ಹರಿಃ ॥ ತ್ರಿಶತೋತ್ತರ ಷಷ್ಟ್ಯಾತ್ಮಾ ॥" ಇತಿ ॥ ಓಂ* ಸಸೃಜೇ ತ್ವಾಮಿನ್ವೇ(ನ್ಮೇ) ಗೋಪತಿಂ ವಿಶ್ವ(ಶ್ವಾ) ಆಹಾನ ಇಂದ್ರಃ ಸುಮ(ಭ)ತಿಂ ಗಂತ್ವಚ್ಛಾ॥ ಅರ್ಣಾಂ ಚಿಚಿತ್ಯ ಪ್ರಧನಾ ಸುದಾಸೇ॥* ಓಂ* ಪ್ರದ್ಯುಮ್ನಃ ಪದಾರ್ಥ ಪ್ರಕಾಶ ದತ್ವಾತ್ ಅಹಮೂರ್ತಿಃ ಅತ್ರ ॥

**ಕನ್ನಡಾರ್ಥ**

"ಸುರುಚಿ", "ಶರ್ವರೀಕರ", "ಅಹಃ" ಈ ಮೂರು ನಾಮಗಳ ಅರ್ಥ ವನ್ನು ಬೃಹತೀ ಛಂದಸ್ಸಿನ ಮಂತ್ರಗಳು ವಿವರಿಸುತ್ತವೆ. ಅವುಗಳ ಸಾರವು. ಇಂತಿರುತ್ತದೆ.

"ಸುರುಚಿ" ಪರಮಾತ್ಮನಿಗೆ ಆದರಲ್ಲಿ ರುಚಿ (ಪ್ರೀತಿ)ಯಿರುವದರಿಂದ "ರುಚಿ" ಅಂದರೆ ಸ್ತುತಿ. ಉತ್ತಮವಾದ ಸ್ತುತಿಗಳುಳ್ಳವನು "ಸುರುಚಿ"ಯು ಅಂದರೆ ಶ್ರೇಷ್ಠವಾದ ಸ್ತುತಿಗಳಿಂದ ಹೊಗಳಿಸಿಕೊಳ್ಳುವವನು.

೨) **ಶರ್ವರೀಕರ**=ಶೃ ಅಂದರೆ ಹಿಂಸೆಯೆಂದು ಅರ್ಥ. ಶರ್ವರೀ ಅಂದರೆ ಹಿಂಸೆ. ಹಿಂಸೆಯನ್ನು "ಜಗನ್ನಾಶ ಅಥವಾ ಅಸುರರ ಹಿಂಸೆ"ಯನ್ನು ಮಾಡುವದರಿಂದ "ಶರ್ವರೀಕರ" ಎನ್ನುತ್ತಾರೆ.

೩) ಅಹಃ ಪದಾರ್ಥಗಳಿಗೆ ಪ್ರಕಾಶವನ್ನು ಕೊಡುವದರಿಂದ "ಅಹ" ವೆನ್ನುತ್ತಾರೆ.

ಸಂಕರ್ಷಣ ಪ್ರದ್ಯುಮ್ನರು ಚಂದ್ರ ಸೂರ್ಯರಲ್ಲಿ ಇರತಕ್ಕವರು; ಮೂರುನೂರಾ ಅರವತ್ತು (೩೬೦) ರೂಪಗಳಿಂದ "ಅಹಃ ಸಂವತ್ಸರ" ಎಂಬ ನಾಮಗಳಿಂದ ಕರೆಯಿಸಿಕೊಳ್ಳುತ್ತಾರೆ.

**ಅವತರಣಿಕಾ:** ಹಿಂದೆ ವಿವರಿಸಿದ ಎಲ್ಲಾ ಸ್ಥಳಗಳಲ್ಲಿಯೂ, ಸರ್ವರೊಳಗೂ, ಬ್ರಹ್ಮಾಂಡ ಬಹಿಃ ಬ್ರಹ್ಮಾಂಡದಲ್ಲಿ ವ್ಯಾಪಿಸಿರುವ, ಮನೋಮಯ ವಾಙ್ಮಯರೂಪ ಸ್ತೋತ್ರವನ್ನು ಉಪಸಂಹಾರಗೈಯ್ಯುತ್ತಾರೆ.

ಮೂಲ:

**ಏಕ ಪಂಚಾಶದ್ವರಣಗತ ಮಾ ।**
**ಕಳತ್ರನು ಸರ್ವರೊಳಗ ।**
**ವ್ಯಾಕೃತಾಕಾಶಾಂತ ವ್ಯಾಪಿಸಿ ನಿಗಮ ತತಿಗಳನು ॥**




**ವ್ಯಾಕರಣ ಭಾರತ ಮುಖಾದ್ಯಾ।**
**ನೇಕ ಶಾಸ್ತ್ರ ಪುರಾಣ ಭಾಷ್ಯಾ।**
**ನೀಕಗಳ ಕಲ್ಪಿಸಿ ಮನೋವಾಙ್ಮಯನೆನಿಸಿ ಕೊಂಬ ॥ ೧೧ ॥**

**ಪದ್ಯಾರ್ಥ :** ಏಕಪಂಚಾಶದ್ವರಣಗತ ಮಾಕಳತ್ರನು=ಅಜಾದಿ ೫೧ ವರ್ಣಗಳಲ್ಲಿ ಅಜ, ಆನಂದ ಇಂದ್ರ ಮೊದಲಾಗಿ ಕ್ಷಂ ಲಕ್ಷ್ಮೀನರಸಿಂಹಾಯ ನಮಃವರೆಗೆ ೫೧ ರೂಪಗಳಿಂದ ಇರುವ ಮಾಕಳತ್ರನು=ರಮಾಪತಿಯು, ಸರ್ವರೊಳಗೆ=ಬ್ರಹ್ಮಾದಿ ತೃಣಾಂತ ಎಲ್ಲರೊಳಗೆ, ಮತ್ತು ಬ್ರಹ್ಮಾಂಡದಲ್ಲಿ ಬಹಿಃ ಬ್ರಹ್ಮಾಂಡದಲ್ಲಿರುವ ಅವ್ಯಾಕೃತ ಆಕಾಶ-ಶ್ರೀ ಲಕ್ಷ್ಮಿ ಅಭಿಮನ್ಯಮಾನವಾದ ಮಹಾಕಾಶದಲ್ಲಿ (ಆಕಾಶಾಂತ) ಅವ್ಯಾಕೃತಾಕಾಶದಲ್ಲಿ, ಓತಪ್ರೋತವಾಗಿ ಅತಿ ಘನರೂಪದಿಂದ ವ್ಯಾಪಿಸಿದ್ದಾನೆ. ನಿಗಮ ತತಿಗಳನು=ಅನೇಕ ವೇದರಾಶಿಗೆ ಅಭಿವ್ಯಂಜಕ ಶಕ್ತಿ ಇತ್ತವನು. ನಿತ್ಯವಾದ ವೇದ ವರ್ಣಗಳಿಗೆ ಸರ್ವ ಭಾಷೆಗಳಿಗೆ ಅಭಿವ್ಯಂಜಕ ಶಕ್ತಿಯು ಈ ಅಜಾದಿ ೫೧ ವರ್ಣಗತನಿಂದಲೇ, ಮತ್ತು ವೇದಾಂಗವಾದ ವ್ಯಾಕರಣಾದಿಗಳಲ್ಲಿ-ಭಾರತಾದಿ ಅನೇಕ ಶಾಸ್ತ್ರ ಪುರಾಣಾದಿಗಳನ್ನೂ ಭಾಷ್ಯಾದಿ ನೀಕಗಳನ್ನೂ-ಸಮೂಹಗಳನ್ನೂ ಕಲ್ಪಿಸಿ-ತಾನೇ ವೇದವ್ಯಾಸ ರೂಪದಿಂದ ವೇದ ವಿಭಜನ-ಭಾರತ ಇತಿಹಾಸ ಪುರಾಣಾದಿಗಳು ನಾಲ್ಕು ಅಬ್ಜ ಮೂವತ್ತೆರಡು ಕೋಟಿ ಗ್ರಂಥಗಳನ್ನೂ, ಅಜಾದಿ ೫೧ ವರ್ಣಗಳ ಸಮೂಹದಿಂದಲೇ ಕಲ್ಪಿಸಿರುವನೆಂದು (ಶ್ರೀ ವಿಜಯದಾಸರ ಗುರುಮಹಿಮಾ ಸುಳಾದಿ) ಈ ಅಜಾದಿ ರೂಪಿಯೇ ಮನೋಮಯ ವಾಙ್ಮಯನೆಂದು ಕರೆಸುತ್ತಾನೆಂದು ೬ನೇ ಪದ್ಯಕ್ಕೆ ಸಮನ್ವಯಿಸಬೇಕು.

**ದ್ರೌಪದೀಶಪತಿ ವಿಠಲರು :** ಏಕಪಂಚಾಶದ್ವರಣಗತ। ೫೧ ವರ್ಣಗತ ಪರಮಾತ್ಮ ಸರ್ವಜೀವರ ಹೃದಯಾಕಾಶ ಅವ್ಯಾಕೃತಾಕಾಶ ವ್ಯಾಪಿಸಿದೆ. "ಶಬ್ದ ಗುಣಕ ಮಾಕಾಶಂ" ಎಂಬ ಪ್ರಮಾಣಾನುಸಾರ, ಶಬ್ದ ಎಂದರೆ ಧ್ವನಿ, ಚೇತನರೊಳಗೆ ವರಣ-ಜಡದೊಳಗೆ ಸ್ವರ ॥ ೧೧ ॥

**ಭಾವಸೂಚನ :** ಏಕೇತಿ ॥ ೧೧ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಏಕ" ಇತಿ ॥ ವರ್ಣಾನಾಂ ವ್ಯಾಪ್ತೇಃ ॥ ಅನೀಕ=ಸಮೂಹ

**ಕನ್ನಡಾರ್ಥ**

ವರ್ಣಗಳು ವ್ಯಾಪಿಸಿಕೊಂಡು ಇರುವದರಿಂದ ವರ್ಣಗತನಾದ ಶ್ರೀ ಹರಿಯು ಅವ್ಯಾಕೃತಾಕಾಶದಲ್ಲಿ ವ್ಯಾಪಿಸಿ ನಿಗಮಗಳನ್ನು ಅಭಿವ್ಯಕ್ತಿಗೊಳಿಸುತ್ತಾನೆ ॥ ೧೧ ॥

ಅವತರಣಿಕಾ: ಸಮಸ್ತ ಚರಾಚರ ಜಗತ್ತಿನ ಭಾರವಹಿಸಿದ ಶ್ರೀ ರಮಾಧೃತನಾದ ಶ್ರೀಹರಿಯು ಕಾರ್ಯ ರೂಪಗಳನ್ನೂ ಜಡಚೇತನರಲ್ಲಿಪ್ಪ ರೂಪಗಳನ್ನೂ ವಿಶದೀಕರಿಸುತ್ತಾರೆ.

ಮೂಲ :

**ಭಾರ ಭೃನ್ನಾಮಕನ ಸಾವಿರ ।**
**ದಾರುನೂರಿಪ್ಪತ್ತುನಾಲಕು ।**
**ಮೂರುತಿಗಳು ಚರಾಚರದಿ ಸರ್ವತ್ರ ತುಂಬಿಹವು ॥**
**ಆರುನಾಲಕು ಜಡಗಳಲಿ ಹದಿ ।**
**ನಾರು ಚೇತನಗಳಲಿ ಚಿಂತಿಸೆ ।**
**ತೋರಿಕೊಂಬನು ತನ್ನ ರೂಪವ ಸಕಲ ಠಾವಿನಲಿ ॥ ೧೨ ॥**

**ಪದ್ಯಾರ್ಥ :** ಭಾರಭೃನ್ನಾಮಕನ=ಭಾರಭೃತ್ ಕಥಿತೋ ಯೋಗಿ ಎಂದು. ವಿಷ್ಣು ಸಹಸ್ರನಾಮ ಭಾರಭೃತ್ "ಬ್ರಹ್ಮಾಂಡ ಭಾರಂ ಬಿಭರ್ತೀತಿ ಭಾರಭೃತ್" ಬ್ರಹ್ಮಾಂಡ ಭಾರವನ್ನು ವಹಿಸುವನಾದುದರಿಂದ ಶ್ರೀ ಹರಿಗೆ ಭಾರಭೃತನೆಂದೂ, ಅಥವಾ ಭಾರಭೃತ ಭಾರ=ರಮಾದೇವಿಯನ್ನು ಭೃತ=ವಕ್ಷಸ್ಥಳದಿ ಧರಿಸಿ ರಮೆಗೆ ಆನಂದವನ್ನು ಕೊಡುವನಾದುದರಿಂದಲೂ ಭಾರಭೃತ್–ನಾಮದಿಂದ ಇಲ್ಲಿರುವ ಪ್ರಕೃತಿ ಪರಮಾಣುಗಳಲ್ಲಿ ಕಾರ್ಯ ರೂಪಗಳಂತೆ ಭಾ=೪, ರ=೨. ಭೃ=ಭ+ರ=೬, ತ್ ೧–ಹೀಗೆ ಎಡದಿಂದ ಬಲ ಸಂಜ್ಞಾದಂತೆ ೧೬೨೪ ಮೂರುತಿಗಳು=ರೂಪಗಳು ಚರಜಂಗಮ ಜೀವರು. ಅಚರ ಸ್ಥಾವರ ಜೀವರಾದಿಗಳಲ್ಲಿ ಅಥವಾ ಜಡಚೇತನರಲ್ಲಿ ಒಟ್ಟಿಗೆ ಇರುವ ರೂಪಗಳು. ಆರು ನಾಲ್ಕು ೬×೪=೨೪ ಜಡಗಳಾದ ೨೪ ತತ್ವಗಳಲ್ಲಿ. ಹದಿನಾರು ಚೇತನರಲ್ಲಿ ೧೬ ರೂಪಗಳು ಜೀವಿಗಳಲ್ಲಿ. (ಅಂತು ಇವೆರಡು ಸಂಖ್ಯೆ ಸಾಲಾಗಿ ಓದಿದರೆ ೧೬೨೪ ಆಗುತ್ತವೆ) ಎಂತಲೂ, ಈ ಪ್ರಕಾರ ಸಮಸ್ತ ಬ್ರಹ್ಮಾಂಡದ ಭಾರವನ್ನೂ ಮಹಾ ಕೂರ್ಮ ರೂಪದಿಂದ

ಧರಿಸಿಹನೆಂದು ಚಿಂತಿಸಿದರೆ, ಜ್ಞಾನಿಗಳಿಗೆ ಎಲ್ಲ ಠಾವಿನಲ್ಲಿ=ಸ್ಥಳಗಳಲ್ಲಿ ವ್ಯಾಪಿಸಿರುವ ಸಕಲ ರೂಪಗಳನ್ನು ತೋರುವನು. ಜ್ಞಾನಿಗಮ್ಯನೋ ಹರಿಯು ಜ್ಞಾನಗಮ್ಯನೋ।

ದ್ರೌಪದೀಶಪತಿ ವಿಠಲರು: ಮೇಲೆ ಹೇಳಿದ (ಅಂದರೆ ಹಿಂದಿನ ಪದ್ಯಗಳಲ್ಲಿ ಹೇಳಿದ) ಪದಾರ್ಥಗತ ಭಾರಭೃನ್ನಾಮಕನ ರೂಪಗಳು ೧೬೨೪ ಚರಾಚರದಿ ಸರ್ವತ್ರ ತುಂಬಿಹರು. ೨೪ ಜಡ, ೧೬ ಚೇತನ । ೧೨ ।

ಭಾವಸೂಚನ: ಭಾರಭೃತ ಇತಿ । ಭಾರಭೃತ್ ಕಥಿತೋ ಯೋಗೀತಿ ಸಹಸ್ರನಾಮ ಪಾಠಾತ್ । ೧೨ ।

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಭಾರಭೃತ್" ಇತಿ॥ ಓಮ್ * ವೃದ್ಧೋ ಅಜಾಯಥಾಃ ಇಂದ್ರ ಜ್ಯೈಷ್ಠ್ಯಾಯ ಸುಕ್ರತೋ ಆ ತ್ವಾ ವಿಶಂತ್ವಾಶವತಃ । ಸೋಮಾಸ ಇಂದ್ರ ಗಿರ್ವಣಃ ಶಂತೇಸಂತು ಪ್ರಚೇತಸೇ । *ಓಮ್ !

ಭ್ರಿಯತೇ ಇತಿ ಭಾರಃ ರಮಾ । ತಾಂ ಬಿಭರ್ತಿ ಇತಿ ಭಾರಭೃತ್ । ಸಹಸ್ರಂ ಷಟ್‌ಶತಂ ವಿಷ್ಣುಃ ಚತುರ್ವಿಂಶತಿ ಸರ್ವಗಃ॥ ಜಡೇಷು ದಶ ರೂಪಾಣಿ ಚೇತನೇಷು ಷೋಡಶ । ೧೨ ।

## ಕನ್ನಡಾರ್ಥ

"ಭಾರಬೃತ್" ಎಂಬ ನಾಮವು ವಿಷ್ಣು ಸಹಸ್ರಾಂತರ್ಗತವಾದುದು. ಬೃಹತೀ ಮಂತ್ರವು ಈ ಅರ್ಥವನ್ನು ವಿವರಿಸುತ್ತದೆ. ಭಾರವೆಂದರೆ "ರಮಾ ದೇವಿಯು" ಎಂದು ಅರ್ಥ. ರಮಾದೇವಿಯನ್ನು ಧರಿಸಿ ಪೋಷಿಸಿ ಸುಖಗೊಳಿಸುವದರಿಂದ "ಭಾರಭೃತ್" ಎಂದು ಶ್ರೀ ಹರಿಯನ್ನು ಕರೆಯುತ್ತಾರೆ.

"ಚರಾಚರ ವಸ್ತುಗಳಲ್ಲಿ ಸರ್ವತ್ರ ೧೬೨೪ ರೂಪಗಳು ಇರುತ್ತವೆ. ಜಡಗಳಲ್ಲಿ ಹತ್ತು ರೂಪಗಳೂ, ಚೇತನದಲ್ಲಿ ೧೬ ರೂಪಗಳೂ ಇರುತ್ತವೆ" ಎಂದು ಪ್ರಮಾಣ ವಚನಗಳ ಅರ್ಥ. । ೧೨ ।

ಅವತರಣಿಕಾ: ಹಿಂದೆ ವರ್ಣಿಸಿದ ಭಗವಂತನ ಎಲ್ಲಾ ರೂಪಗಳು ಬಂಗಾರದ ವಸ್ತುಗಳ ಮೇಲೆ ನವರತ್ನಾದಿ ಮಣಿಗಳು ಕೆತ್ತಿದಂತೆ, ಬ್ರಹ್ಮಾದಿಗಳ ಮನಸ್ಸಿನಲ್ಲಿ ಪತ್ಪ್ರತ್ಯೇಕ ವಿವರದಿಂದ ಶೋಭಿಸುತ್ತವೆಂದು ದೃಷ್ಟಾಂತದಿಂದ ಹೇಳುತ್ತಾರೆ.

ಮೂಲ :

**ಮಸುಣಿ ಮೇಲಿಹ ಮಣಿಯು ವೋಲ್ ರಾ।**
**ಜಿಸುವ ಬ್ರಹ್ಮಾದಿಗಳ ಮನದಲಿ ।**
**ಬಿಸಿಜ ಜಾಂಡಾಧಾರಕನು ಆಧೇಯನೆಂದೆನಿಸಿ ॥**
**ದ್ವಿಶತ ನಾಲ್ವತ್ತೆರಡು ರೂಪದಿ ।**
**ಶಶಿಯೊಳಿಪ್ಪನು ಶಶದೊಳಗೆ ಶೋ ।**
**ಭಿಸುವ ನಾಲ್ವತ್ತೆರಡರಧಿಕ ಶತರೂಪದಲಿ ಬಿಡದೆ ॥ ೧೩ ॥**

**ಪದ್ಯಾರ್ಥ:** ಮಿಸುಣಿ ಮೇಲಿಹ=ಬಂಗಾರ ವಸ್ತುಗಳ ಮೇಲೆ, ಮಣಿಯು ಓಲ್=ನವರತ್ನಾದಿ ಮಣಿಗಳ-ಕುಂದಣಗಳಲ್ಲಿರುವ ಮಣಿ ರತ್ನ ಗಳು ಬೇರೆ ಬೇರೆ ಸ್ವಚ್ಛವಾಗಿ ಕೆಂಪು-ಬಿಳುಪು-ಪಚ್ಚೆ ಮುಂತಾದ ಮಣಿ ಗಳು ಶೋಭಿಸುವಂತೆ ಶ್ರೀ ಹರಿಯು ಈ ಎಲ್ಲ ರೂಪಗಳು, ಬ್ರಹ್ಮಾದಿಗಳ ಮನದಲಿ=ಬ್ರಹ್ಮ-ವಾಯು-ವಾಣಿ-ಭಾರತಿ ಈ ಅಚ್ಛಿನ್ನ ಭಕ್ತರ ಮನದಲ್ಲಿ ವಿರಳ ವಿರಳವಾಗಿ ತೋರುವವು. ಈ ರೂಪಗಳು ಬಿಸಿಜ ಜಾಂಡಾಧಾರಕ= ಬ್ರಹ್ಮಾಂಡ ಭಾರವನ್ನು ಧರಿಸಿದ ಆಧಾರನು. ಆಧೇಯನೆಂದೆನಿಸಿ=ಆಶ್ರಯ ಹೊಂದುವನಾಗಿ ಇರುವನು. ಚಂದ್ರನಲ್ಲಿ ಇರುವ ಶಶಕಲಾಕ್ಕೆ ಚಂದ್ರನು ಹೇಗೆ ಆಧಾರನೋ=ಶಶಿ ಚಂದ್ರನಲ್ಲಿ ಆಧಾರ ರೂಪ. (ಅ–೨, ಧಾ–೪, ರ–೨) ದ್ವಿಶತ ನಾಲ್ವತ್ತೆರಡು ರೂಪದಿ ೨೪೨ ರೂಪದಿಂದ ಶಶ=ಮೊಲ, ಆಧೇಯ=ಆ–೨, ಧೇ–೪, ಯ–೧ ನಾಲ್ವತ್ತೆರಡಧಿಕ ಶತರೂಪದಲಿ ಬಿಡದೆ ೨೪೧ ರೂಪಗಳಿಂದ ನಿರಂತರ ಇರುವಂತೆ ಶ್ರೀ ಹರಿಯು, ಬ್ರಹ್ಮಾಂಡಕ್ಕೆ ಆಧಾರನಾಗಿಯೂ, ಬ್ರಹ್ಮಾಂಡದಲ್ಲಿರುವ ಎಲ್ಲ ಚರಾಚರಗಳಲ್ಲಿ ಆಧೇಯ ನಾಗಿಯೂ ಇರುವನೆಂದು ಭಾವ. ವಿಜಯದಾಸರ ಪಾದವೇ ಗತಿ ಎಂದು ನಂಬಿದರೆ ನಿಜವಾದ ಜ್ಞಾನ ಲಭಿಪುದು.

**ದ್ರೌಪದೀಶಪತಿ ವಿಠಲರು:** ಮಿಸುಣಿ ಮೇಲಿಹ=ಮಿಸುಣಿಯೆಂದರೆ ಬಂಗಾರ–ಇದರ ಮೇಲೆ ಶೋಭಿಸುವ ರತ್ನದ ಹಾಗೆ ಬ್ರಹ್ಮಾದಿಗಳ ಮನ ಸ್ಸೆಂಬ ಬಂಗಾರದ ಮೇಲೆ ಮಣಿಯೋಪಾದಿಯಲಿ ಪ್ರಕಾಶಕನಾಗಿರುತ್ತಾನೆ. ಶಶಿ ಎಂದರೆ ಚಂದ್ರನೊಳಗೆ ಆಧಾರ=೨೪೨, ಶಶ ಎಂದರೆ ಮೊಲದೊಳಗೆ ಆಧೇಯ ೨೪೧ ರೂಪದಿಂದ । ೧೩ ।

**ಭಾವಸೂಚನ : ಮಿಸುಣೀತಿ ॥ ಸುವರ್ಣ, ಬಿಸಿಜ=ಪದುಮ ॥೧೩॥**

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಮಿಸುಣಿ" ಇತಿ ॥ ಭಂಗಾರ । ಬಿಸಜಂ-ಪದ್ಮಂ ॥ ದ್ವಿಚತ್ವಾರಿಂಶ ದಧಿಕ ದ್ವಿಶತಂ ಶಶಿಗಃ ಪ್ರಭುಃ ॥ ದ್ವಿಚತ್ವಾರಿಂ ಶದಧಿಕ ಶತಾತ್ಮಾ ಶಶ ಸಂಸ್ಥಿತಃ ॥ ೧೩ ॥

**ಕನ್ನಡಾರ್ಥ**

ಮಿಸುಣಿ ಅಂದರೆ ಬಂಗಾರ. ೨೪೨ ರೂಪಗಳಿಂದ ಶಶಿಯಲ್ಲಿಯೂ ೨೪೧ ರೂಪಗಳಿಂದ ಶಶ (ಚಂದ್ರನಲ್ಲಿರುವ ಮೊಲ)ದಲ್ಲಿರುವಾ-ಇರುತ್ತಾನೆ; ಎಂಬುದು ಪ್ರಮಾಣ ವಚನಾರ್ಥ ॥ ೧೩ ॥

**ಅವತರಣಿಕಾ:** ಹಿಂದಿನ ೧೨-೧೩ ಪದ್ಯಗಳಲ್ಲಿ ಪೇಳಿದ ರೂಪಗಳ ಸಂಖ್ಯಾಮಿಳನ ಮಾಡಬೇಕು. ಇದರ ಮರ್ಮ ತಿಳಿಯಲು ಜ್ಞಾನಿಗಳಾದ ಹಿರಿಯರನ್ನು ಅನು ಸರಿಸಬೇಕೆಂದು ಉಪದೇಶಿಸುತ್ತಾರೆ.

**ಮೂಲ :**

**ಎರಡು ಸಾವಿರದೆಂಟು ರೂಪವ ।**
**ನ (ಅ)ರಿತು ಸರ್ವ ಪದಾರ್ಥದಲಿ ಶ್ರೀ ।**
**ವರನ ಪೂಜೆಯ ಮಾಡು ವರಗಳ ಬೇಡು ಕೊಂಡಾಡು ॥**
**ಬರಿದೆ ಜಲದೊಳು ಮುಳುಗಿ ಬಿಸಲೊಳು ।**
**ಬೆರಳನೆಣಿಸಿದರೇನು ಸದ್ಗುರು ।**
**ಹಿರಿಯರನುಸರಿಸಿದರ ಮರ್ಮವನರಿಯದಿಹ ನರನು ॥ ೧೪ ॥**

**ಪದ್ಯಾರ್ಥ :** ಎರಡು ಸಾವಿರದೆಂಟು ರೂಪವನರಿತು=ಹಿಂದೆ ೧೨ನೆ ಪದ್ಯದಲ್ಲಿ ಪೇಳಿದ ೧೬೨೪ ರೂಪ ಜಡಚೇತನರಲ್ಲಿ ಮತ್ತು ಪದ್ಯ ೧೩ರಲ್ಲಿಯ ಆಧಾರ-ಆಧೇಯ ೨೪೨+೧೪೨=೩೮೪=೧೬೨೪+೩೮೪=೨೦೦೮ ಎರಡು ಸಾವಿರದಾ ಎಂಟು ರೂಪಗಳು ಹೇಗಿರುತ್ತವೆಂಬುದನ್ನು ರೂಪವನರಿತು= ತಿಳಿದು ಸರ್ವ ಪದಾರ್ಥಗಳಲ್ಲಿ ವ್ಯಾಪ್ತರೂಪ-ಆಧಾರ ಆಧೇಯ ರೂಪಗಳನ್ನ ರಿತು ಪೂಜೆಯನ್ನು ಮಾಡು, ಧ್ಯಾನಿಸು-ಉಪಾಸಿಸು, ವರಗಳ ಬೇಡು= ನಿನಗೆ ಇಷ್ಟಾರ್ಥವಾದ ಮೋಕ್ಷಸುಖವನ್ನು ಬೇಡು, ಮುಕ್ತಿ ಸುಖ ವ್ಯತಿರಿಕ್ತ

ವಾಗಿ ಇನ್ನೊಂದು ವರ ಬೇಡಬಾರದು. ಮೋಕ್ಷ ಸುಖ ಬೇಡುವುದು ಕಾಮ್ಯವಲ್ಲವೆಂದು ಶಾಸ್ತ್ರ ಸಿದ್ಧ–ಇದೇ ಇಷ್ಟಾರ್ಥ. ಇಂತು ಶ್ರೀಹರಿಯ ಮಹಾ ಮಹಿಮೆಗಳನ್ನು ಕೊಂಡಾಡು–ಸ್ತುತಿಸು. ಇದರಿಂದಲೇ ಶ್ರೀಹರಿಯ ಒಲುಮೆ ಪ್ರಾಪ್ತಿಸುವುದು. ಗುರುಹಿರಿಯರನುಸರಿಸಿ ತಿಳಿಯದಿಹ ನರನು= ಸುಜ್ಞಾನಿಗಳಾದ ಹಿರಿಯರಾದ ಸತ್‌ಸಂಪ್ರದಾಯ ಪ್ರವರ್ತಕರಾದ ಶ್ರೀಮ ದಾಚಾರ್ಯರ ಮತದಿಂಗಿತಜ್ಞರಾದ ಗುರುಹಿರಿಯರನ್ನು ಅನುಸರಿಸಬೇಕು. ಅವರ ದಾಸರ ದಾಸನಾಗಬೇಕು. ಅವರಲ್ಲಿ ಶಿಷ್ಯತ್ವ ವಹಿಸಬೇಕು. ಭಕ್ತಿ ಮಾಡಬೇಕು. ಗುರುಗಳು ಶಿಷ್ಯ ಮನೋಭಾವವರಿತು ನಿಜವಾದ ಮರ್ಮ ತತ್ವಗಳನ್ನು ಬೋಧಿಸುವರು. ಇದನ್ನು ತಿಳಿಯದೇ–ಬರಿದೆ=ಸದ್ಗುರು ಉಪದೇಶವಿಲ್ಲದೇ ಒಣ ಡಂಭಾಚಾರದಿಂದ ಜಲದೊಳು ಮುಳುಗಿ= ಮುಂಜಾನೆ ನದ್ಯಾದಿ ಉದಕದಲ್ಲಿ ಮುಳುಗಿ ಎಂತ ಪದ ಪ್ರಯೋಗ ಮಾಡಿದ್ದು, ಜ್ಞಾನವಿಲ್ಲದೇ ನೀರನಲ್ಲಿ ಮುಳುಗುವದೆಂದು, ಹೀಗೆ ನೀರಿನಲ್ಲಿ ಮುಣುಗಿ ಬಿಸಲೊಳಗೆ ಕುಳಿತು ಜ್ಞಾನವಿಲ್ಲದೇ ಬೆರಳನ್ನು ಎಣಿಸುತ್ತ ಜಪ ಮಾಡಿದರೆ ಏನೂ ಫಲವಿಲ್ಲ.

ದ್ರೌಪದೀಶಪತಿ ವಿಠಲರು : ಒಟ್ಟಿಗೆ ೨೦೦೮ ರೂಪ.

ಭಾವಸೂಚನ : ಎರಡೇತಿ ತದುಕ್ತಂ ಅಧ್ಯಾತ್ಮೆ॥ ರೂಪಾಣಾಂ ದ್ವಿಸಹಸ್ರೈಶ್ಚ ಅಷ್ಟಭಿಃ ಸರ್ವಗೋ ಹರಿ ರಿತಿ ॥ ೧೪ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಎರಡು" ಇತಿ ॥ ಮಿಲಿತ್ವಾ ದ್ವಿಸಹಸ್ರಂ ತು ರೂಪಾಷ್ಟಕ ಮನ್ವೆಹಿ ಭೋ! ॥ ಬರಿದೆ ಸುಮ್ಮನೆ ಮರ್ಮ ರಹಸ್ಯ ॥ ೧೪ ॥

**ಕನ್ನಡಾರ್ಥ**

"ಒಟ್ಟಿಗೆ ಮೇಳನಗಳನ್ನು ಮಾಡಿ–ಗಣನೆ ಮಾಡಿದರೆ ಸರ್ವ ಪದಾರ್ಥ ಗಳಲ್ಲಿ ಎರಡು ಸಾವಿರದ ಎಂಟು ರೂಪಗಳಾಗುವವು; ಎಂದು ತಿಳಿ" ಎಂಬುದು ಪ್ರಮಾಣ ವಚನದ ಅರ್ಥ ॥ ೧೪ ॥

**ಅವತರಣಿಕಾ :** ಬಹಿರಂಗ ಲಿಂಗ ಅನಿರುದ್ಧ ಸ್ಥೂಲಾದಿ ತಮೋನಿಹಂತನ ರೂಪಗಳಿಗೆ ಮೂಲ ಕಾರಣನಾದ ಶ್ರೀಹರಿಯು ಜೀವನ ಚಿದ್ದೇಹದೊಳಗೆ ನರಸಿಂಹ ರೂಪದಲ್ಲಿದ್ದು ಬಾಹಿರ ಅಪಮೃತ್ಯಾದಿ ಪರಿಹಾರಕನೆಂದು ಹೇಳುತ್ತಾರೆ.

ಮೂಲ:

ಮತ್ತು ಚಿದ್ದೇಹದವೊಳಗೆ ಎಂ ।
ಭತ್ತು ಸಾವಿರದೇಳು ನೂರಿ ।
ಪ್ಪತ್ತಯಿದು ನರಸಿಂಹ ರೂಪದಲಿದ್ದು ಜೀವರಿಗೆ ॥
ನಿತ್ಯದಲಿ ಹಗಲಿರಳು ಬಪ್ಪಪ ।
ಮೃತ್ಯುವಿಗೆ ತಾ ಮೃತ್ಯುವೆನಿಸುವ ।
ಭೃತ್ಯವತ್ಸಲ ಭಯವಿನಾಶನ ಭಾಗ್ಯ ಸಂಪನ್ನ ॥ ೧೫ ॥

ಪದ್ಯಾರ್ಥ: ಮತ್ತು ಹಿಂದೆ ಹೇಳಿದ ಎಲ್ಲ ದೇಹಗಳಲ್ಲಿ ಕಾರ್ಯ ರೂಪಗಳಿಗೆ ಕಾರಣನಾದ ಶ್ರೀ ನರಸಿಂಹರೂಪಿ ಹರಿಯು, ಜೀವನ ಚಿದ್ದೇಹ= ಚಿದ್ದೇಹಾಕಾರ ಆನಂದಮಯನೆಂಬ ಶ್ರೀ ವಿಜಯದಾಸರ ಸುಳಾದಿಯಂತೆ, ನರಸಿಂಹ=ಶಬ್ದದಿಂದ ನ=೫, ರ=೨, ಸಿ=೭, ೦=೦, ಹ=೮ ಹೀಗೆ ಎಡದಿಂದ ಸಂಖ್ಯಾ ಗಣನೆ ಮಾಡಿದರೆ ೮೦೭೨೫ ರೂಪ ಚಿದ್ದೇಹಗತ ಆನಂದಮಯ ಚಿತ್ ಪ್ರಕೃತಿ ರೂಪಗಳಲ್ಲಿ ಇಷ್ಟು ರೂಪದಿಂದ ಇದ್ದು, ಜೀವರಿಗೆ=ಸಮಸ್ತ ಪ್ರಾಣಿಗಳಿಗೆ ಯಾವ ದೇಹದಲ್ಲಿದ್ದರೂ, ನಿತ್ಯದಲಿ ಹಗಲಿರಳು=ಸಂತತವಾಗಿ ರಾತ್ರಿ ಹಗಲೆನ್ನದೆ ಸರ್ವ ಕಾಲದಲ್ಲಿ ಜೀವನ ದುಷ್ಕರ್ಮಾನುಸಾರ ಬರುವ ಅಪಮೃತ್ಯುವಿಗೆ=ಅಕಸ್ಮಾತ್ತಾಗಿ ಒದಗುವ ಮೃತ್ಯುವಿಗೆ ಶ್ರೀ ನರಹರಿ ರೂಪನೂ, ಮೃತ್ಯು ಮಾರಕನಾಗಿ ಅಪಮೃತ್ಯು ದೇವತೆಯನ್ನು ತಡೆಗಟ್ಟಿ, ಸಜ್ಜನರಿಗೆ ಕಾಲಮೃತ್ಯು ಪರಿಯಂತರವಾಗಿ ಸಾಧನ ಮಾಡಿಸುವನು, ಭೃತ್ಯವತ್ಸಲ=ಭಕ್ತ ಸಂರಕ್ಷಕ, ಭಯವಿನಾಶನ= ಅಪಮೃತ್ಯು ಮುಂತಾದ ಭಯಗಳನ್ನು ಪರಿಹರಿಸುವನು. ಭಾಗ್ಯಸಂಪನ್ನ= ನಿತ್ಯ ಭಾಗ್ಯವೀವ ಶ್ರೀ ರಮಾಬಿಂಬನಾದ ಶ್ರೀರೂಪ ವಿಜ್ಞಾನಮಯನಾದ ತನ್ನ ಆನಂದಮಯ ಪುರುಷ ರೂಪದಿಂದ ರಮಣ ಮಾಡುತ್ತಾ ಶ್ರೀರೂಪ ದಿಂದ ಇರುವ ರಮೆಗೆ ಸೌಭಾಗ್ಯವನ್ನು ತಂದುಕೊಡುವನು. ಅಥವಾ ಭಾಗ್ಯ ಸಂಪನ್ನ=ನಿತ್ಯದಲ್ಲಿ ವಿಜ್ಞಾನಮಯವಾದ ಭಾಗ್ಯದಿಂದ ಯುಕ್ತ ನಾಗಿಯೇ ಇರುವ ಆನಂದಮಯನು.

ಪ್ರಾಣದೇಶಪತಿ ವಿಠಲರು: ಮತ್ತು ಚಿದ್ದೇಹದೊಳಗೆ ೮೦೭೨೫ ರೂಪ.

**ಭಾವಸೂಚನ:** ಮತ್ತೇತಿ ॥ ಮೃತ್ಯುರಿತಿ ॥ ಅನೇನ ಪೂರ್ವಪದ್ಯೇ "ಎರಡು ಸಾವಿರೇತ್ಯತ್ರ । ಎರಡು ಸಾವಿರದೈದು ಇತಿ ಪದಚ್ಛೇದ ಇತಿ ಸೂಚಿತಂ । ಮೃತ್ಯುರ್ದ್ವಿವಿಧಃ ಕಾಲ ಮೃತ್ಯುರಪಮೃತ್ಯುಶ್ಚೇತಿ ತಯೋರಪಿ ಪರಿಹಾರಕ ಇತ್ಯುಕ್ತಂ ಭವತಿ ॥ ೧೫ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಮತ್ತ" ಇತಿ ॥ ಸಹಸ್ರಾಶೀತಿ ಸಪ್ತೋರ್ಧ್ವ ಶತಪಂಚ ಸುವಿಂಶತಿ॥
ಮೃತ್ಯು ಮೃತ್ಯುಃ ನೃಸಿಂಹೋಽಸ್ತಿ ಚಿದ್ದೇಹೇ ಭಾಗ್ಯವಾರಿಧಿಃ ॥ ೧೫ ॥

## ಕನ್ನಡಾರ್ಥ

"ಮತ್ತೆ ಚಿದ್ದೇಹದಲಿ" ಎಂಬ ಪದ್ಯದಲ್ಲಿ ಹೇಳಿರುವ ಚಿದ್ದೇಹದಲ್ಲಿರುವ **೬೦೭೨೫ ರೂಪಗಳ** ಬಗ್ಗೆ "ಸಹಸ್ರಾಶೀತಿ" ಎಂಬ ವಚನವು ಆಧಾರವಾಗಿರುತ್ತದೆ. ಮೂಲ ಪ್ರಮಾಣ ವಚನದ ಅರ್ಥಗಳು ಸುಲಭವೇ ಇರುತ್ತವೆ.

**ಅವತರಣಿಕಾ:** ನರಸಿಂಹ ವಿಜಯದಲ್ಲಿ ಶ್ರೀ ನರಸಿಂಹನಿಗೆ ಜ್ವರಹರನೆಂಬುವ ನಾಮವಿರುವದೆಂಬ ಪ್ರಮಾಣಾನುಸಾರವಾಗಿ ಜ್ವರಹರನಾದ ಶ್ರೀಹರಿಯು ರೂಪ ದುರಿತ ನಿವಾರಕನೆಂದು ಉಪದೇಶಗೈಯ್ಯುತ್ತಾರೆ.

**ಮೂಲ :**

**ಜ್ವರನೊಳಿಪ್ಪತ್ತೇಳು ಹರನೊಳ ।**
**ಗಿರುವನಿಪ್ಪತ್ತೆಂಟು ರೂಪದಿ ।**
**ಎರಡು ಸಾವಿರದೆಂಟು ನೂರಿಪ್ಪತ್ತರೇಳಧಿಕ ॥**
**ಜ್ವರಹರಾಹ್ವಯ ನಾರಸಿಂಹನ ।**
**ಸ್ಮರಣೆ ಮಾತ್ರದಿ ದುರಿತ ರಾಸಿಗ ।**
**ಳಿರದೆ ಪೋಪುವು ತರಣಿ ಬಿಂಬವ ಕಂಡ ಹಿಮದಂತೆ ॥ ೧೬ ॥**

**ಪದ್ಯಾರ್ಥ:** ಜ್ವರ=ಜ್ವರವೆಂಬ ರೋಗದಲ್ಲಿ ಜ=೩ ವ+ಳ=೭, ರ=೨=೨೭ ರೂಪ, ಹರ=(ರುದ್ರ) ಹ=೮, ರ=೨–೨೮ ಹೀಗೆ ವಾಮಾಂಕದಿಂದ ಮಿಳಿತ ಮಾಡಲು (೨೮೨೭) ಎರಡು ಸಾವಿರದೆಂಟುನೂರು ಇಪ್ಪತ್ತೇಳಧಿಕ ರೂಪಗಳು. ಇಲ್ಲಿ ಆಮಯ ಪ್ರಕೃತಿ ಪರಮಾಣುಗಳು. ಜ್ವರ ಹರನಲ್ಲಿ ಜ್ವರ ಪರಿಹಾರಕವಾದ ಪ್ರಕೃತಿ ಅಣುಗಳ ಸಂಖ್ಯಾ ರೂಪದಿಂದ ೨೮೨೭

ಜ್ವರಹರಾಹ್ವಯನಾದ=ಜ್ವರಹರನೆಂದು ನಾಮದಿಂದ ಕರೆಸುವ, ನಾರಸಿಂಹ ದೇವರ ಸ್ಮರಣೆ ಮಾಡುವುದರಿಂದ, ಸಮಸ್ತ ದುರಿತ ರಾಶಿಗಳು, ಪಾಪ ಸಮೂಹಗಳು, ಹಿಮ=ಚಳಿ ಮಂಜುಗಟ್ಟಿ ಬೆಟ್ಟವು, ತರಣಿಬಿಂಬ= ಸೂರ್ಯನ ಕಿರಣಗಳು ಬಿದ್ದಾಕ್ಷಣವೆ ಕರಗಿ ನೀರಾಗುವಂತೆ ನರಸಿಂಹನ ಸ್ಮರಣೆ ಮಾತ್ರದಿಂದ ಸಮಸ್ತ ದುರಿತಗಳೂ ನಾಶವಾಗಿ ಹೋಗುವವು.

**ದ್ರೌಪದೀಶಪತಿ ವಿಠಲರು :** ಜ್ವರನೊಳು-೨೭, ಹರನೊಳಗೆ-೨೮= ೨೮೨೭ ರೂಪ.

**ಭಾವಸೂಚನ :** ಜ್ವರೇತಿ ತ್ಯತ ಸರ್ವಂ ನರಸಿಂಹ ವಿಜಯೇ ಸ್ಪಷ್ಟಂ ।। ೧೬ ।।

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಜ್ವರನೊಳು" ಇತಿ ।। ಅಷ್ಟವಿಂಶತಿ ರುದ್ರೇಽಸ್ತಿ ಜ್ವರೇ ವೈ ಸಪ್ತ ವಿಂಶತಿಃ ।। ಸಪ್ತ ವಿಂಶತ್ಯ ಸಪ್ತತ್ಯಷ್ಟ ಶತ ದ್ವಿಸಹಸ್ರಂ ಹಿ ಮೇಲನೇ ।। ಪೋಪವು=ಹೋಗುವವು. ಅತಏವ "ಭಯ ವಿನಾಶನ" ಇತ್ಯುಕ್ತಂ ಪ್ರಾಕ್ ।। ಓಂ ।।* ಸ್ವ(ಸು)ರೂಪ ಕೃತ್ನುಮೂರ್ತಯೇ ಸುದುಃಘಾಮಿವ ಗೋ ದುಹೇ ।। ಜುಹೂಮಸಿ ದ್ಯವಿದ್ಯವಿ ।। ಉಪನಃ ಸವನಾಗಾಹಿ ಸೋಮಸ್ಯ ।।* ಓಂ ಭೀ ಭಯೇ ಬಿಭೇತಿ ಅಸ್ಮಾತ್ ಇತಿ ಭಯಂ ಶರೀರೇಂ ದ್ರಿಯಾದಿ । ತತ್ಸಂಬಂಧಾದಿ ಭಯಂ ಜೀವಸ್ಯ ಕರೋತಿ ಇತಿ ಭಯಕೃತ್ ।। ಭಯಂ ಶರೀರಾಭಿಮಾನಾದಿಕೃತಂ ನಾಶಯತಿ ಇತಿ ಭಯನಾಶನಃ ।। ಸಚಾಸಾಸಃ ಇತಿ ತಥೋಕ್ತಃ ।। ಸ್ವಯಮೇವ ಭಕ್ತಾನಾಂ ವಿವಿಧ ಸಾಂಸಾರಿಕ ದುಃಖಾನುಭವ ಸಿಧ್ಯರ್ಥಂ ಬ್ರಾಹ್ಮಣಾದಿ ಶರೀರಾದಿತೃತಂ ಉತ್ಪಾದ್ಯ ತತ್ರ ವೈರಾಗ್ಯಾಧಿಕಂ ಉತ್ಪಾದ್ಯ ಜ್ಞಾನದ್ವಾರಾ ನಾಶಯತಿ ಇತಿ ಯಾವತ್ ।। ೧೬ ।।

## ಕನ್ನಡಾರ್ಥ

ರುದ್ರನಲ್ಲಿ–ಹರನಲ್ಲಿ ೨೮ ರೂಪಗಳು. ಜ್ವರದಲ್ಲಿ ೨೭ ರೂಪಗಳು. ಜ್ವರ ಹಾಗೂ ಹರ ಇವರಲ್ಲಿರುವ ರೂಪಗಳ ಸಂಖ್ಯೆಯನ್ನು ಮೇಳನ ಮಾಡಿದರೆ–ಕೂಡಿಸಿದರೆ–ಸೇರಿಸಿದರೆ ೨೮೨೭ ರೂಪಗಳಾಗುತ್ತವೆ. ಪೋಪವು–

ಹೋಗುವವು. ಜ್ವರ ದುರಿತಲಾಶಿಗಳನ್ನು ಕಳೆಯುವದರಿಂದಲೇ "ಭಯ ವಿನಾಶನ" ಎಂದು ಹೇಳಿರುತ್ತಾರೆ.

ಭಯಕೃತ್ ಭಯನಾಶನ ಎಂಬ ಸಹಸ್ರನಾಮದ ಅರ್ಥವನ್ನು ಬೃಹತೀ ಮಂತ್ರವು ವಿವರಿಸುತ್ತದೆ. ಶರೀರ, ಇಂದ್ರಿಯ ಮುಂತಾದವುಗಳಿಂದ ಭಯವಾಗುತ್ತದೆ. ಶರೀರೇಂದ್ರಿಯಗಳ ಸಂಬಂಧವನ್ನು ಮಾಡಿಸಿ, ಅದರಿಂದ ಜೀವರಿಗೆ ಭಯವನ್ನುಂಟುಮಾಡುವದರಿಂದ "ಭಯಕೃತ್" ಎನ್ನುತ್ತಾರೆ. ಶರೀರಾಭಿಮಾನ ಮುಂತಾದವುಗಳಿಂದಾಗುವ ಭಯಗಳನ್ನು ನಾಶಪಡಿಸುವದರಿಂದ "ಭಯನಾಶನ"ವೆನ್ನುತ್ತಾರೆ. ಅಂದರೆ ತಾನೇ ತನ್ನ ಭಕ್ತರಿಗೆ ವಿವಿಧ ಸಾಂಸಾರಿಕ ದುಃಖಗಳನ್ನು ಅನುಭವ ಮಾಡಿಸಲು ಬ್ರಾಹ್ಮಣ ಮುಂತಾದ ವರ್ಣಗಳ ಶರೀರಗಳನ್ನು ಉಂಟುಮಾಡಿ, ಭಯ ಹುಟ್ಟಿಸಿ, ಆ ಶರೀರ ಮುಂತಾದವುಗಳಲ್ಲಿ ವೈರಾಗ್ಯ ಮುಂತಾದವುಗಳನ್ನು ಹುಟ್ಟಿಸಿ-ಜ್ಞಾನದ ಮುಖಾಂತರವಾಗಿ ದುಃಖ ಮೂಲಗಳನ್ನು ನಾಶ ಮಾಡುವನೆಂಬುದು ತಾತ್ಪರ್ಯಾರ್ಥ ॥ ೧೬ ॥

**ಅವತರಣಿಕಾ :** ಇಂಥ ನರಸಿಂಹ ಮಹಾ ಮಂತ್ರವನ್ನು ಸದಾಚಾರ ಸಂಪನ್ನನಾಗಿ, ಯಮನಿಯಮಾದಿ ಆಸನಗಳಿಂದ ಯುಕ್ತನಾಗಿ ಮಾಸ ಪರಿಯಂತರ ಬಿಡದೆ, ಜಪಿಸುವರಿಗೆ ಆಗುವ ಫಲವನ್ನು ಮತ್ತು ಭಗವದನುಗ್ರಹವನ್ನೂ ಹೇಳುತ್ತಾರೆ.

**ಮೂಲ :**

**ಮಾಸ ಪರಿಯಂತರವು ಬಿಡದೆ ನೃ ।**
**ಕೇಸರಿಯ ಶುಭನಾಮ ಮಂತ್ರ ಜಿ ।**
**ತಾಸನದ ಲೇಕಾಗ್ರ ಚಿತ್ತದಿ ನಿಷ್ಕಪಟದಿಂದ ॥**
**ಬೇಸರದೆ ಜಪಿಸಲು ವೃಜಿನಗಳ ।**
**ನಾಶಗೈಸಿ ಮನೋರಥಗಳ ಪ ।**
**ರೇಶ ಪೂರ್ತಿಯ ಮಾಡಿಕೊಡುವನು ಕಡೆಗೆ ಪರಗತಿಯ ॥೧೭॥**

**ಪದ್ಯಾರ್ಥ :** ನೃಕೇಸರಿಯ ಶುಭನಾಮ ಮಂತ್ರ, ನೃ=ನರ, ಕೇಸರಿ=ಸಿಂಹ, ನರಸಿಂಹ ರೂಪೀ ಹರಿಯ ಮಂಗಳಕರವಾದ ನಾಮಮಂತ್ರ "ಜಯ ಜಯ ನರಸಿಂಹಾಯ ಸರ್ವಜ್ಞಾಯ ಮಹಾ ತೇಜೋಬಲ ವೀರ್ಯಾಯ॥"

ಎಂದು ೨೪ ಮಂತ್ರಾಕ್ಷರ ಗಾಯತ್ರೀ ಛಂದಸ್ಸು ಮತ್ತು "ಕ್ರೂರಂ ವೀರಂ ಬೃಹದ್ವಿಷ್ಣುಂ ದೀಪ್ಯಂತಂ ವಿಶ್ವತೋಮುಖಂ। ಪುಂ ನೃಗೇಂದ್ರಂ ಭಯಂ ಕರಂ ಶುಭಂ ಮೃತ್ಯೋಶ್ಚ ಮಾರಕಂ। ೩೨ ಅಕ್ಷರ ಮಂತ್ರ (ಆ.ಛಂ.)ಈ ಮಂತ್ರವನ್ನು (ಗುರು ಉಪದೇಶದಿಂದ) ಜಿತಾಸನದಲೇಕಾಗ್ರಚಿತ್ತದಿ=ಚೈಲಾ ಜನ ಕುಶೋತ್ತರಂ"—ಎಂಬ ಗೀತಾ ವಾಕ್ಯದಂತೆ ಇಂಥ ಆಸನ ಜ್ಞಾನ ಪ್ರದವಾದರೂ, ಜಿತಾಸನವಾಗಬೇಕು. "ಸಮಂಕಾಯ ಶಿರೋಗ್ರೀವಂ" ಎಂಬ ಗೀತಾವಾಕ್ಯದಂತೆ ದೇಹವನ್ನು ಚಲಿಸದೇ ನಾಸಾಗ್ರದಲ್ಲಿ ದೃಷ್ಟಿ ಇಟ್ಟು, ಏಕಾಗ್ರ ಚಿತ್ತದಿಂದ ಕುಳಿತು, ನಿಷ್ಕಪಟದಿಂದ=ಕಾಪಟ್ಯ— ಕುಟಿಲರಹಿತನಾಗಿ ಅಂದರೆ ಇತರ ವಿಷಯಾದಿಗಳಲ್ಲಿ ಮನಸ್ಸು ಇಡದೇ- ಕೇವಲ ಹರಿಯ ಪಾದದಲ್ಲೇ ಮನಸ್ಸು ಇಟ್ಟು, ಶುದ್ಧವಾದ ಅಂತಃ ಕರಣ ತಜ್ಜನ್ಯ ಭಕ್ತಿಯಿಂದ ಬೇಸರಗೊಳ್ಳದೇ-ಮಾಸ ಪರಿಯಂತರವು= ಒಂದು ತಿಂಗಳ ಪರಿಯಂತರವೂ, ಜಪಿಸಲು=ಜಪಮಾಡಲು ಅಂದರೆ, ೧ ಮನಸ್ಸಿನಲ್ಲಿ ಜಪ, ೨ ಉಪಾಂಶು ಜಪ, ೩ ಉಚ್ಚಾರ ಜಪ ಇದರಲ್ಲಿ- ಮನಸ್ಸಿನಲ್ಲಿ-ಮಂತ್ರವನ್ನು ಮಂತ್ರವರ್ಣ ಪ್ರತಿ ಭಗವನ್ಮೂರ್ತಿಗಳನ್ನು, ಮಂತ್ರಾರ್ಥ ಸ್ಮರಣಪೂರ್ವಕ, ಗುರುಗಳಿಂದ ಉಪದೇಶಹೊಂದಿ ಜಪಮಾಡ ಬೇಕು. (ಶ್ರೀ ವಿಜಯರಾಜರು "ಮಂತ್ರ ಮಾಡೆಲೊ ಮನುಜಾ" ಎಂಬ ಸುಳಾದಿ ಎರಡರಲ್ಲಿ ಹೇಳಿದ್ದಾರೆ. ಇದರ ಅರ್ಥ ಚೆನ್ನಾಗಿ ತಿಳಿದಿರಬೇಕು.) ಇದರಂತೆ ಜಪಮಾಡಿದರೆ, ವೃಜಿನಗಳ ಸಮಸ್ತ ಪಾಪಗಳನ್ನೂ ನಾಶಗೈಸಿ= ಇಲ್ಲದ ಹಾಗೆ ಮಾಡಿ ದುರಿತಗಳ ಖಂಡಿಸಿ, ಮನೋರಥಗಳ=ಹರಿಪ್ರೀತಿಕರ ವಾದ ಸಕಲ ಮನೋರಥಗಳನ್ನೂ, ಪರೇಶ=ಸರ್ವೋತ್ತಮನಾದ ಹರಿಯು ಪೂರೈಸುವನಲ್ಲದೇ, ಕಡೆಗೆ=ಲಿಂಗಭಂಗಾನಂತರ, ಪರಗತಿಯ=ಸ್ವಸ್ವರೂ ಪಾನಂದಾವಿರ್ಭಾವ ಮೋಕ್ಷ ಕೊಡುವನು. ಈ ಎರಡು ಮಂತ್ರಗಳನ್ನು ಗುರೂಪದಿಷ್ಟನಾಗಿ ಗುರುಗಳು ಹೇಳಿದಂತೆ ಯಾವದಾದರೂ ಒಂದು ಮಂತ್ರ ಜಪಿಸುವದು. (ತಂತ್ರಸಾರ ಛಲಾರಿ ವ್ಯಾಖ್ಯಾನ.)

ದ್ರೌಪದೀಶಪತಿ ವಿಠಲರು: ಮಾಸ ಪರಿಯಂತರ.

ಭಾವಸೂಚನ: ಮಾಸೇತಿ। ಮನೋರಥೇತಿ। ಚತುರ್ವಿಂಶಾಕ್ಷರೋ ಮಂತ್ರೋನಿಖಿಳೇಷ್ಟ ಪ್ರದಾಯಕ ಇತಿ ವಚನಾತ್ । ೧೭ ।

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಮಾಸ" ಇತಿ ॥ ಏಕಾಗ್ರೇತ್ಯುಪಲಕ್ಷಣಮ್ ॥ ಶೌಚಮಾಚಮನಂ ಸ್ನಾ(ಸ್ಥಾ)ನಂ ಮೌನಮಾತ್ಮ ವಿನಿಗ್ರಹಃ ॥ ಅವ್ಯಗ್ರತ್ವಂ ಅನಿರ್ವೇದಃ ಉಪ ಸಂಪತ್ತಿ ಹೇತವೇ ॥ ಅನ್ಯೇ ಅನ್ಯತ್ರ ಪ್ರೋಕ್ತಾಧಿಕಾರಿ ಗುಣಾಃ ಗ್ರಾಹ್ಯಾಃ। ಸ್ವಸ್ವವರ್ಣಾಶ್ರಮಾಚಾರೈಃ ದುರಾಚಾರ ವಿವರ್ಜಿತೈಃ। ಏತೇ ಮಂತ್ರಾಃ ಉಪಾಸ್ಯಾಃ ಸ್ಯುಃ ಅನ್ಯಥಾ ನ ಫಲಪ್ರದಾಃ। ನರಸಿಂಹ ಹಯಗ್ರೀವ ಹಂಸ ವಾರಾಹ ಭಾರ್ಗವಾಃ। ಕಪಿಲ ವ್ಯಾಸದತ್ತಾದ್ಯಾಃ ದ್ವಿಜಾನಾ ಮೇವ ಕೀರ್ತಿತಾಃ। ಪರದಾರ ಪರದ್ರವ್ಯ ದುಷ್ಪ್ರತಿಗ್ರಹ ವರ್ಜಿತೈಃ। ಏತೇ ಮಂತ್ರಾಃ ಉಪಾಸ್ಯಾಃ ಸ್ಯುಃ ಅನ್ಯಥಾ ನ ಫಲಪ್ರದಾಃ। ಹಿಂಸಾಯಾಂ ವಿಮುಖಾ ಯೇ ತು ಜಿತಶ್ವಾಸಾಃ ಜಿತೇಂದ್ರಿಯಾಃ। ಮಂತ್ರಾಃ ಉಪಾಸ್ಯಾಃ ಸ್ಯುಃ.......। ವಿಷ್ಣುಭಕ್ತಿಃ ದೃಢಾ ಯೇಷಾಂದಾನೇ ಚಿತ್ತಂ ಸದೈವತು। ಏತೇ ಮಂತ್ರಾಃ ಉಪಾಸ್ಯಾಃ ಸ್ಯುಃ। ಈಶ್ವರಾರ್ಪಿತ ಸರ್ವಸ್ವಾಃ ನ್ಯಾಯಾ ಗತ ಧನಾರ್ಚ್ಛಯೇ। ಏತೇ ಮಂತ್ರಾನಿ ಉಪಾಸ್ಯಾಃ........। ಸ್ವಸ್ಥಚಿತ್ತೈಃ ಧ್ಯಾನಪರೈಃ- ಅಕ್ರೋಧೈಃ ಅತಿಥಿ ಪ್ರಿಯೈಃ। ಏತೇ ......। ತತ್ರಾಪಿ ಚ ಹಯಗ್ರೀವ ನರಸಿಂಹ ವರಾಹತಾಃ। ಭಾರ್ಗವಾಶ್ಚ ದುರಾಚಾರೈಃ ನೈವ ಸೇವ್ಯಾಃ ಕಥಂಚನ। ಏತನ್ಮಂತ್ರೋಪಾಸಕಾಃ ಯೇ ಯದಿ ಸ್ಯುಃ ಪರದಾ ರಿಣಃ। ಮಂತ್ರಕ್ಷೋಭೋ ಭವೇತ್ತೇಷಾಂ ತತ್ಕಾಲೇ ಸ್ಯುಃ ಪಿಶಾಚಕಾಃ। ರಾಮಗೋಪಾಲ ಕೃಷ್ಣಾದ್ಯಾಃ ಹರಿದಾಮೋದರಾಚ್ಯುತಾಃ॥ ಮತ್ಸ್ಯ ವಾಮನಕೂರ್ಮಾದ್ಯಾಃ ಸರ್ವೇ ಸ್ಯುಃ ಸೌಮ್ಯರೂಪಿಣಃ। ನ ಕುಪ್ಯಂತಿ ದುರಾಚಾರೈಃ ಸದಾಚಾರೈಃ ಫಲಾಧಿಕಮ್। ಇತಿ ವಿಷ್ಣುರಹಸ್ಯೇ ॥ ೧೭ ॥

## ಕನ್ನಡಾರ್ಥ

"ಏಕಾಗ್ರಚಿತ್ತದಿಂದ" ಎಂದು ಹೇಳಿರುವದರಿಂದ ಅದಕ್ಕೆ ಉಪಯುಕ್ತ ವಾಗಿರುವ ಮತ್ತು ಅದು ಫಲಕಾರಿಯಾಗಲು ಅವಶ್ಯಕವಾಗಿರುವ ಇನ್ನೂ ಕೆಲವು ನಿಯಮಾನುಷ್ಠಾನಗಳನ್ನು ಈ ಮಂತ್ರೋಪಾಸನ ಸಂದರ್ಭದಲ್ಲಿ ತಂದುಕೊಳ್ಳಬೇಕು. ಅವು ಯಾವವೆಂದರೆ—

ಶೌಚ–ಶುಚಿತ್ವ, ಸ್ನಾನ-ಸ್ಥಿರಾಸನ, ಮೌನ–ದೇಹೇಂದ್ರಿಯ ಮನೋ ಬುದ್ಧಿಗಳ ಸಂಯಮ–ನಿಗ್ರಹ, ಚಿತ್ತಪ್ರಸನ್ನತೆ, ಸಾಧನಾನುಷ್ಠಾನದಲ್ಲಿ–

ನಿರತಿಶಯ ಯತ್ನಮಾಡುವದು, ಇನ್ನೂ ಇವೇ ಮುಂತಾದವುಗಳು–ಅಧಿಕಾರಕ್ಕೆ ಉಚಿತವಾಗುವ ಎಲ್ಲ ಗುಣಗಳನ್ನೂ ಗ್ರಹಿಸತಕ್ಕದ್ದು. ತಮ್ಮ ತಮ್ಮ ವರ್ಣಾಶ್ರಮಗಳಿಗೆ ಸಲ್ಲುವ ಧರ್ಮಾಚರಣೆಗಳನ್ನು ಮಾಡುತ್ತ ಇದ್ದು ದುರಾಚರಣವನ್ನು ಬಿಟ್ಟಿರುವವರಿಗೆ ಈ ನರಸಿಂಹ ಮುಂತಾದ ಮಂತ್ರೋಪಾಸನೆಯಲ್ಲಿ ನಿಜವಾದ ಅಧಿಕಾರ; ಇಂಥವರಿಗೇ ಈ ಮಂತ್ರಗಳು ಜಪಿಸಿದರೆ ಫಲವನ್ನೀಯುತ್ತವೆ. ಅಧಿಕಾರವಿಲ್ಲದವರು ಈ ಮಂತ್ರಗಳನ್ನು ಜಪಿಸಿದರೆ ಫಲವಾಗಲಾರದು. ನರಸಿಂಹ-ಹಯಗ್ರೀವ-ಹಂಸ-ವರಾಹ-ಭಾರ್ಗವ-ಕಪಿಲ-ವ್ಯಾಸ-ದತ್ತ-ಮುಂತಾದ ಮಂತ್ರಗಳನ್ನು ದ್ವಿಜರೇ ಉಪಾಸಿಸತಕ್ಕದ್ದೆಂದು ಉಕ್ತ (ವಿಹಿತ) ವಾಗಿರುತ್ತದೆ. ಪರ ಸ್ತ್ರೀ-ಪರ ದ್ರವ್ಯ-ದುಷ್ಟರಿಂದ ದಾನ ಸ್ವೀಕಾರ (ದುಷ್ಪ್ರತಿಗ್ರಹ) ಮುಂತಾದವುಗಳನ್ನು ಬಿಟ್ಟು ಹಿಂಸಾಚಾರ ವಿವರ್ಜಿತರೂ, ಶ್ವಾಸೇಂದ್ರಿಯಗಳನ್ನು ಜಯಿಸಿದವರೂ, ದೃಢವಾದ ವಿಷ್ಣುಭಕ್ತಿಯುಳ್ಳವರೂ, ದಾನದಲ್ಲಿ ಸದಾ ಮನಸ್ಸುಳ್ಳವರೂ, ಭಗವಂತನಲ್ಲಿ ಸರ್ವಸ್ವವನ್ನೂ ಒಪ್ಪಿಸುವವರೂ, ನ್ಯಾಯದಿಂದಲೇ ದ್ರವ್ಯವನ್ನು ಗಳಿಸುವವರೂ, ಸ್ವಸ್ಥಚಿತ್ತರೂ, ಧ್ಯಾನಪರರೂ, ಕ್ರೋಧವನ್ನು ಪರಿತ್ಯಜಿಸಿದವರೂ, ಅತಿಥಿಪ್ರಿಯರೂ ಆದವರಿಗೆ ಈ ಮಂತ್ರಗಳು ಒಳ್ಳೇ ಫಲದಾಯಕಗಳಾಗುವದರಿಂದ ಈ ಅಧಿಕಾರ ಗುಣಗಳಿದ್ದವರೇ ಇವುಗಳನ್ನು ಜಪಿಸತಕ್ಕದ್ದು. ಮಿಕ್ಕವರು ಉಪಾಸಿಸಲು ಅರ್ಹರಲ್ಲ. ಅದರಲ್ಲೂ ಹಯಗ್ರೀವ-ನರಸಿಂಹ-ವರಾಹ-ಭಾರ್ಗವ (ಪರಶುರಾಮ) ಈ ಮುಂತಾದ ಮಂತ್ರಗಳನ್ನು ಸದಾಚಾರರಹಿತರಾದವರು ಜಪಿಸಕೂಡದು. ಈ ಮಂತ್ರಗಳನ್ನು ಜಪಿಸುವವರು ಪರದಾರಾಗಮನ ಮುಂತಾದ ಅನಾಚರಣೆಯಲ್ಲಿ ಇದ್ದರೆ ಮಂತ್ರದೇವತೆಯ ಕ್ಷೋಭವಾಗಿ ಅದರಿಂದ ಮಹಾ ಅನರ್ಥವಾಗುತ್ತದೆ. ಅವರಿಗೆ ಆಗಲೇ ಪಿಶಾಚದೇಹವು ಬರುತ್ತದೆ. ರಾಮ, ಗೋಪಾಲಕೃಷ್ಣ, ಹರಿ, ದಾಮೋದರ, ಅಚ್ಯುತ, ಮತ್ಸ್ಯ, ಕೂರ್ಮ, ವಾಮನ ಮುಂತಾದ ಸೌಮ್ಯ ರೂಪಗಳು ಆಚಾರಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸವಾದರೂ ಕುಪಿತರಾಗುವದಿಲ್ಲವಾದುದರಿಂದ ಈ ಸೌಮ್ಯ ಮಂತ್ರಗಳನ್ನು ಅನುಷ್ಠಿಸಬೇಕು. ಸದಾಚಾರ ವಿಶೇಷ ಶ್ರದ್ಧಾಬದ್ಧನಾಗಿದ್ದರೆ ಅದರಿಂದ ಮತ್ತಷ್ಟು ಅಧಿಕವಾದ ಫಲವು ದೊರೆಯುತ್ತದೆ" ಎಂದು ವಿಷ್ಣುರಹಸ್ಯದಲ್ಲಿ ಹೇಳಲಾಗಿರುತ್ತದೆ ॥ ೧೭ ॥

**ಅವತರಣಿಕಾ :** ಮನುಜನ ಶತಾಯುಮಾನ ಪರಿಯಂತರ ಬ್ರಹ್ಮ-ವಾಯು-ವಾಣಿ ಭಾರತಿ ಈ ನಾಲ್ವರು ಅಚ್ಛಿನ್ನ ಭಕ್ತರಾದವರಲ್ಲಿ ಅನಿರುದ್ಧಾದಿ ನಾಲ್ಕು ರೂಪ ದಿಂದ ಎಷ್ಟೆಷ್ಟು ವರ್ಷ ಪರಿಯಂತ ಕಾರ್ಯ ಮಾಡುವರೆಂಬ ವಿವರ.

ಮೂಲ :

**ಚತುರ ಮೂರ್ತ್ಯಾತ್ಮಕ ಹರಿಯು ತ್ರಿಂ ।**
**ಶದಿ ಸುರೂಪದಿ ಬ್ರಹ್ಮನೊಳ ಮಾ ।**
**ರುತನೊಳಿಪ್ಪತ್ತೇಳು ರೂಪದೊಳಿಪ್ಪ ಪ್ರದ್ಯುಮ್ನ ॥**
**ಸುತರೊಳಿಪ್ಪತ್ತೈದು ಹದಿನೆಂ ।**
**ಟೆತುಳ ರೂಪಗಳರಿತು ವತ್ಸರ ।**
**ಶತಗಳಲಿ ಪೂಜಿಸುತಲಿರು ಚತುರಾತ್ಮಕನ ಪದವ ॥ ೧೮ ॥**

**ಪದ್ಯಾರ್ಥ :** ಚತುರ್ಮೂರ್ತ್ಯಾತ್ಮಕ = ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧ = ಈ ನಾಲ್ಕು ರೂಪದಿಂದ, ತ್ರಿಂಶದಿ ಸುರೂಪದಿ ಬ್ರಹ್ಮನೊಳು = ಮೂವತ್ತು ರೂಪಗಳಿಂದ ವಾಸುದೇವ - ಬ್ರಹ್ಮದೇವರಲ್ಲಿ ೩೦ ವರ್ಷ. ಮಾರುತನೊಳು ಇಪ್ಪತ್ತೇಳು ರೂಪದಿಂದ ೨೭ ಸಂವತ್ಸರ. ಸಂಕರ್ಷಣದೇವನ ಕಾರ್ಯ-ಸುತರೊಳಿಪ್ಪತ್ತೈದು ಹದಿನೆಂಟತುಳ ರೂಪ ಗಳರಿತು ಆದಿ ಸೃಷ್ಟಿಯಲ್ಲಿ ಪ್ರದ್ಯುಮ್ನ ದೇವನಿಂದ ಕೃತಿಯಲ್ಲಿ ಪುಟ್ಟಿದ ಸರಸ್ವತೀ ಭಾರತೀ ದೇವಿಯರಲ್ಲಿ. ಸರಸ್ವತೀದೇವಿಯಲ್ಲಿ -೨೫ ರೂಪದಿಂದ, ಪ್ರದ್ಯುಮ್ನ ದೇವರಕಾರ್ಯ. ಭಾರತೀದೇವಿಯರಲ್ಲಿ=೧೮ವರ್ಷ ಅನಿರುದ್ಧ ದೇವನು. ೧೮ ರೂಪಗಳ ಕಾರ್ಯ. ರೂಪಗಳನ್ನು ತಿಳಿದು, ವತ್ಸರ ಶತಗ ಳಲಿ=ನೂರು ವರ್ಷಗಳಲ್ಲಿ, ಚತುರಾತ್ಮಕನ ಪದವನ್ನು ಸ್ಮರಿಸುತ್ತಲಿರಬೇಕು.

ಇದರ ಸಾರಾಂಶವೇನೆಂದರೆ, ಮೊದಲನೆ ೧೮ ವರ್ಷಗಳಲ್ಲಿ ಭಾರತೀ ದೇವಿಯಲ್ಲಿ ಅನಿರುದ್ಧದೇವನ ಕಾರ್ಯ. ಮುಂದೆ ೧೯ ವರ್ಷದಿಂದ ೨೫ ವರ್ಷಗಳವರೆಗೆ ಸರಸ್ವತೀ ದೇವಿಯಲ್ಲಿ ಪ್ರದ್ಯುಮ್ನದೇವನ ಕಾರ್ಯ. ಹೀಗೆ ೧೮+೨೫=೪೩ ವರ್ಷಗಳಾದವು. ಅಲ್ಲಿಂದ ೨೭ ವರ್ಷ ವಾಯುದೇವರಲ್ಲಿ ಸಂಕರ್ಷಣನ ಕಾರ್ಯ. ೩೦ ವರ್ಷ ಬ್ರಹ್ಮದೇವರಲ್ಲಿ ವಾಸುದೇವನ ಕಾರ್ಯ ಹೀಗೆಂದು ತಿಳಿದು ಪೂಜಿಸಬೇಕು.

ದ್ರೌಪದೀಶಪತಿ ವಿಠಲರು : ೩೦ ಬ್ರಹ್ಮದೇವರಲ್ಲಿ
೨೭ ವಾಯುದೇವರಲ್ಲಿ
೨೫ ಸರಸ್ವತೀದೇವಿಯರಲ್ಲಿ
೧೮ ಭಾರತೀದೇವಿಯರಲ್ಲಿ
೧೦೦

**ಭಾವಸೂಚನ : ಚತುರೇತಿ ॥**

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಚತುರ" ಇತಿ ॥ ತ್ರಿಂಶದಾತ್ಮಾऽ ವಿರುದ್ಧೋऽ ಜೇ ಸಪ್ತವಿಂಶತಿ ಮಾರುತೇ ॥ ಕೃತೀಶ ಪುತ್ರ್ಯಾಂ ಬ್ರಹ್ಮಾಣ್ಯಾಂ ಭಾರತ್ಯಾಂ ಪಂಚವಿಂಶತಿಃ॥ ಅತುಲೋಽಷ್ಟಾ ದಶಾತ್ಮೇತಿ ಚ ॥ ಓಮ್ ॥ * ಗಧಿ (ಂಧಿ) ಪ್ರಿಯಃ ಸತ್ರಾ ಜಿದಗೋಽಹ್ಯ ಗಿರಿರ್ನವಿಶ್ವತಃ ಪೃಥುಃ ಪತಿರ್ದಿವಃ॥ ಅಭೀಹಿ ಸತ್ಯಸೋಮಪಾ ಉಭೇ ಬಭೂವ ರೋದಸೀ ॥ ಓಮ್ ॥ * ಸಮುಚ್ಛ್ರಾಃ ಪರ್ವತಾಃ ॥ ಚಿತ್ತಯಃ ದತ್ವದುಚ್ಛ್ರಯವತ್ವಾತ್ ಚತುರ್ಮೂರ್ತಿಃ ॥ ಓಮ್ ॥ * ಸೋಮಂ ವೀರಾಯ ಶಕ್ರಾಯಭರಾ ಪಿಬನ್ನರ್ಯಾಯ ಯೋ ವದಿಷ್ಠೋ ಅನ್ಯ (ವ್ಯ) ಧಿಷ್ವಶ್ವಾವಂತಂ ಜರಿತೃಭ್ಯಃ ವಾಜಂಸ್ತೋತೃಭ್ಯೋ ಗೋಮಂ ತಮ್ ॥ *ಓಮ್ ॥ ನ ವಿದ್ಯತೆ ತುಲಃ ಸದೃಶಃ (ತುಲಾ ಸಾದೃಶ್ಯಂ) ಯಸ್ಯ ಸಃ ಇತಿ ಅತುಲಃ ॥ ಓಮ್ ॥ * ಇಂದ್ರವಾಹಾ ವಚೋಽಯುಜಾ ತ್ವಂ ನ ಇಂದ್ರಾ ಭರಂ ಓಜೋ ನೃಮ್ಣಂ ಶತಕ್ರತೋ ವಿಚರ್ಷಣೇ (ಣಂ) ॥ ಆ ವೀರಂ ಪ್ರತನಾಷಹಮ್ ॥ *ಓಮ್ ॥ ಉತ್ತಮತ್ವ ಸಹನೋಽಜಃ ಸುಖಾನಿ ಚತ್ವಾರಿ ಯಾಚನೀಯಾನಿ ತನೋತಿ ಇತಿ ಚತುರಾತ್ಮಾ ॥ ೧೮ ॥

## ಕನ್ನಡಾರ್ಥ

ಬ್ರಹ್ಮದೇವರಲ್ಲಿ ಮೂವತ್ತು ರೂಪಗಳಿಂದಲೂ, ವಾಯುದೇವನಲ್ಲಿ ಇಪ್ಪತ್ತೇಳು ರೂಪಗಳಿಂದಲೂ, ಕೃತಿ ಪತಿ ಪ್ರದ್ಯುಮ್ನ ರೂಪಿಯ ಮಕ್ಕಳಾದ ಸರಸ್ವತಿ ಭಾರತೀ ದೇವಿಯರುಗಳಲ್ಲಿ ಕ್ರಮವಾಗಿ (೨೫) ಇಪ್ಪತ್ತೈದು ಮತ್ತು (೧೮) ರೂಪಗಳಿಂದಲೂ ಇರುತ್ತಾನೆ" ಎಂದು ಪ್ರಮಾಣಾರ್ಥ. **ಚತುರ್ಮೂರ್ತಿ**=ಬೃಹತೀ ಸಹಸ್ರವು ಈ ನಾಮಾರ್ಥವನ್ನು ವಿವರಿಸಿರು ತ್ತದೆ. ಅದಕ್ಕೆ ಅನುಸರಿಸಿದ ಅರ್ಥ–"ಪರ್ವತಗಳಂತೆ ಉನ್ನಾಹ-ಉಚ್ಛ್ರೇಯ-

ಉನ್ನತಿಯುಳ್ಳವನು" ಎಂದು. "ಅತುಲ"=ಎರಡನೆಯ ವಸ್ತುಗಳಿಂದ ಹೋಲಿಕೆ (ಸಾದೃಶ್ಯ)ಗಳಿಲ್ಲದವನು-ಅತುಲ. ಚತುರಾತ್ಮಾ=ಉತ್ತಮತ್ವ ಸಹನಶಕ್ತಿ (ಬಲ)-ಓಜಸ್ಸು, ಸುಖ. ಹೀಗೆ ಬೇಡಿ ಬಯಸುವ ಈ ಚತು ರ್ವಸ್ತುಗಳನ್ನು (ನಾಲ್ಕನ್ನು) ಕೊಡುವವನು" ಎಂದು ಬೃಹತೀ ಮಂತ್ರಗಳ ಸಾರಾರ್ಥ. ॥ ೧೮ ॥

**ಅವತರಣಿಕಾ :** ನೂರು ವರ್ಷ ಮಾನಕ್ಕೆ ೩೬೦೦೦ ದಿವಸಗಳಾಗುತ್ತವೆ. ಈ ೩೬ ಸಾವಿರ ದಿವಸ ಕಾಲನಾಮಕ ಹರಿಯು, ದೇಹಗತವಾದ ೩೬ ಸಾವಿರ ಬಲಭಾಗ ನಾಡಿ, ೩೬ ಸಾವಿರ ಎಡಭಾಗ ನಾಡಿಯಲ್ಲಿ ಇರುವನೆಂದು ತಿಳಿದು ಕಾಲನಾಮಕ ಹರಿಯ ರೂಪಗಳನ್ನೇ ಅಂತರಂಗ ನಾಡಿಗಳಲ್ಲಿ ಚಿಂತಿಸಲು ಉಪದೇಶಗೈಯುತ್ತಾರೆ.

**ಮೂಲ :**

**ನೂರು ವರುಷಕೆ ದಿವಸ ಮೂವ ।**
**ತ್ತಾರು ಸಾವಿರವಿಹವು ನಾಡಿ ಶ ।**
**ರೀರದೊಳಗಿನಿತಿಹವು ಸ್ತ್ರೀಪುಂ ಭೇದದಲಿ ಹರಿಯು ॥**
**ಈರಧಿಕ ಎಪ್ಪತ್ತು ಸಾವಿರ ।**
**ಮೂರುತಿಗಳನೆ ನೆನೆದು ಸರ್ವಾ ।**
**ಧಾರಕನ ಸರ್ವತ್ರ ಪೂಜಿಸು ಪೂರ್ಣನೆಂದರಿದು ॥ ೧೯ ॥**

**ಪದ್ಯಾರ್ಥ :** ನೂರು ವರುಷಕೆ=ಮನುಷ್ಯನ ಆಯುಃ ಪರಿಮಿತಿ ನೂರು ವರ್ಷವೆಂದು ನಿಯಮ. (ಇದು ಕಲಿಯುಗಕ್ಕೆ ಮಾತ್ರ) ಈ ನೂರು ವರುಷಕ್ಕೆ, ವರ್ಷಕ್ಕೆ ೩೬೦ ದಿವಸಗಳಂತೆ ೩೬೦×೧೦೦ ರಿಂದ ಗುಣಿಸಿದರೆ= ೩೬೦೦೦ ಸಾವಿರ ಆಗುವವು. ಈ ಕಾಲನಾಮಕ ಬಹಿರ್‌ರೂಪಗಳೇ-ದೇಹದ ಬಲಭಾಗದಲ್ಲಿ ೩೬ ಸಾವಿರದ ಮಹತ್ತತ್ವಾತ್ಮಕ ನಾಡಿಗಳಲ್ಲಿ ಪುರುಷ ರೂಪ ಗಳು, ಹಗಲಿಗೆ ನಿಯಾಮಕ ರೂಪಗಳು. ಎಡಭಾಗದಲ್ಲಿರುವ ಅಹಂಕಾರ ತತ್ವಾತ್ಮಕ ನಾಡಿಗಳು ೩೬ ಸಾವಿರದಲ್ಲಿ ಶ್ರೀ ಹರಿಯ ಸ್ತ್ರೀ ರೂಪಗಳು ರಾತ್ರಿ ನಿಯಾಮಕ ರೂಪಗಳು. ಇಂತು ಒಟ್ಟಿಗೆ ೩೬+೩೬=೭೨ ಸಾವಿರ ನಾಡಿ ಗಳಲ್ಲಿ ಪುರುಷ ಸ್ತ್ರೀ ಭೇದದಿಂದ ೭೨೦೦೦ ರೂಪಗಳಿಂದ ಶ್ರೀ ಹರಿಯು ಇದ್ದಾನೆಂದರಿದು ಮೂರುತಿಗಳ ನೆನೆನೆನೆದು-ಈ ಮೂರುತಿಗಳನ್ನು ಸ್ಮರಿ ಸುತ್ತ, ಸರ್ವಾಧಾರಕನ=ಸರ್ವ ಜಡಚೇತನರಿಗೆ ಆಧಾರನಾಗಿರುವ ಬಿಂಬ

ರೂಪಿ ಹರಿಯನ್ನು ಸರ್ವತ್ರ ಎಲ್ಲ ಠಾವಿನಲ್ಲಿ ಪೂಜಿಸಬೇಕು. ಮೂಲರೂಪವು ಹೇಗೆ ಪೂರ್ಣವೋ ಇದರಂತೆ ಈ ಎಲ್ಲ ರೂಪಗಳು ಪೂರ್ಣವೆಂದು ಅರಿಯ ಬೇಕು. ಇದೇ ಅಭಿಪ್ರಾಯ. ಈ ರೂಪಗಳು ಹೇಗಿವೆ ಎಂಬುದನ್ನು ಎಲ್ಲಿಯೂ ಶ್ರೀಮದಾಚಾರ್ಯರು ಹೇಳಿಲ್ಲ. ತಂತ್ರಸಾರದಲ್ಲಿ "ರಹಸ್ಯತ್ವಾತ್ ನಕಥ್ಯತೆ" ಎಂದು ಅಪ್ಪಣೆ ಕೊಡಿಸಿದ್ದಾರೆ. ಮನುಜರ ಅಧಿಕಾರವಲ್ಲ. ಇಷ್ಟು ರೂಪಗಳೆಂದು ತಿಳಿದರೆ ಸಾಕು ಯೋಗ್ಯತಾ ಫಲವನ್ನು ಕೊಟ್ಟು ಸಂದರ್ಶನವೀವನು.

**ದ್ರೌಪದೀಶಪತಿ ವಿಠಲರು:** ನೂರು ವರುಷಕೆ ದಿವಸ ಮೂವತ್ತಾರು ಸಾವಿರ ॥ ಸ್ತ್ರೀ ೩೬೦೦೦, ಪುರುಷ ೩೬೦೦೦ ರೂಪಗಳು.

**ಭಾವಸೂಚನ:** ನೂರೇತಿ ॥ ದಿವಸೇತಿ ॥

"ತಾವಂತಿ ಶತ ಸಂವತ್ಸರ ಸ್ಯಾನ್ಹೋ ಸಾಹಸ್ರಾಣಿ ಭವಂತೀತಿ ಶ್ರುತೇ" ॥ ೧೯ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ನೂರು" ಇತಿ ॥ ದಿವಸಗಳು=ಹಗಲು, ಇನಿತು=ಇಷ್ಟು, ಈರ= ಎರಡು.

## ಕನ್ನಡಾರ್ಥ

ವರ್ಷಕ್ಕೆ ಆಗುವ ಹಗಲು ರಾತ್ರಿಗಳ ಸಂಖ್ಯೆಗನುಗುಣವಾಗಿ ೭೨೦೦೦ ನಾಡೀಗತ ಭಗವದ್ರೂಪಗಳನ್ನು ಸರ್ವದಾ ನೆನೆಯಬೇಕೆಂದು ಪದ್ಯದ ಭಾವ ॥ ೧೯ ॥

**ಅವತರಣಿಕಾ:** ಹಿಂದೆ ಹೇಳಿದಂತೆ ಶ್ರೀ ಹರಿಯು ತತ್ತತ್ ದೇಹತತ್ವ ಕೋಶ ನಾಡಿ ಮುಂತಾದವುಗಳಲ್ಲಿ ಕಾಲ ಅನುಸರಿಸಿ, ಜೀವರನ್ನು ಸೃಷ್ಟಿಸಿ ಆಯಾ ಜೀವರ ಕರ್ಮ ಅನಾದಿಯಾದದು. ಅವರ ಗುಣ ಸ್ವಭಾವಗಳನುಸರಿಸಿ, ಪ್ರಕೃತಿಗುಣ ಕಾರ್ಯಗಳಲ್ಲಿದ್ದು ಸಂರಕ್ಷಿಸುವನೆಂದು ಹೇಳುತ್ತಾರೆ.

ಮೂಲ:

**ಕಾಲ ಕರ್ಮಗುಣ ಸ್ವಭಾವಗ ।**
**ಳಾಲಯನು ತಾನಾಗಿ ಲಕ್ಷ್ಮೀ ।**
**ಲೋಲ ತತ್ತದ್ರೂಪ ನಾಮದಿ ಕರೆಸುತೊಳಗಿದ್ದು ॥**

**ಲೀಲೆಯಿಂದಲಿ ಸರ್ವ ಜೀವರ ।**
**ಪಾಲಿಸುವ ಸಂಹರಿಸಿ ಸೃಷ್ಟಿಪ ।**
**ಮೂಲಕಾರಣ ಪ್ರಕೃತಿ ಗುಣ ಕಾರ್ಯಗಳ ಮನೆಮಾಡಿ ॥೨೦॥**

**ಪದ್ಯಾರ್ಥ:** ಶ್ರೀ ಹರಿ ರೂಪನಾದ ಬಿಂಬನು ಮೂಲನಾರಾಯಣನಿಗೆ ಅತ್ಯಂತ ಅಭಿನ್ನನು. ನಿತ್ಯರಾದ ರಮಾದೇವಿಯಲ್ಲಿ ನಿಂತು, ರಮಾದೇವಿ ಯರ ದ್ವಾರಾ, ನಿತ್ಯರಾದ-ಜೀವರು, ಅನಾದಿ ಕರ್ಮ ನಿತ್ಯ, ಮಹಾಕಾಲ ನಿತ್ಯ, ಜೀವರು ತ್ರಿವಿಧರು. ಇವರ ಗುಣ ಸ್ವಭಾವಗಳು ನಿತ್ಯವಾದವು. ಇವುಗಳಲ್ಲಿ ಶ್ರೀ ಲಕ್ಷ್ಮೀ ಆಲಿಂಗಿತ ಶ್ರೀ ರಮಾದೇವಿಯಲ್ಲಿ ರಮಿಸಿ ರಮೆಗೆ ವಿಶೇಷ ಆನಂದ ಕೊಡುವ ಹರಿಯು, ಮೂಲಕಾರಣ ಪ್ರಕೃತಿ=ಮೂಲ ಚಿತ್ತ ಪ್ರಕೃತಿ ಕಾರಣಳು. ಜಡ ಪ್ರಕೃತಿ ಕಾರ್ಯ ರಮೆಯ ದ್ವಾರಾ, ಯಾವಜ್ಜೀವರಿಗೆ ಯಾವ ಕಾಲ ಸೃಷ್ಟಿ ಅವರವರ ಅನಾದಿ ಕರ್ಮದಂತೆ, ಅವರವರ ಗುಣ ಸ್ವಭಾವದಂತೆ ಯಾವ ಯಾವ ಕಾಲಕ್ಕೆ ಯಾವ ದೇಹ ವನ್ನು ಕೊಡಬೇಕೋ ಕೊಟ್ಟು ಲಕ್ಷ್ಮೀಲೋಲನು ತತ್ತದ್ರೂಪ-ತನ್ನಾಮ= ಆಯಾ ರೂಪ-ಆಯಾ ನಾಮಗಳಿಂದ ಕರೆಸುತ್ತ ತಾನೆ ಒಳಗಿದ್ದು, ಕಾಲ-ಗುಣ-ಕರ್ಮ-ಸ್ವಭಾವದಲ್ಲಿ ಅಂತರ್ನಿಯಾಮಕನಾಗಿದ್ದು ಲೀಲೆಯಿಂದಲೇ= ಯಾವ ಶ್ರಮಾದಿಗಳಿಲ್ಲದಲೇ, "ಇಚ್ಛಾಮಾತ್ರ ಪ್ರಭುಃ ಸೃಷ್ಟಿಯಂತೆ" ಸರ್ವ ಜೀವರನ್ನು-ಸೃಷ್ಟಿಮಾಡುವನು ಬ್ರಹ್ಮರೂಪದಿಂದ, ತಾನೇ ಪಾಲಿಸುವನು (ವಿಷ್ಣು ರೂಪ), ರುದ್ರ ರೂಪದಿಂದ ಸಂಹರಿಸುವನು. ಇಂತಹ ಶ್ರೀ ಹರಿಯ ಲೀಲೆಯೇ ಹರಿಕಥಾಮೃತಸಾರ.

**ಸೂಚನೆ:** ದ್ರೌಪದೀಶಪತಿ ವಿಠಲರ ವ್ಯಾಖ್ಯಾನ ಈ ೨೬ ಪದ್ಯದ ವರೆಗೆ ೬ ಪದ್ಯಕ್ಕೆ ವ್ಯಾಖ್ಯಾನವಿಲ್ಲ.

**ಭಾವಸೂಚನ:** ಕಾಲೇತಿ ॥ ೨೦ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಕಾಲ" ಇತಿ ॥ ಸ್ವಭಾವಃ ಯೋಗ್ಯತಾ । ಲೋಲ ಆಸಕ್ತಃ ॥ ೨೦ ॥

**ಕನ್ನಡಾರ್ಥ**

"ಕಾಲ-ಕರ್ಮ-ಗುಣ-ಸ್ವಭಾವಗಳಲ್ಲಿ, ತದ್ರೂಪ-ತನ್ನಾಮನಾಗಿದ್ದು

ಇಚ್ಛಾ ಮಾತ್ರದಿಂದ ಸಮಸ್ತ ವಿಶ್ವದ ಸೃಷ್ಟ್ಯಾದಿಗಳನ್ನು ಮಾಡುವನು ಶ್ರೀ ಹರಿಯು" ಎಂಬುದು ಪದ್ಯದ ಭಾವ. ಸ್ವಭಾವವೆಂದರೆ ಯೋಗ್ಯತೆ. । ೨೦ ।

**ಅವತರಣಿಕಾ :** ಇಂತಹ ಮಹಾಮಹಿಮೆಯುಳ್ಳ ಹರಿಯು, ಜೀವರ ಯೋಗ್ಯತೆ, ಗುಣ ಕರ್ಮಗಳನುಸಾರ ಜೀವರಿಂದ ಸಾಧನಗೈಸಿ, ತಾನು ಒಳಗಿನಿಂದ ಪ್ರಕಾಶಿತನಾಗಿ ಹೇಗೆ ಪೊಳೆವನೆಂಬುದನ್ನು ದೃಷ್ಟಾಂತದಿಂದ ತೋರಿಸುತ್ತಾರೆ.

**ಮೂಲ :**

**ತಿಲಜ ವರ್ತಿಗಳನುಸರಿಸಿ ಪ್ರ ।**
**ಜ್ವಲಿಸಿ ದೀಪಗಳಾಲಯದ ಕ ।**
**ತ್ತಲೆಯ ಭಂಗಿಸಿ ತದ್ಗತಾರ್ಥವ ತೋರುವಂದದಲಿ ॥**
**ಜಲರುಹೇಕ್ಷಣ ತನ್ನವರ ಮನ ।**
**ದೊಳಗೆ ಭಕ್ತಿ ಜ್ಞಾನ ಕರ್ಮಕೆ ।**
**ಒಲಿದು ಪೊಳೆವುತ ತೋರುವನು ಗುಣರೂಪ ಕ್ರಿಯೆಗಳನು**
**॥ ೨೧ ॥**

**ಪದ್ಯಾರ್ಥ :** ತಿಲಜವರ್ತಿಗಳನುಸರಿಸಿ=ತಿಲಜ-ಎಣ್ಣೆ, ವರ್ತಿ= ಬತ್ತಿಗಳು, ಎಷ್ಟು ಎಣ್ಣೆ (ಭಕ್ತಿ) ಇರುವದೋ ಎಣ್ಣೆಯಲ್ಲಿ ಬತ್ತಿ ಎಷು ದಪ್ಪವಾಗಿರುವುದೋ ಅದಕ್ಕೆ ಸರಿಯಾಗಿ ದೀಪ ಪ್ರಕಾಶವಾಗುತ್ತದೆ (ಮತ್ತು ೫-೧೦-೧೦೦ ಕ್ಯಾಂಡಲ ಪವರಿನ ಬಲ್ಬಿನಲ್ಲಿ ಶಕ್ತಿ ಪ್ರಕಾರ ಎಷ್ಟೆಷ್ಟು ಪ್ರಕಾಶ ಬಿದ್ದು ಪ್ರಕಾಶಿಸಿ ಪದಾರ್ಥ ತೋರುವದೋ ಅದರಂತೆ) ಶ್ರೀಹರಿಯು ಸರ್ವ ಜೀವರ ಬಿಂಬನು. ಒಂದೇ ಪ್ರಕಾರನಾಗಿದ್ದರೂ, ಜಲರುಹೇಕ್ಷಣ= ಜಲದಲ್ಲಿ ಉತ್ಪನ್ನವಾದ ಕಮಲ ಪತ್ರದಂತೆ ವಿಶಾಲವಾದ ನೇತ್ರ ಉಳ್ಳ ಹರಿಯು, ಕರುಣಾಮೃತ ವೀಕ್ಷಣ ಹರಿಯು, ತನ್ನವರ=ತನ್ನ ನಿಜಭಕ್ತ ರಾದ ಬ್ರಹ್ಮಾದಿ ತೃಣಾಂತ ಮುಕ್ತಿಯೋಗ್ಯರಾದ ಸಕಲ ಜೀವರಲ್ಲಿ ಸ್ವರೂಪ ಭೂತವಾದ ಜೀವದ ಯೋಗ್ಯತೆ ಬತ್ತಿ, ಭಕ್ತಿ ಎಂಬುದೆ=ಸ್ನಿಗ್ಧವಾದ ಎಣ್ಣೆ, ಸದಾಚಾರ-ಸತ್ಕರ್ಮದಿಂದ ಜ್ಞಾನ=ಈ ಜ್ಞಾನದಿಂದ ವಿಶಿಷ್ಟವಾದ ಜ್ಞಾನ ಗುರುದ್ವಾರಾ ಲಭಿಸಿದರೆ, ಶ್ರೀಹರಿಯು ಸ್ವರೂಪ ಯೋಗ್ಯತೆಯಂತೆ ಬಿಂಬ ರೂಪನಾಗಿ ಪೊಳೆವನು. ಅಪರೋಕ್ಷ ಜ್ಞಾನ ಕೊಟ್ಟು, ಜೀವ ಯೋಗ್ಯ ತಾನುಗುಣವಾಗಿ, ತನ್ನ ಗುಣ-ರೂಪ-ಕ್ರಿಯಾ-ಲೀಲಾ ವ್ಯಾಪಾರಗಳನ್ನು

ಜೀವರಿಗೆ ಪ್ರಕಟಿಸಿ ತೋರುತ್ತಾ ಮುಕ್ತಿಯಲ್ಲಿ ನಿತ್ಯಾನಂದವೀವ ಕರುಣಾಳುವಾದ ಹರಿಯನ್ನು ಮರೆಯದಿರಿ.

**ಭಾವಸೂಚನ: ತಿಲಜೇತಿ ||**

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

**"ತಿಲಜ" ಇತಿ || ತಿಲಜ=ತೈಲ ||**

## ಕನ್ನಡಾರ್ಥ

ದೀಪವು ಎಣ್ಣೆ ಬತ್ತಿಯನ್ನು ಅನುಸರಿಸಿ ಉರಿಯುತ್ತ ಮನೆಯೊಳಗಿನ ಕತ್ತಲೆಯನ್ನು ಕಳೆದು-ಅಲ್ಲಿರುವ ವಸ್ತುಗಳನ್ನು ತೋರಿಸುವಂತೆ ಪರಮಾತ್ಮನು ಭಕ್ತರ ಜ್ಞಾನ ಭಕ್ತಿ ವೈರಾಗ್ಯಗಳನ್ನನುಸರಿಸಿ ಅವರ ಮನಸ್ಸಿನಲ್ಲಿ ಹೊಳೆದು ತನ್ನ ಗುಣರೂಪ ಕ್ರಿಯೆಗಳನ್ನು ತೋರಿಸುತ್ತಾನೆ; ಎಂಬುದು ಪದ್ಯದ ಭಾವ. ತಿಲಜ-ತೈಲ. ತಿಲದಿಂದಾಗುವ ಎಣ್ಣೆ (ಎಳ್ಳೆಣ್ಣೆ).

**ಅವತರಣಿಕಾ :** ಶ್ರೀಹರಿಯು ಬಿಂಬನಾಗಿ ಪೊಳೆದ ಮೇಲೆ, ಹಿಂದೆ ಅನೇಕ ಯೋನಿಗಳಲ್ಲಿ ಸಂಚರಿಸಿ ಮಾನವ ದೇಹ ಬಂದಾಗ್ಗೆ, ಗುರುಗಳ ಅನುಗ್ರಹದಿಂದ ಜ್ಞಾನ ಪುಟ್ಟಲು, ಹಿಂದಿನ ಎಲ್ಲ ದೇಹ-ಮುಂದೆ ಬರುವ ಎಲ್ಲ ಜನ್ಮಗಳಲ್ಲಿ ಅವ ದೇಶ ಕಾಲ ಅವಸ್ಥಾ ಪ್ರೇರಕ ಶ್ರೀಹರಿಯೇ ಎಂದು ಕೊಂಡಾಡಲು ಉಪದೇಶಿಸುತ್ತಾರೆ.

**ಮೂಲ :**

**ಆವ ದೇಹವ ಕೊಡಲಿ ಹರಿ ಮ |**
**ತ್ತಾವ ಲೋಕದೊಳಿಡಲಿ ತಾ ಮ |**
**ತ್ತಾವ ದೇಶದೊಳಿರಲಿ ಆವಾವಸ್ಥೆಗಳು ಬರಲಿ ||**
**ಈ ವಿಧದಿ ಜಡಚೇತನದೊಳು ಪ |**
**ರಾವರೇಶನ ರೂಪ ಗುಣಗಳ |**
**ಭಾವಿಸುತ ಸುಜ್ಞಾನ ಭಕುತಿಯ ಬೇಡು ಕೊಂಡಾಡು || ೨೨ ||**

**ಪದ್ಯಾರ್ಥ:** ಆವ ದೇಹವ ಕೊಡಲಿ, ಎಂಬ ಭೀತಿಬಡಬೇಡ, ನಿನ್ನ ಬಿಂಬನಾಗಿ ಪೊಳೆವ ಮೇಲೆ ಶ್ರೀಹರಿಯು ಅನುಗ್ರಹದಿಂದ ಅಪರೋಕ್ಷ ಜ್ಞಾನದಿಂದ ಪ್ರಾರಬ್ಧ ಕರ್ಮವಶಾತ್ ಕೆಲವು ಜನ್ಮಗಳನ್ನು ಕೊಟ್ಟಾನು. ಇಂಥಾ ದೇಹ ಅವಸ್ಥಾದಲ್ಲಿ, ಮತ್ತು ಅಜ್ಞಾನ ದೆಶೆಯಲ್ಲಿ ಅನೇಕ ದೇಹ

ನೀಚ ಯೋನಿಗಳು ಬರುವವು. ಆಯಾ ಕಾಲ, ದೇಶ, ಅವಸ್ಥಾ ಭೇದ ದಿಂದ ಶ್ರೀಹರಿಯೇ ಕೊಟ್ಟ, ದೇಹ ಅನುಭೋಗಿಸಿ, ಕರ್ಮವಿಪಾಕ ತೀರಿದ ಮೇಲೆ, ಈ ಮಾನವ ದೇಹ ಕೊಟ್ಟಾಗ್ಗೆ ಗುರುಗಳ ಅನುಗ್ರಹದಿಂದ ಜ್ಞಾನ ಪುಟ್ಟಲು, ಹಿಂದೆ ಹೋದ ಅನೇಕ ಜನ್ಮಗಳು, ಮುಂದೆ ಬರುವ ಅನೇಕ ಜನ್ಮಗಳು, ಈಗಿರುವ ದೇಹವು ಯಾವಾವ ದೇಹ, ಯಾವಾವ ದೇಶ ಯಾವ ಯಾವ ಅವಸ್ಥಾಗಳಲ್ಲಿ, ಬಾಲ್ಯಾದಿ ಅವಸ್ಥಾಗಳು, ಜಾಗ್ರತ ಸ್ವಪ್ನ ಸುಷು ಪ್ತ್ಯಾದಿ ಅವಸ್ಥಾಗಳು ಬಂದರೂ, ಈ ಪ್ರಕಾರ ಸರ್ವ ದೇಹ-ಸರ್ವ ದೇಶ ಕಾಲ ಅವಸ್ಥಾಗಳನ್ನು ಪ್ರೇರಿಸುವನು, ಅಂತರ್ ನಿಯಾಮಕನಾಗಿರುವನು. ಜಡ ಚೇತನಗಳಲ್ಲಿ ಹಿಂದಿನ ಪದ್ಯಗಳಲ್ಲಿ ವಿವರಿಸಿದಂತೆ, ಪರ+ಅವರರುಗಳಿಗೆ ಈಶ, ಪರ=ಉತ್ತಮ. ಲಕ್ಷ್ಮಿ ಬ್ರಹ್ಮಾದಿ ದೇವಾದಿಗಳಿಗೆ ಅವರರು ಎಲ್ಲ ಅಧಮಾಧಿಕಾರಿ ಮೊದಲು ಮಾಡಿ, ರಜೋ ತಾಮಸ ಜೀವರಿಗೆ ಅಥವಾ ಜಡ ಚೇತನರಿಗೆ ಈಶನ, ರೂಪ-ಗುಣಗಳನ್ನು ಭಾವಿಸುತ್ತ=ತಿಳಿದು ಚಿಂತನೆ ಮಾಡುತ್ತ, ಸುಜ್ಞಾನ=ಸಮೀಚೀನ ಜ್ಞಾನ-ಶ್ರೀಹರಿ ಸರ್ವತಂತ್ರ ಸ್ವತಂತ್ರ ಎಲ್ಲರೂ ಶ್ರೀಹರಿಯಾಧೀನರು-ಸಂತತ ಹರಿಯ ದಾಸರೆಂತಲೂ, ಪಂಚಭೇದ ತಾರತಮ್ಯ ಸುಜ್ಞಾನ-ಭಕುತಿ=ನಿರವಧಿಕ ಪ್ರೇಮವೆಂಬುವ ಭಕ್ತಿಯನ್ನು ನಿರ್ವ್ಯಾಜದಿಂದ ಬೇಡು=ಪ್ರಾರ್ಥಿಸು, ಕೊಂಡಾಡು ಶ್ರೀಹರಿ ಯನ್ನು ಸ್ತೋತ್ರಮಾಡೆಂದು ಆಜ್ಞಾಪಿಸಿದ್ದಾರೆ.

ಇಂಥ ಸುಜ್ಞಾನ ಪುಟ್ಟ ಬೇಕಾದರೆ ವಿಜಯ ಗೋಪಾಲರ ದಯ ಬೇಕು. ಗುರುವಿನೊಲಿಮೆ ಆಗಬೇಕು-ಗುರುಪ್ರಸಾದ ಬೇಕು.

**ಭಾವಸೂಚನ:** ಆವೇತಿ ॥ ತದುಕ್ತಂ ಭಾಗವತೇ ॥ "ಯಾವತ್ತೇ ಮಾಯಯಾಸ್ಪೃಷ್ಟಾಃ ಭ್ರಮಾಮ ಇಹಕರ್ಮಭಿಃ ॥ ತಾವದ್ಭವ ಪ್ರಸಂ ಗಾನಾಂ ಸಂಗಸ್ಯಾನ್ನೋ ಭವೇಭವ ಇತಿ ॥" ಭಗವಂತಂಮರ್ಥಯಾಮಾಸು ಪ್ರಾಚೇತಸ ಪಂಚಮ ಸ್ಕಂಧೇನಾಭಿಯಜನೇ ಋತ್ವಿಜಶ್ಚ ಭಗವಂತಮೇವ ಪ್ರಾರ್ಥಯಾಮಾಸುರಥಕಥಂ ಚಿತ್‌ಸ್ಖಲನೇತ್ಯಾದಿನಾ ॥ ೨೨ ॥

**ವಿಶೇಷ ಸೂಚನೆ :** ಶ್ರೀ ಗೋಪಾಲದಾಸರು ಎರಡು ಸುಳಾದಿಯಲ್ಲಿ ಯಾವ ದೇಹ ಬಂದರೇನು? ನೀನೊಳಗೆ ಇದ್ದು ರಕ್ಷಿಸುವಿ ಎಂಬುವದು ಎಲ್ಲವೂ ನಿನ್ನ ಪೂಜೆ ಎಂಬ ಜ್ಞಾನವಿತ್ತು ಸಮರ್ಪಿಸುವ ಬಗೆ ತೋರಿಸಿದ್ದಾರೆ.

"ನಿಲ್ಲು ನಿಲ್ಲಯ್ಯಾ ದೇವ ನೀಲವರ್ಣದ ಸ್ವಾಮಿ" ಎಂಬ ಸುಳಾದಿ ೬ನೆ ಝಂಪಿ ತಾಳದಲ್ಲಿ,

ಏನು ಬಗೆ ಪೂಜೆಗಳು ನಿನಗೆ ಮಾಡುವೆ ಎಂಬ್ಯಾ ।
ನೀನಿತ್ತ ಬಂದೆನಗೆ ಒಲಿದ ಮೇಲಕೆ ದೇವ ।
ನಾನಾ ಜಲಗಳಲ್ಲಿ ನಾನಾ ಯೋನಿಗಳೈದಿ ।
ನಾನು ಇದ್ದುದನೆಲ್ಲ ಸ್ನಾನಂಗಳು ನಿನಗೆ ।
ನೀನು ಎನ್ನನು ಎಲ್ಲಿ ನಿಲಿಸಿದ ಸ್ಥಳವೆಲ್ಲ ।
ಶ್ರೀನಿವಾಸನೆ ನಿನಗೆ ಅದೇ ಪೀಠವೂ ।
ಧೇನು ಜನ್ಮಂಗಳಲ್ಲಿ ಬಂದುಕರೆದ ಪಾಲು ।
ಶ್ರೀ ನಾರಾಯಣಾ ನಿನಗೆ ಅಭಿಷೇಕವು ।
ನಾನಾ ಪರಿಪುಷ್ಪ ಸಿರಿತುಲಸಿ ಸಿರಿಗಂಧಮುರ ।
ನಾನಾ ಜನುಮಗಳಾಗಿ ನಾನು ಬಂದುದು ಎಲ್ಲ ।
ಶ್ರೀನಾಥ ನಿನಗೆ ಇವೆ ಪೂಜೆಗೆ ಆದೆನೊ ।
ನಾನಾ ವಸನವು ಜಲರೂಗ್ಮ (ಹ) ಜನ್ಮಗಳಲ್ಲಿ ।
ನಾನು ಇದ್ದುದೆಲ್ಲ ನಿನಗೆ–ಉಡಿಗಾಭರಣ ।
ಆನೆ ಕುದುರೆ ಅಂಡಜಾದಿ ಯೋನಿಗಳಲ್ಲಿ ।
ನಾನು ತಿರುಗಿದೆನಲ್ಲ ನಿನಗೆ ವಾಹನವಯ್ಯಾ ।
ನಾನಾ ಪದಾರ್ಥ ತಂಡುಲ ಮೊದಲಾದವುಗಳು ।
ಏನು ಐದಿದವೆಲ್ಲ ನಿನಗೆ ನೈವೇದ್ಯವೋ ।
ಭಾನು ಚಂದಿರ ಸಾಕ್ಷಿಯಾಗಿ ಮಾಡಿದ್ದೆ ದೀಪ ।
ನೀನು ಎನ್ನವನಾಗಿ ಇದ್ದು ಇದರೊಳಗೆಲ್ಲ ।
ಏನೇನು ಪರಿಪರಿ ಕರ್ಮ ಮಾಡಿಸಿದ್ದು ।
ಹೇ ನಾರಸಿಂಹ ಕಪ್ಪವು ನಿನಗೆ ಕಾಣೋ ।
ನೀನು ಮಂಗಳ ಮೂರ್ತಿ ಡಿಂಗರಿಗೆ ಬಲು ಸಾರ್ಥಿ (ಸಾರಥಿ) ।
ನೀನಾಗಿ ಮಾಡಿಸಿದುದೆಲ್ಲ ನಿನಗೆ ಆರ್ತಿ ।
ಜ್ಞಾನಮಯ ಕಾಯ ಗೋಪಾಲ ವಿಠ್ಠಲರೇಯ ।
ನೀನಿತ್ತ ಬಾರೋ ನಿಜಭಕ್ತ ಜನರೊಡೆಯಾ ॥ ೪ ॥

ಮತ್ತು ಸುಳಾದಿ ೨೯-ಪುಟ ೧೧ರ 'ನೀನೆ ಏನೋ ವಿಠಲ ನಿಗಮವ ತಂದವನು.' ಈ ಸುಳಾದಿ ಝಂಪೆ ತಾಳದಲ್ಲಿ "ಎನಗೆ ಪಶು ಜನ್ಮವು ಬಂದಾಗ್ಗೆ ನೀನಿದ್ದು, ಇತ್ಯಾದಿ ಸಂಧಿಯು ಸಾರದಲ್ಲಿ ಕೊಟ್ಟದೆ ನೋಡುವದು. ಕೊನೆಗೆ, "ಎನಗೀಗ ಮಾನಿಸ ಜನುವು ಲಾಭವನ್ನು ಅನುವಾಗಿ ಇತ್ತದಕ್ಕನು ಕೂಲವಾಗಿನ್ನು" ಎಂತ 'ಜ್ಞಾನ ಸಾಧನ ಜನ್ಮ ನೀನೇ ಕೊಟ್ಟು ಇಂಥ ಜ್ಞಾನ ಪಾಲಿಸಿದಿ' ಎಂದು ಸ್ತುತಿಗೈದಿರುವರು.

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಆವ" ಇತಿ ॥ ಆವ=ದಾವ-ಯಾವ ಕಿಂ ಶರೀರಂ ಆಯಾಸ್ಯತಿ ಇತಿ ಭೀತಃ ಮಾಭವ ಇತಿ ತಾತ್ಪರ್ಯಮ್ ॥ ೨೨ ॥

### ಕನ್ನಡಾರ್ಥ

ಯಾವ ದೇಶ-ಕಾಲ-ಲೋಕ ಅವಸ್ಥೆಗಳಲ್ಲಿದ್ದರೂ ಹಿಂದೆ ಹೇಳಿರುವಂತೆ ಜಡಚೇತನಾತ್ಮಕ ಸಮಸ್ತ ವಿಶ್ವದಲ್ಲಿ ನಿಯಾಮಕವಾಗಿ ವ್ಯಾಪಾರ ಮಾಡುವ ಸರ್ವೇಶ-ಶ್ರೀಹರಿಯ ಗುಣರೂಪಗಳನ್ನು ಧ್ಯಾನಿಸುತ್ತ, ಜ್ಞಾನ ಭಕ್ತಿ ವೈರಾಗ್ಯಗಳನ್ನು ಬೇಡು. ಹೀಗೆ ಧ್ಯಾನಿಸುತ್ತಿರುವ ನಿನಗೆ ಯಾವ ಜನ್ಮವು ಮುಂದೆ ಬರುವದೋ? ಎಂಬ ಯೋಚನೆಗೆ-ಹೆದರಿಕೆಗೆ ಕಾರಣ ವಿಲ್ಲ. ಹೆದರಬೇಡ" ಎಂಬುದು ತಾತ್ಪರ್ಯ ॥ ೨೨ ॥

**ಅವತರಣಿಕಾ:** ಪರಮಾತ್ಮನ ರೂಪಗಳು ಅನಂತ, ಅನಂತ ಜೀವ, ಕಾಲ, ಕರ್ಮ ಗುಣ ಸ್ವಭಾವ ದೇಹಾದಿಗಳಲ್ಲಿ ಒಂದು ರೂಪದಲ್ಲಿ ಅನಂತ ರೂಪದಿಂದಿರುವವು. ಆ ರೂಪಗಳ ಚಿಂತಿಸುವ (ತಿಳಿಯುವ) ಬಗೆ ದೃಷ್ಟಾಂತದಿಂದ ಉಪದೇಶ ಗೈಯ್ಯುತ್ತಾರೆ.

ಮೂಲ:

**ಒಂದರೊಳಗೊಂದೊಂದು ಬೆರದಿಹ ।**
**ವಿಂದಿರೇಶನ ರೂಪಗಳು ಮನ ।**
**ಬಂದ ತೆರದಲಿ ಚಿಂತಿಸಿದಕನುಮಾನವಿನಿತಿಲ್ಲ ॥**
**ಸಿಂಧುರಾಜನೊಳಂಬರಾಲಯು ।**
**ಬಂಧಿಸಲು ಪ್ರತಿತಂತುಗಳೊಳುದ ।**
**ಬಿಂದು ವ್ಯಾಪಿಸಿದಂತೆ ಇರುತಿಪ್ಪನು ಚರಾಚರದಿ ॥ ೨೩ ॥**

**ಪದ್ಯಾರ್ಥ :** ಇಂದಿರೇಶನ ರೂಪಗಳು ಒಂದರೊಳಗೊಂದು ಬೆರೆದಿಹವು; ಶ್ರೀ ಇಂದಿರಾ=ಲಕ್ಷ್ಮೀದೇವಿಯ ಒಡೆಯನಾದ ಶ್ರೀ ಹರಿಯ ರೂಪವು ಅನಂತವು, ಹೇಗೆಂದರೆ, ಜೀವಾನಂತ, ದೇಶಾನಂತ, ಕಾಲಾನಂತ, ಕರ್ಮಾನಂತ, ಗುಣ ಸ್ವಭಾವಗಳಾನಂತ, ಜೀವರ ದೇಹಗಳಾನಂತ, ಜಡಪ್ರಕೃತಿ ಪರಮಾಣುಗಳು ಅನಂತ ಹೀಗೆ ಅನಂತ ಶ್ರೀ ಹರಿಯ ರೂಪಗಳು. ಒಂದರೊಳಗೊಂದು ಬೆರೆದಿಹವು=ಮೇಲೆ ವಿವರಿಸಿದ, ಒಂದು ರೂಪದಲ್ಲಿ ಅನಂತ ರೂಪವು ಕೂಡಿಕೊಂಡಿಹವು. ಮತ್ತು ಮೂಲ ಒಂದು ರೂಪವು ಅನಂತ ರೂಪಗಳಲ್ಲಿ ಸೇರಿಕೊಂಡಿಪ್ಪದು. ಇಂತಹ ಅತ್ಯಾದ್ಭುತ ಮಹಿಮನ ಅನಂತ ರೂಪ-ಗುಣಗಳು ಇಂದಿರೆಯಿಂದಲೇ ಸಾಕಲ್ಯೇನ ತಿಳಿಯಲು ಅಶಕ್ಯವಾದರೂ ಭಯಪಡಬೇಡಿರಿ. ನಿಮ್ಮ ಯೋಗ್ಯತೆಯಂತೆ ಮನೋ ನಿಯಾಮಕನಾದ ಶ್ರೀ ಹರಿಯು ಪ್ರೇರಿಸಿದಂತೆ ಮನಬಂದ ತೆರದಲಿ=ಯಾವ ಕಾಲ ಯಾವ ದೇಶದಲ್ಲಿ ಮನಸ್ಸಿಗೆ ಪ್ರೇರಿಸಿದಂತೆ ಶ್ರೀ ಹರಿಬಿಂಬನೊಬ್ಬನೇ ಅನಂತ ರೂಪನಾಗಿರುವನೆಂದು ತಿಳಿದು ಇಷ್ಟೇ ಚಿಂತಿಸಿರಿ. ಇದಕ್ಕೆ ಲೇಶವಾದರೂ ಅನುಮಾನ ಬೇಡ. ಒಂದು ರೂಪ ಚಿಂತಿಸಿದರೆ, ಅನಂತರೂಪಗಳು ತೃಪ್ತಿಯಾಗುವವು. ಹೇಗಂದರೆ ದೃಷ್ಟಾಂತ ಹೇಳುತ್ತಾರೆ. ಸಿಂಧು ರಾಜನೊಳು=ಮಹಾಸಮುದ್ರ ನೀರಿನಲ್ಲಿ, ಅಂಬರಾಯುಲಯು=ಅರಿವೆಯಿಂದ ರಚಿಸಿದ ಮನೆ ಮಾಡಿ ಕಟ್ಟಲು, ಆ ಅರಿವೆಯ ತಂತುಗಳಲ್ಲಿ=ಪ್ರತಿ ದಾರಗಳಲಿ. ಉದಬಿಂದು=ಉದಕ ಬಿಂದುಗಳು ಅನಂತವಾಗಿ ವ್ಯಾಪಿಸಿದಂತೆ, ಅನಂತ ಉದಕ ಬಿಂದುಗಳ ತೆರ, ಅನಂತ ರೂಪಿಯಾಗಿ ಶ್ರೀ ಹರಿಯು, ಚರಾಚರದಿ=ಚೇತನ ಜಡರಲ್ಲಿಯೂ, ಬ್ರಹ್ಮಾಂಡ ಬಹಿರದಲ್ಲಿಯೂ ವ್ಯಾಪಿಸಿರುವನು.

**ಭಾವಸೂಚನ :** ಒಂದೇತಿ ॥ ಸಿಂಧುರಾಜ=ಸಮುದ್ರ ॥ ೨೩ ॥

**ವಿಶೇಷ ಸೂಚನೆ :** ಗೋಪಾಲದಾಸರ ಸುಳಾದಿ ೬೭, ಪುಟ ೨೬೪. ಒಂದು ರೂಪವು ನೋಡಾ, ಅನಂತ ಪೂರ್ಣವಿನ್ನೂ । ಒಂದು ಅವಯುವವೇ ಪೂರ್ಣವಯ್ಯಾ ॥ ಒಂದು ರೂಪದೊಳಗೆ ಅನಂತ ರೂಪಗಳು॥ ಒಂದೊಂದು ರೂಪದಿಂದ ಭೇದಾಭೇದನಾಗಿಪ್ಪ ॥ ಈ ಸುಳಾದಿ ಪೂರ್ತಿ ಮತ್ತು ಸುಳಾದಿ ೪೭, ಪುಟ ೧೭೬ "ಒಬ್ಬನೇ ಪೋಷನೆಂದು ಆಡಲ್ಯಾತಕೆ ಮನ ಒಬ್ಬನಾನ

ಹುದೇ ನೋಡಿ ॥ ಈ ಸುಳಾದಿ ಪೂರ್ತಿ ಮನನಮಾಡಿದರೆ, ಈ ೭ನೇ ಸಂಧಿ ಪೂರ್ತಿ ಚನ್ನಾಗಿ ತಿಳಿಯುವದು.

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

" ಒಂದರೊಳಗೊಂದೊಂದು " ಇತಿ ॥ ಬೆರದಿಹ=ಮಿಶ್ರವಾಗಿದ್ದ. ತೆರ=ರೀತಿ, ಸಿಂಧುಃ ಅಬ್ಧಿಃ ॥ ಅಂಬರಾಲಯ=ವಸ್ತ್ರಗೃಹಂ ॥ ೨೩ ॥

### ಕನ್ನಡಾರ್ಥ

ಒಂದೊಂದು ರೂಪದಲ್ಲಿಯೂ ಸಹ ಬೇಕಾದ ಹಾಗಿರುವ ಹರಿಯ ಅನಂತ ರೂಪಗಳಲ್ಲಿ, ಎಲ್ಲ ಶಕ್ಯವಿದ್ದಷ್ಟು ಚಿಂತಿಸಬೇಕು. ಪರಮಾತ್ಮನ ರೂಪಗಳು ಸಮುದ್ರದಲ್ಲಿ ಅರಿವೆಯ ಗುಡಿಸಲನ್ನು ಹಾಕಿದರೆ ಎಳೆಎಳೆಗಳಲ್ಲಿ ಸೇರುವ ಜಲಬಿಂದುಗಳಂತೆ ಓತಪ್ರೋತವಾಗಿ ಇರುತ್ತವೆ. ಆದುದರಿಂದ ಮನೋನುಕೂಲವಾಗುವಂತೆ ಭಗವಂತನ ರೂಪಗಳನ್ನು ಎಲ್ಲಿ ಬೇಕಾದಲ್ಲಿ ಭಾವಿಸಬೇಕು. ಅಂಬರಾಲಯ=ವಸ್ತ್ರದ ಮನೆ, ಡೇರೆ ॥ ೨೩ ॥

**ಅವತರಣಿಕಾ :** ಶ್ರೀ ಹರಿಯು ಅನಂತ ರೂಪಗಳಿದ್ದರೂ, ಸಮಸ್ತ ಅನಂತಾನಂತ ಕೋಟಿ ಬ್ರಹ್ಮಾಂಡಗಳನ್ನು ಸೂಕ್ಷ್ಮ ರೂಪವಾಗಿ ಮಾಡಿ, ಅನಂತ ರೋಮಕೂಪಗಳಲ್ಲಿ ಧಾರಣೆಮಾಡಿದ್ದಾನೆ. ಒಂದು ರೂಪದಿಂದ ಸೃಷ್ಟಿ ಪ್ರಳಯಾದಿ ಮಾಡುತ್ತೇನೆಂದು ಭಕ್ತ ಮಾರ್ಕಾಂಡೇಯನಿಗೆ ತೋರಿದುದು ವಿಸ್ತರಿಸುತ್ತಾರೆ.

**ಮೂಲ :**

**ಒಂದು ರೂಪದೊಳೊಂದವಯವದೊ ।**
**ಳೊಂದು ರೋಮದೊಳೊಂದು ದೇಶದಿ ।**
**ಪೊಂದಿಯಿಪ್ಪವ ಜಾಂಡನಂತಾನಂತ ಕೋಟಿಗಳು ॥**
**ಹಿಂದೆ ಮಾರ್ಕಾಂಡೇಯ ಕಾಣನೆ ।**
**ಒಂದು ರೂಪದಿ ಸೃಷ್ಟಿ ಪ್ರಳಯವ ।**
**ಇಂದಿರೇಶನೊಳೇನಿದಚ್ಚರಿ ಅಪ್ರಮೇಯ ಸದಾ ॥ ೨೪ ॥**

**ಪದ್ಯಾರ್ಥ :** ಒಂದು ರೂಪದೊಳು=ಶ್ರೀ ಹರಿಯ ಅನಂತರೂಪಗಳಿದ್ದರೂ,ಒಂದೇ ವಾಸುದೇವ ರೂಪದ ಒಂದು ಅವಯವದೊಳಗೆ=ಒಂದು ಕರಚರಣಾದಿ ಅಂಗಗಳಲ್ಲಿ, ಒಂದು ರೋಮಗಳಲ್ಲಿ, ಅಜಾಂಡ=ಬ್ರಹ್ಮಾಂಡ

ಅನಂತಾನಂತ ಕೋಟಿಗಳು, ಪೊಂದಿಪ್ಪವು=ಹೊಂದಿಕೊಂಡಿರುವವು. ಪೊಂದಿಕೊಂಡಿರುವದಕ್ಕೆ ಈ ಜಡಗಳಾದ ಬ್ರಹ್ಮಾಂಡಗಳಿಗೆ ಶಕ್ತಿಯೆ ? ಇಲ್ಲ. ಶ್ರೀ ಹರಿ ತನ್ನ ಇಚ್ಛೆಯಿಂದ ಮಹತ್ತಾದ ಬ್ರಹ್ಮಾಂಡಗಳನ್ನು ಸೂಕ್ಷ್ಮವಾಗಿ ಮಾಡಿ, ಅನಂತ ಬ್ರಹ್ಮಾಂಡಗಳನ್ನು ಧಾರಣಮಾಡಿಹನು. ಎಂಬೋ ಮಹಾ ಮಹಾತ್ಮೆಯನ್ನು ಭಕ್ತನಾದ ಮಾರ್ಕಾಂಡೇಯ ಋಷಿಗೆ ಒಲಿದು, ಆತನ ಆಶ್ರಮದಲ್ಲೇ ಪ್ರಳಯೋದಕವನ್ನು ಕಲ್ಪಿಸಿ, ತನ್ನ ಒಂದು ರೂಪದಿಂದಲೇ ಅನಂತ ರೂಪಗಳ ಆವೀರ್ಭೂತವಾಗಿ ಮಾಡಿ, ಒಂದೇ ರೂಪನಾದರೂ, ಸೃಷ್ಟಿ-ಸ್ಥಿತಿ-ಪ್ರಳಯಮಾಡುವ ರೂಪಗಳನ್ನು, ಹಿಂದೆ=ಹಿಂದಿನ ಕಲ್ಪ ಅಥವಾ ಹಿಂದಿನ ಯುಗದಲ್ಲಿ ಮಾರ್ಕಾಂಡೇಯ ಋಷಿಗಳು ಕಾಣಲಿಲ್ಲವೆ ? ಕಂಡೇ ಕಂಡರು. ಪ್ರಳಯೋದಕದಲ್ಲಿ ಶಿಶುವಾಗಿರುವ ಮುದ್ದು ಬಾಲನನ್ನು ಎತ್ತಿಕೊಂಡು ಅಪ್ಪಲಿಕ್ಕೆ ಹೋಗಲು ಶಿಶುವಾದ ಹರಿಯು ಶ್ವಾಸನಾಳದಿಂದ ಆ ಶಿಶುವಿನ ಉದರದಲ್ಲಿ ಪೊಕ್ಕು ಅಲ್ಲಿಯೂ ಸೃಷ್ಟಿ ಸ್ಥಿತ್ಯಾದಿ ಅತ್ಯದ್ಭುತ ವ್ಯಾಪಾರ ತೋರಿಸಿದನೆಂದು ಪುರಾಣ ಭಾಗವತಾದಿಗಳಲ್ಲಿ ಹೇಳಿದ್ದು ನಿಜವಾಗಿಯೂ ಇದ್ದ, ಇಂತಹ ಅತ್ಯದ್ಭುತ ಶಕ್ತಿಯು, ಇಂದಿರೇಶನಾದ ಹರಿಯಲ್ಲಿ ಇದು ಏನು ಅಚ್ಚರಿ = ಏನು ಆಶ್ಚರ್ಯ. ಅಪ್ರಮೇಯ ಸದಾ=ನಿರಂತರದಲ್ಲಿ ಯಾರಿಂದಲೂ ಪೂರ್ಣವಾಗಿ ಅರಿಯದಾದ ಮಹಾಮಹಿಮೆಯುಳ್ಳವನು.

**ಭಾವಸೂಚನ :** ವಂದೇತಿ-ಹಿಂದೇತಿ ॥ ಹ್ಯೆತಚ್ಚ ದ್ವಾದಶ ಸ್ಕಂಧೇ ಸ್ಪಷ್ಟಂ । ಅಚ್ಚರಾ=ಆಶ್ಚರ್ಯ ॥ ೨೪ ॥

**ವಿಶೇಷ ಸೂಚನೆ :** ಶ್ರೀ ಹರಿಯ ಶಕ್ತಿ ಒಂದೇ ಕಾಲದಲ್ಲಿ ಅನಂತಾನಂತ ಬ್ರಹ್ಮಾಂಡಗಳನ್ನು ಸೃಷ್ಟಿಮಾಡುವ ಶಕ್ತಿ ಇದ್ದರೂ, "ಏಕಸ್ಮಿನ್ ಪರ ಕಾಲೇತು ಏಕಮಂಡಂ ಜಗದ್ಗುರುಃ ॥ ದಶಾವರಣ ಸಂಯುಕ್ತಂ ಸೃಜತ್ಯವತಿಹಂತ್ಯಜ ॥ ನೈಕದಾಜಾಂಡ ಬಹುಳಂ ಸೃಷ್ಟ್ವ ಮಿಚ್ಛತಿಕೇಶವ ॥ ಪ್ರಕಾಶ ಸಂಹಿತೆ ೩ನೇ ಅಧ್ಯಾಯದಲ್ಲಿ ಹೇಳಿದಂತೆ ಒಂದು ಕಾಲಕ್ಕೆ ಒಂದೆ ಬ್ರಹ್ಮಾಂಡ, ಸೃಷ್ಟಿ ಒಂದೇ ರೂಪದಲ್ಲಿ ಅನಂತ ಬ್ರಹ್ಮಾಂಡ ರೂಪ ಧರಿಸುವಿಕೆ ಇತ್ಯಾದಿ.

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಒಂದೊಂದು" ಇತಿ ॥ ಇಪ್ಪ=ಇರುವ.

### ಕನ್ನಡಾರ್ಥ

ಪರಮಾತ್ಮನ ಒಂದೊಂದು ರೂಪ, ಅವಯುವ, ಅದರ ಪ್ರದೇಶ, ರೋಮ ಪರಿಮಿತ ಅವಕಾಶ ಇವೆಲ್ಲವೂ ಪರಿಪೂರ್ಣವಾದುದರಿಂದ ಅನಂತಾನಂತ ಬ್ರಹ್ಮಾಂಡ ಕೋಟಿಗಳು ಇರುತ್ತವೆ ಎಂಬುದು ಮಾರ್ಕಾಂಡೇಯರಿಗೆ ಕಂಡುಬಂದ ಸಂಗತಿಯಾಗಿದೆ. ಅಪ್ರಮೇಯನಾದ ಶ್ರೀ ಹರಿಯಲ್ಲಿ ಇದು ಆಶ್ಚರ್ಯಕರವಲ್ಲ ಎಂಬುದು ಈ ಪದ್ಯದ ಭಾವ. ॥ ೨೪ ॥

ಅವತರಣಿಕಾ : ಮಾರ್ಕಾಂಡೇಯರ ದೃಷ್ಟಾಂತದಿಂದಲ್ಲದೇ ವಿಶ್ವರೂಪ ಸಂದರ್ಶನ ಅರ್ಜುನನಿಗೆ ಮಾಡಿಸಿ, ಒಂದನಂತಾನಂತ ರೂಪಗಳು ಒಂದೇ ರೂಪದಲ್ಲಿ ಇಹವು ಎಂಬೋ ಪ್ರಮೇಯದಾರಢ್ಯ ಹೇಳುತ್ತಾರೆ.

ಮೂಲ :

ಒಂದನಂತಾನಂತ ರೂಪಗ ।
ಳೊಂದೆ ರೂಪದೊಳಿಹವು ಲೋಕಗ ।
ಳೊಂದೆ ರೂಪದಿ ಸೃಷ್ಟಿ ಸ್ಥಿತಿ ಮೊದಲಾದ ವ್ಯಾಪಾರ ॥
ಒಂದೆ ಕಾಲದಿ ಮಾಡಿ ತಿಳಿಸದೆ ।
ಸಂದಣಿಸಿಕೊಂಡಿಪ್ಪ ಜಗದೊಳು ।
ನಂದನಂದನ ರಣದೊಳಿಂದ್ರಾತ್ಮಜಗೆ ತೋರಿಸನೆ ॥ ೨೫ ॥




ಪದ್ಯಾರ್ಥ : ಒಂದು ರೂಪ = ಅನಂತಾನಂತ ರೂಪಗಳೊಳಗಿರುವದು, ಅನಂತ ರೂಪಗಳಲ್ಲಿ ಒಂದು ರೂಪವು ಇರುವದು. ಮೂಲರೂಪಿ ನಾರಾಯಣನಿಂದ ಅನಂತಾನಂತ ರೂಪ ಪ್ರಾದುರ್ಭಾವ-ಲಯ ಕಾಲದಿ= ಅನಂತ ಅವತಾರಾದಿ ರೂಪಗಳು. ಮೂಲ ರೂಪದಲ್ಲಿ ಲಯ, ಅಥವಾ ಅನಂತ ರೂಪ ಗುಣ ಕ್ರಿಯಾಗಳು ಅನಂತ ರೂಪಗಳ ಶಕ್ತಿಯೂ, ಮೂಲ ರೂಪದಂತೆ ಇರುವದು. ಕಿಂಚಿತ್ತಾದರೂ ಅಂಶಿ ಅಂಶ ರೂಪಗಳಿಗೆ ಭೇದವಿಲ್ಲ. ಲೋಕಗಳೊಂದೆ ರೂಪದಿ=ಈ ಎಲ್ಲ ಗಳ ಲೋಕಗಳನ್ನೂ ಒಂದೇ ರೂಪದಿ=ಶ್ರೀ ಮೂಲರೂಪಿ ನಾರಾಯಣನ, ಕೃಷ್ಣ ಕೇಶಾವೇಶಪೂರ್ಣನಾದ ಶ್ರೀ ಕೃಷ್ಣಪರಮಾತ್ಮನು. ತನ್ನ ವಿಶ್ವರೂಪವನ್ನು ಇಂದ್ರಾಂಶನಾದ ಅರ್ಜುನನಿಗೆ ತನ್ನ ಮುಖದಲ್ಲಿ ತೋರಿಸಿದ, ಸೃಷ್ಟಿ-ಸ್ಥಿತಿ ಮುಂತಾದ ಅಷ್ಟಕರ್ತೃತ್ವ ವ್ಯಾಪಾರವನ್ನು ಒಂದೇ ಕಾಲದಲ್ಲಿ ಮಾಡಿದ್ದನ್ನು, ತೋರಿದ್ದನ್ನು ನೋಡಿ

ತಿಳಿಸದೆ=ಅರ್ಜುನ ಬೆರಗಾಗಿ ಸಾಕು ಸಾಕಪ್ಪಾ ಕೃಷ್ಣಾ ಎಂದು ಬೇಡಿಕೊಂಡನು. ಇಂತಹ ಮಹಿಮೆಯನ್ನು ನೋಡಿದ ಅರ್ಜುನ ಉತ್ತಮಾಧಿಕಾರಿಯಾದರೂ ತನ್ನ ನಿಜ ಶಕ್ತಿ ಪೂರ್ಣ ತಿಳಿಸದೇ, ಸಂದಣಿಸಿಕೊಂಡಿಪ್ಪ ಜಗದೊಳು=ಇದರಂತೇ ಸಮಸ್ತ ಬ್ರಹ್ಮಾಂಡದಲ್ಲಿ ಸಂದಣಿಸಿ, ಅನಂತಾನಂತ ರೂಪದಿಂದ ಓತಪ್ರೋತನಾಗಿ ತುಂಬಿಕೊಂಡಿರುವದನ್ನು, ರಣದೊಳು=ಕುರುಕ್ಷೇತ್ರ ಯುದ್ಧ ಭೂಮಿಯಲ್ಲಿ, ಇಂದ್ರಾತ್ಮಜನಿಗೆ ತೋರಿಸನೆ?=ಇಂದ್ರಪುತ್ರ ಅರ್ಜುನನಿಗೆ ಇಂತಹ ಮಹಾಮಹಿಮೆ ತೋರಿಸನೆ=ತೋರಿಸಲಿಲ್ಲವೆ? ನಿಜವಾಗಿಯೂ ತೋರಿದನು ಎಂದು ಅಭಿಪ್ರಾಯ.

**ಭಾವಸೂಚನ :** ಒಂದೇತಿ ನಂದನಂದನೇತಿಹ್ಯ ತಚ್ಚ ಗೀತಾಯಾಂ ವ್ಯಕ್ತಂ ॥ ೨೫ ॥

ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಒಂದನಂತಾನಂತ ರೂಪಗಳು" ಇತಿ ॥ ತೋರಿಸನೇ=ತೋರಿಸಲಿಲ್ಲವೇ! ॥ ೨೫ ॥

## ಕನ್ನಡಾರ್ಥ

ಒಂದು ರೂಪದಲ್ಲಿ ಅನಂತಾನಂತ ರೂಪಗಳು ಇರುತ್ತವೆ. ಸಕಲ ಲೋಕಗಳನ್ನೂ ಒಂದೇ ರೂಪದಿಂದ ಸೃಷ್ಟಿಮಾಡಿರುವ ಶ್ರೀ ಹರಿಯು ತನ್ನಲ್ಲಿರುವ ಅನಂತಾನಂತ ರೂಪಗಳನ್ನು ಅರ್ಜುನನಿಗೆ ತೋರಿಸಿರುತ್ತಾನೆ. ಆದುದರಿಂದ ಒಂದು ರೂಪದಲ್ಲಿರುವ ಅನಂತಾನಂತ ರೂಪಗಳ ಜ್ಞಾನವು ಅಜ್ಞರಿಗಾಗದಿದ್ದರೂ ಜ್ಞಾನಿಗಳಿಗೆ ಇದ್ದೇ ಇರುತ್ತದೆಂಬುದು ಈ ಪದ್ಯದ ಭಾವ. ॥ ೨೫ ॥

**ಅವತರಣಿಕಾ :** ಇಂದಿರೇಶನ ಮೂರ್ತಿಗಳು ಒಂದರೊಳಗೊಂದು ಬೆರದಿಹವೆಂದು ಹಿಂದಿನ ಪದ್ಯದಲ್ಲಿ ಹೇಳಿದಂತೆ ಒಂದರೊಳಗೊಂದು ಹೇಗೆ ಬೆರದಿಹವು ಎಂಬುದನ್ನು ನವನಾರಿ ಕುಂಜರ ಯತ್ಕಿಂಚಿತ್ ದೃಷ್ಟಾಂತದಿಂದ ಉಪದೇಶಿಸುತ್ತಾರೆ.

**ಮೂಲ :**

**ಶ್ರೀ ರಮೇಶನ ಮೂರ್ತಿಗಳು ನವ ।**
**ನಾರಿ ಕುಂಜರದಂತೆ ಏಕಾ ।**
**ಕಾರ ತೋರ್ಪವು ಅವಯವಾಹ್ವಯ ಅವಯವಗಳಲ್ಲಿ ॥**

**ಬೇರೆ ಬೇರ್ಕಂಗೊಳಿಸುವ ಶ ।**
**ರೀರದೊಳು ನಾನಾ ಪ್ರಕಾರ ವಿ ।**
**ಕಾರ ಶೂನ್ಯ ವಿರಾಟನೆನಿಸುವ ಪದುಮ ಜಾಂಡದೊಳು ॥೨೬॥**

**ಪದ್ಯಾರ್ಥ :** ಶ್ರೀ ರಮೇಶನ ಮೂರ್ತಿಗಳು=ಶ್ರೀ ರಮಾದೇವಿಗೆ ಪತಿಯಾದ ಶ್ರೀ ಹರಿಯ ಮೂರ್ತಿಗಳು, ಜಗತ್ತಿನಲ್ಲಿ=ಸರ್ವರ ದೇಹಗಳಲ್ಲಿ ಹೇಗೆ ಬೆರೆದಿಹವೆಂದರೆ, ನವನಾರಿ ಕುಂಜರದಂತೆ=ಒಂಭತ್ತು ನಾರಿ=ಸ್ತ್ರೀಯರಿಂದ ಕೂಡಿದ ಕುಂಜರ=ಶ್ರೇಷ್ಠವಾದ ರೂಪ. ಇದರ ರಹಸ್ಯವೇನಂದರೆ ಜೀವಾಂತರ್ಯಾಮಿ ಬಿಂಬನ ಸೇವಾರ್ಥವಾಗಿ, ಛತ್ರ-ಚಾಮರ-ವ್ಯಜನ-ತಾಳ-ಮೃದಂಗ-ನೃತ್ಯ-ವಾದ್ಯಾದಿ ಸೇವೆಮಾಡತಕ್ಕ, ಜೀವನ ಹೃತ್ಕಮಲ ಶ್ವೇತ ವರ್ಣಾಬ್ಜದಲ್ಲಿ ವಿಮಲಾದಿ ೮ ಸ್ತ್ರೀ ರೂಪಗಳು ೮ ಕಮಲ ದಳಗಳಲ್ಲಿ ಮಧ್ಯಪೀಠ ರೂಪನಾಗಿ ಅನುಗ್ರಹವೆಂಬೋ ಶಕ್ತಿ ನವ=ಒಂಭತ್ತು ಸ್ತ್ರೀ ರೂಪಗಳು, ಸೇವಕ ರೂಪಗಳು, ಪ್ರಳಯ ಕಾಲದಲ್ಲಿ ಶ್ರೀ ಹರಿಯ ಅನಂತಾನಂತ ರೂಪಗಳು. ಮೂಲರೂಪಿ ನಾರಾಯಣನಲ್ಲಿ ಐಕ್ಯವಾಗುವವೆಂದು ಶಾಸ್ತ್ರ ಸಮ್ಮತ. ಈ ಎಲ್ಲ ರೂಪಗಳು. ಐಕ್ಯಭಾವವೇನೆಂದರೆ ಎಲ್ಲ ಅನಂತ ಅವತಾರಾದಿ ರೂಪಗಳು ಒತ್ತಟ್ಟಿಗೆ ಸೇರಿದರೂ ಬೇರೆ ಬೇರೆ ಸದಾ ಇರುವವು. ಆದರೆ ಜೀವಾಂತರ್ಯಾಮಿ ರೂಪಕ್ಕೆ, ಮೂಲದಲ್ಲಿ ಐಕ್ಯವಿಲ್ಲವೆಂದು ಅನೇಕ ಪ್ರಮಾಣಗಳು ಇವೆ. ಉಳಿದ ಅನಂತ ರೂಪಗಳು ಲಯದಲ್ಲಿ ಹೇಗೆ ಐಕ್ಯವೆಂದರೆ, ಒಂದು ಎಳ್ಳು-ಕಸಕಸಿ-ಬುಂದೇದ ಉಂಡಿಯಲ್ಲಿ ಒಂದೊಂದು ಕಾಳು ಸೇರಿದ್ದರೂ, ಒಂದೊಂದು ಕಾಳು ಬೇರೆ ಬೇರೆ ಇರುವಂತೆ ಇರುವುವು. ಇದು ನಿಜಸ್ಥಿತಿಯು. ಬ್ರಹ್ಮಾಂಡದಲ್ಲಿಯೂ ವಿರಾಡ್ ರೂಪಿ ಹರಿಯು ಕರ ಚರಣಾದಿ ಅವಯುವಗಳಲ್ಲಿ ಒಂದೊಂದು ಅನಂತ ರೂಪಗಳು ಪ್ರತ್ಯೇಕ ಅವಯುವಗಳಲ್ಲಿದ್ದರೂ, ಆ ಅಂಗ ಉಪಾಂಗಗಳಲ್ಲಿಪ್ಪ ಎಲ್ಲ ರೂಪಗಳು ಬೇರೆಬೇರೆ ಕೂಡಿದ್ದು, ವಿರಾಡ್ರೂಪೀ ಶರೀರ ಅಥವಾ ಜೀವರ ಶರೀರದಲ್ಲಿ ಒಂದೇ ರೂಪವಾಗಿ ತೋರುವನು. ಇದು ಲಯ ಕಾಲ ವಿಚಾರದಂತೆಯೋ "ವಿಮಲಾದಿ (೯) ಸ್ತ್ರೀ ರೂಪಗಳಾದ ಶ್ರೇಷ್ಠ ರೂಪಗಳು. ಒಂದೇ ರೂಪವಾಗಿ ಒಂದೆಡೆ ಇರುವವು. ಇದಕ್ಕೆ ಚಿತ್ರಕುಶಲರು ಒಂದು ಆನೆಯಲ್ಲಿ (೯) ಸ್ತ್ರೀ ರೂಪಗಳು, ಆನೆಯ ಸೊಂಡಿಲು, ಬಾಲ, ಕಾಲು ಮಧ್ಯ ದೇಹಾದಿಗಳಲ್ಲಿ (೯)

ನಾರಿ ರೂಪಗಳಿಂದ ಕೂಡಿಸಿ, ಒಂದೇ ಆನೆಯ ಚಿತ್ರಕಲಾ ತೋರಿದಂತೆ ಇರುತ್ತವೆಂದು ಶಾಸ್ತ್ರ ಸಮ್ಮತಾಭಿಪ್ರಾಯ. ಇಂಥ ವಿರಾಟ ಪುರುಷನ ರೂಪಗಳು ನಿರ್ವಿಕಾರ-ಚಿನ್ಮಯ-ಚಿದಾನಂದಾತ್ಮಕವಾದವೆಂದು ಕರೆಸಿಕೊಳ್ಳುತ್ತಾ ಬ್ರಹ್ಮಾಂಡದೊಳಗೆ ಪಿಂಡಾಂಡದೊಳಗಿಪ್ಪ ಎಲ್ಲ ರೂಪಗಳಿಗೆ ಕಿಂಚಿತ್ತಾದರೂ ಭೇದವಿಲ್ಲ.



ನರನಾರಿ ಕುಂಜರ

ಭಾವಸೂಚನ: ಶ್ರೀ ರಮೇಶೇತಿ ॥ ಕಂಗೊಳಿಸುವ = ತೋರುವ ॥ ೨೬ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಶ್ರೀ" ಇತಿ ॥ ತೋರ್ಪವು=ತೋರುವವು. ॥ ೨೬ ॥

## ಕನ್ನಡಾರ್ಥ

ನವನಾರಿಯರಿಂದ ಕೂಡಿದ ಆನೆಯ ಆಕಾರದಂತೆ ಶ್ರೀ ಹರಿಯು ಅವಯವಗಳಲ್ಲಿ ಆಯಾ ನಾಮಗಳಿಂದ ಇದ್ದು ಪೂರ್ಣವಾಗಿದ್ದರೂ, ಅವಯವ-

ಅವಯವಿ ರೂಪಗಳಿಂದ ಕಾಣಿಸಿಕೊಳ್ಳುತ್ತಾನೆ; ಇದರಂತೆ ನಿರ್ವಿಕಾರನಾದ ಹರಿಯು ಅನಂತಾಕಾರಗಳೊಂದಿಗೆ ಬ್ರಹ್ಮಾಂಡದಲ್ಲಿ ವಿರಾಟ್ ರೂಪದಿಂದ ಇರುತ್ತಾನೆ. ಇದು ಈ ಪದ್ಯದ ಭಾವ. ॥ ೨೬ ॥

**ಅವತರಣಿಕಾ:** ಶ್ರೀ ರಮೇಶ ಮೂರ್ತಿಗಳು ಬ್ರಹ್ಮಾಂಡ ಸೃಷ್ಟಿಗೆ ಅನಂತ, ಎಂಥೆಂಥ ರೂಪಗಳೆಂಬುದನ್ನು, ಸಮುದ್ರದ ತೆರೆಗಳ ದೃಷ್ಟಾಂತದಿಂದ ವಿಸ್ತಾರವಾಗಿ ಹೇಳುತ್ತಾರೆ.

**ಮೂಲ :**

**ವಾರಿಜ ಭವಾಂಡದೊಳು ಲಕ್ಷ್ಮೀ ।**
**ನಾರಸಿಂಹನ ರೂಪ ಗುಣಗಳು ।**
**ವಾರಿಧಿಯೊಳಿಹ ತೆರೆಗಳಂದದಿ ಸಂದಣಿಸಿ ಇಹವು ॥**
**ಕಾರಣಾಂಶಾವೇಶ ವ್ಯಾಪ್ತವ ।**
**ತಾರಕಾರ್ಯಾಽವ್ಯಕ್ತವ್ಯಕ್ತವು ।**
**ಈರಯಿದು ವೀಭೂತಿ ಅಂತರ್ಯಾಮಿ ರೂಪಗಳು ॥ ೨೭ ॥**

**ಪದ್ಯಾರ್ಥ :** ವಾರಿಜ ಭವಾಂಡದೊಳು=ಬ್ರಹ್ಮಾಂಡದಲ್ಲಿ ಶ್ರೀಲಕ್ಷ್ಮೀ ನರಸಿಂಹನಾದ=ಬಿಂಬರೂಪಿ ಹರಿಯು, ಅನಂತಾನಂತ ರೂಪಗಳು=ಅನಂತಾನಂತ ಗುಣ ಅಭಿವ್ಯಕ್ತಿಗೆ ಕಾರಣವಾದವು, ವಾರಿಧಿಯೊಳಗೆ ಇಹ= ಸಮುದ್ರದೊಳಗೆ ಇರುವ, ತೆರೆಗಳಂದದಿ=ತೆರಗಳಂತೆ ಇರುವವು. ಸಮುದ್ರದಲ್ಲಿಪ್ಪ ತೆರೆಗಳಿಗೂ, ಸಮುದ್ರಕ್ಕೂ ಹೇಗೆ ಭೇದವಿಲ್ಲವೊ ಮತ್ತು ತೆರಗಳ ಗಣನೆಮಾಡಲು ಹೇಗೆ ಶಕ್ಯವಿಲ್ಲವೋ (ಏಕದೇಶ ದೃಷ್ಟಾಂತ) ಹಾಗೆಯೇ ಪರಮಾತ್ಮನ ರೂಪಗಳು ಅನಂತ ರೂಪವಾಗಿರುವವು. ಸಂದಣಿಸಿ ಇಹವು= ಗುಂಪಾಗಿ ಕೂಡಿರುವವು, ಗುಂಪಾದ ಒತ್ತಟ್ಟಿಗೆ ಸೇರಿದ ಜನ ಬೇರೆ ಬೇರೆ ಇದ್ದರೂ, ಜನಸಂದಣಿಯು ಹೇಗೆಯೋ ಹಾಗೆ ಬೇರೆ ಬೇರೆ ಇರುವವು. ಅವು ಯಾವಾವ ರೂಪಗಳೆಂದರೆ ರೂಪಗಳ ಸಮೂಹ ಮಾತ್ರ ನಿರೂಪಿಸುತ್ತಾರೆ. ೧) ಕಾರಣ=ನಾರಾಯಣ ಮೂಲ ರೂಪ, ನಿತ್ಯವಾದ ಆರು ವಸ್ತುಗಳಲ್ಲಿಪ್ಪ ಮೂಲರೂಪ. ೨) ಅಂಶ=ವಾಸುದೇವಾದಿ ರೂಪಗಳು, ೩) ಆವೇಶ=ಶುಕ್ಲ ಕೇಶಾವೇಶ ರೂಪ-ಬಲರಾಮ-ಲಕ್ಷ್ಮಣ-ಅರ್ಜುನ-ಪೃಥುರಾಜಾದಿಗಳಲ್ಲಿಪ್ಪವು. ೪) ವ್ಯಾಪ್ತ ರೂಪ=ವಿಷ್ಣು, ಸಮಗ್ರ ದೇಶ

ಕಾಲ ಬ್ರಹ್ಮಾಂಡ ಬಹಿರ್ಬ್ರಹ್ಮಾಂಡದಲ್ಲಿ ಓತ-ಪ್ರೋತ-ಅಪ್ರತಿಘನಾಗಿರುವ ರೂಪ ಒಂದು. ೨) ತತ್ತತ್ ಪದಾರ್ಥಗಳಲ್ಲಿ ತದಾಕಾರನಾಗಿ ತದ್ರೂಪ ತನ್ನಾಮದಿಂದ ಜಡವಸ್ತು ಜೀವಾದಿಗಳ ಜಡ ದೇಹಾದಿಗಳಲ್ಲಿ ಘಟಾಕಾಶ-ಮಠಾಕಾಶ ಇತ್ಯಾದಿಗಳಲ್ಲಿರುವ ರೂಪ, ವ್ಯಾಪ್ತವಾದದ್ದು. ೩) ಆಹಿತಾದಿ ಸ್ವಯಂವ್ಯಕ್ತ ಕರಚರಣಾದಿ ಯುಕ್ತವ್ಯಾಪ್ತರೂಪ. ಹೀಗೆ ವ್ಯಾಪ್ತ ರೂಪ ಗಳ ವಿವರ ೫. ಅವತಾರ=ರಾಮಕೃಷ್ಣ, ಮತ್ಸ್ಯಕೂರ್ಮ, ವ್ಯಾಸಕಪಿಲಾದಿ ರೂಪಗಳು ೬. ಕಾರ್ಯರೂಪ=ವಿರಾಡ್ ರೂಪತ್ರಯ (೩)ನೇ ವ್ಯಾಪ್ತಿಸಂಧಿ ಪದ್ಯ ೧ ರಲ್ಲಿ ಪುರುಷರೂಪತ್ರಯ ವರ್ಣಿಸಿದ್ದಾರೆ. ೭ ವ್ಯಕ್ತ ರೂಪ=ಮಹ ತ್ತತ್ವಗತವಾದ ರೂಪ. ೮ ವ್ಯಕ್ತ (ಕಂಗೊಳಿಪ) ರೂಪ. ೯ ಅವ್ಯಕ್ತ=ಮೂಲ ಪ್ರಕೃತಿಗತ ಸೂಕ್ಷ್ಮ ರೂಪ. ೧೦ ವಿಭೂತಿ ರೂಪಗಳು=ರಾಜಾಂತರ್ಗತ ವಾದವು. ಅಂತರ್ಯಾಮಿ=ಸಕಲ ಜೀವಾಂತರ್ಯಾಮಿ ರೂಪಗಳು. ಹೀಗೆ ೧೦ ವಿಧವಾಗಿ ಹರಿಯ ರೂಪಗಳು ಸಂಪಣಿಸಿಹವು.

**ದ್ರೌಪದೀಶಪತಿ ವಿಠಲರು :** ವಾರಿಜ ಭವಾಂಡ || ೧) ಕಾರಣಾ= ನಾರಾಯಣ ರೂಪ, ೨) ಅಂಶ=ವಾಸುದೇವಾದಿ, ೩) ಆವೇಶಾ=ಶುಕ್ಲ ಕೇಶಾದಿ, ೪) ವ್ಯಾಪ್ತ=ವಿಷ್ಣು, ೫) ಅವತಾರ=ರಾಮಕೃಷ್ಣಾದಿ, ೬)ಕಾರ್ಯ ರೂಪ=ವಿರಾಡ್ ರೂಪತ್ರಯ, ೭) ವ್ಯಕ್ತ=ಮಹತ್ತತ್ವಗತ, ೮) ಅವ್ಯಕ್ತ= ಸೂಕ್ಷ್ಮ ಪ್ರಕೃತಿ, ೯) ವಿಭೂತಿ=ರಾಜಾದಿಗಳಲ್ಲಿ, ೧೦) ಅಂತರ್ಯಾಮಿ= ಜೀವಾಂತರ್ಗತ ರೂಪ.

**ಭಾವಸೂಚನ :** ವಾರಿಜೇತಿ || ೨೭ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ವಾರಿಜ" ಇತಿ|| ಕಾರಣಗಃ | ಅಂಶಃ-ಅಭಿಮನ್ಯ್ವಾದೌ|| ಪೃಥ್ವಾದೌ ಆವೇಶಃ || ಕಾರ್ಯಘಟಾದಿಗಃ | ವ್ಯಕ್ತಂ ಮಹದಾದಿ || ೨೭ ||

## ಕನ್ನಡಾರ್ಥ

ಸಮುದ್ರದ ತರಂಗಗಳಂತೆ ಅನಂತವಾಗಿರುವ ಶ್ರೀ ಹರಿಯ ರೂಪಗಳು ಬ್ರಹ್ಮಾಂಡದಲ್ಲಿ ವ್ಯಾಪಿಸಿಕೊಂಡಿರುತ್ತವೆ. ಕಾರಣಗತ ರೂಪಗಳು, ಅಂಶ-ಅಂಶಿ ರೂಪಗಳು. ಪೃಥು ಮುಂತಾದವರಲ್ಲಿರುವ ಆವೇಶ ರೂಪಗಳು, ವ್ಯಾಪ್ತ ರೂಪಗಳು, ಅವತಾರ ರೂಪಗಳು, ಕಾರ್ಯಘಟ ಮುಂತಾದವು

ಗಳಲ್ಲಿರುವ ರೂಪಗಳು, ಅವ್ಯಕ್ತಗತ ರೂಪಗಳು ವ್ಯಕ್ತವೆನಿಸಿರುವ ಮಹತ್ತತ್ವ ಮುಂತಾದವುಗಳಲ್ಲಿರುವ ರೂಪಗಳು. ಹೀಗೆ ಇರುವ ಪರಮಾತ್ಮನ ತತ್ವಗತ ವಾದ ರೂಪಗಳೂ, ವಿಭೂತಿ ರೂಪಗಳೂ, ಅಂತರ್ಯಾಮಿ ರೂಪಗಳೂ, ಅಸಂಖ್ಯವಾಗಿ ಬ್ರಹ್ಮಾಂಡದಲ್ಲಿ ತುಂಬಿಕೊಂಡಿರುತ್ತವೆ. ॥ ೨೭ ॥

**ಅವತರಣಿಕಾ :** "ಸೂತ್ರೇ ಮಣಿಗಣಾ ಇವ" ಎಂಬ ಗೀತೆಯ ವಾಕ್ಯದಂತೆ ಮಣಿಗಳಿಗೆ ದಾರವು ಆಧಾರವಾಗಿದ್ದಂತೆ ಸೂತ್ರ ರೂಪದಿಂದ ಅಂದರೆ ಮೂಲ ರೂಪ ದಿಂದ ಸರ್ವ ಜಡ ಚೇತನಾತ್ಮಕ ಜಗತ್ತಿಗೆ ಆಧಾರನಾಗಿರುವನೆಂದು ಉಪದೇಶಿಸು ತ್ತಾರೆ.




ಮೂಲ :

**ಮಣಿಗಳೊಳಗಿಹ ಸೂತ್ರದಂದದಿ ।**
**ಪ್ರಣವಪಾದ್ಯನು ಚೇತನಾ ಚೇ ।**
**ತನ ಜಗತ್ತಿನೊಳನುದಿನದಲಾಡುವನು ಸುಖ ಪೂರ್ಣ ॥**
**ದಣಿವಿಕೆಯು ಇವಗಿಲ್ಲ ಬಹು ಕಾ ।**
**ರುಣಿಕನಂತಾನಂತ ಜೀವರ ।**
**ಗಣದೊಳೇಕಾಂಶಾಂಶ ರೂಪದಿ ನಿಂತು ನೇಮಿಸುವ ॥ ೨೮ ॥**

**ಪದ್ಯಾರ್ಥ :** ಮಣಿಗಳೊಳಗಿಹ ಸೂತ್ರದಂದದಿ=ಜಪಮಾಲಾದಿ ನವರತ್ನಾದಿ ಮೌಕ್ತಿಕಾದಿ ಮಣಿಗಳು ಬೇರೆಯಾಗಿದ್ದರೂ ಒಂದು ದಾರದಲ್ಲಿ ಪೋಣಿಸಿದರೆ ಆಧಾರವು, ಎಲ್ಲ ಮಣಿಗಳಿಗೆ ಹೇಗೆ ಆಧಾರವಾಗಿರುವುದೋ ಹಾಗೆ ಪ್ರಣವ ಪ್ರತಿಪಾದ್ಯನು=ಓಂಕಾರ ವಾಚ್ಯನಾದ ಓಂಕಾರ ಸ್ತುತ್ಯನಾದ ಗುಣ ಪರಿಪೂರ್ಣ ನಾರಾಯಣನು ಚೇತನಾಚೇತನ ಜಗತ್ತಿನೊಳಗೆ ಅನು ದಿನದಲಾಡುವನು=ಜೀವ ಜಡಾತ್ಮಕವಾದ ಸಕಲ ಜಗತ್ತಿನಲ್ಲಿ ನಿತ್ಯ ಅನಂತ ರೂಪಗಳಿಂದ ಕಾರ್ಯ ಮಾಡುವನಾದರೂ, ಸುಖಪೂರ್ಣ=ನಿತ್ಯಾನಂದ ನಿತ್ಯ ಸುಖಿ, ಜ್ಞಾನಾನಂದಾದಿ ಗುಣಪೂರ್ಣನು. ಇವನಿಗೆ ದಣಿವಿಕೆಯು ಇವಗಿಲ್ಲ=ಈತನಿಗೆ ಅನಂತ ರೂಪಗಳಿಂದ ಅನಂತ ಕಾರ್ಯ ಮಾಡಿದರೂ, ಲೇಶವಾದರೂ ಆಯಾಸವು ಇಲ್ಲ. ಏಕಂದರೆ ಶ್ರಮ ದೋಷಾದಿಗಳಿಲ್ಲ ದವನೂ, ಸುಖಪೂರ್ಣನೂ ಆಗಿರುತ್ತಾನೆ. ಬ್ರಹ್ಮಾಂಡ ಕಾರ್ಯದಿಂದ ಈತನಿಗೆ ಪ್ರಯೋಜನವಿದೆಯೇ ಹೇಗೆ ಎಂದರೆ, ಇಲ್ಲ–ಸುಖ ಪೂರ್ಣನಿಗೆ

ಏನೂ ಪ್ರಯೋಜನವಿಲ್ಲ. ಜೀವರುಗಳು ಅನಂತ-ಇವರ ಮೇಲೆ ಕರುಣೆ ಮಾಡಿ, ಅವರವರ ನಿಜಗತಿ ಕೊಡುವಗೋಸುಗ ಕರುಣದಿಂದ ಅನಂತ ಜೀವರಾಶಿಗಳೊಳಗೆ ಏಕಾಂಶಾಂಶ ರೂಪದಿ=ಜೀವಾಂತರ್ಯಾಮಿಯಾಗಿ ಭಿನ್ನಾಂಶರಾದ ಜೀವರಾದ- ಪ್ರತಿಬಿಂಬರಲ್ಲಿ ಅನೇಕ ಅಂಶದಿಂದ ಇದ್ದರೂ, ಮೂಲರೂಪಿಗೆ (ಏಕಾಂಶನಿಗೆ) ಅತ್ಯಂತ ಅಭೇದವಾಗಿರುವನು. ಹೀಗೆ ಅಂಶಾಂಶ ರೂಪದಿಂದ ಸಕಲರಲ್ಲೂ ನಿಂತು, ಇದ್ದು ಕಾರ್ಯ ಪ್ರವೃತ್ತಿ ಮಾಡಲು ನೇಮಿಸುವ=ನಿಯಮನ ಮಾಡುವನೆಂದು ಹೇಳುತ್ತಾರೆ.

**ಭಾವಸೂಚನ:** ಮಣೇತಿ ॥ ಉಕ್ತಂ ಚ ಸಪ್ತಮ ಗೀತಾಯಾಂ ॥ ಮಯಿ ಸರ್ವಮಿದಂ ಪ್ರೋಕ್ತಂ ಸೂತ್ರೇ ಮಣಿಗಣಾ ಇವೇತಿ ॥ ೨೮ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಮಣಿ" ಇತಿ ॥ ಮಯಿ ಸರ್ವಮಿದಂ ಪ್ರೋಕ್ತಂ ಸೂತ್ರೇ ಮಣಿಗಣಾ ಇವ ॥ ಇತ್ಯುಕ್ತೇಃ ॥ ೨೮ ॥

**ಕನ್ನಡಾರ್ಥ**

ಪ್ರಣವ-ಓಂಕಾರ-ವಾಚ್ಯನಾದ ಶ್ರೀಹರಿಯು ಚೇತನಾತ್ಮಕ ವಿಶ್ವದಲ್ಲಿ ಮಣಿಗಳಿಗೆ ಸೂತ್ರದಂತೆ ಆಧಾರನೂ ಓತಪ್ರೋತನಾಗಿಯೂ ಇದ್ದು ಜೀವ ರಾಶಿಗಳಲ್ಲಿ ಅಂತರ್ನಿಯಾಮಕವಾಗಿ ಬಹುವಿಧ ವ್ಯಾಪಾರಗಳನ್ನು ನಡೆಯಿ ಸುತ್ತ ಕ್ರೀಡಿಸುತ್ತಲಿರುತ್ತಾನೆ. ಗೀತೆಯಲ್ಲಿ ಶ್ರೀಕೃಷ್ಣನು ಅರ್ಜುನನಿಗೆ "ನನ್ನಲ್ಲಿಯೇ ಈ ಸಮಸ್ತ ವಿಶ್ವವು ಆಧಾರವನ್ನು ಹೊಂದಿದೆ. ಸೂತ್ರವು ಮಣಿಗಳಿಗೆ ಹೇಗೋ ಹಾಗೆ ನಾನು ಈ ವಿಶ್ವಕ್ಕೆ ಆಧಾರ; ನಾನು ಓತ ಪ್ರೋತವಾಗಿ ವಿಶ್ವವ್ಯಾಪ್ತ" ಎಂದು ಉಪದೇಶಿಸಿರುತ್ತಾನೆ. ॥ ೨೮ ॥

**ಅವತರಣಿಕಾ:** ಪಂಚಭೇದಗಳನ್ನರಿತು ವಿಷ್ಣು ಸರ್ವೋತ್ತಮ. ವಾಯು ಜೀವೋತ್ತಮ ಜಗತ್ ಸತ್ಯ-ತಾರತಮ್ಯ ಪಂಚಭೇದ ನಿತ್ಯವೆಂದರಿತರೆ ಮುಕ್ತಿಯಾಗು ತ್ತದೆ. ಜೀವಾನಂತ ಜಡಾನಂತ ಶ್ರೀಹರಿರೂಪ ಅನಂತವಿದ್ದರೂ, ಜಡಚೇತನ ವಿಲಕ್ಷಣನೆಂದು ಹೇಳುತ್ತಾರೆ.

ಮೂಲ :

**ಜೀವ ಜೀವರು ಭೇದ ಜಡಜಡ ।**
**ಜೀವ ಜಡಜಡ ಜೀವರಿಂದಲಿ ।**
**ಶ್ರೀವರನು ಅತ್ಯಂತ ಭಿನ್ನ ವಿಲಕ್ಷಣನು ಲಕ್ಷ್ಮೀ ॥**

**ಮೂವರಿಂದಲಿ ಪದ್ಮಜಾಂಡದಿ ।**
**ತಾ ವಿಲಕ್ಷಣಳೆನಿಸುತಿಪ್ಪಳು ।**
**ಸಾವಧಿಕ ಸಮಶೂನ್ಯಳೆಂದರಿತೀರ್ವರನು ಭಜಿಸು ॥ ೨೯ ॥**

**ಪದ್ಯಾರ್ಥ :** ೧) ಜೀವ ಜೀವರು ಭೇದ=ಜೀವರು ಅನಂತವಿದ್ದರೂ ಒಬ್ಬೊಬ್ಬರಲ್ಲಿ ಪರಸ್ಪರ ಭೇದ, ೨) ಜಡಗಳು ಅನಂತವಿದ್ದರೂ ಜಡಗಳಲ್ಲಿ ಪರಸ್ಪರ ಭೇದ, ೩) ಇಂಥ ಜೀವರಿಗೂ ಜಡಗಳಿಗೂ ಭೇದ, ೪) ಜೀವ ಪರಮಾತ್ಮನಿಗೂ ಭೇದ, ೫) ಜಡ ಪರಮಾತ್ಮನಿಗೂ ಭೇದ ಹೀಗೆ ಪಂಚ ಭೇದ ನಿತ್ಯ ಸತ್ಯ. ಇಂತು ಜೀವ ಜಡರಿಂದ ಶ್ರೀವರನು=ಶ್ರೀ ಲಕ್ಷ್ಮೀಪತಿಯಾದ ಹರಿಯು, ಉಭಯರಿಂದ ಅತ್ಯಂತ ಭಿನ್ನನು. ಸಚ್ಚಿದಾನಂದ ರೂಪಿಯು, ತಾ ವಿಲಕ್ಷಣನು=ತಾನು ಅಸಾಮಾನ್ಯನು. ಹೊಸದೊಂದು ತೆರದ ಆಶ್ಚರ್ಯಪುರುಷನು ಇರುವನು. ಲಕ್ಷ್ಮೀ=ಶ್ರೀ ರಮಾದೇವಿಯರು, ಮೂವರಿಂದಲಿ=ಜೀವ ಜಡ ಪರಮಾತ್ಮನಿಂದಲಿ ತಾ ವಿಲಕ್ಷಣಳೆನಿಸುತಿಪ್ಪಳು=ಶ್ರೀ ಲಕ್ಷ್ಮೀದೇವಿಯು-ತಾನು. ವಿಲಕ್ಷಣಳೆನಿಸುತಿಪ್ಪಳು=ಈ ಮೂವರಿಂದ ಬೇರೆಯಾಗಿಪ್ಪಳು, ಸಾವಧಿಕ ಸಮಶೂನ್ಯಳೆಂದರಿತು, ಜಡ ಜೀವರಿಂದ ವಿಲಕ್ಷಣಳು, ನಿತ್ಯ ಮುಕ್ತಳು, ಪರಮಾತ್ಮನ ಆಧೀನಳಾಗಿ ದೇಶ ಕಾಲ ಸಮಳು, ಅನಂತ ಗುಣದಿಂದ ಶೂನ್ಯಳು, ಅತಏವ ಜೀವರಿಂದ ಭಿನ್ನಳಾದ ಕಾರಣ, ಈಶಕೋಟಿ ಪ್ರವಿಷ್ಟಳೆಂದು ಅನೇಕ ಶ್ರುತಿಗಳುಂಟು. ಇದರಂತೆ ದಾಸಾರ್ಯರು "ಈಶಕೋಟಿ ಪ್ರವಿಷ್ಟಳಾ ನಿತ್ಯ ಮುಕ್ತಳಾ" ಎಂದು ಲಕ್ಷ್ಮೀದೇವಿಯನ್ನು ಈಶಕೋಟಿಯೊಳಗೆ ಗಣನೆ ಎಂದು ಹೇಳಿದ್ದಾರೆ. ಹೀಗೆ ಸಮಾಸಮಳಾದ ಶ್ರೀ ಲಕ್ಷ್ಮೀ ಸಹಿತ ನಾರಾಯಣ ಈರ್ವರನು=ಇಬ್ಬರನ್ನು ಭಜಿಸಲು ಉಪದೇಶ ಮಾಡಿದ್ದಾರೆ.

**ಸೂಚನೆ:** ಹಿಂದಿನ ೧-೨ ವ್ಯಾಖ್ಯಾನದಲ್ಲಿ ಲಕ್ಷ್ಮೀದೇವಿಗೆ ಪಂಚ ಭೇದ ಗಣನೆ ಮಾಡುವ ಕಾಲಕ್ಕೆ ಅನುವ್ಯಾಖ್ಯಾನದಲ್ಲಿ ಜೀವಕೋಟಿ ಪ್ರವಿಷ್ಠಳೆಂದು ಬರೆದಿರುವರು. ಇದು ಬಹು ಪ್ರಮಾಣ ವಿರೋಧವಲ್ಲದೇ ಅನುವಾಖ್ಯಾನ ಅರ್ಥ ಹಾಗಲ್ಲ. ನಿತ್ಯ ಮುಕ್ತಳಾದ ರಮೆಯು ಪರಮಾತ್ಮನ ಆಧೀನಳಾಗಿ ಸರ್ವ ದೇಶ ಕಾಲಗಳಲ್ಲಿ ಇರುವಳಾಗಿ ಆಧೀನತ್ವ=ಅತಿ ಸಾಮಿಪ್ಯತ್ವ ಹೇಳಿದ ಮೇಲೆ ಈಶಕೋಟಿ ಗಣನೆ ಎಂದು ತಿಳಿಯುವದು

ಸಂಭಾವಿತ. ಮತ್ತು ಜೀವರ ಲಕ್ಷಣ ಜಡಲಕ್ಷಣಗಳನ್ನು ಶಾಸ್ತ್ರ ರೀತ್ಯಾ ಬಹು ವಿಶದವಾಗಿ ಜ್ಞಾನಿಶ್ರೇಷ್ಠರಾದ ದ್ರೌಪದೀಶಪತಿ ವಿಠಲರು ಮುಂದೆ ರಹಸ್ಯವಾಗಿ ವರ್ಣಿಸಿದ್ದಾರೆ. ಅತ್ಯಾವಶ್ಯ ನಿತ್ಯ ನೆನಪಿನಲ್ಲಿಡುವದು.

**ದ್ರೌಪದೀಶಪತಿ ವಿಠಲರು :** ಜೀವ ಜೀವರ ಭೇದ ॥ ಜೀವಾನಂತ ಜಡಾನಂತ ಇರುವದರಿಂದ, ಅನಂತ ಭೇದ ಇರಲಿಕ್ಕೆ, ೫ ಭೇದ ಹೇಗೆಂದರೆ, ಅನಂತ ಜೀವರುಗಳಿಗೂ ಪರಸ್ಪರ ಭೇದವೆಂದರೆ, ಜಡ ಜಡಗಳಿಗೂ ಹೀಗೇ ಸರಿ. ಜೀವಗೆ ಬಾಲಾಗ್ರ ಸಹಸ್ರ ಭಾಗೈಕ ಪ್ರಮಾಣ ಕಂಡಿತು. ಜಡ ಗಳಲ್ಲಿ ಮೇರುವಿನಲ್ಲಿ ಅನಂತಾಂಶ ಸರ್ಷಪದಲ್ಲಿಯೂ ಅನಂತಾಂಶಾ "**ಅವಿ ಭಾಗ ಪರಾಣತಾ**"**ಯಂತ ಸುಧೋಕ್ತಿ** ॥ ಆದುದರಿಂದ ಜಡ-ಜೀವನ ಹಾಗೆ ಪ್ರಮಾಣವೇ ಇಲ್ಲದ ಮೇಲೆ ಇದು ಒಂದು ಜಡ, ಅದು ಒಂದು ಜಡ ಹೇಗೆಂದರೆ, ಪ್ರಕೃತಿ-ಪರಮ ಸೂಕ್ಷ್ಮ ವ್ಯಾಪ್ತ ಇದ್ದುದರಿಂದ, ಗುಣತ್ರಯ ಸೃಷ್ಟಿ "**ತ್ರಿಗುಣಾನ್ ಪ್ರಕೃತೇಃ ಪರಃ** ॥ ಎಂದು ಪ್ರಮಾಣ ಮತ್ತು ॥ "**ಖಂಡಿತೇ ಐಕ್ಯಭೇದಂ ಯಥಾವದ್ ವಸ್ತು ನಭೇದವತು**" ಎಂತಲೂ ಪ್ರಮಾಣ. ಇದರಿಂದ ಗುಣತ್ರಯಾತ್ಮಕ ಸೂಕ್ಷ್ಮ ಪ್ರಕೃತಿಯಲ್ಲೇ ಅನಾದಿ ಯಿಂದ ಪರಸ್ಪರ ಗುಣತ್ರಯಗಳಿಗೆ ಅತ್ಯಂತ ಭೇದ. ಇಂಥಾ ಗುಣತ್ರಯ ಮಿಶ್ರಭೂತವಾಗೆ ಮಹತ್ತತ್ವಾದಿ ಜಡ ಅಖಂಡವೂ ಮೂಲ ಪ್ರಕೃತಿಯಲ್ಲಿ ಇದ್ದಾಗ, ಅಭೇದದ ಹಾಗೆ ತೋರೋಣ ಹೀಗೆ ಜಡಭೇದ.

ಜೀವರಿಗೆ ಪ್ರಮಾಣ ಇದ್ದ ಪ್ರಯುಕ್ತ ಪರಸ್ಪರ ಭೇದ. ಜಡದ ಹಾಗೆ ಒಂದು ಗುಣದಾಗ ಒಂದು ಗುಣ ಸಂಯೋಗವಿಲ್ಲ. ಆದುದರಿಂದ ಜೀವಾಜೀವ ಭೇದ ೧, ಜಡಜಡ ಭೇದ ೨, ಜೀವ ಜಡ ಭೇದ ೩, ಜೀವ ಪರಮಾತ್ಮ ಭೇದ ೪, ಜಡ ಪರಮಾತ್ಮ ಭೇದ ೫.

ಜೀವರೊಳಗೆ ಸಜಾತಿ ವಿಜಾತಿ ಅನಂತಾನಂತ ಬ್ರಹ್ಮರು ಒಂದೇ ಸಮಾನ ಆನಂದ ಪದ ಐಶ್ವರ್ಯಾದಿ ಗುಣಗಳು ಉಳ್ಳವರು. ರಾಶಿಯೊಳಗೆ ಹ್ಯಾಂಗಿದ್ದಾರೆ ಎಂದರೆ "**ಪರಮಾಣು ಪ್ರದೇಶೇಷು ಹ್ಯನಂತ ಪ್ರಾಣಿ ರಾಶಯಃ** ॥" ವಟಬೀಜದಲ್ಲಿ ವೃಕ್ಷ ಹ್ಯಾಗೆ ಅಡಗಿರುತ್ತದೋ ಹಾಗೆ ಇರು ತ್ತಾರೆ. ಇದೇ ಸಜಾತಿ ಜೀವರ ಭೇದ ॥

ಬ್ರಹ್ಮಗೆ ವಿಜಾತಿ, ಗರುಡ ಶೇಷ. ಇವರಿಗೆ ಇಂದ್ರ, ಹೀಗೆ ಸರ್ವರಿಗೂ ಕ್ರಮ ಉಂಟು. ಇವರಲ್ಲಿಯೂ ಒಬ್ಬರಿಗೆ ಒಬ್ಬ ಗಣ-ಸಜಾತೀಯರುಂಟು.

ಸ್ವರವರ್ಣಾತ್ಮಕ ವೇದ ಜಡ ೧, ಕ್ಷಣ, ಲವಾದಿಯುಕ್ತ ಜಡಕಾಲ, ಎರಡು ಪ್ರಕಾರ. ಕ್ಷಣ, ಲವಾದಿ ಕಾಲ ಅನಿತ್ಯ, ಮಹಾ ಕಾಲಾದಿ ನಿತ್ಯ ೨. ಶಬ್ದಾತ್ಮಕ ಅವ್ಯಾಕೃತಾಕಾಶ ನಿತ್ಯ, ಪುರಾಣಾದಿಗಳು ಶಬ್ದತಾ ಅನಿತ್ಯ. ಅರ್ಥತಾ ನಿತ್ಯ ೩.

ಪಂಚಭೇದದಲ್ಲಿ ಲಕ್ಷ್ಮೀಯನ್ನ ಕಲಸದೇ ಹೋದರೆ ಷಡ್ಭೇದವಾಗುತ್ತದೆ. ವಿಲಕ್ಷಣಗಳು ಲಕ್ಷ್ಮೀ, ಜೀವರ ಹಾಗೆ ಸೃಜ್ಯಾಸೃಜ್ಯ, ಲಿಂಗ ಸಂಬಂಧ ಲಿಂಗ ಭಂಗ, ಬಾಲಾಗ್ರ ಸಹಸ್ರಭಾಗ ಪ್ರಮಾಣ ಸಾಧನದಿಂದ ಬಂಧ ಮುಕ್ತಿ, ಪದದಿಂದ ದುಃಖಪ್ರಾಪ್ತಿ. ಈ ಮುಂತಾದುವು ಬ್ರಹ್ಮನ ಪದದ ಹಾಗೆ ರಮಾದೇವಿಯು ಇಲ್ಲ. ಸಾವಧಿಕ ಸಮಶೂನ್ಯಳು ಎಂದರೆ, ರಮಾ ದೇವಿ ಬ್ರಹ್ಮಾದಿಗಳಿಂದ ಅಧಿಕ, ಶ್ರೀಹರಿಗೆ ದೇಶತಃ ಕಾಲತಃ ಸಮ, ಶೂನ್ಯಳು ಎಂದರೆ ಗುಣತಃ ಅಸಮಳು. ಕೋಟಿ ಶಬ್ದಾರ್ಥವೇನಂದರೆ, ಒಬ್ಬಗೆ ಕೋಟಿ ಶಬ್ದ ಬಾಹೋದಿಲ್ಲ, ಪರಮಾತ್ಮ ಅನಂತ ರೂಪಿಯಾದರೂ ಒಬ್ಬನೇ ಸರಿ. ಜೀವರಿಂದ ವಿಲಕ್ಷಣಳಾದ ಲಕ್ಷ್ಮೀ **ಈಶಕೋಟಿ ಗಣನೆ** "ಏಕ ಭಿನ್ನಮಾನಂತಂ"ತೀರ್ವರನು ಭಜಿಸು ‖ ೨೯ ‖

**ಭಾವಸೂಚನ:** ಪಂಚಭೇದ ಜ್ಞಾನಾಮಪಿ ಮುಕ್ತಾವಂತರಂಗಂ ಸಾಧನಂ ‖ ಭಾ ‖ ಪಂಚಭೇದಾಶ್ಚ ವಿಜ್ಞಾಯೇತಿ ‖ ಗುಣೋದ್ರೇಕಂ ಜ್ಞಾತ್ವಾ ಮುಕ್ತಿರ್ನಚಾನ್ಯಥೇತಿ ಚಾ ವಚನಾದಿತ್ಯಭಿ ಪ್ರೇತ್ಯತಾನಾಹ ‖ ಜೀವೇತಿ ‖ ಈರ್ವರು–ಇಬ್ಬರು ‖ ೨೯ ‖

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಪಂಚಭೇದಾಂಶ್ಚ ವಿಜ್ಞಾಯ" ಇತಿ ಮುಕ್ತ್ಯಂತರಂಗ ಭೇದ ಪಂಚ ಕಮಾಹ "ಜೀವ" ಇತಿ ‖ "ಜೀವೇಶಯೋಃ ಭಿದಾ" ಇತ್ಯುಕ್ತೇಃ‖ ಮೂವರು ಜಡ ಜೀವೇಶಾಃ ‖ ಹರಿರವಧಿಃ । ಹರೇ ಆಧಿಕ್ಯಾತ್ ಅನ್ಯಸ್ಯ ಅವರತ್ವಾತ್ ಸಮಶೂನ್ಯಃ ‖ ಈರ್ವರು= ಇಬ್ಬರು ‖ ೨೯ ‖

**ಕನ್ನಡಾರ್ಥ**

"ಪಂಚಭೇದಗಳನ್ನು ಅರಿತು, ವಿಷ್ಣು ಸರ್ವೋತ್ತಮತ್ವ, ವಾಯು

ಜೀವೋತ್ತಮತ್ವ, ಜಗತ್ಸತ್ಯತ್ವ ಜ್ಞಾನವನ್ನು ಪಡೆದು, ಭಗವಂತನನ್ನು ಆರಾಧಿಸಿದರೇ ಮೋಕ್ಷವಾಗುತ್ತದೆ" ಎಂದು ಮುಕ್ತಿಯನ್ನು ಕುರಿತು ತಾರತಮ್ಯ ಭೇದ ಪಂಚಕವು. ಅಂತರಂಗ ಸಾಧನವಾದುದರಿಂದ ಪಂಚ ಭೇದಗಳನ್ನು ಇಲ್ಲಿ ಹೇಳುತ್ತಾರೆ. "ಜೀವ ಜೀವರ" ಎಂಬ ಪದ್ಯದಿಂದ ೧) ಜೀವ–ಜೀವರ ಗಳಲ್ಲಿ ಭೇದ, ೨) ಜಡ–ಜಡಗಳಲ್ಲಿ ಭೇದ, ೩) ಜೀವ–ಪರಮಾತ್ಮರಲ್ಲಿ ಭೇದ, ೪) ಜಡ–ಪರಮಾತ್ಮರಲ್ಲಿ ಭೇದ, ೫) ಜೀವ–ಜಡಗಳಲ್ಲಿ ಭೇದ. ಶ್ರೀ ಲಕ್ಷ್ಮಿಯು ಜಡ ಜೀವರಿಂದ ವಿಲಕ್ಷಣಳೂ, ಪರಮಾತ್ಮನಿಂದ ಭಿನ್ನಳೂ ಆಗಿದ್ದು–ಪರಮಾತ್ಮನ ತರುವಾಯ ಸರ್ವೋಚ್ಚಳಾದುದರಿಂದ ಶ್ರೀ ಲಕ್ಷ್ಮೀ ಸಹಿತವಾಗಿ ಶ್ರೀಹರಿಯನ್ನು ಸಮಾಧಿಕ ಶೂನ್ಯನೆಂದು ಭಜಿಸು. ಪರಮಾತ್ಮನಿಗೆ ಅಧಿಕರು ಇಲ್ಲ; ಮಿಕ್ಕವರು ಕಮ್ಮಿಯುವರು; ಆದುದರಿಂದ ಅಸಮ. || ೨೯ ||

ಅವತರಣಿಕಾ : ಶ್ರೀಹರಿಯ ಮಹಿಮೆ ಅನಂತಾನಂತ, ಗುಣರೂಪಕ್ರಿಯಾ ಅನಂತ, ದೇವತೆಗಳು ತಿಳಿಯದ ಗುಣ, ವಾಣಿ ಭಾರತಿಯರು ತಿಳಿದಿದ್ದಾರೆ. ಇವರರಿಯದ ಅನಂತ ಗುಣ-ಬ್ರಹ್ಮ ವಾಯುಗಳು ತಿಳಿದಿದ್ದಾರೆ. ಇವರು ತಿಳಿಯದ ಗುಣ ಶ್ರೀ ರಮಾದೇವಿಯರು ತಿಳಿದಿದ್ದಾರೆಂದು ತಾರತಮ್ಯ ತೋರಿಸಿ ಶ್ರೀಹರಿಯೇ ಸರ್ವೋತ್ತಮ.

ಮೂಲ :

**ಅದಿತೇಯರು ತಿಳಿಯದಿಹ ಗುಣ ।**
**ವೇದ ಮಾನಿಗಳೆಂದೆನಿಪ ವಾ ।**
**ಣ್ಯಾದಿಗಳು ಬಲ್ಲರವರರಿಯದ ಗುಣಂಗಳನು ॥**
**ವೇಧ ಬಲ್ಲನು ಬೊಮ್ಮನರಿಯದ ।**
**ಗಾಧ ಗುಣಗಳು ಲಕುಮಿ ಬಲ್ಲಳು ।**
**ಶ್ರೀಧರೊಬ್ಬನುಪಾಸ್ಯ ಸದ್ಗುಣಪೂರ್ಣ ಹರಿಯೆಂದು ॥ ೩೦ ॥**

**ಪದ್ಯಾರ್ಥ :** ಶ್ರೀಹರಿಯೇ ಸರ್ವೋತ್ತಮ–ಸದ್ಗುಣ ಪೂರ್ಣನೆಂದು ಭಜಿಸಬೇಕೆಂದು ಏಕೆ ಉಪದೇಶ ಮಾಡುತ್ತಾರೆಂದರೆ, ಶ್ರೀಹರಿಯು ಅನಂತ ಗುಣ ಪೂರ್ಣನು. ಅನಂತ ವೇದವೇದ್ಯನು. ಇಂಥಾ ಮಹಾಮಹಿಮನನ್ನು ಅಧಿಕಾರಾನುಸಾರ ದೇವತೆಗಳೇ ಪೂರ್ಣ ತಿಳಿಯುವದಿಲ್ಲವಾದರೂ, ಅದಿತೇಯರು ಕೆಲ ಗುಣಗಳನ್ನು ಮಾತ್ರ ತಿಳಿದಿದ್ದಾರೆ. ಈ ಅದಿತೇಯರು=

ಅದಿತಿ ಪುತ್ರರಾದ ದೇವತೆಗಳು ತಿಳಿಯದಿಹ ಗುಣ=ತಿಳಿಯದೇ ಇರುವ ಗುಣಗಳನ್ನು, ವೇದಮಾನಿಗಳೆಂದೆನಿಪ=ವೇದಕ್ಕೆ ಅಮುಖ್ಯಾಭಿಮಾನಿಗಳಾದ ವಾಣ್ಯಾದಿಗಳು ಬಲ್ಲರು. ಸರಸ್ವತೀ ಭಾರತೀ ದೇವಿಯರು ಬಲ್ಲರು. ಇವರೀರ್ವರು ಅರಿಯದ= ತಿಳಿಯದ ಗುಣಗಳನ್ನು ವೇಧ ಬಲ್ಲನು=ಬ್ರಹ್ಮದೇವರು ಬಲ್ಲರು. ಬೊಮ್ಮನರಿಯದ ಅಗಾಧ ಗುಣಗಳನು ಲಕುಮಿ ಬಲ್ಲಳು= ಬ್ರಹ್ಮದೇವರು ತಿಳಿಯದ ಅತ್ಯಾಶ್ಚರ್ಯಕರವಾದ ಭಗವದ್ಗುಣಗಳನ್ನು ಲಕುಮಿ=ಶ್ರೀದೇವಿಯು ಬಲ್ಲಳು. ಕಾರಣ ಶ್ರೀಧರೊಬ್ಬನುಪಾಸ್ಯ=ವಕ್ಷಸ್ಥಳದಲ್ಲಿ ಶ್ರೀ ರಮೆಯನ್ನು ಧರಿಸಿದ ಶ್ರೀಹರಿಯೇ ಒಬ್ಬನು, ಸದ್ಗುಣಪೂರ್ಣ= ಅನಂತ ಜ್ಞಾನಾನಂದ ಐಶ್ವರ್ಯ ಬಲಾದಿ ಗುಣಗಳುಳ್ಳವನೆಂದು ಪೂಜಿಸಬೇಕು.

**ವಿಶೇಷ ಸೂಚನೆ:** ಯಾವ ಯಾವ ದೇವತೆಗಳ ಜ್ಞಾನ ಎಷ್ಟು, ದೇಶ ಕಾಲ ಪರಿಮಿತ, ಎಲ್ಲಿ ಪರಿಯಂತ ವ್ಯಾಪ್ತವಾಗಿರುವ ಶ್ರೀಹರಿಯ ಗುಣರೂಪ ಕ್ರಿಯಗಳನ್ನು ಭಜಿಸುತ್ತಾರೆಂಬುದನ್ನು, ಶ್ರೀ ವಿಜಯದಾಸರ ಉಪಾಸನಾ ಭಾಗ ಸುಳಾದಿಗಳಿಂದ ತಿಳಿಯುವದು.

**ದ್ರೌಪದೀಶಪತಿ ವಿಠಲರು :** ಆದಿತೇಯರು ತಿಳಿಯದಿಹ ||

**ಭಾವಸೂಚನ :** ಆದಿತೇಯೇತಿ|| ಉಕ್ತಂ ಚಾ ಜ್ಞಾನಪಾದೀಯಾಣು ಭಾಷ್ಯೇ || "ಗಿರಿಶೋ ಗರುಡಶ್ಚೈವ, ತಮೋ ಮಾತ್ರಗತಂ ಹರಿಂ || ಪಶ್ಯೇದ್ವಿಶೇಷಾ ನಪಿಹಿ ವಾಣೀ ದೃಷ್ಟ್ವಾ ನಪಶ್ಯತೀತಿ|| ವೇಧೇತಿ ಪಶ್ಯಂತ್ಯಜ.ನತಥಾ ವಾಣೀ ವಿಶೇಷಾಂ ಸ್ಥಾವತೋತ್ಯುಕ್ತೇಃ || ಬೊಮ್ಮೇತಿ || ನರಮಾವದ್ವಿಶೇಷಾಣಾಂ ದರ್ಶನಂ ಶಕ್ನುಯಾಕ್ವಚಿದಿತಿ ವಚನಾತ್ || ೩೦ ||

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಆದಿತೇಯು" ಇತಿ || ಆದಿತೇಯಾಃ ದೇವಾಃ || ವೇಧ=ಬ್ರಹ್ಮಾ || ಶ್ರೀಧರಃ ಓಂ* ಗವ್ಯುಗ್ರೇ ಮಥೀನಾಂ ಏತತ್ತ ಇಂದ್ರವೀರ್ಯಂ ಗೋಭಿರ್ಗೃಣಂತಿ ಕಾರವಃ || ತೇ ಸ್ತೋಭಂತ ಊರ್ಜಮಾವನ್ ಘೃತಶ್ರುತಮ್ ||* ಓಮ್ || ಶ್ರಯತೇ ಇತಿ ಶ್ರೀಃ ವೀರ್ಯಮ್ || ತದ್ ಧರತಿ ಇತಿ ತಥೋಕ್ತಃ || ೩೦ ||

## ಕನ್ನಡಾರ್ಥ

ಅವರ (ಕಡಿಮೆಯವರಾದ) ದೇವತೆಗಳಿಗಿಂತಲೂ ಅಧಿಕವಾಗಿ ಸರಸ್ವತಿ ಮುಂತಾದವರು ತಿಳಿಯುತ್ತಾರೆ. ಸರಸ್ವತಿ ಮುಂತಾದವರಿಗಿಂತಲೂ ಹೆಚ್ಚಿಗೆ ಭಗವಂತನ ಗುಣಗಳನ್ನು ಬ್ರಹ್ಮದೇವರು ತಿಳಿಯುತ್ತಾರೆ. ಶ್ರೀ ಲಕ್ಷ್ಮೀದೇವಿಯು ಬ್ರಹ್ಮದೇವರಿಗಿಂತಲೂ ಅತಿ ಅಧಿಕವಾಗಿ ಹರಿಯ ಗುಣಗಳನ್ನು ತಿಳಿಯುತ್ತಾಳೆ. ಶ್ರೀ ಭೂ ದುರ್ಗಾರೂಪಿಣಿಯಾದ ಶ್ರೀ ರಮಾದೇವಿಯರಿಂದ ಅನಂತಾನಂತ ಗುಣಗಳಿಂದ ಉಪಾಸಿತನಾದ ಗುಣಪರಿಪೂರ್ಣ ದೋಷದೂರನಾದ ಶ್ರೀಹರಿಯನ್ನು ಉಪಾಸಿಸು. ಶ್ರೀಧರ ಈ ನಾಮದ ಅರ್ಥವನ್ನು ಬೃಹತೀ ಮಂತ್ರವು ವಿವರಿಸುತ್ತದೆ. ಶ್ರೀ-ಅಂದರೆ ವೀರ್ಯ. ಅದನ್ನು ಧರಿಸಿಕೊಂಡವನು ಪೂರ್ಣವಾದ ವೀರ್ಯ (ಬಲ-ಓಜೋ)ವುಳ್ಳವನು ಎಂದು ಅರ್ಥ ‖ ೩೦ ‖

**ಅವತರಣಿಕಾ:** ಹಿಂದೆ ವರ್ಣಿಸಿದಂತೆ ಶ್ರೀಹರಿಯ ಅನಂತಗುಣ ಮಹಿಮೆ ಕೊನೆಗಾಣದೆ ಶ್ರೀ ಮಹಾಲಕ್ಷ್ಮೀದೇವಿಯರು ಶ್ರೀಹರಿಗೆ ನಿತ್ಯ ದಾಸಿಯರಾಗಿ ಭಗವಂತನನ್ನು ಅನೇಕ ರೂಪದಿಂದ ಸೇವೆಗೈಯ್ಯುವ ಮಹಾತ್ಮೆ ವರ್ಣಿಸುತ್ತಾರೆ.

**ಮೂಲ:**

**ಇಂತನಂತಾನಂತ ಗುಣಗಳ ।**
**ಪ್ರಾಂತಗಾಣದೆ ಮಹಲಕುಮಿ ಭಗ ।**
**ವಂತಗಾಭರಣಾಯುಧಾಂಬರ ಆಲಯಗಳಾಗಿ ‖**
**ಸ್ವಾಂತದಲಿ ನೆಲೆಗೊಳಿಸಿ ಪರಮ ದು ।**
**ರಂತ ಮಹಿಮನ ದೌತ್ಯ ಕರ್ಮ ನಿ ।**
**ರಂತರದಿ ಮಾ(ಪಾ)ಡುತಲಿ ತದಧೀನತ್ವಯೈದಿ(ಹ)ಳು ‖೩೧‖**

**ವಿಶೇಷ ವಿಚಾರ:** ಹಿಂದಿನ ಪದ್ಯದಲ್ಲಿ, ಶ್ರೀ ಲಕ್ಷ್ಮೀ ಸಹಿತನಾಗಿರುವ ಶ್ರೀ ರಮೆ ಮತ್ತು ಹರಿಯನ್ನು ಈರ್ವರನು ಭಜಿಸು ಎಂದು ಏಕೆ ಹೇಳಿದರು? ಸದ್ಗುಣ ಪೂರ್ಣನಾದ ಹರಿಯೊಬ್ಬನೆ. ಈತನೊಬ್ಬನನ್ನೇ ಭಜಿಸುವದೆಂದು ಹೇಳಬೇಕಾಗಿತ್ತು. ಆದರೆ ಮುಕ್ತಾಮುಕ್ತಾ ಅವಸ್ಥಾದಲ್ಲಿ ನಿತ್ಯ ಸ್ವತಂತ್ರ ನಿರ್ದುಷ್ಟನಾದ ಶ್ರೀಹರಿಯನ್ನು ಸದಾ ಕಾಲದಲ್ಲಿ ಅಗಲದೇ ಇರುವ ಲಕ್ಷ್ಮೀದೇವಿಯರ ದ್ವಾರಾ ಸಮಸ್ತ ಮುಕ್ತಾಮುಕ್ತರ ಕ್ರೀಡೆ, ರಮೆಯ ದ್ವಾರವೆ

ಸಕಲ ಬ್ರಹ್ಮಾಂಡದಲ್ಲಿ ಹಿಂದೆ ಮುಕ್ತರಾದ ಜೀವರು ಈ ಬ್ರಹ್ಮಾಂಡದಲ್ಲಿ ಮುಕ್ತರಾಗುವವರು. ಈ ಬ್ರಹ್ಮಾಂಡದಲ್ಲಿ ಇರುವ ಜೀವರು ಮುಂದೆ ಅನೇಕ ಬ್ರಹ್ಮಾಂಡಗಳಲ್ಲಿ ಸೃಜ್ಯರಾಗುವ ಅಸೃಜ್ಯ ಜೀವರಿಗೆ, ನಿತ್ಯ ಮುಕ್ತಳಾದ ರಮೆಯಿಂದಲೆ ಎಲ್ಲ ಕಾರ್ಯ ನಡೆಸುವನಾದ ಕಾರಣ ಶ್ರೀಹರಿಯು ಲಕ್ಷ್ಮೀ ಸಹಿತನನ್ನಾಗಿ ಭಜಿಸಿದರೆ ಪ್ರೀತನಾಗುವನು. (ಇದು ಲೋಕದ ಸಾಮಾನ್ಯ ಉಪಮಾ) ಆದರೆ ಶ್ರೀ ಲಕ್ಷ್ಮೀದೇವಿಯರ ಶಕ್ತಿಯು ಎಂಥದೆಂದರೆ, "ಯಂ ಕಾಮಯೇತಂತುಮುಗ್ರಂ ಕೃಣೋಮಿ. ತಂ ಬ್ರಹ್ಮಾಣಂ ತಂ ಋಷಿಂ ತಂ ಸುಮೇಧಾ" ಎಂಬ ಅಂಭೃಣೀ ಸೂಕ್ತದಂತೆ ಶ್ರೀಮದಾಚಾರ್ಯರು, ದ್ವಾದಶ ಸ್ತೋತ್ರ ೭ನೇ ಅಧ್ಯಾಯದಲ್ಲಿ "ವಿಶ್ವ ಸ್ಥಿತಿ ಪ್ರಲಯ ಸರ್ಗ ಮಹಾ ವಿಭೂತಿ । ವೃತ್ತಿ ಪ್ರಕಾಶ ನಿಯಮಾವೃತಿ ಬಂಧಮೋಕ್ಷಾಃ। ಯಸ್ಯಾ ಅಪಾಂಗಲವ ಮಾತ್ರತ ಊರ್ಜಿತಾಸಾ । ಶ್ರೀರ್ಯತ್ಕಟಾಕ್ಷ ಬಲವತ್ಯಜಿತಂ ನಮಾಮಿ ।। ಎಂದು ಆಜ್ಞೆ ಕೊಡಿಸಿರುತ್ತಾರೆ. ಶ್ರೀ ಲಕ್ಷ್ಮೀ ದೇವಿಯರು ಪರಮಾತ್ಮನ ಕರುಣಾಕಟಾಕ್ಷವೀಕ್ಷಣದಿಂದ ವಿಶ್ವ, ಜಗತ್ತಿನ ಸರ್ಗ ಪಾಲನೆ ಲಯಾದಿ ಬಂಧ ಮೋಕ್ಷಾದಿಗಳನ್ನು ಮಾಡುವ ಶಕ್ತಿಯುಳ್ಳವರೆಂದು ಶ್ರೀದೇವಿಯರ ಅನಂತ ಸಾಮರ್ಥ್ಯ ಪೊಗಳಿದ್ದಾರೆ. ಶ್ರೀಹರಿಯ ಅನುಗ್ರಹವೆಷ್ಟೆಂದು ಪೇಳುವದು. ಅಸ್ವತಂತ್ರಳಾದ ರಮೆಯು, ಸಂತತ ಹರಿಯ ಅಧೀನದಲ್ಲಿರುವ ಕಾರಣ ಪರಮಾತ್ಮನ ಮಹಾ ಪ್ರೀತಿ ಕರುಣಾ ಉಳ್ಳವರಾದರೂ, ಶ್ರೀಹರಿಯ ಅನಂತಾನಂತ ಗುಣೈಕ ದೇಶವನ್ನು ಅರಿಯಳೆಂಬೋ ವಿಷಯವನ್ನು ಈ ಪದ್ಯದಿಂದ ನಿರೂಪಿಸಿದ ಕರುಣಾಳುಗಳು ಜ್ಞಾನಪ್ರದರು. ಜ್ಞಾನವಿತ್ತು ಇಷ್ಟು ವಿಷಯಗಳನ್ನು ಬರೆಸಿದ ದಾಸರ ಸ್ಮರಣೆ ಆನಂದಾಶ್ರುಗಳಿಂದ ಹೊರಸೂಸುತ್ತದೆ.

**ಪದ್ಯಾರ್ಥ :** ಇಂತಹ ಶಕ್ತಿಯುಳ್ಳ ಶ್ರೀ ಮಹಾ ಲಕ್ಷ್ಮೀದೇವಿಯರು, ಇಂತನಂತಾದಿ ಗುಣಗಳ=ಶ್ರೀಹರಿಯಲ್ಲಿ ಅನಂತ ಗುಣಗಳು, ಈ ಅನಂತ ಗುಣ ಒಂದೊಂದರಲ್ಲಿಯೂ ಅನಂತ ಗುಣಗಳ ಏಕದೇಶ-ನಖಾಗ್ರ ಗುಣ ಮಹಿಮಾ ಅರಿಯದೇ ಪ್ರಾಂತಗಾಣದೇ=ಗುಣವು ಇಷ್ಟೇ ಅವುಗಳ ಮಹಿಮೆ ಇಷ್ಟೇ ಎಂದು ಕೊನೆಗಾಣದೇ ಮಹಲಕುಮಿ ಭಗವನ್ಮಹಿಮಾ ಅನಂತವೆಂದು ತಿಳಿದು, ಭಗವಂತನಿಗೆ, ನಾನಾ ಆಭರಣ-ಆಯುಧಗಳು ಪೀತಾಂಬರಾದಿ

ವಸ್ತ್ರಗಳು, ಆಲಯಗಳು-ಶ್ವೇತದ್ವೀಪ-ಅನಂತಾಸನ ವೈಕುಂಠಾದಿ ಮುಕ್ತ ಸ್ಥಾನವಾದ ಶ್ರೀ ಭಾಗಗಳಾಗಿಯೂ, ಸ್ವಾಂತದಲಿ ನೆಲೆಗೊಳಿಸಿ=ಶ್ರೀಹರಿಯು ಯಾವ ರೂಪ ಅವತಾರ ಮಾಡುತ್ತಾನೆಯೋ ಆತನ ಇಚ್ಛೆಯಿಂದ ಅಂಥ ರೂಪವನ್ನೇ ತಾಳಿ, ಸಂತತ ಶ್ರೀಹರಿಯ ವಕ್ಷ ಸ್ಥಳದಲ್ಲಿ ಪರಮ ದುರಂತ ಮಹಿಮನ-ಪರಮ=ಸರ್ವೋತ್ತಮನಾದ, ದುರಂತ "ಅತಿಕ್ರಮಿತುಂ ನಾ ಶಕ್ಯ ಇತಿ." ವಿಷ್ಣು ಸಹಸ್ರನಾಮ ವಚನ. ಆತನ ಮಹಿಮೆ ಪಾರಗಾ ಣಲು ಶಕ್ಯವಲ್ಲವಾದ ಕಾರಣ-ದುರಂತ ದುರತಿಕ್ರಮ. ಶ್ರೀಹರಿಯು ಅಪಾರ ಮಹಿಮನೆಂದು ತಿಳಿದು, ಇಂತಹ ಅಪಾರ ಮಹಿಮನ ದೌತ್ಯಕರ್ಮ=ದೂತಿ-ದಾಸಿಯಾಗಿ ನಿರಂತರದಲ್ಲಿ ಸಂತತವಾಗಿ ಸರ್ವದೇಶ ಕಾಲಗಳಲ್ಲಿ ಮಾಡುತ್ತ ಲಿರುವಳಲ್ಲದೆ ಶ್ರೀಹರಿಯ ಆಜ್ಞಾ ಮೀರದೇ ಇದ್ದು, ನಿತ್ಯ ಹರಿಯ=ತದ ಧೀನತ್ವ ಐದಿಹಳು=ಆ ಹರಿಯ ಅಧೀನಳಾಗಿ ಇರುವಳು. 'ಅಧೀನ ಚಿಂತಿ ಪುದಕಿಂತ ಅಧಿಕವಾವುದು ಇಲ್ಲ' ಎಂಬ ವಿಜಯದಾಸರ ವಚನ.

ಶ್ರೀ ಪುರಂದರದಾಸರು "ಏನು ಧನ್ಯಳೋ ಲಕುಮಿನ್ನೆಂಥ ಮಾನ್ಯಳೋ-ಸಾನುರಾಗದಿಂದ ಹರಿಯ ತಾನೆ ಸೇವೆ ಮಾಡುತಿಹಳು" ಎಂಬುವ ಪದ ೩ ನುಡಿಯಲ್ಲಿ ರಮೆಯ ಅತ್ಯಂತ ಸೇವಾ ಹರಿಯ ಮಹಾ ಮಹಿಮೆ ಕೊಂಡಾಡಿದ್ದಾರೆ. ಆದಿತ್ಯ ಪುರಾಣದಲ್ಲಿಯೂ, ಈ ಮಹಾ ಮಹಿಮೆ ವರ್ಣಿಸಿದ್ದಾರೆ.

**ದ್ರೌಪದೀಶಪತಿ ವಿಠಲರು :** ಇಂತನಂತಗುಣ.

**ಭಾವಸೂಚನ :** ಇಂತೇತಿ । ಭಗವಂತೇತಿ ॥ ಉಕ್ತಂ ಚ ಆದಿತ್ಯ ಪುರಾಣೇ । "ಅಥಾತ್ಮಾನಂ ಕಲ್ಪ ಯಂತೀ ಡೋಲಮಂಚ ಮನೋರಮಂ। ಭೂರೂಪಾ ಭೂತ್ ಸ್ವಯಂಶಯ್ಯಾ ಶ್ರೀರೂಪಾ ಸೋಪ ಬರ್ಹಣಂ । ದುರ್ಗಾ ಭೂತ್ವಾದ ಸೇವಾರ್ಥಂ ತಾಂಬೂಲಂ ಭೋಗ ಸಾಧನಂ। ಸುವರ್ಣ ದಂಡ ವ್ಯಜನಂ ವಿದ್ಯುದಾಭೇ ಸುಚಾಮರೇ । ವೈಢೂರ್ಯಸ್ತಬಕ ಛತ್ರಂ ಪಾದುಕೆ ರತ್ನಪೀಠಕೆ । ಸರ್ವಾಣ್ಯೈ ಭೂದ್ರಮಾದೇವಿ ದೇವಾಯೇತಿ ॥ "ಶ್ವೇತದ್ವೀಪೋ ಮಂಡಪಶ್ಚ ದಿವ್ಯ ರತ್ನಮಯೋ ಮಹಾನ್, ಪದ್ಮಮೇ ತತ್ರಯಂ ದೇವೀರವ್ಯೈವ ಬಹುರೂಪಿಣಿ ।" ಇತಿಸಾರ ( ತಂತ್ರಸಾರ ) ಸಂಗ್ರಹೇ ॥ ೩೧ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಈತ" ಇತಿ । ಮಂಟ (ಡ) ಪಂ ಚಾ ಭವದ್ರಮಾ । ದೋಲಾ ಮಂಚಃ । "ಸರ್ವಾಣ್ಯಭೂದ್ ರಮಾದೇವೀ ದೇವಾಯಾನಂತ ರಾಧಸೇ ।" ಇತಿ ಚ ಉಕ್ತೇಃ । ನೆಲೆಗೊಳಿಸಿ=ನಿಂದಿರಿಸಿ ||೩೧ ||

## ಕನ್ನಡಾರ್ಥ

ಶ್ರೀ ಹರಿಯ ಗುಣಗಳ ಕೊನೆಯನ್ನು ನಿರ್ಣಯಿಸಲಸಮರ್ಥಳಾದ ಶ್ರೀ ದೇವಿಯವರು ಪರಮಾತ್ಮನಿಗೆ ಸ್ವಯಂ ತಾವೇ ಆಯುಧ-ಆಭರಣ-ಅಂಬರ-ವಾಸಗೃಹ-ಆಸನ-ಶಯನ-ಯಾನ ಮುಂತಾದ ರೂಪಗಳಿಂದ ಸೇವಿಸಿ ನಿರಂತರ ಪರಿಚಾರಿಕೆಯಾಗಿ ಅವನಲ್ಲಿ ಅಧೀನವಾಗಿ ವಾಸಿಸುವಳು. "ಈ ರಮಾದೇವಿಯು ಮಂಟಪರೂಪಿಣಿಯಾಗಿ ಸೇವಿಸಿದಳು" "ಅನಂತಗುಣ ಬಲಾತ್ಮಕನಾದ ಶ್ರೀ ಹರಿಗೆ ಸರ್ವ ಸೇವೋಪಕರಣ ರೂಪಳಾದಳು" ಎಂದು ವಚನಗಳಿಂದ ಇದು ಪ್ರಮಿತವಿದೆ. || ೩೧ ||

ಅವತರಣಿಕಾ : ಶ್ರೀ ಮಹಾಲಕ್ಷ್ಮೀ ದೇವಿಯರು ಶ್ರೀ ಹರಿಯ ಮಹಾ ಮಹಿಮೆ ಗುಣಗಳನ್ನು ಅದ್ಯಾಪಿ ತಿಳಿಯದೇ ಚಂಚಲಳಾಗಿ ಆಶ್ಚರ್ಯಚಕಿತಳಾಗಿಹ ಳೆಂದು ದೃಷ್ಟಾಂತದಿಂದ ವರ್ಣಿಸುತ್ತಾರೆ.

ಮೂಲ :

**ಪ್ರಳಯ ಜಲಧಿಯೊಳುಳ್ಳ ನಾವೆಯು ।**
**ಹೊಲಬುಗಾಣದೆ ಸುತ್ತುವಂದದಿ ।**
**ಜಲರುಹೇಕ್ಷಣನಮಲ ಗುಣರೂಪಗಳ ಚಿಂತಿಸುತ ||**
**ನೆಲೆಯುಗಾಣದೆ ಮಹಲಕುಮಿ ಚಂ ।**
**ಚಲವನೈದಿಹಳಲ್ಪ ಜೀವರಿ ।**
**ಗಳವಡುವದೇನಿವನ ಮಹಿಮೆಗಳೀ ಜಗತ್ರಯದಿ || ೩೨ ||**

ಪದ್ಯಾರ್ಥ : ಪ್ರಳಯ ಜಲಧಿಯೊಳುಳ್ಳ ನಾವೆಯು=ಮಹಾಪ್ರಳಯದಲ್ಲಿ ಅಗಾಧವಾದ ಜಲ-ಎತ್ತ ನೋಡಿದರತ್ತ ನೀರೇ ನೀರು. ವಟಪತ್ರ ಶಾಯಿಯನ್ನು ಶೂನ್ಯನ ಹೊರತಾಗಿ ನೋಡುವರಾರು ? ಅಲ್ಲಿ ನಾವೆ ಎಲ್ಲಿಂದ ಬರಬೇಕು ? ನಾವೆಯು ಮಹಾಪ್ರಳಯದಲ್ಲಿ ಇದ್ದದ್ದು ಹೇಗೆ ? ಇದು ತೇಲಿ ದಾರಿಕಾಣದೇ ನೆಲೆಹತ್ತುವದು ಹೇಗೆ? ಎಲ್ಲವೂ ಹೇಗೆ ಅಸಾಧ್ಯವೋ

ಹಾಗೆಯೇ ಪರಮಾತ್ಮನ ಗುಣಗಳು ನೆಲೆಹತ್ತುವದೂ ಅಸಾಧ್ಯ-ಅಘಟಿತ ವಾಗಿದೆ. ಇದು ಸಾಮಾನ್ಯ ದೃಷ್ಟಾಂತದಿಂದ ಮಹಾಜಲದಲ್ಲಿ ನಾವೆಯು ದಾರಿಕಾಣದೇ ಸುತ್ತಿ ತಿರುಗಿ ಸುತ್ತುವಂತೆಯೇ, ಜಲರುಹೇಕ್ಷಣ=ಕಮಲ ಪತ್ರದಳ ನೇತ್ರನ ಅಂದರೆ ವಿಶಾಲವಾದ ಕಣ್ಣುಉಳ್ಳವ, ಕರುಣಾದೃಷ್ಟಿ ಯುಳ್ಳ ಶ್ರೀ ಹರಿಯ, ಅಮಲ, ನಿರ್ದುಷ್ಟವಾದ ಜ್ಞಾನಾನಂದ ಗುಣ-ರೂಪ ಗಳನ್ನು ಚಿಂತಿಸುತ್ತ, ಆ ಗುಣಗಳ ನೆಲೆಯಗಾಣದೆ= ತಳ=ಅಂತ್ಯಗಾಣದೇ ಮಹಲಕುಮಿದೇವಿಯು, ಚಂಚಲವನೈದಿಹಳು=ಮನಸ್ಸು ದೃಢವಾಗಿರದೆ ಸಂಚಲಿಸಿ, ವ್ಯಗ್ರಮನಸ್ಕಳಾಗಿ ಆಶ್ಚರ್ಯಚಕಿತಳಾಗಿಹಳು. ಅಲ್ಪಜೀವರಿಗೆ ಅಳವಡುವದೇ ಇವನ ಮಹಿಮೆಗಳು ಈ ಜಗತ್ರಯದಿ=ಮೂರು ಲೋಕ ದಲ್ಲಿರುವ, ಅಲ್ಪರಾದ ಸಾಧನರಹಿತರಾದ-ಅನಧಿಕಾರಿ ಜೀವರಿಗೆ, ಈತನ ಮಹಿಮೆ ಅಳವಡುವುದೇ=ತಿಳಿಯುವದೆ ? ತಿಳಿಯುವದಿಲ್ಲವೆಂತ ತಾತ್ಪರ್ಯ.

ದ್ರೌಪದೀಶಪತಿ ವಿಠಲರು: ಪ್ರಳಯ ಜಲಧಿ ||

ಭಾವಸೂಚನ : ಪ್ರಳಯೇತಿ | ಹೊಲಬು-ಸ್ಥಲ || ೩೨ ||

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಪ್ರಲಯ" ಇತಿ || ಹೊಲವು=ಪ್ರದೇಶ. ನೆಲೆ=ಪರಿಮಿತಿ || ೩೨ ||

**ಕನ್ನಡಾರ್ಥ**

ಪ್ರಲಯ ಸಮುದ್ರದಲ್ಲಿರುವ ನೌಕೆಯು ನಿಶ್ಚಿತ ಪ್ರದೇಶವನ್ನು ಕಾಣದೆ ಪರಿಭ್ರಮಿಸುತ್ತ ಇರುವಂತೆ ಜಲಜಾಕ್ಷನ ಅಮಲ ಗುಣರೂಪಗಳನ್ನು ಚಿಂತಿ ಸುತ್ತ, ಆ ಗುಣ ಸಮುದ್ರದಲ್ಲಿ ಮುಳುಗಿ ಪರಿಮಿತಿಯನ್ನು ಕಂಡುಹಿಡಿಯದೇ ಚಂಚಲಳಾಗಿ ಅಸಮರ್ಥಳಾದಳು ಶ್ರೀ ಮಹಾಲಕ್ಷ್ಮೀದೇವಿಯು. ಅಂದ ಮೇಲೆ ಅಲ್ಪರಾದ ಜೀವರಿಗೆ ಭಗವಂತನ ಮಹಿಮೆಯು ಎಷ್ಟು ತಿಳಿಯು ತ್ತದೆ ? || ೩೨ ||

ಅವತರಣಿಕಾ : ಶ್ರೀ ಹರಿಯ ಅನಂತ ಗುಣೋತ್ಕರ್ಷ ಸ್ತೋತ್ರಗೈದು ಸಂಧಿಯ ಉಪಸಂಹಾರ ಮಾಡುತ್ತಾರೆ.

ಮೂಲ :

**ಶ್ರೀನಿಕೇತನ ಸಾತ್ವತಾಂಪತಿ |**
**ಜ್ಞಾನಗಮ್ಯ ಗಯಾಸುರಾರ್ದನ |**
**ಮೌನಿಕುಲ ಸನ್ಮಾನ್ಯ ಮಾನದ ಮಾತುಳ ಧ್ವಂಸೀ ||**

**ದೀನಜನ ಮಂದಾರ ಮಧುರಿಪು ।**
**ಪ್ರಾಣ ಜಗನ್ನಾಥ ವಿಟ್ಠಲ ।**
**ತಾನೆ ಗತಿಯೆಂದನುದಿನದಿ ನಂಬಿದರ ಪೊರೆಯುವನು ॥ ೩೩ ॥**

ಅಂತು ಸಂಧಿ (೭) ಪದ ೨೧೪ಕ್ಕೆ ಪಂಚ ತನ್ಮಾತ್ರಾಸಂಧಿ ಸಮಾಪ್ತ ಮಂಗಳಮಹ.

ಶ್ರೀ ಗುರುಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು ॥

**ಪದ್ಯಾರ್ಥ :** ಶ್ರೀ ನಿಕೇತನ=ಶ್ರೀ ಸಂಪತ್ಕರಳಾದ ರಮಾದೇವಿಯನ್ನು ತನ್ನ ವಕ್ಷಸ್ಥಳದಲ್ಲಿ ಧರಿಸಿ ಶ್ರೀ ರಮಾದೇವಿಯರಿಗೆ ನಿಕೇತನ ಮನೆಯಾಗಿ ಉಳ್ಳ ಹರಿಯೇ ಅಥವಾ ಶ್ರೀ ನಿಕೇತನ=ಧಾಮತ್ರಯ ವೈಕುಂಠ-ಅನಂತಾ ಸನ-ಶ್ವೇತದ್ವೀಪ ಶ್ರೀ ಭಾಗವೇ ಮನೆಯಾಗಿಯುಳ್ಳ ಹರಿಯು, ಸಾತ್ವತಾಂ ಪತಿ=ಯಾದವ ಕುಲಕ್ಕೆ ಶ್ರೇಷ್ಠನಾದ ಶ್ರೀ ಕೃಷ್ಣ ಅಥವಾ ಸಾತ್ವತಾಂಪತಿ= ಮಹಾಬಲಯುಕ್ತ ಶರೀರಉಳ್ಳವ, ಜ್ಞಾನಗಮ್ಯ=ಜ್ಞಾನವಿಜ್ಞಾನದಿಂದಲೇ ಶ್ರೀ ಹರಿಯನ್ನು ಹೊಂದಲು ಶಕ್ಯವಾದುದರಿಂದ ಜ್ಞಾನಗಮ್ಯನೆಂದೂ, ಗಯಾಸುರಮರ್ದನ=ಗಯನೆಂಬ ಅಸುರನನ್ನು ಸಂಹರಿಸಿದಾತನು, ಅಜ್ಞಾನ ವೆಂಬ ಕತ್ತಲೆ ಸಂಹರಿಸಿ ಸುಜ್ಞಾನಪ್ರದವಾದುದೂ, ಪಿತೃಮುಕ್ತಿ ಹೇತುವಾ ದಂಥಾ, ಗಯಾಕ್ಷೇತ್ರವನ್ನು ನಿರ್ಮಿಸಿದ ಹರಿಯೇ, ಮೌನಿಕುಲ ಸನ್ಮಾನ್ಯ= ಜ್ಞಾನಿಗಳಾದ ಮುನಿ=ಮನನಶೀಲರಾದ ಋಷಿಗಳಿಂದ, ಸನ್ಮಾನ್ಯ=ಪೂಜಿಸಿ ಕೊಳ್ಳುವವನು. ಅಥವಾ ಭೃಗು ಮುನಿಗಳ ವಂಶದೀಪನಾದ ಪರಶುರಾಮ. ವೇದವ್ಯಾಸದತ್ತ ಕಪಿಲಾ ಐತರೇಯಾದಿ ರೂಪಗಳಿಂದ ಮುನಿಗಳ ವಂಶದಲ್ಲಿ ಅವತರಿಸಿ, ಮುನಿಗಳ=ಜ್ಞಾನಿಗಳಾದ ಋಷಿವಂಶ ಶ್ರೇಷ್ಠನೆ, ಮಾನದ= ಅಮಾನೀಮಾನದೋಮಾನ್ಯ ಎಂಬ ವಿಷ್ಣು ಸಹಸ್ರನಾಮ, ಮಾನದ= ಸರ್ವೇಶ್ವರತ್ವೇನ ಸರ್ವರಿಂದ ಪೂಜೆಗೊಳ್ಳುವ ಹರಿಯೇ, ಮಾತುಲಧ್ವಂಸಿ= ಸೋದರಮಾವನಾದ ಕಂಸನೆಂಬ ಅಸುರನನ್ನು ಸಂಹಾರಮಾಡಿದ ಕೃಷ್ಣನೆ, ಈ ಕಂಸನು ಮೂಲದಲ್ಲಿ ಕಾಲನೇಮಿ ದೈತ್ಯ. ಇವನು ಮನಪ್ರಭೇದವಾದ ದುಷ್ಟತಮೋ ದೈತ್ಯ-ಅಹಂಕಾರ ದುರ್ಗುಣಾಭಿಮಾನಿ ದೈತ್ಯನು. ಇಂಥ ದುರಹಂಕಾರ ದುಷ್ಟ ತತ್ವದಿ ನಿಂತು, ಸಜ್ಜನರನ್ನು ಅಹಂಕಾರ ವಶರನ್ನಾಗಿ ಮಾಡುವ-ದುರಹಂಕಾರವನ್ನು ಖಂಡಿಸುವ ಶ್ರೀ ಕೃಷ್ಣಾ, ನಾನು-ನನ್ನದೆಂಬ ದುರಹಂಕಾರವನ್ನು ಸಂಹರಿಸಪ್ಪಾ ಎಂದು ಶ್ರೀ ಕೃಷ್ಣನನ್ನು ಬೇಡುವದು.

ದೀನಜನ ಮಂದಾರ=ದೀನರು ಶ್ರೀ ಹರಿಯನ್ನೇ ಮೊರೆಹೊಕ್ಕು ಕೃಷ್ಣಾ ನಿನ್ನ ಹೊರತಾಗಿ ಅನ್ಯಗತಿಕರಿಲ್ಲೆಂದು, ಶರಣಾಗತರಾದ ಭಕ್ತರಿಗೆ ಮಂದಾರ ಕಲ್ಪದ್ರುಮದಂತೆ ಬೇಡಿದಿಷ್ಟಾರ್ಥ ಕೊಡುವನೇ ಕೃಷ್ಣಾ, ಮಧುರಿಪು= ಮಧುನಾಮಕ ದೈತ್ಯನನ್ನು ಸಂಹರಿಸಿದವನೇ, ಮಧು–ಕೈಟಭರೆಂದು ಇಬ್ಬರು ದೈತ್ಯ ತತ್ವಾಭಿಮಾನಿಗಳು. ಇವರನ್ನು ವರಾಹ ರೂಪದಿಂದ ಸಂಹರಿಸಿದ ಶ್ರೀ ಹರಿಯೇ, ಅಥವಾ ಮಧುವೆಂಬ ದೈತ್ಯನು ದುರ್ಮನ-ದುರ್ಬುದ್ಧಿ ತತ್ವಾಭಿಮಾನಿಯನ್ನು ಸಂಹರಿಸುವನೇ, ಸಕಲ ಸಜ್ಜನರ ದುರ್ಮನ– ದುರ್ಬುದ್ಧಿಯನ್ನು ಸಂಹರಿಸಿ–ಕಳೆದು ಸುಜ್ಞಾನವನ್ನು ಕೊಡುವ ಶ್ರೀ ಹರಿಯೇ, ಇಂಥ ದುರಹಂಕಾರ-ದುರ್ಬುದ್ಧಿಯನ್ನು ಕಳೆದು, ಪ್ರಾಣದಃ= ಪ್ರಕೃಷ್ಟಾನಂದ ಬಲವೀರ್ಯಂದದಾತೀತಿ ಪ್ರಾಣದಃ=ಎಂದು ಶ್ರೀ ವಿದ್ಯಾಧಿ ರಾಜೀಯು. ಉತ್ತಮವಾದ ವಿಶಿಷ್ಠಾನಂದ-ಬಲ-ವೀರ್ಯ ಶಕ್ತಿಯನ್ನು ಕೊಟ್ಟು ಕಾಪಾಡುವನು, ಪ್ರಾಣದಃ ಶ್ರೀ ಕೃಷ್ಣ ಶ್ರೀ ಹರಿಯೇ=ಜಗನ್ನಾಥ ವಿಠ್ಠಲ=ಸರ್ವ ಜಗತ್ತಿಗೆ-ಸ್ವಾಮಿ–ಒಡೆಯನಾದವನೇ, ಶ್ರೀ ದಾಸಾರ್ಯರ ಬಿಂಬರೂಪ ನಾಮದಿಂದ ಪೊರೆವ ಕೃಷ್ಣನೇ, ತಾನೇ ಗತಿ ಎಂದನುದಿನದಿ ನಂಬಿದವರನ್ನು ಪೊರೆವ = "ಅನನ್ಯಾಶ್ಚಿಂತಯಂತೋಮಾಂ ಯೇಜನಾಃ ಪರ್ಯುಪಾಸತೇ । ತೇಷಾಂ ನಿತ್ಯಾಭಿ ಯುಕ್ತಾನಾಂ । ಯೋಗಕ್ಷೇಮಂ ವಹಾಮ್ಯಹಂ ॥ ಎಂದು ಶ್ರೀಕೃಷ್ಣ ತನ್ನ ವಚನದಂತೆ ಅನ್ಯರಾರು ರಕ್ಷಕ ರಿಲ್ಲಾ ಕೃಷ್ಣಾ, ನೀನೆ ಎನಗೆ ಗತಿ-ಮುಕ್ತಿದಾಯಕ ಎಂದು ನಿಶ್ಚಯವಾಗಿ ಪ್ರಾಣದೇವರೇ ಅಚಲದಾರಢ್ಯ ಜ್ಞಾನದಿಂದ ನಿನ್ನನ್ನು ನಂಬಿದವರು, ಇಂಥ ಪ್ರಾಣಾಂತರ್ಯಾಮಿಯಾದ ಜಗನ್ನಾಥ ವಿಠಲನೆ ನಿನ್ನನ್ನು ಒಳ್ಳೇ ದಾರಢ್ಯ ಭಕುತಿಯಿಂದ ನಂಬಿರುವೆನೆಂದು ವಿಶೇಷ ಭಕ್ತಿಯಿಂದ ಸ್ತೋತ್ರಮಾಡಲು, ಪೊರೆವ=ಸಂರಕ್ಷಿಸುವ, ಇಹದಲ್ಲಿ ಸುಜ್ಞಾನ ಬಲವೀರ್ಯಾದಿ ಐಶ್ವರ್ಯ ಗಳನ್ನು ಕೊಟ್ಟು, ಪರ=ಮುಕ್ತಿಯಲ್ಲಿ, ಆನಂದವನ್ನು ಕೊಟ್ಟು ರಕ್ಷಿಸುವ ಹರಿಯು ಎಂದು ಸ್ತೋತ್ರಗೈದಿರುವರು. ಶ್ರೀ ದಾಸಾರ್ಯರು ಪ್ರೇರಿಸಿ ದಂತೆ ಈ ಏಳನೇ ಸಂಧಿಯ ಪದ್ಯಾರ್ಥವು ಮಧ್ವೇಶನಿಗೆ ಅರ್ಪಿತವಾಗಲಿ.

**ದ್ರೌಪದೀಶಪತಿ ವಿಠಲರು :** ಶ್ರೀ ನಿಕೇತನ. ಶರ್ಕರಾಕ್ಷಸಖ । ಅಗ್ನಿ-ಸೂರ್ಯ-ಚಂದ್ರ ಮೂರು ನೇತ್ರಾಗಿ ಉಳ್ಳಂಥಾ ರುದ್ರಗೆ ಸಖಾ ॥೩೩॥

ಇತಿ ಏಳನೇ ಸಂಧಿ ಸಮಾಪ್ತ. ಶ್ರೀ ಶ್ರೀ ॥

**ಭಾವಸೂಚನ:** ಶ್ರೀ ನಿಕೇತನೇತಿ । ಸಾತ್ವತಾಂಪತಿ ॥ ದಾಶಾರ್ಹ ಸಾತ್ವತಾಂಪತಿ ರಿತಿ ವಚನಾತ್ ॥ ೩೩ ॥

ಇತಿ ಶ್ರೀಮಜ್ಜಗನ್ನಾಥ ದಾಸಾರ್ಯ ವಿರಚಿತ ಹರಿಕಥಾಮೃತಸಾರ ವ್ಯಾಖ್ಯಾನೇ ಪಂಚತನ್ಮಾತ್ರಾ (ದೇಹ ಚತುಷ್ಟಯ) ಸಂಧಿ ಸಮಾಪ್ತ.

॥ ಶ್ರೀ ಗುರುಮಧ್ವೇಶಾರ್ಪಣಮಸ್ತು ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಶ್ರೀ ನಿಕೇತನ" ಇತಿ ॥ **ಸಾತ್ವತಾಂ ಪತಿ**—ಓಮ್* ಯದಿಂದ್ರ ಪ್ರಾಗಪಾಗುದಜ್‌ನ್ಯಗ್ವಾ ಹೂಯಸೇನೃಭಿಃ ॥ ಸಿಮಾ ಪುರೂ ನೃಷೂ (ಷ) ತೋ ಅಸ್ಯಾನವೇಸಿ (ಶಿ) ಪ್ರಶರ್ಧತು (ರ್ತು)ರ್ವಶೇ ॥ *ಓಮ್ ॥ ಸತ್ವಂ-ಬಲಮ್ । ತದ್ವಂತಃ ಯಾದವಾಃ ಸಾತ್ವತಾಃ । ತತ್ಪತಿಃ ॥ **ಜ್ಞಾನಗಮ್ಯ**+ ಓಮ್ । * ಪ್ರಪಥೇ ಸತ್ಯಃ ಸೋ ಅಸ್ಯಮಹಿಮಾ ಗೃಣೇ ಶವೋ ಯಜ್ಞೇಷು ವಿಪ್ರರಾಜ್ಯೇ ॥ ಇಂದ್ರಮಿದ್ದೇವತಾತಯ ಇಂದ್ರಂ ಪ್ರಯತ್ಯಧ್ವರೇ ॥* ಓಮ್ ॥ ಜ್ಞಾನಂ ಜ್ಞಾನಾನಂದಾದಿ ಮಹಾತ್ಮ್ಯಮ್ । ತೇನ ಗಮ್ಯೋ ಯುಕ್ತಃ ಅಬಾಧಿತ ಮಾಹಾತ್ಮ್ಯಃ **ಮಾನದ**—ಓಮ್ । * ಸ್ತುವತೋ ಅದ್ರಿವಃ । ಋತಾದಿಯರ್ಮಿ ತೇ ಧಿಯಮ್ । ಮನೋಯುಜಂ ಈ (ಇ) ಹತ್ವಾ ಸಧಮದ್ಯಾಯುಜಾನಃ ಸೋಮಃ ಪೀತಯೇ ಹರೀ ಇಂದ್ರಃ ॥ * ಓಮ್ ॥ ಮಾನಂ ಜ್ಞಾನಂ ದದಾತಿ ಇತಿ ಮಾನದಃ॥ **ಮಾನ್ಯಃ**—ಓಮ್।* ಪ್ರತದ್ವಸು ಅಭಿ ಸ್ವರ ಅಭಿ ಸ್ವರಂತು ಯೇ ತವ ರುದ್ರಾಸಃ ಸಕ್ಷತ ಶ್ರಿಯಂ ಉತೋ ಮರುತ್ವತೀರ್ವಿಶೋ ಅಭಿ ಪ್ರಿಯಃ ॥ *ಓಮ್ ॥ ವಾಯ್ವಾದಿಭಿಃ ಮಾನ್ಯತೇ ಇತಿ ಮಾನ್ಯಃ॥ ಮಾನ-ಪೂಜಾಯಾಮ್ ॥ **ಪ್ರಾಣದಃ**— ಓಮ್ । * ಅಧೀ (ಹೀ) ಶುಮಂ ವಧೀದುಗ್ರೋರಿಣನ್ನಪಃ ನ್ಯರ್ಬುದಸ್ಯ ವಿಷ್ಟಪಂ ವರ್ಷ್ಮಾಣಂ ಬೃಹತಸ್ತಿರಸ್ಕೃಷೇ ತದಿಂದ್ರ ಪೌಂಸ್ಯಮ್ ॥*ಓಮ್॥ ಪ್ರಕೃಷ್ಟಮನೋನನಂ ಗಮನಂ - ನದ್ಯಾದೀನಾಂ ಸಮುದ್ರ ಗಮನಂ- ತದ್ ದದಾತಿ ಇತಿ॥ ಯದ್ವಾ ಬಹುಸಂಖ್ಯಾಕ ಯೋನಿಷು ಗಮನಂ ಪ್ರಾಣಃ। ತತ್ ದ್ಯತಿ ಖಂಡಯತಿ ಇತಿ ತಥೋಕ್ತಃ ॥ ಓಮ್ ॥ ಇತಿ ಶ್ರೀಮದ್ವಿದ್ವಚ್ಚಕ್ರವರ್ತಿ ಶ್ರೀಮಜ್ಜಗನ್ನಾಥ ದಾಸ ವಿರಚಿತ ಹರಿಕಥಾಮೃತಸಾರ ಟೀಕಾಯಾಂ ಸೋದಾಧಿಪಾನುಗ್ರಹಿ ಶ್ರೀನಿವಾಸಾರ್ಯ ಸುತ ವಾದಿರಾಜ

ವಿರಚಿತಾಯಾಂ ವ್ಯಾಸದಾಸ ಸಿದ್ಧಾಂತ ಕೌಮುದ್ಯಾಂ ಪಂಚತನ್ಮಾತ್ರಾ ಸಂಧಿಃ ಸಮಾಪ್ತಃ ॥ ೭ ॥

## ಕನ್ನಡಾರ್ಥ

ಮುಕ್ತಾಮುಕ್ತ ನಿಯಾಮಕನೂ, ಜ್ಞಾನಗಮ್ಯ ಮುಂತಾದ ಅನಂತ ರೀತಿಯಿಂದ ವೇದಾದಿಗಳಲ್ಲಿ ಹೊಗಳಲ್ಪಟ್ಟ ಶ್ರೀ ಜಗನ್ನಾಥ ವಿಠ್ಠಲರೂಪಿ ನಾರಾಯಣನನ್ನು "ನೀನೇ ಗತಿ !" ಎಂದು ನಂಬಿ ಭಜಿಸಿದರೆ ಆ ನಾರಾಯಣನು ಹೀಗೆ ನಂಬಿದವರನ್ನು ಯಾವಾಗಲೂ ಎಲ್ಲ ರೀತಿಯಿಂದಲೂ ಸಂರಕ್ಷಿಸುತ್ತಾನೆ.

"ಸಾತ್ವತಾಂ ಪತಿ, ಜ್ಞಾನಗಮ್ಯ - ಮಾನ್ಯ- ಮಾನದ - ಪ್ರಾಣದ...." ಈ ನಾಮಗಳ ಅರ್ಥವನ್ನು ಬೃಹತೀ ಋಙ್ಮಂತ್ರಗಳು ವಿವರಿಸುತ್ತವೆ. ಅವುಗಳ ಸಾರಾರ್ಥವನ್ನು ಇಲ್ಲಿ ಬರೆಯುತ್ತೇವೆ.

(೧) **ಸಾತ್ವತಾಂ ಪತಿ :** ಸತ್ವವೆಂದರೆ ಬಲ. ಇಂಥ ಸತ್ವ-ಬಲವಂತರು ಸಾತ್ವತರು ಅಂದರೆ ಯಾದವರು. ಅವರಿಗೆ ಪತಿ-ಪ್ರಭುವು" ಎಂದು ಅರ್ಥ.

(೨) **ಜ್ಞಾನಗಮ್ಯ :** ಜ್ಞಾನ-ಜ್ಞಾನಾನಂದ ಮುಂತಾದ ರೂಪವಾದ ಮಹಾತ್ಮ್ಯವು. ಈ ಜ್ಞಾನಾನಂದಾದಿ ರೂಪವಾದ ಮಹಿಮೆಯಿಂದ ಯುಕ್ತನಾಗಿ ಅವುಗಳಿಂದ ತಿಳಿಯಲ್ಪಡುವವನು. ಅಂದರೆ ಅಬಾಧಿತವಾದ (ಜ್ಞಾನಾನಂದಾದಿ) ಮಾಹಾತ್ಮ್ಯವುಳ್ಳವನು. ಎಂದು ಅರ್ಥ.

(೩) **ಮಾನದಃ :** ಮಾನಂ = ಜ್ಞಾನ. ಇದನ್ನು ಕೊಡುವವನು ಎಂದರ್ಥ.

(೪) **ಮಾನ್ಯ :** ಮಾನ ಅಂದರೆ ಪೂಜಿಸು ಎಂದು ಅರ್ಥ. ವಾಯು ಮುಂತಾದವರಿಂಧ ಪೂಜೆಯನ್ನು ಮಾಡಿಸಿಕೊಳ್ಳುವವನು; ಎಂದು ಅರ್ಥ.

(೫) **ಪ್ರಾಣದ :** ಅತಿಶಯವಾಗಿ ಗಮನಕ್ಕೆ ಪ್ರಾಣವೆಂದು ಹೆಸರು. ಇಂಥ ಪ್ರಾಣ-ಗಮನವನ್ನು ಇಟ್ಟು ನದಿಗಳಿಗೆ ಸಮುದ್ರ ಸಂಗಮ ಮಾಡಿಸುವದರಿಂದ "ಪ್ರಾಣದ" ಅಥವಾ "ಪ್ರಾಣ" ಎಂದರೆ ಬಹು ಸಂಖ್ಯೆಗಳಿಂದ ಕೂಡಿರುವ ಸುರ ನರ ತಿರ್ಯಗಾದಿ ನಾನಾವಿಧ ಯೋನಿಗಳಲ್ಲಿ ಸಂಚರಿಸುವದು-"ಗಮನ" ಎಂದು ಅರ್ಥ. ಇಂಥ ಸುರನರಾದಿ ಯೋನಿಗಮನವನ್ನು

ಭಕ್ತರಿಗೆ ತಪ್ಪಿಸುವವನು-ಖಂಡಿಸುವವನು; ಆದುದರಿಂದ "ಪ್ರಾಣದ" ಎಂದು ಕರೆಯುತ್ತಾರೆ. || ೩೩ ||

ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದಿಯ ಕನ್ನಡಾರ್ಥಾನುವಾದದಲ್ಲಿ ಏಳನೆಯ ಸಂಧಿ–ಪಂಚ ತನ್ಮಾತ್ರಾ ಸಂಧಿಯ ಅನುವಾದವು ಮುಗಿದುದು.

ಶ್ರೀ ಮಧ್ವೇಶ ಕೃಷ್ಣಾರ್ಪಿತವಾಗಿರಲಿ.



ವಾಙ್ಮನೋಮಯರೂಪ, [ಸಂಧಿ ೭, ಪದ್ಯ ೬

॥ ಶ್ರೀ ಗುರುರಾಜೋ ವಿಜಯತೇ ॥

# ೮. ಮಾತೃಕಾ ಸಂಧಿಯ ಸಾರ

ಹಿಂದೆ ಪಂಚತನ್ಮಾತ್ರಾ ಸಂಧಿಯಲ್ಲಿ ಲಿಂಗದೇಹ ತಮೋ ಆವರಣಗತ ಕಾರಣ ರೂಪವಾದ ಐದು ತನ್ಮಾತ್ರಾ ಪಂಚಭೂತ ತಮೋವಿಕಾರಜನ್ಯ ಶಬ್ದ ಸ್ಪರುಶ ರೂಪ ರಸ ಗಂಧ ಇತ್ಯಾದಿ ಗುಣಗಳು ಸ್ಥೂಲ ದೇಹದಲ್ಲಿ ಕಾರ್ಯ ರೂಪವಾಗಿ ಜೀವನನ್ನು ಬಂಧಕಗೊಳಿಸುವಲ್ಲಿ ಶ್ರೀಹರಿಯೇ ಈ ಬಂಧಕ, ಮೋಚಕ. ಬಂಧ ಮೋಚಕನ ಗುಣಗಳನ್ನೂ ರೂಪಗಳನ್ನೂ ವಿಸ್ತಾರ ವರ್ಣಿಸಿದ್ದಾರೆ. ಅಂದರೆ ಪಂಚತನ್ಮಾತ್ರಾಗತ ಅನಿಷ್ಟ ಪರಿಹಾರ ಶ್ರೀ ನರಸಿಂಹನೇ ಮಾಡುವನೆಂದು ಹೇಳಿ, ಈಗ ಮೋಕ್ಷಕ್ಕೆ ಸಾಧನ ರೂಪ ವಾದ ಮಾತೃಕಾನ್ಯಾಸ ಅಜಾದಿ ಪಂಚಾಶದ್ವರ್ಣಗಳ ವಿಚಾರ, ದೇಹಗತ ಸುಷುಮ್ನಾ ನಾಡಿಯಲ್ಲಿರುವ ಸಪ್ತ ಕಮಲ ಮತ್ತು ತ್ರಿಕೋಣ ಮಂಡಲ-ಷಟ್ಕೋಣ ಮಂಡಲ, ದ್ವಾಶಾರ್ಕರ ಮಂಡಲಗಳು ಇರುವ ವಿಚಾರ, ಇವುಗಳಲ್ಲಿ ಶ್ರೀಹರಿಯ ರೂಪಗಳು, ನಿಯಮನ ಮಾಡುವ ಕಾರ್ಯ, ತಂತ್ರಸಾರ ೧ನೇ ಅಧ್ಯಾಯ, ಐತರೇಯ ಉಪನಿಷತ್ತಾದಿ ಮಾನಸಸ್ಮೃತಿ, ಶ್ರೀ ವಿಜಯ ರಾಯರ ಸುಳಾದಿಗಳ ಆಧಾರವಾಗಿ ಈ ಮಾತೃಕಾ ಸಂಧಿಯಲ್ಲಿ ಮುಂದೆ ವರ್ಣ ಪ್ರಕ್ರಿಯೆ ೯ನೇ ಸಂಧಿಯಲ್ಲಿಯೂ, ಮುಕ್ತಿ ಹೇತುವಾದ ಭಗವತ್ ಸಾಧನಾ ವಿಚಾರವನ್ನು ಮಂದರಾದ ಸಜ್ಜನರನ್ನು ಉದ್ಧಾರಮಾಡುವ ಗೋಸುಗ ಕರುಣಾಳುಗಳಾದ ದಾಸಾರ್ಯರು ಮಾತೃಕಾಸಂಧಿ ಪ್ರಾರಂಭಿಸಿದ್ದಾರೆ.

ಪ್ರಾರಂಭಕ್ಕೆ ಪಾದಾರಂಭಿಸಿ ಪ್ರತಿ ಅವಯವಗಳಲ್ಲಿಪ್ಪ ಅಜಾದಿ ಇನ್ನು ಅನೇಕ ಭಗವದ್ರೂಪಗಳನ್ನು ನಿರೂಪಿಸುತ್ತಾರೆ.

ಶ್ರೀ ವಿಜಯದಾಸಾರ್ಯರು ಸ್ಥೂಲ ದೇಹದಲ್ಲಿಪ್ಪ ಅಧ್ಯಾತ್ಮ ಉಪಾಸನೆ ಕ್ರಮ. ಅಧ್ಯಾತ್ಮ ಸುಳಾದಿ ೧೦ ಉಪಾಸನಾಭಾಗ ಪುಟ ೨೩ರಲ್ಲಿ "ಸಪ್ತಾವರಣ ದೇಹ ಸತತ ಸಾಧನಗೇಹ" ಎಂಬ ಸುಳಾದಿಯಲ್ಲಿ ಹೇಳಿರುವದನ್ನೇ ದಾಸಾರ್ಯರು ವಿವರಣ ಮಾಡುತ್ತಾರೆ. ಶ್ರೀ ಐ. ಜಿ. ಸ್ವಾಮಿಗಳವರ ಮಾನಸ ಸ್ಮೃತಿಯಲ್ಲಿಯೂ ವಿಶದವಾಗಿದೆ.

ಪಾದಮಾನಿ ಜಯಂತ ಬಲಪಾದಕ್ಕೆ ಅಭಿಮಾನಿ, ಎಡಪಾದಕ್ಕೆ ಶಂಭು ಇವರೀರ್ವರು ಇಂದ್ರಪುತ್ರರು. ಜಯಂತನಲ್ಲಿ ಸುಮೇಧ ನಾಮಕ-ಯಜ್ಞನಾಮಕ ಪರಮಾತ್ಮನ ವಿಭೂತಿ ವಿಶೇಷ ಇರುವದರಿಂದ ಈ ಜಯಂತನು ಕರ್ಮಾಭಿಮಾನಿ ದೇವತೆಗಳ ಕಕ್ಷದಲ್ಲಿದ್ದರೂ-ಯಜ್ಞನಾಮಕನ ಅನುಗ್ರಹದಿಂದ ತತ್ವಾಭಿಮಾನಿ ದೇವತೆಗಳ ಕಕ್ಷದಲ್ಲಿ ಈತನ ಪರಿಗಣನೆ ಎಂದು ಶ್ರೀಮನ್ ಮಂತ್ರಾಲಯೇ ಮಹಾ ಪ್ರಭುಗಳು ಪ್ರಮೇಯ ರಹಸ್ಯದಲ್ಲಿ ಅಪ್ಪಣೆ ಕೊಟ್ಟಿದ್ದಾರೆ. ಇಂಥ ಪಾದ ದಕ್ಷಿಣಾಂಗುಷ್ಠದಲ್ಲಿ ವಾಯುದೇವರು ಕೂರ್ಮನಾಗಿ ಈ ವಾಯು ಅಂತರ್ಗತ ನಾರಾಯಣನು ತೀರ್ಥಪಾದನೆನಿಸಿ, ದೇಹಾಧಾರನಾಗಿ ಭಾರವಹಿಸುತ್ತಾನೆಂದು, ಚಿಂತಿಸಬೇಕು. ಈ ದಕ್ಷಿಣ ಪಾದಾಂಗುಷ್ಟದಲ್ಲಿ ಸಮಸ್ತ ತೀರ್ಥಗಳು ಇವೆ. ಆದುದರಿಂದ ವಿಪ್ರ ಪಾದ ಪ್ರಕ್ಷಾಲನೆಯು ಅತ್ಯಂತ ಪಾವನವಾದಂಥಾದ್ದು. ಇನ್ನು ಬಲಗಾಲ ಸಂಧಿಗಳಲ್ಲಿ ಟಂಕ್ಯಾದಿ ೧) ಟಂಕಿನೇ ನಮಃ, ೨) ಠಳಕಾಯ ನಮಃ, ೩) ಡರಕಾಯ, ೪) ಢರಿಣೇ ನಮಃ, ೫) ಣಾತ್ಮನೇ ನಮಃ ಎಂದು ೫ ಅಜಾದಿಗತ ರೂಪಗಳು. ಎಡಗಾಲು ಸಂಧಿಗಳಲ್ಲಿ ತಾರಾದಿ ೫ ಭಗವದ್ರೂಪಗಳು. ೧) ತಾರಾಯ ನಮಃ, ೨) ಥಪತೇ ನಮಃ, ೩) ದಂಡಿನೇ ನಮಃ, ೪) ಧನ್ವಿನೇ ನಮಃ, ೫) ನಮ್ಯಾಯ ನಮಃ ಎಂದು ೫ ಭಗವದ್ರೂಪಗಳು ಸಂತತವಾಗಿ ನಡೆದು ನಡೆಸುವ ಕಾರ್ಯ ಮಾಡುತ್ತಲಿವೆ.

ಇನ್ನು ಕಪಿಲ ಚಾರ್ವಾಂಗಾದಿ ರೂಪಗಳು ಬಲ-ಎಡ ಹಸ್ತಗಳ ಸಂಧಿಗಳಲ್ಲಿರುವ ಕ್ರಮ. ಬಲಗೈ ೫ ಸಂಧಿಗಳಲ್ಲಿ ಮೇಲಿನಿಂದ ಆರಂಭಿಸಿ ೧) ಕಂ-ಕಪಿಲಾಯ ನಮಃ, ೨) ಓಂ-ಖಪತೇಯ ನಮಃ, ೩) ಓಂ ಗಂ ಗರುಡಾಯ ನಮಃ, ೪) ಓಂ ಘಂ ಘರ್ಮಾಯ ನಮಃ, ೫) ಓಂ ಓಂ ಸಾರಾಯ ನಮಃ, ಎಡಗೈ ೫ ಸಂಧಿಗಳಲ್ಲಿ ೧) ಓಂ ಚಂ ಚಾರ್ವಾಂಗಾಯ ನಮಃ, ೨) ಓಂ ಛಂ ಛಂದೋಗಮ್ಯಾಯ ನಮಃ, ೩) ಓಂ ಜನಾರ್ದನಾಯ ನಮಃ, ೪) ಝಂ ಝುಟಿತಾರಾಯ ನಮಃ, ೫) ಓಂ ಞಂ ಞಮಾಯ ನಮಃ ಈ ಪ್ರಕಾರ ೧೦ ಭಗವದ್ರೂಪಗಳು ಎರಡೂ ಕೈಗಳಲ್ಲಿ ದೀನವತ್ಸಲನಾದ ಪರನೆಂಬ ರೂಪವು, ಬಲ ಪಾರ್ಶ್ವದಲ್ಲಿ ಫಲಿ ಎಂಬ ರೂಪವು, ಎಡಪಾರ್ಶ್ವ ಬಗಲಿನಲ್ಲಿ-ಗುದದಲ್ಲಿ ಬಲಿ ಎಂಬ ರೂಪವು ಉಪಸ್ಥದಲ್ಲಿ ಭಗನೆಂಬ ರೂಪವು ತುಂದಿ,

ವೃಷಣಾಸನದಲ್ಲಿ ಮನವೇ ನಮಃ ಎಂದು ೫ ರೂಪಗಳು. ಈ ದೇಹ ಅವಯವಗಳಲ್ಲಿ ನಿಂತು ಅಪರಿಮಿತ ಕಾರ್ಯ=ಆ ಅವಯವದಿಂದ ಏನೇನು ಕಾರ್ಯವಾಗಬೇಕೋ ಅವೆಲ್ಲ ಕಾರ್ಯ, ಶ್ರೀ ಹರಿಯೇ ತಾನು ಇದ್ದು ಮಾಡಿಸುವನು.

ಅಜಾದಿ ೫೧ ವರ್ಣ, ೫೧ ರೂಪಗಳಿರಲಾಗಿ ಇಲ್ಲಿ ಎಡ ಬಲಪಾದಗಳಲ್ಲಿ ೧೦ ರೂಪ, ಬಲ ಎಡಕೈಗಳಲ್ಲಿ ೧೦ ರೂಪ, ಪಾರ್ಶ್ವಾದಿಗಳಲ್ಲಿ ೫ ರೂಪ, ಒಟ್ಟಿಗೆ ೨೫ ರೂಪಗಳೇ ಹೇಳಿದ್ದಾರೆ. ಉಳಿದ ಅಜಾದಿ ೧೬ ಸ್ವರ ವರ್ಣಗಳು ಮತ್ತು ಮಕಾರಾದಿ ಕ್ಷಕಾರ ಪರಿಯಂತ ೧೦ ಮೂರ್ತಿ ಹೀಗೆ ಉಳಿದ ೨೬ ರೂಪಗಳನ್ನು ಇಲ್ಲಿ ಏಕೆ ಹೇಳಲಿಲ್ಲವೆಂಬ ಶಂಕಾ ಬಂದೇ ಬರುತ್ತದೆ. ಹಿಂದೆ ಅಚ್ಚಾಗಿರುವ ಯಾವ ವ್ಯಾಖ್ಯಾನಕಾರರೂ ಈ ವಿಚಾರ ಗಮನಿಸಲಿಲ್ಲ. ಈ ಸಂಧಿಯ ಪದ್ಯ ೧೭ರಲ್ಲಿಯೂ ಹೇಳಿದ್ದಾರೆ. ಮೊದಲಿಗೆ ಆದರೂ ಸಂಧಿ ೭ರಲ್ಲಿ ಜ್ಞಾನಿಗಳಾದ ದಾಸಾರ್ಯರು ಮುಂದಿನ ೯ ಸಂಧಿಯಲ್ಲಿ ತ್ವಕ್ ಚರ್ಮಾದಿ ಸಪ್ತಧಾತುಗಳಲ್ಲಿ (೭) ರೂಪ, ಪ್ರಾಣ-ಜೀವನಲ್ಲಿ ಳಂ-ಕ್ಷಂ ಈ ಎರಡು ರೂಪ ಹೇಳಿದ್ದಾರೆ. ಸಾಧಕರಾದ ಜೀವರು ಭಗವದುಪಾಸನಾ ಕ್ರಮವನ್ನು ಸರಿಯಾಗಿ ತತ್ವ ಮಾತೃಕಾನ್ಯಾಸಗತ ರೂಪಗಳು. ಇನ್ನೂ ಇತರ ರೂಪಗಳು, ಮಾನಸ ಸ್ಮೃತಿಯಲ್ಲಿ ಪೇಳಿದಂತೆ ವಿವರಿಸಿದ್ದಾರೆ. ಸದ್ಗುರುಗಳಿಂದ ತಿಳಿಯುವದು ಮಾನಸ ಸ್ಮೃತಿಯಲ್ಲಿ ಶಿರಸ್ಸಾರಂಭಿಸಿ ಭಗವದ್ರೂಪಗಳು ಹೇಳಿರುವದು. ಇದು ಅಪರೋಕ್ಷಿಗಳ ಧ್ಯಾನ ವಿಷಯ. ಇನ್ನು ಇಲ್ಲಿ ದಾಸಾರ್ಯರು ಪಾದವಾರಂಭಿಸಿ ಹೇಳಿದ್ದಾರೆ. ಸಾಧಕರಾದ ಅನಪರೋಕ್ಷಿಗಳ ಧ್ಯಾನ ಕ್ರಮ. ಒಟ್ಟಿನ ಮೇಲೆ ಸಂಧಿ ೬-೭-೮-೯ ರಲ್ಲಿ ದೇಹಾದಿಗಳ ವಿವರಣೆ, ದೇಹಗತ ರೂಪಗಳ ಧ್ಯಾನ ಉಪಾಸನೆಯೇ ಭಗವದಪರೋಕ್ಷಕ್ಕೆ ಕಾರಣ.

ಮಾತೃಕಾ ಅಜಾದಿ ವರ್ಣ ೧) ಅಂ–ಅಜಾ ಶಿರಸಿ, ೨) ಆಂ–ಆನಂದಾಯನಮಃ ಮುಖೇ, ೩) ಇಂ–ಇಂದ್ರಾಯನಮಃ ದಕ್ಷಿಣ ನೇತ್ರೆ, ಓಂ, ೪) ಈಂ–ಈಶಾಯನಮಃ ವಾಮನೇತ್ರೆ ೫) ಓಂ ಉಂ–ಉಗ್ರಾಯನಮಃ ಬಲಕಿವಿ, ೬) ಓಂ ಊಂ–ಊರ್ಜಿತಾಯನಮಃ ಎಡಕಿವಿ, ೭) ಓಂ ಋಂ–ಋತುಂಭರಾಯನಮಃ ಬಲಮೂಗಿನ ಹೊಳ್ಳೆ, ೮) ೠಂ–ೠಘಾಯನಮಃ ಎಡ

ಮೂಗಿನ ಹೊಳ್ಳೆ, ೯) ಓಂ ಲಂ-ಲಶಾಯನಮಃ ಬಲಕಪೋಲ, ೧೦) ಓಂ ಲೂಂ-ಲ್ಯೂಜಯೇನಮಃ ಎಡ ಕಪೋಲ, ೧೧) ಓಂ ಏಕಾತ್ಮನೇನಮಃ ಮೇಲು ತುಟಿ, ೧೨) ಓಂ ಐರಾಯನಮಃ ಕೆಳದುಟಿ, ೧೩) ಓಂ ಓಜೋಭೃತೇನಮಃ ಮೇಲಿನ ದಂತಪಂಕ್ತಿ, ೧೪) ಔಂ-ಔರಸಾಯನಮಃ ಕೆಳದಂತ ಪಂಕ್ತಿ, ೧೫) ಓಂ ಅಂ-ಅನಂತಾಯನಮಃ ತಾಲು, ಮೂಲೇ, ೧೬) ಓಂ ಅಃ-ಅರ್ಧ ಗರ್ಭಾಯನಮಃ ವಾಚಿ, ಹೀಗೆ ಮುಖದಲ್ಲಿ ೧೬ ರೂಪಗಳು.

೧) ಓಂ ಯಜ್ಞಾಯನಮಃ ಹೃದಯದಲ್ಲಿ, ೨) ಓಂ ರಂ-ರಾಮಾಯ ನಮಃ ತ್ವಕ್ಕಿನಲ್ಲಿ, ೩) ಓಂ ಲಂ-ಲಕ್ಷ್ಮೀಪತಯೇನಮಃ ಚರ್ಮದಲ್ಲಿ, ೪) ವಂ-ವರಾಯನಮಃ ಮಾಂಸದಲ್ಲಿ, ೫) ಓಂ ಶಂ-ಶಾಂತಸಂವಿದೇನಮಃ ರುಧಿರದಲ್ಲಿ, ೬) ಓಂ ಷಂ-ಷಡ್ಗುಣಾಯನಮಃ ಮೇದಸ್ಸಿನಲ್ಲಿ, ೭) ಓಂ ಸಂ-ಸಾರಾತ್ಮನೇನಮಃ ಮಜ್ಜಾದಲ್ಲಿ, ೮) ಓಂ ಹಂ-ಹಂಸಾಯನಮಃ ಅಸ್ಥಿಯಲ್ಲಿ, ೯) ಓಂ ಳಂ-ಳಾಳೂಕಾಯನಮಃ ಹೃತ್ಕಮಲ ಮೂಲೇಸನ ಪಾದಾಶ್ರಿತ ಮುಖ್ಯಪ್ರಾಣನಲ್ಲಿರತಕ್ಕ ಹರಿಯ ರೂಪಕ್ಕೆ **ಳಾಳೂಕ** ಎಂದು ಹೆಸರು. ತಂತ್ರಸಾರದಂತೆ ಶ್ರೀ ಪ್ರಾಣೇಶದಾಸರ ವಚನ. ೧೮) ಕ+ಷ=ಕ್ಷಂ-ಶ್ರೀ ಲಕ್ಷ್ಮೀನರಸಿಂಹಾಯನಮಃ ಜೀವೆ. ಈ ಪ್ರಕಾರ ಮಾತೃಕಾನ್ಯಾಸವಿಚಾರ ಚೆನ್ನಾಗಿ ತಿಳಿಯಬೇಕು. ಇದಲ್ಲದೇ **ಮಾತೃಕಾ** ಅಜಾದಿ **ವರ್ಣಮೂರ್ತಿಗಳ ಲಕ್ಷಣ** ಶ್ರೀ ಸರ್ವಜ್ಞರು ತಂತ್ರಸಾರದಲ್ಲಿ ಹೇಳಿದಂತೆ ಛಲಾರಿ ವ್ಯಾಖ್ಯಾನ. "ಧ್ಯಾನ-ಶ್ಲೋಕ, ತಾದೃಗ್ ರೂಪಾಂಶ್ಚ ಪಂಚಾಶನ್, ಜ್ಞಾನಮುದ್ರಾಽಭಯೋದಿತಾಃ ॥ ಟಂಕೀದಂಡೀಚ ಧನ್ವೀಚ ತತ್ತದ್ಯುಕ್ತಾಸ್ತುವಾಮತಃ ॥ ಉದ್ಯದಾದಿತ್ಯ ಮೂಲರೂಪಾಃ ಸವರ್ಣಕಃ ॥

ಎಲ್ಲವೂ ಉದಿತವಾಗುವ ಸೂರ್ಯನ ಅರುಣ ವರ್ಣದಂತೆ ಪ್ರಕಾಶಮಾನವಾದವು. ಎಲ್ಲ ಮೂರ್ತಿಗಳು ಎರಡೇ ಭುಜವೆಂಥರೆ ಎರಡು ಕೈಗಳುಳ್ಳವು, ಕುಳಿತ ಮೂರ್ತಿಗಳು. ಬಲಗೈ ಜ್ಞಾನಮುದ್ರಾ, ಎಡಗೈ ಅಭಯ ಮುದ್ರಾ ಈ ಪ್ರಕಾರವಾಗಿ ಇರುವವು. ಆದರೆ ಇದರಲ್ಲಿ ಮೂರು ಮೂರ್ತಿಗಳು.

೧) ಟಂಕಿನೇ=ಎಂಬ ಮೂರ್ತಿ ಬಲಕರ ಜ್ಞಾನಮುದ್ರಾ, ಎಡಕರ

ಅಭಯ ಮುದ್ರಾ ಸ್ಥಾನದಲ್ಲಿ ಟಂಕ ಆಯುಧ ಧರಿಸಿದ್ದು, ಟಂಕ ಎಂದರೆ ಪಾಷಾಣ ವಿದಾರಣ ಮಾಡುವ ಆಯುಧ.

೨) ದಂಡಿನೇ ಎಂಬ ಮೂರ್ತಿ ಬಲಕೈ ಜ್ಞಾನಮುದ್ರಾ, ಎಡಕೈಯಲ್ಲಿ ದಂಡ=ಕೋಲು ಧರಿಸಿದ ಮೂರ್ತಿ.

೩) ಧ್ವನಿನೇ ಎಂಬ ರೂಪ=ಬಲಗೈ ಜ್ಞಾನಮುದ್ರಾ, ಎಡಕೈಯಲ್ಲಿ ಧನು=ಬಿಲ್ಲು ಎಂಬ ಆಯುಧ ಈ ಪ್ರಕಾರ ರೂಪಗಳನ್ನು ಚಿಂತಿಸಬೇಕು. ಕೆಲವು ರೂಪಗಳನ್ನು, ವಿಶ್ವರೂಪ ಧ್ಯಾನೋಪಾಸನೆ ಚಿತ್ರಪಟದಲ್ಲಿ ಶ್ರೀ ಗೋಪಾಲದಾಸರಾಯರು ಚಿತ್ರಿಸಿರುವರು.

ಇನ್ನು ತುಂದಿ ಮೂಲಾರಭ್ಯವಾಗಿ ಸುಷುಮ್ನಾನಾಡಿ ಇರತಕ್ಕ ಕ್ರಮ ಇದರಲ್ಲಿರುವ ಸಪ್ತ ಕಮಲಸ್ಥಾನ ಒಟ್ಟಿಗೆ ೩೨ ಕಮಲಗಳ ವಿಚಾರ ಹೇಳುತ್ತಾರೆ. ಇದನ್ನು ವಿಶ್ವರೂಪಿ ಧ್ಯಾನೋಪಾಸನೆ ಪಟದಲ್ಲಿ ನೋಡಬಹುದು.

ಈ ಸುಷುಮ್ನಾನಾಡಿಯು, ವೃಷಣಾಸನ ಮೂಲಾಧಾರದಿಂದ ಋಜುವಾಗಿ ಶಿರಃ ಪರಿಯಂತರ ಹೋಗಿದೆ. ಇದಕ್ಕೆ ಪಶ್ಚಿಮಾದಿ ಕ್ರಮದಿಂದ ವಜ್ರಿಕಾ, ಆರ್ಯಮಾ-ಉತ್ತರಕ್ಕೆ, ಪ್ರಕಾಶಿನೀ-ಪೂರ್ವಕ್ಕೆ, ವೈದ್ಯುತಾ-ದಕ್ಷಿಣಕ್ಕೆ, ಬ್ರಹ್ಮನಾಡಿ-ಮಧ್ಯದಲ್ಲಿ ಹೀಗೆ "ನೈವ ಪಂಚ ಪ್ರಭೇದಿನೀ"ಎಂದು ತಂತ್ರಸಾರ ವಾಕ್ಯದಂತೆ ದಾಸರಾಯರು ಮುಂದಿನ ೯ನೇ ಸಂಧಿ ಪದ್ಯ ೧೭ "ಕೇಶಸಾಸಿರ ವಿಧ ವಿಭಾಗವಗೈಸಲೆನುತಿಹ" ಈ ಪದ್ಯದಲ್ಲಿ ವಿವರಿಸಿದ್ದಾರೆ.

೧) ಸುಷುಮ್ನಾ ನಾಡಿ ಮೂಲಾಧಾರದಲ್ಲಿ ೪ ದಳದ ಕಮಲಗಳು ಐದು. ಒಂದೊಂದು ನಾಡಿಯಲ್ಲಿ ಒಂದೊಂದು ಕಮಲ, ಇದು ಪ್ರವಾಳ ವರ್ಣವಾದುದು. ಇಲ್ಲಿ ನೀಲ ಅನಿರುದ್ಧಾಂಶ. ಅ.ಆ.ಅ.ಪ್ರ.ಅ.ಸ.ಅ.ವಾ. ಅನಿ-ನಾರಾಯಣ. ಹೀಗೆ ಅನಿರುದ್ಧ ನಾಮಕ ಪರಮಾತ್ಮ ದಳಾಭಿಮಾನಿಗಳು ೪ ಜನ. ಹಿಂದೆ ವಿವರಿಸಿದೆ. ಸ್ವಾಯಂಭು ಮನು ದಳಾಭಿಮಾನಿ.

೨) ನಾಭಿಯಲ್ಲಿ ೬ ದಳ ಕಮಲ. ಐದು ನಾಡಿಗಳಲ್ಲಿ ೫ ಕಮಲಗಳು. ರಕ್ತವರ್ಣ. ಇಲ್ಲಿ ಪ್ರದ್ಯುಮ್ನಾಂಶನ ಐದು ರೂಪಗಳು ಪ್ರದ್ಯುಮ್ನ ರಕ್ತ. ವರ್ಣ. ಗಣೇಶ ಕಮಲಾಭಿಮಾನಿ. ದಳಾಭಿಮಾನಿಗಳು ಷಣ್ಮಹಿಷಿಯರು.

೩) ಹೃದಯದಲ್ಲಿ ಎಂಟು ದಳಗಳ ಕಮಲ ೫. ಇಲ್ಲಿ ಸಂಕರ್ಷಣನು ತನ್ನ ೫ ಅಂಶದಿಂದ ಇರುತ್ತಾನೆ. ಉದಯಾರ್ಕ ಕಮಲವರ್ಣವಿವು. ಇಲ್ಲಿ

ದಳಗಳಲ್ಲಿ ಇಂದ್ರಾದಿ ಅಷ್ಟದಿಕ್ಪಾಲಕರು ಅಭಿಮಾನಿಗಳು. ಕಮಲಾಭಿಮಾನಿ ಇಂದ್ರ.

೪) ಉರು-ಹೃದಯ ಮೇಲೆ ವಕ್ಷಸ್ಥಳದಲ್ಲಿ ದ್ವಾದಶದಳ ಕಮಲ. ಇಲ್ಲಿ ಒಂದೇ ಕಮಲ. ಈ ಕಮಲ ಮುತ್ತಿನ ವರ್ಣ ಉಳ್ಳದ್ದು. ಇಲ್ಲಿ ನರಹರಿ-ಪರಮಾತ್ಮ, ದ್ವಾದಶಾದಿತ್ಯರು ಕಮಲಾಭಿಮಾನಿಗಳು. ಮುಖ್ಯ ಕಮಲಕ್ಕೆ ಮಹರುದ್ರ ಅಭಿಮಾನಿ.

೫) ಇಂದ್ರ ಯೋನಿಯಲ್ಲಿ ದ್ವಿದಳ ಕಮಲವೆಂತಲೂ, ಇವೇ ಪ್ರಬೇಧ ವಾಗಿ ೧೬ ದಳಗಳ ಕಮಲವೆಂತಲೂ, ಇರುವ ೫ ಕಮಲಗಳು. ಇವು ಧವಳ ವರ್ಣ ಇರುವವು. ನಿಯಾಮಕ ಹರಿರೂಪ-ನರಹರಿ. ೧೬ ದಳಗಳಲ್ಲಿ ೧೬ ಚಂದ್ರಕಲಾಭಿಮಾನಿ ದೇವತೆಗಳು. ಶೇಷ ಅಭಿಮಾನಿ.

೬) ಭ್ರೂ ಮಧ್ಯದಲ್ಲಿ ೨ ದಳ ಕಮಲಗಳು ೫. ಇವು ಮಧುಪುಷ್ಪ ವರ್ಣದಿಂದ ಇರುವವು. ಕೃಷ್ಣ ಪರಮಾತ್ಮ, ಗರುಡ ಅಭಿಮಾನಿ.

೭) ಶಿರಸ್ಸಿನಲ್ಲಿ ಸಾಸಿರದಳ ಕಮಲ. ವಜ್ರ ಪ್ರಕಾಶದಂತೆ ಶೋಭಿಸುವ ಐದು ಕಮಲಗಳು. ವಿಶ್ವಾದಿರೂಪ-ಬ್ರಹ್ಮಾ ಅಭಿಮಾನಿ.

೮, ಶಿರಸ್ಸಿನಲ್ಲಿ ಭ್ರೂಮಧ್ಯದಿಂದ ದ್ವಾದಶಾಂಗುಲದ ಮೇಲೆ ೧೨ ದಳ. ಶ್ವೇತ ವರ್ಣ. ಒಂದೇ ಕಮಲ. ಇಲ್ಲಿ ವೈಕುಂಠಪತಿ ವಾಸುದೇವ ಶ್ವೇತ ರೂಪದಿಂದಿರುವನು. ಒಟ್ಟಿಗೆ ೩೨ ಕಮಲವೆಂದು ಶ್ರೀ ವಿಜಯದಾಸರು ಉಪಾಸನಾ ಭಾಗ ಸುಳಾದಿ ೧೪ "ಮೂಲಾಧಾರದಲ್ಲಿ ಚತುರದಳ ಪದುಮ" ವೆಂಬುದರಲ್ಲಿ ಸವಿಸ್ತರವಾಗಿ ಹೇಳಿದ್ದಾರೆ. ತಂತ್ರಸಾರದಲ್ಲಿಯೂ, ಮಾನಸ ಸ್ಮೃತಿಯಲ್ಲಿಯೂ ಉಕ್ತವಾಗಿವೆ. ಅದೇ ವಿವರವನ್ನೇ ಶ್ರೀ ದಾಸಾರ್ಯರು ಸಮ್ಮಿಳಿತವಾಗಿ ಉಪದೇಶಿಸುತ್ತಾರೆ.

ಈ ಸುಷುಮ್ನಾ ನಾಡಿಯಲ್ಲಿ ಐದು ಮೇಲೊಂದಧಿಕ ೬ ದಳ ಪದ್ಮವು ನಾಭಿ ಮೂಲದಲ್ಲಿ ಇರುವದು. ಈ ಐದು ಪದ್ಮಗಳಲ್ಲಿ ನಾಭಿಯಲ್ಲಿ ಮತ್ತು ಮೂಲದಲ್ಲಿ ೫ ಕಮಲ ನಾಲ್ಕು ದಳದಲ್ಲಿ ಎಂತ ಅರ್ಥಮಾಡಬೇಕು. ಮೂಲ ಅಂದರೆ ತುಂದಿಯಲ್ಲಿ ಅನಿರುದ್ಧಾದಿ ಕ್ರಮ, ನಾಭಿಯಲ್ಲಿ ಪ್ರದ್ಯುಮ್ನ ರೂಪ ಐದರಿಂದ ಶೋಭಿಸುತ್ತಾ ಇರುವನು. ಮೂಲಭಾಗ ಗರ್ಭಸ್ಥಾನೀಯವಾಗಿ ಧುವದು ಇದನ್ನರಿಯಬೇಕು. ಈ ಗರ್ಭಸ್ಥಾನಕ್ಕೆ ಪ್ರದ್ಯುಮ್ನನು ರೇತಸ್ಸ

ಶಿಂಚನೆಮಾಡಲು, ಅನಿರುದ್ಧ ನಾಮಕನು. ಜೀವರನ್ನು ಗರ್ಭ ಐದಿಸಿ ಗರ್ಭ ಅಭಿವೃದ್ಧಿ ಮಾಡುತ್ತ ಜೀವರ ಅನಾದಿಕರ್ಮ, ಅವರವರ ಸ್ವಭಾವ, ತ್ರಿಗುಣ ಪ್ರಕೃತಿ ಗುಣ ಕಾರ್ಯಗಳನುಸಾರವಾಗಿ ಹಾದಿ ತಪ್ಪದಂತೆ ಸಕಲ ವ್ಯಾಪಾರ ಮಾಡಿಸುತ್ತಾನೆ. ಈ ಪದ್ಮಗಳ ಮೇಲೆ ಷಟ್ಕೋಣ ವಾಯು ಮಂಡಲ. ಇಲ್ಲಿ ಮುಕ್ತಾಭಿ=ಮುತ್ತಿನ ವರ್ಣ ಕಾಂತಿವಿಶಿಷ್ಟನಾದಂಥ ಪ್ರದ್ಯುಮ್ನದೇವನು ಇರುವನು. ಈತನು ಜ್ಞಾನಿಗಳ ಸಮೂಹದಿಂದ ಸೇವ್ಯ ನಾದವನು. ಶಂಖ ಗದಾಚಕ್ರ ಪದ್ಮಾಯುಧ ಧರಿಸಿ ಕೌಂಸ್ತುಭಾಭರಣ ದಿಂದ ಶೋಭಿತನಾಗಿ ಅತಿ ಕ್ರೂರ ಕಠೋರನಾದ ಪಾಪ ಪುರುಷನನ್ನು ನಿತ್ಯ ದಲ್ಲಿ ಶೋಷಿಸುತ್ತಾನೆ, ಒಣಗಿಸುತ್ತಾನೆ. ಸ್ಥೂಲ ದೇಹದಲ್ಲಿ ಎಡಭಾಗದಲ್ಲಿ ಪಾಪ ಪುರುಷನಾದ ಕಲಿಯು, ಅನೇಕ ಅಂಶಗಳಿಂದ ಕುಹಕಮಾರ್ಗ ಹಚ್ಚು ವವನನ್ನು ನಿತ್ಯ–ಸದಾ ಸರ್ವ ಕಾಲದಲ್ಲಿ ವಾಯುದೇವರು ಶೋಷಿಸುತ್ತಾರೆ. ಪ್ರತಿನಿತ್ಯ ಮಾಡುವ ಗುರುಮಂತ್ರದಲ್ಲಿ ದ್ವಾದಶ ನಮಸ್ಕಾರ ಆದಮೇಲೆ "ತತಃ ಹೃದಿಸ್ಥಂ ಭಗವಂತರ ಸುಷುಮ್ನ ಮಾರ್ಗತಃ ಮೂರ್ಧ್ನಿವಿನ್ಯಸೇತ್" ಹೀಗೆ ಭಗವತ್ಕಳೆಯನ್ನು ಮೂರ್ಧ್ನಿಯಲ್ಲಿಟ್ಟು ಚಿಂತನೆಗೈದು ವಾಮಕುಕ್ಷಿ ಯನ್ನು ಎಡಗೈಲಿ ಮುಟ್ಟಿ ಪಾಪ ಪುರುಷನನ್ನು ಧ್ಯಾನಿಸಬೇಕು. ಅವನ ಕುಲಕ್ಷಣ. "ಬ್ರಹ್ಮಹತ್ಯ ಶಿರಸ್ಕಂಚ ಸ್ವರ್ಣಸ್ತೇಯ ಭುಜದ್ವಯಂ ।। ಸುರಾ ಪಾನ ಹೃದಾಯುಕ್ತಂ ಗುರುತಲ್ಪ ಕಟಿದ್ವಯಂ ।। ತತ್ ಸಂಯೋಗ ಪದ ದ್ವಂದ್ವ ಮಂಗ ಪ್ರತ್ಯಂಗ ಪಾತಕಂ ।। ಉಪಪಾತಕ ರೋಮಾಣಾಂ ರಕ್ತ ಶ್ಮಶ್ರು ವಿಲೋಚನಂ ।। ಖಡ್ಗ ಚರ್ಮಧರಂ ಕೃಷ್ಣಂ ಕುಕ್ಷೌ ಪಾಪಂ ವಿಚಿಂತ ಯೇತ್ ।। ಇಂಥ ಅವಲಕ್ಷಣ ಪಾಪ ಪುರುಷನನ್ನು ವಾಮಕುಕ್ಷಿಯಿಂದಾ, ನಾಭಿ ದೇಶಕ್ಕೆ ತ್ರಿಗುಣಾತ್ಮಕವಾದ ವಾಯು ಪಾಶದಿಂದ ವಾಯು ದೇವರು ಎಳತಂದು ನಾಭಿಯನ್ನು ಮುಟ್ಟಿ, ವಾಯುಬೀಜವಾಚ್ಯ ಶಂಖಗದಾಬ್ಜ ಚಕ್ರಾಯುಧಃ ವಾಯ್ವಂತರ್ಗತ ಶ್ರೀ ಪ್ರದ್ಯುಮ್ನೋ ಭಗವಾನ್ ಮಚ್ಛ ರೀಸ್ಥಂ ಪಾಪ ಪುರುಷಂ ವಾಯುನಾಶೋಷಯತು"ರೇಚಪೂರ್ವಕ ಕುಂಭಕ ದಲ್ಲಿ ಓಂ ಯಂ ವಾಯುಬೀಜವನ್ನು ಆರು ಸಲ ಜಪಿಸಿ ವಾಯುವಿನಿಂದ ಶುಷ್ಕನಾದನೆಂದು ಭಾವಿಸಿ, ಆ ಶುಷ್ಕನಾದ ಒಣಗಿದ ಪಾಪ ಪುರುಷನನ್ನು ಹೃದಯ ದೇಶದಲ್ಲಿ ತಂದು, ಹೃದಯ ಮುಟ್ಟಿ "ತ್ರಿಕೋಣ ಮಂಡಲ

ಮಧ್ಯಸ್ಥೋ ರಕ್ತವರ್ಣೋ ಅಗ್ನಿಬೀಜ ವಾಚ್ಯ । ಶಂಖ-ಅಬ್ಜ-ಅರಿ=ಚಕ್ರ ಗದಾಯುಧಃ ಶ್ರೀ ಸಂಕರ್ಷಣೋ ಭಗವಾನ್" ಮಚ್ಛರೀರಸ್ಥ ಪಾಪಪುರುಷಂ ಅಗ್ನಿನಾನಿರ್ದಹತು ಓಂ ರಂ ಇತಿ ಕುಂಭಕ್ಕೆ ೧೨ ದ್ವಾದಶವಾರಂಜಪ್ತ್ವಾ, ತದಗ್ಧಂ ಮತ್ವಾ ತದ್ಭಸ್ಮ ವಾಮನಾಸಾಪುಟೇನ ಬಹಿಃಕ್ಷಿಪೇತ್ ॥ ಹೀಗೆ ಭಸ್ಮೀಕೃತನನ್ನಾಗಿ ಮಾಡಿದ ವಾಯುದೇವನ ಸ್ಮರಣೆ ಬಲಪಾರ್ಶ್ವದಲ್ಲಿ ಚಿಂತನೆಗೈಯ್ಯಬೇಕು. "ಅಶ್ವಮೇಧ ಶಿರಸ್ಕಂಚ ಮಹಾದಾನ ಭುಜದ್ವಯಂ" ಇತ್ಯಾದಿ ॥ ಪ್ರಾಣರೂಪ ॥ ಧ್ಯಾನಗೈದು ಈ ವಾಯ್ವಂತರ್ಯಾಮಿ ವಾಸು ದೇವನೇ ವರ್ತುಲ ಮಂಡಲಸ್ಥನಾಗಿ ಶಿರಸ್ಸಿನಲ್ಲಿರುವನೆಂದು ತಿಳಿದು ಶಿರಸ್ಸು ಮುಟ್ಟಿಕೊಂಡು "ವರುಣ ಬೀಜ ವಾಚ್ಯ ಶಂಖ-ಚಕ್ರ-ಪದ್ಮ ಗದಾಯುಧಃ ಶ್ರೀ ವಾಸುದೇವೋ ಭಗವಾನ್ ಮಚ್ಛರೀರಂ ಮಮೃತವೃಷ್ಟ್ಯಾ ವರುಣೇ ನಾಪ್ಲಾವಯತು ಓಂ ವಂ ಇತಿ ಕುಂಭಕದಲ್ಲಿ ೨೪ ಆವರ್ತಿ ಜಪಿಸಿ ಈ ವಾಯ್ವಂತರ್ಯಾಮಿ ವಾಸುದೇವನಿಂದ ಸ್ವದೇಹದಲ್ಲಿ ಅಮೃತ ವೃಷ್ಟಿಗರೆದು ಪಾಪ ಪುರುಷನಿಲ್ಲದಂತೆ ಶುದ್ಧವಾಗಿದೆಯೆಂದು ಭಾವಿಸುವ ದೆಂದು ಗುರುಮಂತ್ರವಿದೆ. ಅಲ್ಲಿಂದ ತತ್ವ ನ್ಯಾಸ, ಮಾತೃಕಾ ನ್ಯಾಸ ಮಾಡುವದು.

ಇಲ್ಲಿ ದಾಸರಾಯರು ಅಗ್ನಿಮಂಡಲ ವಿಚಾರ ಹೇಳಿಲ್ಲವಾದರೂ, ಮುಂದಿನ ಪದ್ಯ ೫ರಲ್ಲಿ ಮತ್ತೂ ಮುಂದೆ (೯)ನೇ ಸಂಧಿಯ ಪದ್ಯ ೧೮ರಲ್ಲಿ ಆ ನಳಿನ ಭವನಾಡಿಯೊಳಗೆ ತ್ರಿಕೋಣ ಚಕ್ರವು ಇಪ್ಪುದಲ್ಲಿ ಕೃಶಾನು ಮಂಡಲ ಮಧ್ಯಗನು ಸಂಕರಷಣಾದ್ವಯನು ॥ ಹೀನ ಪಾಪಾತ್ಮಕ ಪುರುಷನ ದ। ಹಾನ ಗೈಸುತ ದಿನದಿನದಿ ವಿ । ಜ್ಞಾನಮಯ ಶ್ರೀ ವಾಸುದೇವನ ಐದಿ ಸುವ ಕರುಣ" ಎಂದು. ಸಮಯೋಚಿತ ಅಲ್ಲಿ ಹೇಳಿದ್ದು. ಇಲ್ಲಿಯೂ ಸಮನ್ವಯ ಮಾಡಿದರೆ ಸಮಸ್ಯೆ ಪೂರ್ಣವಾಗುತ್ತದೆಂದು ಜ್ಞಾನಿಗಳ ಸಮ್ಮತ.

ಇದೇ ವಿಷಯವನ್ನೇ ಶ್ರೀ ವಿಜಯ ದಾಸಾರ್ಯರು ಸಾಧನ ಭಾಗ (೧) ಸುಳಾದಿ (೧) ಪುಟ (೨) ಮಟ್ಟ ತಾಳ ರೂಪಕ ತಾಳದಲ್ಲಿ ಹೇಳಿದ್ದಾರೆ:

**ಸುಳಾದಿ. ಮಟ್ಟತಾಳ:** ಕರಿಯ ರೂಪದ ಪಾಪಿ ಅರುಣನಯನ ಐ। ದರಿಯಿಂದ ಉದುಭವಿಸಿ। (ಪಂಚ ಮಹಾಪಾತಕಗಳಿಂದ ಪುಟ್ಟಿ) ಪರಿ ಪರಿಯ ಉಪದುರಿತಾಂಗ ರೋಮಕರವಾಳ ಹಲಿಗೆ। ಕರದಲ್ಲಿ ಪಿಡಿದು ಶಿರ ಕೆಳಗಾಗಿ ಈ। ಪುರದೊಳು ಎಡದಲ್ಲಿ ಪರಿಶೋಭಿಸುತಿಪ್ಪ ಕರಣಕೆ ಭೀತಿ ಯನು। ಸುರಿದು ಕೆಂಗಡಿಸುವ। ಸುರರಿಪು ನಾಮಾಸಿರಿ ವಿಜಯವಿಠಲ ನಿನ್ನ। ಧೊರೆತನದ ಭೀತಿ ಅರಿಯದ ದುರುಳನು ॥ ೨ ॥ ಮುಂದೆ ರೂಪಕ ತಾಳದಲ್ಲಿ ಇವನನ್ನು ಹಾನಿಗೈಸುವ ಬಗೆ ಹೇಳುತ್ತಾರೆ.

**ರೂಪಕ ತಾಳ:** ಮೂರು ಹುರಿಯಾನಿಟ್ಟ, ಪಾಶದಲಿ ಕಲಿಯಾ। (ತ್ರಿಗುಣಾತ್ಮಕವಾದ ಬಿರುಸಾದ ಹಗ್ಗದಿಂದ ಅವನನ್ನು ಬಂಧಿಸಿ, ಶ್ರೀ-ಭೂ-ದುರ್ಗಾತ್ಮಕ ತ್ರಿಗುಣಾಭಿಮಾನಿ ಪಾಶ) ಆರು ಕೋಣೆಗೆ ಶಳೆದು ತಂದು ನಿಲ್ಲಿಸಿ। ಘೋರನೆ ಬೀಸುವ ಸಮಿರಾರದಲ್ಲಿ ಅವನ। ಶರೀರ ಶೋಷಿಸಿ ಮೇಲಕ್ಕೆ ಎಳತಂದು। ಕ್ರೂರ ಪುರುಷನಾಕಾರವನೇಗಲಿ। ಧಾರನಾಕೃತಿ ಯಿಂದ ದಹಿಸಿ ಕಳಿಯೋ। ವಾರಣನಾಮ ಸಿರಿ ವಿಜಯವಿಠ್ಠಲ ಸುಧಾಧಾರಿ ಮ್ಯಾಲಿಂದಗರೆದು ಶುದ್ಧಿಯ ಮಾಳ್ಪ। (ಮಾಡು) ॥ ೩ ॥

**ಭಾವಸೂಚನ:** ವ್ಯಾಸದಾಸ ಸಿದ್ಧಾಂತ ಕೌಮುದಿಕಾರರು ಇದನ್ನೆ ಚೆನ್ನಾಗಿ ವಿಚಾರ ಮಾಡಿದ್ದಾರೆ.

ಇನ್ನು ತ್ರಿಕೋಣ ಮಂಡಲಗತವಾದ ದ್ವಾದಶಾದಿತ್ಯರ ಮಂಡಲವು ಮಧ್ಯೋದರದಲ್ಲಿ ಇದೇ ಸುಷುಮ್ನಾನಾಡಿಯಲ್ಲಿರುವದು. ಐದು ರೂಪಾತ್ಮಕ ನಾದ ಸಂಕರ್ಷಣನ ಅಂಶಗಳಾದ ಐದು ರೂಪಗಳಿಂದ ದಿವಾರಾತ್ರಿ ಅಭಿ ಮಾನಿ ದೇವತೆಗಳು. ೩೬೦ ಜನ ದೇವತೆಗಳನ್ನು ತುಷ್ಟಿಬಡಿಸುತ್ತಾನೆ.

"ದ್ವಿಷಟ್ಕೋಣಾದಿತ್ಯ ಬಿಂಬಸ್ತತ್ರ ವೃಂದೇತು ಮಂಡಲೇ ॥ ಸಷಷ್ಟಿ ತ್ರಿಶತಾನ್ಯೇವ ವಿಷ್ಣುರೂಪಾಣಿ ಚಿಂತಯೇದಿತಿ ವಿಷ್ಣುಪುರಾಣದಲ್ಲಿ ಹೇಳಿ ದ್ದಾರೆ. ಇದನ್ನೇ ಮಾನಸ ಸ್ಮೃತಿಯಲ್ಲಿಯೂ ನಿರೂಪಿಸಿದ್ದಾರೆ. ಮತ್ತು ಈ ಸುಷುಮ್ನಾ ನಾಡಿಯಲ್ಲಿ ಪ್ರವೇಶರಾಗಗುಡದಂತೆ ವಾಯ್ವಂತರ್ಗತ ಸಂಕರ್ಷಣನೇ ನಿಷಾದ=ಕಿರಾತ ರೂಪಿ ದೈತ್ಯರನ್ನು=ಸ್ಥೂಲ ದೇಹದ ಎಡಭಾಗದಲ್ಲಿದ್ದ ದೈತ್ಯರ ಅಂಶಗಳನ್ನು ಸಂಹರಿಸುತ್ತಾರೆಂಬ ಭಾವ. (ಇವರು ಮಂದೇಹಾದಿ ರಕ್ಕಸರಲ್ಲ, ಆ ವಿಷಯ ಸಂಧ್ಯಾಪ್ರಕರಣವೇ ಬೇರೆ ಇದೆ.)

ಇನ್ನು ಹೃದಯದೊಳಗೆ ಅಷ್ಟದಳ ಕಮಲವಿದೆ. ಅದರಲ್ಲಿ ಬಿಂಬನೆಂದೆನಿಸುವ ಶ್ರೀ ಹರಿಯು ಪದ್ಮ-ಚಕ್ರ-ಶಂಖ-ಗದಾ ಧರಿಸಿದ ಚತುರ್ಭುಜ ಭುಜಕೀರ್ತಿ, ಕಂಠಾಭರಣ, ಮುಕುಟ, ಅಂಗುಲಿಯಲ್ಲಿ ಉಂಗುರಗಳು, ಪದಕ, ಕೌಸ್ತುಭ ಮಣಿಹಾರ, ವನಮಾಲಾದಿಯಿಂದ ಭೂಷಿತನಾದ ಪ್ರಾದೇಶನಾಮಕ ಹರಿಯು ಬಿಂಬನೆನಿಸಿ ಉದಯವಾಗುವ ಸೂರ್ಯಪ್ರಕಾಶದಂತೆ ಒಪ್ಪುತ್ತಾನೆ. ಜೀವನ ದೇಹಕ್ಕೆ ಆಧಾರ ರೂಪನಾಗಿ ಭೂಭಾಗ ಕಮಲಮಧ್ಯದಲ್ಲಿ ಒಂದು ಗೇಣು ಪರಿಮಿತನಾಗಿ ಕುಳಿತಂಥ ಈ ಪ್ರಾದೇಶ ನಾಮಕನನ್ನು ಚಿಂತಿಸಬೇಕೆಂದು ಶೌನಕ ಸ್ಮೃತಿಯಲ್ಲಿ ಹೇಳಿದೆ.

ಇನ್ನು ಉರದ ಮೇಲ್ಭಾಗವಿರುವ ಕಂಠದಲ್ಲಿ ಎರಡು ದಳವುಳ್ಳ ಪದ್ಮವಿರುವದು. ಇದರಲ್ಲಿ ಮುಖ್ಯ ಪ್ರಾಣದೇವರು. ತನ್ನ ನಿಜ ಪತ್ನಿಯಾದ ಭಾರತೀದೇವಿಯರಿಂದ ಒಡಗೂಡಿ ಇದ್ದು, ಉದಾನನಾಮನಾಗಿ ಹಂಸ ಮಂತ್ರ ಜಪವನ್ನು ಮಾಡುತ್ತಾ ಹಂಸೋಪಾಸನೆ ಮಾಡಿ ಜೀವನಪ್ರದನಾಗಿರುವನಲ್ಲದೆ, ಉದಕ ಅನ್ನಾದಿಗಳನ್ನು ಭಕ್ಷಿಸಲು ಕಂಠದ್ವಾರದಿಂದದೇ ಅವಕಾಶವನ್ನು ಕೊಡುವನಾಗಿರುವನು. ಮತ್ತು ಸಕಲ ಶಬ್ದಗಳನ್ನು ನುಡಿದು, ಸರ್ವ ಜೀವರಿಂದ ನುಡಿಸುವನಾಗಿರುವನು.

ನಾಸಿಕದಿ=ಮೂಗಿನ ಎರಡೂ ಹೊಳ್ಳೆಗಳಲ್ಲಿ, ನಾಸತ್ಯ-ದಸ್ರರೆಂಬ ಪೆಸರುಳ್ಳ ಅಶ್ವಿನೀ ದೇವತೆಗಳಿರುವರು. ಇವರಲ್ಲಿ ಶ್ವಾಸಮಾನಿಗಳಾದ ಪ್ರಾಣದೇವರು ಭಾರತಿದೇವಿಯರು. ಈ ಪ್ರಾಣ ಭಾರತಿ ದೇವಿಯರಲ್ಲಿ ಹಂಸ-ಧನ್ವಂತರಿ ಈ ಎರಡು ರೂಪಗಳಿಂದ ಇರುವನು.

ಎರಡೂ ಅಕ್ಷಿ=ಕಣ್ಣುಗಳಲ್ಲಿ, ಬಲಗಣ್ಣಿನಲ್ಲಿ ಸೂರ್ಯ, ಎಡಗಣ್ಣಿನಲ್ಲಿ ಚಂದ್ರ ಅಧೀಶರು. ಇವರೊಳಗೆ ಲಕ್ಷ್ಮೀಶ ನಾರಾಯಣ ಸೂರ್ಯನಲ್ಲಿ, ಚಂದ್ರನಲ್ಲಿ ದಧಿ ವಾಮನದೇವರಿರುವರು. ಮತ್ತು ಎರಡೂ ನೇತ್ರಗಳಲ್ಲಿಪ್ಪ ವಿಶಿಷ್ಟ, ಚಕ್ಷುಗತ ಅಂಗೋಪಾಂಗ ರೂಪಗಳನ್ನು, ಪದ್ಯ ೯-೧೦-೧೧ರಲ್ಲಿ ಮಾನಸ ಸ್ಮೃತಿ ಉಪನಿಷದಾದಿಗಳಲ್ಲಿ ಪೇಳಿರುವಂತೆ ವಿಶದೀಕರಿಸುತ್ತಾರೆ. ಎರಡೂ ನೇತ್ರಗಳಲ್ಲಿ ಅಜಾದಿಗತ ಇಂದ್ರ ಈಶ ರೂಪಗಳು. ಸೂರ್ಯಾಭಿಮಾನಿ. ಈತನಲ್ಲಿ ಅತ್ರಿಷ್ಠ ಭಾಖ್ಯ ನಾರಾಯಣ-ಮೂರ್ಧ್ನಿ ರಾಜಾ-ವಾಜಿನೀ ವಸು-ಅಜಾದಿಗಳು-ಕಪಿಲ-ಉನ್ನಾಮಕ ಇವೇ ಮೊದಲಾದ ರೂಪ

ಗಳಿವೆಯೆಂದು ತೈತ್ತರೇಯ ಐತರೇಯದಲ್ಲಿ ಹೇಳಿದ ಹೆಚ್ಚಿನ ರೂಪಗಳನ್ನು ಮಾನಸ ಸ್ಮೃತಿಯಲ್ಲಿ ಹೇಳಿರುತ್ತಾರೆ.

ಬಲಗಣ್ಣಿನಲ್ಲಿ ಸ್ತಂಭ= ಕಂಭ ರೂಪದಿಂದ ಪ್ರದ್ಯುಮ್ನನು, ಗುಣ= ರಜ್ಜು-ಹಗ್ಗ ದಾಮರೂಪಳಾದ ಶ್ರೀ ಲಕ್ಷ್ಮೀದೇವಿಯರು ಇವರಿರುವರು. ದಾಮಕ್ಕೆ ಬದ್ಧವಾದ ಗೋವತ್ಸ ಆಕಳ ಕರುವಿನ ರೂಪದಿಂದ ಪೊಂಬಸಿರ ಬ್ರಹ್ಮಪದ ಯೋಗ್ಯರಾದ ವಾಯುದೇವರು. ಭಾರತೀ ರುದ್ರನೇ ಮೊದಲಾದ ಸಮಸ್ತ ದಿವಿಜ ತತಿಯ ಸೇವಿತನಾಗಿ ಸರ್ವ ಪದಾರ್ಥಗಳನ್ನೂ ತೋರುವ ಕರುಣಾಳುಗಳು ಉಗಾ-ಪ್ರಾಣೇಶ ॥ ೨ ॥

ಈ ವಿಷಯವನ್ನು **ಬೃಹದಾರಣ್ಯ ಉಪನಿಷತ್ ಶಿಶುಬ್ರಾಹ್ಮಣದಲ್ಲಿ ಹೇಳಿದ್ದಾರೆಂದು** ದಾಸರು ನೆನಪಿಗೆ ತಂದಿತ್ತು ಜ್ಞಾನವಿತ್ತು ಬರೆಯಿಸುವ ಸಮಯ ದಾಸರ ಕರುಣೆಯನ್ನು ಪುಳುಕಾಂಕಿತದಿಂದ ಮನದಲ್ಲಿ ಸ್ಮರಿಸಿ-ಸ್ಮರಿಸುತ್ತ ಭಗವಂತ-ಲಕ್ಷ್ಮೀ-ವಾಯುದೇವರ ವಿಶೇಷ ಮಹಿಮಾ ಪ್ರತಿದೇಹದ ಕಾರ್ಯದೊಳಗೆ ನೂತನವಾಗಿದೆಂದು ಜ್ಞಾನ ಪಡೆದು ಆನಂದದಿಂದ ಹರಿ ಮಹಿಮೆಯನ್ನು ಕೊಂಡಾಡುವದೇ ದಾಸರ ದಯೆ. (೩೧ ವರ್ಷದ ಹಿಂದೆ ಈ ಮಂದನನ್ನು ದಾಸರು ಪ್ರೇರಿಸಿ ರಥಮಾಡಿಸಲು ಸೂಚನೆಯಿತ್ತರು. ಲೌಕಿಕ ಕಾರ್ಯದಲ್ಲಿ ತೊಡಗಿದವನನ್ನು, ಜ್ವರಾದಿ ಉಪದ್ರವಗಳಿಂದ ಒಂದು ಮಂಡಲ ಪರಿಮಿತವಾಗಿ ಹಾಸಿಗೆ ಹಿಡಿಸಿ ದೇಹಾಲಸ್ಯ ಕೊಟ್ಟಾಗ್ಯೂ ಬಾಹ್ಯವೃತ್ತಿಗಳಿಂದ ಮನಸ್ಸು ಚಿತ್ತ ಏಕಾಗ್ರತೆ ಇತ್ತು, ವಿಶ್ವಾದಿ ಸಕಲ ಮೂರ್ತಿಗಳ ಲಕ್ಷಣ, ದೇಹಾಖ್ಯ ರಥದಲ್ಲಿ ಯಾವ ಯಾವ ರೂಪ-ಗುಣ-ಕಾರ್ಯಗಳೇನೆಂಬುದನ್ನು ತಿಳಿಸಿ, ರಥದಲ್ಲಿ ಆಯಾ ಸ್ಥಾನಕ್ಕೆ ಮೂರ್ತಿಮಂತರಾಗಿ ನಿಂದು ಕಾರ್ಯಮಾಡುತ್ತಲಿದ್ದಾರೆಂದು ತೋರ್ವ ಧ್ಯಾನೋಪಾಸನಕ್ಕೆ ಆದರ್ಶವಾದ ಶತಸ್ಥಂಭಯುಕ್ತವಾದ ಶಾಸ್ತ್ರೋಕ್ತ ರಥನಿರ್ಮಾಣ ಮಾಡಿದನೆಂಬ ದುರಹಂಕಾರವನ್ನು ಕರುಣಾಳುವಾದ ದಾಸರೇ ತಾವೇ ಖಂಡಿಸಿ ಸಕಲ ದಾಸರು ಗುರುಗಳು ತತ್ವಪತಿಗಳು ನಿಂತು ಶ್ರೀ ಲಕ್ಷ್ಮೀ ನರಸಿಂಹನಿಗೆ ರಥನಿರ್ಮಾಣ ಮಾಡಿಸಿದರೆಂಬ ಸುಜ್ಞಾನವಿತ್ತವರು ಇಂದು ಮರೆಯುವರೇ ?

ಬೃ. ಉ. ಶಿಶು ಬ್ರಾಹ್ಮಣ (ನಾಲ್ಕನೇ ಅಧ್ಯಾಯ) ಶ್ರೀಮದಾಚಾರ್ಯರ ಭಾಷ್ಯ (೧) ಆಧಾನಮುವಸ್ಥಾನಂ ಸೂಕ್ಷ್ಮ ಶರೀರಂ । ಪ್ರತ್ಯಾಧಾನಂ ವಿಧಾ(ತಾ)ನಂ ಸ್ಥೂಲ ಶರೀರಂ । ಪ್ರಾಣೋ ನಾರಾಯಣ ಸ್ಥೂಣಾ (೨) ವಾಯುರ್ಗೋವತ್ಸ ರೂಪೇಣ ಸರ್ವ ಪ್ರಾಣಿಷು ಸಂಸ್ಥಿತಃ । ಸೂಕ್ಷ್ಮ ದೇಹೋ ಗೃಹಂ ತಸ್ಯ ವಿತಾನಂ ಸ್ಥೂಲ ಉಚ್ಯತೇ ॥ (೩) ಅನ್ನಂ ದಾಮಾತ್ಮಕಂ ತಸ್ಯ ಸ್ಥೂಣಾತು ಭಗವಾನ್ ಹರಿಃ । ಧ್ಯಾಯೇತ್ಯೇವಂ ಹಿಯೋ ವಾಯುಂ ಶ್ರೋತ್ರಾದೀನ್ ಮನಸಾ ಸಹ । ಬುದ್ಧಿಂಚ ಸಪ್ತ ಶತ್ರೂನ್ಸವಿಯೇಷ್ವಭಿಧಾವತಃ ॥ ಅಸುರಾನ್ ಸನ್ನಿರುದ್ಧ್ಯೈವವೇತ್ತಿ ನಾರಾಯಣಃ ಪರಂ ॥ (೧) ಆವಾಸಸ್ಥಾನ ಭೂತವಾದ ಜೀವನ ಸೂಕ್ಷ್ಮ ಶರೀರವೇ ವಾಯುವಿಗೆ ಸೂಕ್ಷ್ಮ ಶರೀರವು. ಪ್ರತ್ಯಾಧಾನಂ=ಸ್ಥೂಲ ಶರೀರವೇ ಗ್ರಹಕ್ಕೆ ಆಶ್ರಯವಾದ ವಿಸ್ತಾರ ಸ್ಥಳವು. ಶ್ರೀ ಹರಿಯು ಕರುವನ್ನು ಕಟ್ಟತಕ್ಕ ಕಂಭ (೨) ವಾಯುದೇವರು ಗೋವಿನ ಕರುವಿನ ರೂಪದಿಂದ ಎಲ್ಲ ಪ್ರಾಣಿಗಳಲ್ಲಿರುತ್ತಾರೆ. ಜೀವನ ಸೂಕ್ಷ್ಮ ಶರೀರವು ವಾಯುದೇವರಿಗೆ ಆವಾಸ ಸ್ಥಾನವಾದ ಸೂಕ್ಷ್ಮ ಗ್ರಹವು. ಜೀವನ ಸ್ಥೂಲ ಶರೀರವು ಮನೆಗೆ ಆಶ್ರಯಭೂತವಾದ ವಿಸ್ತಾರ ಸ್ಥಳವು. ಅನ್ನಕ್ಕೆ ಅಭಿಮಾನಿಯಾದ ಶ್ರೀ ಲಕ್ಷ್ಮೀದೇವಿಯರು, ವಾಯುವೆಂಬ ಕರುವಿಗೆ ಕಟ್ಟತಕ್ಕ ಹಗ್ಗ. ಶ್ರೀ ಹರಿಯು ಕರುವನ್ನು ಕಟ್ಟತಕ್ಕ ಕಂಭ. ಹೀಗೆ ವಾಯುವಿನ ಮಾಹಾತ್ಮ್ಯೆವನ್ನು ತಿಳಿದವರು ವಿಷಯಗಳ ಕಡೆಗೆ ಓಡತಕ್ಕ (ಕಣ್ಣು-ಕಿವಿ-ಮೂಗು-ನಾಲಿಗೆ-ತ್ವಕ್-ಮನಸ್ಸು-ಬುದ್ಧಿ ಈ ಏಳೂ ಜ್ಞಾನವನ್ನು ಪುಟ್ಟಿಸುವ ಇಂದ್ರಿಯಗಳು) ಈ ಏಳು ಶತ್ರುಗಳಾದ ಏಳು ಇಂದ್ರಿಯಗಳನ್ನು ವಶಪಡಿಸಿಕೊಂಡು, ಆ ಇಂದ್ರಿಯಗಳಿಗೆ ಅಭಿಮಾನಿಗಳಾಗಿ (ದುರ್ವಿಷಯಾಭಿಮಾನಿಗಳಾದ ಅಸುರರನ್ನು ಗೆದ್ದು ಶ್ರೀ ನಾರಾಯಣನನ್ನು ತಿಳಿಯುತ್ತಾರೆ.

**ಸೂಚನೆ:** ಸಮಸ್ತ ಜಗತ್ತಿಗೆ (ಕಂಭ) ಆಧಾರರೂಪನು ವಿಷ್ಣು, ಈ ವಿಷ್ಣು ತನ್ನಧೀನದಲ್ಲಿ ಶ್ರೀ ಲಕ್ಷ್ಮೀ ಪ್ರಕೃತಿ ಬಂಧನದಿಂದ ಸಮಸ್ತ ಜಗತ್ತು ಬಂಧಿಸುವನು. ದಾಮರೂಪಳಾದ ಲಕ್ಷ್ಮೀದೇವಿಯು ಜೀವರನ್ನು ಬಂಧಿಸುವಳು. ಜೀವೋತ್ತಮರಾದ ವಾಯುವನ್ನು ಬಂಧಿಸಿರುವಳೆಂದರೆ ವಾಯುವಿಗೆ ಅಜ್ಞಾನವೇ ಇಲ್ಲ. ರಮಾನಾರಾಯಣರ ಅಧೀನದಲ್ಲಿ ತಾನು

ಸಮಸ್ತ ಜಗತ್ತು ಇರುವದೆಂಬ ನಿಶ್ಚಯ ಜ್ಞಾನ ವಾಯುವಿಗೆ ನಿತ್ಯ ಇರುವದು. ಸ್ವತಂತ್ರ ಸಚ್ಚೇತನ ವಿಷ್ಣು ಒಬ್ಬನೇ! ಉಳಿದ ಲಕ್ಷ್ಮೀದೇವಿ ಮೊದಲಾದವರು ಪರತಂತ್ರ ಚೇತನರು. ಇವರಲ್ಲಿ ಲಕ್ಷ್ಮೀದೇವಿ ಪೂರ್ಣಳು, ಶ್ರೇಷ್ಠಳು, ನಿತ್ಯಮುಕ್ತಳು, ಈಶಕೋಟಿಗೆ ಸೇರಿದವಳು. ಉಳಿದ ವಾಯು ಮೊದಲಾದವರೆಲ್ಲರೂ ಜೀವರೊಳಗೆ ಸೇರಿದವರು. ಜೀವರಲ್ಲಿ ವಾಯು ದೇವರು ಜೀವೋತ್ತಮರು ಶ್ರೇಷ್ಠರೆಂದು ವೇದಗಳು ಹೊಗಳುತ್ತವೆ.

ಇಂಥ ಜೀವೋತ್ತಮರಾದ ದಕ್ಷಿಣಾಕ್ಷಿಗತ ಗೋವತ್ಸರೂಪಿಯಾದ ಜ್ಞಾನಪ್ರದ ವಾಯುದೇವರು ಸಪ್ತೇಂದ್ರಿಯ ನಿಯಾಮಕರು. ಕಣ್ಣಿನಲ್ಲಿರುವ ಸಪ್ತ ಉಪ ಅವಯವವೆನಿಸುವ ಕಣ್ಣಿನಲ್ಲಿಪ್ಪ ಕೆಂಪುಗೆರೆ ಮುಂತಾದವುಗಳಲ್ಲಿ ಋಷಿನಾಮದಿಂದ ವಾಯುವನ್ನು ಉಪಾಸಿಸುತ್ತಾರೆ.

## ಬೃ. ಉಪನಿಷತ್

**ಶ್ರೀ ಸರ್ವಜ್ಞರ ಭಾಷ್ಯ:** (೧) ಗೌತಮೋನಾಮ ರುದ್ರಸ್ತು ಸರ್ವಜ್ಞತ್ವಾ ಪ್ರಕೀರ್ತಿತಃ। ಭರದ್ವಾಜಸ್ತು ಪರ್ಜನ್ಯೋ ವಾಜಮನ್ನಂ ಭರೇದ್ಯತಃ। ವೃಷ್ಟ್ಯೈವ ॥ (೨) ವಿಶ್ವಾಮಿತ್ರಾಖ್ಯ ಆದಿತ್ಯೋ ಯತ್ಪ್ರಕಾಶನಾತ್। ವಿಶ್ವಂ ಜ್ಞಾಪಯೇನ್ನಿತ್ಯಮಗ್ನಿಸ್ತು ಜಮದಗ್ನಿಕಃ ॥ ಜಾತಂ ಮಿತಂ ಚಾತಿ ಯಸ್ಮಾತ್ ॥ (೩) ವಿಶಿಷ್ಟಾಖ್ಯಸ್ತು ವಾಸವಃ। ವಸತಾವುತ್ತಮೋ ಪೃಥ್ವೀ ಕಶ್ಯಪನಾಮಿಕಾ ॥ ಮೇಷವೃಷ್ಟಿಂಪಿಭೇದ್ಯಕ್ಕಂ ಶಯ್ಯಾನ್ಯೈವಹಿಸಾಸದಾ ॥ ದ್ವ್ಯಾರತ್ರಿ ರಿತಿಸಂಪ್ರೋಕ್ತಾ ತತ್ಸ್ಥೈರ್ಹುತ ಮದ್ಯತೇ ॥ ಇದರ ಅಭಿಪ್ರಾಯ: (೧) ರುದ್ರನು ದೇವತೆಗಳಲ್ಲಿ ಸರ್ವಜ್ಞನಾದುದರಿಂದ ಗೌತಮನೆನಿಸುತ್ತಾನೆ. ಗೌತಮಾಖ್ಯ ರುದ್ರ ಕಣ್ಣಿನ ಕೆಂಪು ಗೆರೆಗಳಲ್ಲಿರುತ್ತಾನೆ. (೨) ಪರ್ಜನ್ಯನು (ವರುಣನು) ಮಳೆಯಿಂದ ಬೆಳಸು (ಅನ್ನವನ್ನು) ವೃದ್ಧಿಗೊಳಿಸುವುದರಿಂದ ಭರದ್ವಾಜನೆನಿಸುತ್ತಾನೆ. ಈ ಭರದ್ವಾಜಾಖ್ಯ ವರುಣನು ಕಣ್ಣಿನಲ್ಲಿರುವ ನೀರಿನ ಭಾಗದಲ್ಲಿರುತ್ತಾನೆ. (೩) ಆದಿತ್ಯನು ತನ್ನ ಪ್ರಕಾಶದಿಂದ ಜಗತ್ತನ್ನು ತಿಳಿಸುವದರಿಂದ ವಿಶ್ವಾಮಿತ್ರನೆನಿಸುತ್ತಾನೆ. ಈ ವಿಶ್ವಾಮಿತ್ರನಾಮಕ ಸೂರ್ಯನು ಕಣ್ಣಿನ ಕನೀನಿಕಾ ಪುತ್ಥಳಿಯಲ್ಲಿದ್ದು ಪ್ರಕಾಶಗೈಸಿ ತೋರಿಸುತ್ತಾನೆ. (೪) ಅಗ್ನಿಯು ಹುಟ್ಟಿದ್ದನ್ನು ಮಿತವಾಗಿ ಭಕ್ಷಿಸುವದರಿಂದ ಜಮದಗ್ನಿ ಎನಿಸುತ್ತಾ, ಅಗ್ನಿಯು ದ್ವಿಮುಖದಿಂದ ಕಣ್ಣಿನ ಕರೆ

ಗುಡ್ಡೆಯಲ್ಲಿರುತ್ತಾನೆ. (೫) ದೇವೇಂದ್ರನು ವಾಸವಮಾಡುವವರಲ್ಲಿ ಶ್ರೇಷ್ಠನಾದುದರಿಂದ ವಶಿಷ್ಠನೆನಿಸಿ, ಕಣ್ಣಿನ ಬಿಳಿಗುಡ್ಡೆಯಲ್ಲಿ ಇರುತ್ತಾನೆ. (೬) ಧರಾ (ಪೃಥ್ವಿ) ದೇವಿಯು ಸದಾ ಮಲಗಿಕೊಂಡು ಮಳೆ ನೀರನ್ನು ಕುಡಿಯುವದರಿಂದ ಕಶ್ಯಪ ಎನ್ನಿಸುತ್ತಾಳೆ. ಕೆಳಗಿನ ರೆಪ್ಪೆಯಲ್ಲಿ ಕಶ್ಯಪ ನಾಮಕಳಾದ ಪೃಥ್ವಿದೇವಿ ಇರುತ್ತಾಳೆ. (೭) ಭಾರತಿಯು ದ್ಯುಲೋಕದಲ್ಲಿರುವದರಿಂದ ಹೋಮಿಸಲ್ಪಟ್ಟ ಅನ್ನವನ್ನು ತಿನ್ನುವದರಿಂದ ಅತ್ರಿ ಎನಿಸುತ್ತಾ, ಅತ್ರಿನಾಮದಿಂದ ಕಣ್ಣಿನ ಮೇಲ್‌ರೆಪ್ಪೆಯಲ್ಲಿ ಇರುವವಳಾಗಿದ್ದಾಳೆ. (೮) ಇದೇ ಭಾರತಿದೇವಿಯೇ ಸರಸ್ವತೀ ಪದಕ್ಕೆ ಬರುವಳಾಗಿ, ವಾಗಷ್ಟಮೀ=ವಾಗೇಂದ್ರಿಯಕ್ಕೆ ವಿಶೇಷತಃ ನಿಯಾಮಕಳಾದ ವಾಯುವಿನ ಅನುಗ್ರಹಕ್ಕೆ ಪಾತ್ರಳಾಗಿ, ವಾಯು, ಲಕ್ಷ್ಮೀನಾರಾಯಣನನ್ನೇ ಉಪಾಸಿಸುತ್ತಾಳೆ. "ಇತಿಂತಾಂ ವೇದಯೋ ವಿದ್ವಾನ್ ಸರ್ವಾತ್ತಾಸ ಭವಿಷ್ಯತಿ." ಇತಿ **ನಾರಾಯಣೀಯೇ** ಹೀಗೆ ತಿಳಿದವನು, ಯೋಗ್ಯತಾನುಸಾರ ಸರ್ವವನ್ನು ಉಣ್ಣುವನು. ಅಂದರೆ ಸರ್ವಜ್ಞಾನ ಆನಂದ ಸುಖಪೂರ್ಣತೆಯನ್ನು ಹೊಂದುವನು ಎಂದು ಶಿಶು ಬ್ರಾಹ್ಮಣ.

ಇನ್ನು ವಿಶ್ವನಾಮಕನು ಜಾಗ್ರತಾ ಅವಸ್ಥಾಪ್ರೇರಕ, ಸ್ಥೂಲ ಭುಕ್‌ವಿನ ರೂಪ ಎಂಥದೆಂಬುದು ಹೇಳುತ್ತಾ—ದಕ್ಷಿಣಾಕ್ಷಿಯಲ್ಲಿದ್ದ ಅನಿರುದ್ಧ ನಾಮಕ ವಿಶ್ವನು. ಈತನಿಗೆ ಎರಡು ಪಾದ ಐದುಹಸ್ತ ಇದರಲ್ಲಿ ನಾಲ್ಕು ಭುಜವುಳ್ಳವನು. ಒಂದು ಹಸ್ತ ಆನೆಯ ಸೊಂಡಿಲಿನೋಪಾದಿಯಲ್ಲಿ ಮಧ್ಯದಲ್ಲಿದ್ದ ಗಜಾಕಾರ ೨ ಪಾದ ೫ ಹಸ್ತ ಉಳ್ಳಾತಗೆ ಸಪ್ತಾಂಗನೆಂದು ವಿಶ್ವನಿಗೆ ಹೆಸರು ಎಂದು ಉಪನಿಷತ್ತಿನಲ್ಲಿ ಹೇಳಿದೆ. ಈತನಿಗೆ ೧೯ ಹತ್ತೊಂಭತ್ತು ಮುಖ, ಆ ಮುಖಗಳ ಮಧ್ಯದಲ್ಲಿ ಗಜಮುಖ ಒಂದು. ಬಲಪಾರ್ಶ್ವದಲ್ಲಿ ಒಂಭತ್ತು ಮುಖ, ಎಡ ಪಾರ್ಶ್ವದಲ್ಲಿ ಒಂಭತ್ತು ಮುಖ-ಹದಿನೆಂಟು, ಗಜ ಮುಖ ಒಂದು ಕೂಡಿ ೧೯ ಮುಖ. ಬಲಭಾಗ ೩ ಮುಖದಿಂದ ಸತ್ವರಾದ ಪುರುಷಜೀವರಿಗೆ, ೩ ಮುಖದಿಂದ ರಜೋ ಪುರುಷಜೀವರಿಗೆ, ೩ ಮುಖದಿಂದ ತಮೋ ಜೀವರಿಗೆ, ಹೀಗೆ ಒಂಭತ್ತು ಮುಖಗಳಿಂದ ಎಡಭಾಗದ ೩ ಮುಖದಿಂದ ಸಾತ್ವಿಕ ಸ್ತ್ರೀ ಜೀವರಿಗೆ, ೩ ಮುಖದಿಂದ ರಜೋಗುಣ ಸ್ತ್ರೀ ಜೀವರಿಗೆ, ೩ ಮುಖದಿಂದ ತಮೋಗುಣದ ಸ್ತ್ರೀ ಜೀವರಿಗೆ ಪ್ರೇರಿಸುತ್ತಾನೆಂದು

ಪ್ರಕಾಶ ಸಂಹಿತೆಯಲ್ಲಿ ಹೇಳಿದೆ. ಮಾಂಡೂಕ ಉಪನಿಷತ್ತಿನಲ್ಲಿಯೂ ವಿಶ್ವನ ಮೂರ್ತಿ ಲಕ್ಷಣ ಹೇಳಿದ್ದಾರೆ. ೪ ಕೈಯಲ್ಲಿ ಆಯುಧಗಳಾವವು ಎಂದರೆ, ತ್ರಿವಿಕ್ರಮ ರೂಪವೇ ಅಪರ ವಿಶ್ವರೂಪ. ತ್ರಿವಿಕ್ರಮನ ಕೈಯ್ಯಲ್ಲಿದ್ದ ಆಯುಧಗಳೇ ವಿಶ್ವನ ಆಯುಧಗಳೆಂದು ತಂತ್ರಸಾರದಲ್ಲಿಯೂ ಛಲಾರಿ ಆಚಾರ್ಯರ ಟಿಪ್ಪಣಿಯಲ್ಲಿಯೂ ಹೇಳಿದೆ. ವಿಶ್ವನ ಬಲಮೇಲ್ ಕೈಯಲ್ಲಿ ಅರೀಂದ್ರಂ= ಚಕ್ರ, ಎಡ ಮೇಲ್ಗೈಯಲ್ಲಿ ಶಂಖ, ಕೆಳಗಿನ ಎಡಕೈಯ್ಯಲ್ಲಿ ಗದಾ, ಬಲ ಕೆಳಕೈಯಲ್ಲಿ ಜ್ಞಾನಮುದ್ರಾ, ಇಂಥ ವಿಶ್ವನು-ಶ್ವೇತವರ್ಣ ಚತುರ್ಭುಜನು. ಸಂಪ್ರೀತಿಯಿಂದ ಜೀವನ ಯೋಗ್ಯತಾನುಸರಿಸಿ ಸರ್ವ ಚೇತನರಿಗೆ ಜಾಗ್ರತೆಯಿತ್ತು ಸ್ಥೂಲ ವಿಷಯುಗಳನ್ನು ನೃಗಜಾಸ್ಯ=ಮನುಜಗಜಾಕಾರ ಮುಖವುಳ್ಳ ವಿಶ್ವನಾಮಕ ಪರಮಾತ್ಮನು. ತಾನು ತನ್ನ ಶುಭರಸವನ್ನುಂಡು ಸ್ಥೂಲ ವಿಷಯುಗಳನ್ನು ಚೇತನರಿಗೆ ಉಣಿಸುವನು.

ಗೋವತ್ಸರೂಪಿ ವಾಯು ವಿಶ್ವನ ರೂಪ ಗುಣ ಕ್ರಿಯೆಗಳನ್ನು ಶ್ರೀ ಪ್ರಾಣೇಶವಿಠಲರು ಶ್ರೀ ಜಗನ್ನಾಥದಾಸರ ಸಾಕ್ಷಾತ್ ಶಿಷ್ಯರು, ಅಪರೋಕ್ಷಜ್ಞಾನಿಗಳು, ಉಗಾಭೋಗದಲ್ಲಿ ಬಹು ಚಮತ್ಕೃತಿಯಿಂದ ವರ್ಣಿಸಿರುವರು. ಜ್ಞಾನಿಗಳ ಅನುಗ್ರಹವಾಗಲಿ. ಸಂಗ ದೊರಕಲಿ. ಪ್ರಾಣೇಶ ವಿ|| ಕೀರ್ತನ ಪುಟ ೧೬೯. **೨೩೬ ಉಗಾಭೋಗ.** ರಾಗ ಅಹರಿ. ತ್ರಿಪುಟ ತಾಳ || "ಕಡ್ಡಿ ಮೇಯಂದೂ ತುಡುಗು ಹೋಗಲರಿಯದಂಥಾ | ದೊಡ್ಡಾ ಆಕಳ ಕರುವಾ ಹಗ್ಗದಿಂದ || ದುಡ್ಡಿನಗಲ ಠಾವಿನೊಳಗೆ ಕಂಭಕೆ ಕಟ್ಟಿ | ವಡ್ಡಿ ಕಾವಲಿಯೋಳು ಮುಂದಿ ಇಟ್ಟಿಹ್ಯನು ! ಧಡ್ಡಾನಲ್ಲವು ಶ್ರೀ ಪ್ರಾಣೇಶವಿಠಲ ನಾಟಾ | ಮುಡ್ಡಾರರಿಯಾರಿದನು ಬಲ್ಲರು ಕವಿಗಳು ||೧|| ಎಂದು ಉಪನಿಷತ್ ರಹಸ್ಯವನ್ನು ಎಷ್ಟು ಚೆನ್ನಾಗಿ ವರ್ಣಿಸಿರುವರು ! ಕಡ್ಡಿ ಮೇವು ವಿಷಯ ಆಶೆರಹಿತರಾದ ಸಂತತ, ಇತರ ವಿಷಯುಗಳಲ್ಲಿ (ಹೋಗುವದೇ ತುಡುಗು-ಕಳ್ಳತನ) ಮನಹೋಗದೆ ನಿತ್ಯ ಸದಾ ದೊಡ್ಡ ಆಕಳ ಕರುವಾ= ಏಕೋವಿಷ್ಣುಃ ಮಹದ್ಭುತಂ ಎಂದು ಸಕಲ ವೇದ ಪ್ರತಿಪಾದ್ಯನಾದ ವ್ಯಾಪ್ತನಾದ ದೊಡ್ಡ ಆಕಳು=ಗೋಪಶು ಎಂದು ಪರಮಾತ್ಮಗೆ ಹೆಸರು ಛಾಂದೋಗ್ಯದಲ್ಲಿ ಬಂದಿದೆ. ಇಂಥ ಗೋವತ್ಸವನ್ನು ಲಕ್ಷ್ಮೀರೂಪವಾದ ದಾಮದಿಂದ ಕಟ್ಟಿ ಪ್ರಕೃತಿದ್ವಾರಾ ತನ್ನಾಜ್ಞೆಯಲ್ಲಿಟ್ಟು ದುಡ್ಡಿನ ಅಗಲಾ ಠಾವಿನೊಳಗೆ=

ಒಂದೇ ದುಡ್ಡು ಅಗಲವಾಗಿರುವ ಬಲಗಣ್ಣಿನಲ್ಲಿ ಆಧಾರರೂಪನಾದ ವಿಷ್ಣು ವೆಂಬ ಕಂಭಕೆ ಕಟ್ಟಿ ತನ್ನಾಧೀನದಲ್ಲಿಟ್ಟು, ಕಾವಲುಗಾರರು=ಕಾಯುವವರು, ಏಳುಮಂದಿ ಭಾರತಿ ರುದ್ರಾದಿ ೭ ಜನ ದೇವತೆಗಳು ಶ್ರೀ ವಾಯುವನ್ನು ಜ್ಞಾನವಾನಾರ್ಥವಾಗಿ ಕಾಯುತ್ತಲಿರುವರು, ಭಕ್ತಿಯಿಂದ ಭಜಿಸುವರು. ಶ್ರೀ ಹರಿಯು ಸರ್ವಜ್ಞ ಶಿಖಾಮಣಿ. ಇದರ ವಿವರ ಅಜ್ಞಾನಿಗಳು ತಿಳಿಯರು, ಜ್ಞಾನಿಗಳು ತಿಳಿಯುವರು. ಇನ್ನು ದಿಗ್‌ದೇವತೆಗಳು ಎರಡೂ ಕಿವಿಗಳಲ್ಲಿ ನೆಲಸಿಪ್ಪರು. ಪೂರ್ವಾದಿ ಪ್ರಾಣಾದಯಃ ಪಶ್ಚಿಮಾದಿ ವರುಣಾದಯಃ, ಉತ್ತರಾದಿ ಚಂದ್ರ ಕುಬೇರಾದಿಗಳು, ದಕ್ಷಿಣಾದಿ ಯಮ ಸೋಮಾದಿಗಳು ಈ ಪ್ರಕಾರ ದಿಗಭಿಮಾನಿ ದೇವತೆಗಳು ಇರುವರು. ಇಲ್ಲಿ ಅನೇಕ ಭಗವದ್ರೂಪಗಳುಂಟು. ತನ್ನ ಹೃದಯದಲ್ಲಿದ್ದ ಭಗವದ್ರೂಪಕ್ಕೂ ತನ್ನಲ್ಲಿ ವಿಶೇಷ ಸಂಬಂಧ ಜ್ಞಾಪನಾರ್ಥವಾಗಿರುವದರಿಂದ ಬೃಹತ್ ಪಾಂಡುವಾಸ ಎಂತಲೂ ಈ ರೂಪ ಬೃಹದಾರಣ್ಯದಲ್ಲಿ ಹೇಳಿದೆ. ಹೀಗೆ ಶ್ರೋತ್ರೇಂದ್ರಿಯದಲ್ಲಿ ಧನ್ವಂತರೀ-ಹಯಗ್ರೀವ-ಚಿಂತಾಮಣಿ-ಹಂಸಮೂರ್ತಿಯನ್ನು ಚಿಂತಿಸಬೇಕು. ಬಲಕಿವಿಯಲ್ಲಿ ಉಗ್ರ, ಎಡಕಿವಿಯಲ್ಲಿ ಊರ್ಜ ಈ ರೂಪಗಳು ಇವೆ ಮತ್ತು ಹಯಗ್ರೀವ, ದಿಕ್ಕುಗಳಲ್ಲಿ ನಿಯಾಮಕನಾಗಿರುತ್ತಾನೆ. ವಿದಿಂಜ ನಿಯಾಮಕ ಪ್ರದ್ಯುಮ್ನ ರೂಪಗಳು ಚಿಂತಿಸಬೇಕು. ಇನ್ನು ಬ್ರಾಹ್ಮಣದ ಬಲದ ಕಿವಿಯಲ್ಲಿ ತೀರ್ಥಗಳಿಗೆ ಅಭಿಮಾನಿಗಳಾದಂಥಾ ಗಂಗಾದಿ ನದಿಗಳು ತದಭಿಮಾನಿ ದೇವತೆಗಳು ಇದ್ದಾರೆ. ಆಕಾಶ ಗಂಗೆಯ ಜನಕ ತ್ರಿವಿಕ್ರಮನಾದ ಹರಿಯು ಇರುವನು. ಹೀಗೆ ಸ್ಮರಿಸಿ ಬಲದ ಕಿವಿ ಮುಟ್ಟಿಕೊಂಡು ಚಿಂತನಮಾಡಿದರೆ ಸಮಸ್ತ ದೋಷಗಳಿಂದ ನಿರ್ಮಲನರನ್ನು ಮಾಡುತ್ತಾನೆ. ಹೀಗೆ ಪರಾಶರ ಸ್ಮೃತಿ ಇದೆ. ಮತ್ತು ವಿಷ್ಣುರಹಸ್ಯವೆಂಬುವ ಗ್ರಂಥದಲ್ಲಿ ಸ್ವಕರ್ಣದಲ್ಲಿ ಭಗವದ್ರೂಪವನ್ನು ಸ್ಮರಿಸಿ, ಮುಚ್ಚಿಕೊಳ್ಳುವದರಿಂದ ಎಂಥ ಪಾಪಗಳು ಹೋಗುತ್ತವೆಂದರೆ, ಉತ್ತಮರಿಗೆ ತಾನು ಪ್ರೇರಣಾಮಾಡೋಣ, ತಾನು ನೀಚರಿಂದ ಪ್ರೇರಿತನಾಗೋಣಾ ಈ ತಪ್ಪುಮಾಡಿದರೆ ಬಲದ ಕಿವಿ ಮುಟ್ಟಬೇಕು. ಮತ್ತು ಈ ತಪ್ಪುಮಾಡಿದರೆ ಜಲಸ್ಪರ್ಶ ಮಾಡಬೇಕೆಂತಲೂ ಹೇಳಿದೆ. ಮತ್ತು ಪದ್ಮಪುರಾಣದಲ್ಲಿ ಸೀನೋಣ, ಅಪಾನವಾಯು ಬಿಡೋಣ, ಉಗುಳು ಸಿಡಿಯೋಣ, ಹಿರಿಯರಲ್ಲಿ ವಂಚಿಸಿ ಸುಳ್ಳುಮಾತಾ

ಡೋಣ, ಜಪಾದಿ ಅನುಷ್ಠಾನ ಕಾಲದಲ್ಲಿ ಅಯೋಗ್ಯರ ಸಂಗಡ ಮಾತಾ ಡೋಣ-ಇವೆಲ್ಲ ಮಾಡಿದರೆ ಬಲದ ಕಿವಿಮುಟ್ಟಿ, ಗಂಗಾಜನಕ ತ್ರಿವಿಕ್ರಮ ನನ್ನು ಚಿಂತಿಸಿದರೆ ನಿರ್ಮಲರನ್ನು ಮಾಡುವನೆಂದು-ಮಾನಸಸ್ಮೃತಿಯಲ್ಲಿ ಹೇಳಿದ್ದಾರೆ.

ಇನ್ನು—ಜಾಗ್ರದವಸ್ಥಾಪ್ರೇರಕನಾದ ಚಕ್ಷುಗತ ವಿಶ್ವನು ನೇತ್ರಸ್ಥಾನದಿಂದ ತನ್ನ ತನ್ನ ಅಂಶದಿಂದ ಜೀವನನ್ನು ಕಂಠಗತ ತೈಜಸನಲ್ಲಿ ಐದಿಸಲು ತೈಜಸನಿಂದ ಸ್ವಪ್ನ ಅವಸ್ಥೆಯನ್ನು ಐದುತ್ತಾನೆಂದು ಹೇಳುತ್ತಾರೆ. **ಈ ಸ್ವಪ್ನಾವಸ್ಥೆಗೆ ಕಾರಣ** ಮುಖ್ಯ ಜೀವನ ಮನಸ್ಸು, ಅಹಂಕಾರಾಧೀಶ-ಉಮೇಶ ಸ್ವಪ್ನಕ್ಕೆ ಕಾರಣನಾಗಿರುವನು. ಚಿತ್ತಜ=ಕಾಮ=ಇಂದ್ರರು. ಸ್ಥೂಲಮನಸ್ಸಿಗೆ ಅಭಿಮಾನಿಗಳಾಗಿ-ಮನಸ್ಸಿನಲ್ಲಿ ಇರುವರು. ಈ ಕಾಮ ಇಂದ್ರರನ್ನು ಅಹಂಕಾರ ತತ್ವಾಭಿಮಾನಿಗಳಾದ ರುದ್ರದೇವರು-ಚಿತ್ತ ಚೇತನಾಭಿಮಾನಿಗಳು ಅಂದರೆ ಚಿತ್ತಾಭಿಮಾನಿ ಗರುಡ-ಚೇತನಾಭಿಮಾನಿಶೇಷ ಇವರಲ್ಲಿ ಲಯಪೊಂದಿಸಿ ಈ ರುದ್ರ-ಗರುಡಶೇಷರಲ್ಲಿ ನೆಲೆಗೊಂಡು ಉದಾನ ವಾಯುವಿನಲ್ಲಿ ಅರುಣಾವರ್ಣ ವಿಶಿಷ್ಟನಾದ-ವಿಶನಂತೆ ಎಲ್ಲ ಆಕೃತಿಯುಳ್ಳ ಹತ್ತೊಂಬತ್ತು ಮುಖವುಳ್ಳ ತೈಜಸನು, ಜೀವರಿಗೆ ಸ್ವಪ್ನಾವಸ್ಥೆ ಕೊಟ್ಟು ಪ್ರವಿವಿಕ್ತಭಿಕು=ಜಾಗ್ರತ್ಕಾಲ-ಸಂಸ್ಕಾರದಿಂದ-ನಿರ್ಮಿತವಾಗಿ ತೋರುವ ವಸ್ತುಗಳಿಗೆ ಪ್ರವಿವಿಕ್ತ ಎನಿಸುತ್ತವೆ. ಕಾರಣ ತೈಜಸನಿಗೆ ಪ್ರವಿವಿಕ್ತ ಭುಕು ಎಂದು ಹೆಸರು. ಹೀಗೆ ಮಾಂಡೂಕ ಉಪನಿಷತ್ತಿನಲ್ಲಿ ಹೇಳಿದಂತೆ ಮಾನಸ ಸ್ಮೃತಿಯಲ್ಲಿ-ಹೇಳಿದೆ.

### ಜೀವನು-ಸುಷುಪ್ತಿ ನಿದ್ರಾವಸ್ಥೆ ಐದುವ ಕಾಲ

ಈ ಜ್ಞಾನಮಯ ತೈಜಸನಾದ-ಪ್ರದ್ಯುಮ್ನ ದೇವನು, ಜೀವನನ್ನು, ಹೃದಯಸ್ಥಾನದಲ್ಲಿ ಇರುವ-ಆಗ್ರೇಶನಾದ-ಸಂಕರುಷಣನು ಪ್ರಾಜ್ಞನೆಂದು ಕರಿಸಿಕೊಳ್ಳುತ್ತಾನೆ. ತೈಜಸನು-ಜೀವನನ್ನು, ಹೃದಯಸ್ಥಾನ ವೈದಿಸಿ, ಪ್ರಾಜ್ಞನಾಮಕ ಹರಿಯ ವಶಮಾಡಲು, ಶರಣಜನರಿಗೆ ಇಷ್ಟಪ್ರದಾತ-ಆಗ್ರೇಶನಾದ-ಜೀವನಿಗೆ ಯಾವ ತರದ, ಸ್ವಪ್ನ ಜಾಗ್ರತಗಳಲ್ಲಿ ಆಗುವ ಕಾರ್ಯಗಳ ಅನುಸಂಧಾನಕ್ಕೆ ತರಗೊಡದೇ-ನಿದ್ರಾವಸ್ಥಾ ಐದಿಸುವನು. ನಿದ್ರಾಕಾಲದಲ್ಲಿ ಚಿತ್‌ಸುಖ=ಸ್ವರೂಪ ಆನಂದಾವಿರ್ಭಾವ ಸುಖದ ವ್ಯಕ್ತಿ

ಮಾಡುವನಾದರೂ ನಿದ್ರೆಯಲ್ಲಿ ಜೀವನಿಗೆ ಇದರ ಜ್ಞಾನವೂ ಸಹ ಇರುವದಿಲ್ಲ. ನಿದ್ರಾಕಾಲದಿಂದ ಎಚ್ಚತ್ತಮೇಲೆ ನಾನು ಇಷ್ಟು ಹೊತ್ತಿನ ಪರಿಯಂತರ ಸುಖನಿದ್ರೆಯನ್ನು ಮಾಡಿದೆನೆಂಬ ತಿಳುವಳಿಕೆ ಜಾಗ್ರತನಾಗಲು ಕೊಡುವ ಹರಿಯ ಶಕ್ತಿ). ಇಂಥ ಪ್ರಾಜ್ಞನಾಮಕ ಹರಿಯು ತಾನೆ ಪುನಃ ಕಂಠಸ್ಥಾನಗತ ನಾದ ತೈಜಸನನ್ನು ಐದಿಸಿ ಸ್ವಪ್ನಾವಸ್ಥಾ ತೈಜಸನು, ದಕ್ಷಿಣಾಕ್ಷಿಗತ ವಿಶ್ವ ನನ್ನು ಐದಿಸಲು ಜೀವನಿಗೆ ಜಾಗ್ರತಾವಸ್ಥೆ ಪ್ರಾಪ್ತವಾಗುತ್ತದೆ. ಜೀವನ ನಿದ್ರಾವಸ್ಥಾದಲ್ಲಿ ಪ್ರಾಣದೇವರು ಜಾಗ್ರತರಾಗಿದ್ದು, ಭೂ ಎಂಬ ಶಬ್ದದಿಂದ ಸತ್ವರಲ್ಲಿ ಶ್ವಾಸಮಂತ್ರ ಜಪಿಸುತ್ತಾರೆ. ಇದನ್ನು ತಿಳಿದರೆ, ಭೂತ ಐಶ್ವರ್ಯ ಪ್ರಾಪ್ತಿ ಮುಖದಲ್ಲಿ ಇರುವ ನಾಲಿಗೆಯಲ್ಲಿ ವರುಣದೇವರು ಅಭಿಮಾನಿ ಮತ್ಸ್ಯರೂಪಿ ಪರಮಾತ್ಮನಿರುವರು. ಅಣು ನಾಲಿಗೆಯೊಳು=ಕಿರಿನಾಲಿಗೆ ಯಲ್ಲಿ ಇಂದ್ರ ಅಭಿಮಾನಿ. ಉಪೇಂದ್ರನಾಮಕ ಹರಿಯು. ತಾಲು=ಕಿರಿ ನಾಲಿಗೆಯ ಸ್ಥಳ, ಅಂದರೆ ವರ್ಣಗಳು ಯಾವ ಸ್ಥಳದಿಂದ ಉಚ್ಚಾರವಾಗು ತ್ತವೆಯೋ ಆ ಸ್ಥಳಕ್ಕೆ ತಾಲು ಎಂತ ನಾಮ. ಇಲ್ಲಿ ಪರ್ಜನ್ಯ ನಾಮಕ ಸೂರ್ಯ. ಅರ್ಧ ಗರ್ಭನೆಂಬ ಹರಿಯು ಇರುತ್ತಾನೆ. ಆಲಕಂಣಿನಲ್ಲಿ ವಾಮನ-ಭಾಮನ ಎರಡೂ ಹರಿಯ ರೂಪಗಳು. ಸಂಗರಹಿತನಾದವ. ವಸ್ತುಗಳಿಂದ ಅಸಂಗನಾದವನೆಂದು ವಾಮನಾ ಎಂತ ಬೃಹದಾರಣ್ಯ ವಾಕ್ಯ. ಫಾಲ-ಹಣೆಯಲ್ಲಿ ಮಂಗಳವನ್ನು ಕೊಡುವ ಶಿವ, ರುದ್ರದೇವರು. ಕೇಶವ ನಾಮಕ ಹರಿಯು, ಎರಡೂ ಕಪೋಲದೊಳಗೆ ರತಿ ಪತಿಯಾದ ಕಾಮ ದೇವರು. ಇಲ್ಲಿ ಪ್ರದ್ಯುಮ್ನ ದೇವನಿರುವನು. ಮಾನಸ ಸ್ಮೃತಿಯಲ್ಲಿ ಹೇಳಿದೆ. ವಾಗೇಂದ್ರಿಯದಲ್ಲಿ ವಹ್ನಿ, ಆತನಲ್ಲಿ ವೃಷಾಸಹಿನಾಮಕ ನಿಯಾ ಮಕ ರೂಪ ಹೀಗೆ ಬೃಹದಾರಣ್ಯದಲ್ಲಿ ಹೇಳಿದೆ. ಮತ್ತು ರಾತ್ರಿ ಸೂಕ್ತಕ್ಕೆ ಅಧಿದೇವತೆ ನಾರಾಯಣೀರೂಪ ಚಿಂತಿಸಬೇಕು. ವಾಚಿಯಲ್ಲಿ ಅರ್ಧಗರ್ಭ ನಾಮಕ ರೂಪ ವಾಕ್ಯದಲ್ಲಿ ಸರಸ್ವತೀ ಅಭಿಮಾನಿ ಎಂತ ಬೃಹದಾರಣ್ಯದಲ್ಲಿ ಹೇಳಿದೆ. ಸರಸ್ವತಿಯಲ್ಲಿ ವಾಗೀಶ್ವರನಾಮಕ ಭಗವದ್ರೂಪ, ಆತಗೆ ಫಲಿ ಕುಲಿಯೆಂತ ಹೆಸರು. ವಾಕ್ಯಗಳಲ್ಲಿ ಇವರಲ್ಲದೇ ಹಯಗ್ರೀವ ನಾಮಕನಾ ದಂಥ ಸಾಕ್ಷಾತ್ ಹರಿಯ ಸ್ತ್ರೀರೂಪ ಯಾರು ಉಪಾಸನಾಮಾಡುತ್ತಾರೋ ಅವರಿಗೆ ಜ್ಞಾನಪ್ರಾಪ್ತಿ ಎಂತ ಐತರೇಯ ಛಾಂದೋಗ್ಯದಲ್ಲಿ ಹೇಳಿದೆ. (ಮಾನಸ ಸ್ಮೃತಿ).

ರೋಮಗಳಲಿ ವಸಂತ=ವಸಂತ್ಯಸ್ಮಿನ್ ಸುಖೇನೇತಿ ವಸಂತಃ= ಯಾವ ಸ್ಥಳದಲ್ಲಿ ಸುಖದಲ್ಲಿ ವಾಸಮಾಡುತ್ತಾನೊ ಅವನು ವಸಂತ. ವಸಂತ ಋತುವಿಗೆ ಅಭಿಮಾನಿ (ಕಾಮ) ಯಾದವನು ರೋಮಗಳಲ್ಲಿ ಇರುತ್ತಾನೆ. ತ್ರಿಕ್ ಕುದ್ಧಾಮ=ಮೂರು ಸ್ಥಳಗಳೇ ಮನೆಯಾಗಿವುಳ್ಳ ಶ್ರೀ ಹರಿಯು ಈ ನಾಮದಿಂದ ಇರುವನು. ಇಲ್ಲಿ ಹಿಂಕಾರನಾಮಕನಾದ ಪ್ರದ್ಯುಮ್ನನು ಇರುವನು. ಈತನೇ ಕಾಮದೇವರ ಬಿಂಬ. ಮತ್ತು ಈ ಮೂರೂವರೆ ಕೋಟಿ ರೋಮಕೂಪಗಳಲ್ಲಿ ಸಾರ್ಧತ್ರಿಕೋಟಿ ತೀರ್ಥಾಭಿಮಾನಿ ದೇವತೆಗಳು ತೀರ್ಥಪಾದನಾದ ತ್ರಿವಿಕ್ರಮ ರೂಪಗಳನ್ನು ಚಿಂತಿಸಬೇಕೆಂದು ಮಾನಸ ಸ್ಮೃತಿ. ಮುಖದಲ್ಲಿ ಅಗ್ನಿದೇವರು ತನ್ನಿಯಾಮಕ ಭಾರ್ಗವ ಹರಿ. ಮಸ್ತಕದಲ್ಲಿ ಕಮಲದಲ್ಲಿ ಪುಟ್ಟಿದ ಬ್ರಹ್ಮದೇವರು. ತುರ್ಯನಾಮಕ ವಾಸುದೇವನಿರುವನು ಎಂದು ಬೃಹದಾರಣ್ಯ ವಚನ. ಮನಸ್ಸಿನಲ್ಲಿ ಮನಸ್ ತತ್ವದಲ್ಲಿ ವಿಷ್ಣು ಶಿಖೆಯಲ್ಲಿ ಉಮಾಪತಿ ರುದ್ರದೇವರು, ನರಸಿಂಹರೂಪಿ ಹರಿಯನ್ನು ನಿತ್ಯದಲ್ಲಿ ಚಿಂತಿಸುವವರ ಮೃತ್ಯು ಪರಿಹರಿಸುತ್ತಾನೆ.

ಮೌಳಿಯಲ್ಲಿ=ಶಿರಸ್ಸಿನಲ್ಲಿ ವಾಸುದೇವನು ಇರುವನು. ಈತನೇ ಏಳ ಅಧಿಕ ಒಂಭತ್ತು ಎಂದರೆ ೭+೯=೧೬ ಅಜಾದಿ ರೂಪಗಳನ್ನು ತಾಳಿ, ಮುಖ-ಶ್ರವಣ-ನಯನಾದಿ ಅವಯವಗಳೊಳಗೆ ಒಂದೆ ಮಾತೃಕಾ ಮಂತ್ರದಲ್ಲಿ ಹೇಳಿದಂತೆ, ಆಯಾ ಅವಯವಗಳಲ್ಲಿರುವನು. ಈ ಎಲ್ಲ ರೂಪಗಳು, ಸುಖಪೂರ್ಣ ರೂಪಗಳು. ಕಿವಿಯಲ್ಲಿದ್ದು ಕೇಳಿ ಕೇಳಿಸುವನು. ಕಣ್ಣಿನಲ್ಲಿದ್ದು ನೋಡಿ ನೋಡಿಸುವನು. ಮುಖದಲ್ಲಿದ್ದು ನುಡಿದು ನುಡಿಸುವನು ಹೀಗೆ ಅನೇಕ ಲೀಲಾ ವ್ಯಾಪಾರಗಳನ್ನು ಮಾಡುತ್ತಲಿದ್ದು ತನಗೆ ತಾನು ಆಳು, ಅರಸು, ಸೇವ್ಯ, ಸೇವಕನಾಗಿರುವನು.

ಇನ್ನು ದೇಹದೊಳಗೆ ೭೨ ಸಾವಿರ ನಾಡಿಗಳಿವೆ ಎಂದು ಹಿಂದೆ ಹೇಳಲಾಗಿದೆ. ಈ ಎಪ್ಪತ್ತೆರಡು ಸಾವಿರ ನಾಡಿಗಳಿಗೆ ಮುಖ್ಯವಾಗಿರುವ ನೂರಾವಂದು ನಾಡಿಗಳು. (ಈ ವಿಸ್ತಾರ ಮುಂದೆ ನಾಡಿ ಪ್ರಕರಣದಲ್ಲಿ ವಿಚಾರ ಮಾಡುತ್ತದೆ. ಈ ನೂರಾವಂದು ನಾಡಿಗಳಲ್ಲಿ ನೂರಾ ಒಂದು ಭಗವನ್ಮೂರ್ತಿಗಳು. ಕಲಶನಾಮಕ ಹರಿಗೆ ಸ್ವಾಂತ ಕಲೆಗಳೆಂದು ಚಿಂತಿಸಬೇಕು. ನಾಡಿಗಳೇ ನದಿಗಳೆಂದು ಹೇಳಲಾಗಿದೆ. ನಾಡಿಗತ ಗಂಗಾದಿ ನದಿಗಳೇ

ಬಹಿರಂಗ ಪೂಜಾ ಮಾಡುವ ಕಲಶಗಳಲ್ಲಿ ಗಂಗಾದಿ ನದಿಗಳು ಮತ್ತು ಅಲ್ಲಿ ಕಲಶಾರ್ಚನೆಯಲ್ಲಿ ಧ್ಯಾನಮಾಡತಕ್ಕಂಥಾ ನೂರಾಒಂದು ಮೂರ್ತಿಗಳೆಂದು ತಂತ್ರಸಾರದಲ್ಲಿ ಸರ್ವಜ್ಞರು ಅಪ್ಪಣೆ ಕೊಡಿಸಿದ್ದಾರೆ. ತಂತ್ರಸಾರ ಅ. ೨. ಶ್ಲೋಕ ೭-೮-೯)

"ಏಕಪಂಚಾಶದ್ವರ್ಣಾನಾಂ ಚತುರ್ವಿಂಶತಿ ಮೂರ್ತಯಃ ಆತ್ಮಾದ್ಯಾ ವಾಸುದೇವಾದ್ಯಾ ವಿಶ್ವಾದ್ಯಾ ಮಚ್ಛಕಚ್ಛಪೋ ॥ ಕೋಲೋ ನೃಸಿಂಹ ಸವಟೋಜಾಮದಗ್ನ್ಯಃ ರಘೂದ್ವಹೌ ॥ ವಾಸಿಷ್ಟ ಯಾದವೋ ಕೃಷ್ಣಾ ವಾತ್ರೇಯಾ ಬುದ್ಧ ಕಲ್ಕಿನೌ ॥ ೮ ॥ ಶಿಂಶುಮಾರಶ್ಚೇತಿಶತಂ ಕಲಾಕಲಶಃ ನಾಮಕಾಃ ॥ ಏತಾಭಿಃ ಸಹಿತಾ ಮೂಲ ಮೂರ್ತಿಂ ಕುಂಭೋದಕೇ ಸುಧೀಃ ॥ ೯ ॥

೫೧ ಅಜಾದಿ ರೂಪಗಳು.
೨೪ ಕೇಶವಾದಿ ಮೂರ್ತಿಗಳು.
೪ ಆತ್ಮ-ಅಂತರಾತ್ಮ-ಪರಮಾತ್ಮ-ಜ್ಞಾನಾತ್ಮ.
೪ ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧ.
೪ ವಿಶ್ವ-ತೈಜಸ-ಪ್ರಾಜ್ಞ-ತುರ್ಯ.
೧೦ ಮತ್ಸಾದಿ ರೂಪಗಳು.
೩ ವಾಸಿಷ್ಟ ಕೃಷ್ಣ ವೇದವ್ಯಾಸ-ಆತ್ರೇಯ-ಯಾದವ ಕೃಷ್ಣ-
೧೦೦ ಶಿಂಶುಮಾರ ಹೀಗೆ ನೂರು ಸ್ವಾಂತಕಲಾ ಮೂರ್ತಿಗಳು.
೧ ಮೂಲರೂಪಿ ಪ್ರಾಜ್ಞ(ನಾರಾಯಣ) ಹೀಗೆ ಕುಂಭೋದಕದಲ್ಲಿ

೧೦೧ ಮೂರ್ತಿ ಧ್ಯಾನಮಾಡಿ, ಅಭಿಷೇಕ ಮಾಡುವದೆಂದು ಯೋಗ ದೀಪಿಕಾ ಪಾಂಚರಾತ್ರಾಗಮದಲ್ಲಿ ಹೇಳಿದೆ. ಈ ೧೦೧ ನಾಡಿಗಳೇ ನೂರಾ ಒಂದು ನದಿಗಳು. ನಾಡಿ ಶತಸ್ತಂಭ ಮಂಡಪ ಹೃದಯದಲ್ಲಿಪ್ಪ ಮೂಲ ಮೂರ್ತಿಗೆ ಅಭಿಷೇಕ ಮಾಡುವದೆಂದು ಅಭಿಪ್ರಾಯ. ಕಾರಣ ಶತಸ್ತಂಭ ಮಂಟಪದಲ್ಲಿ ಶ್ರೀ ಹರಿಯನ್ನು ಅರ್ಚನೆ ಮಾಡುವದೆಂತ ಅಭಿಪ್ರಾಯ. ಹೀಗೆ ನಿರಂತರ ಪರಮ ಆದರದಿಂದ ಭೂಸುರರು ಪೂಜಿಸಬೇಕೆಂದು ಉಪ ದೇಶ ಮಾಡಿದ್ದಾರೆ.

ಇದಕ್ಕೆ ಈ ನೂರಾಒಂದು ನಾಡಿಗೆ ಮುಖ್ಯ ಕಾರಣ ೧೨ ನಾಡಿಗಳು ಮುಖ್ಯ. ಇದರಲ್ಲಿ ಗಂಗಾದಿ ಮುಖ್ಯ ನದಿಗಳು ಇರುವವು. ಒಂದೊಂದು ಕರಣ ಇಂದ್ರಿಯಗಳಲ್ಲಿ ತೀರ್ಥರೂಪದಿಂದ ಇರುವವು. ಈ ಹನ್ನೆರಡು ನಾಡಿಗಳಲ್ಲಿ ದ್ವಾದಶ ರೂಪಗಳಿಂದ ಇರುವವು. ಅತಿ ಸೂಕ್ಷ್ಮವಾದ ಸುಷುಮ್ನಾ ನಾಡಿಯಲ್ಲಿ ಏಕಾತ್ಮನೆಂದು ಹೆಸರುಳ್ಳ ಪರಮಾತ್ಮನಿದ್ದಾನೆ. ಈ ಸುಷುಮ್ನಾ ನಾಡಿಗತ ಬಿಂಬನಾದ ಏಕಾತ್ಮ ಹರಿಗೆ ಅಭಿಷೇಕ. ೧೦೦ ನಾಡಿಗಳೇ ಶತ ಸ್ತಂಭಗಳೆಂದು ಅಗ್ನಿಪುರಾಣ ವಚನವಿದೆಂದು ಶ್ರೀ ಪುರಂದರದಾಸರು ಧ್ಯಾನೋಪಾಸನಾ ಪ್ರಕ್ರಿಯೆಯಲ್ಲಿ ಪೇಳಿದ್ದಾರೆ. ಉಪಾಸನಾ ಭಾಗ ಸುಳಾದಿ ಪುಟ ೧೮೩. ಮತ್ತು ಪುರಂದರದಾಸರು "ನಾಡಿ ನದಿಯಲ್ಲಿ ಸ್ನಾನವ ಮಾಡಿರೋ" ಎಂದು ಹೇಳಿದ್ದಾರೆ. ಸದಾಚಾರ ಕುಸುಮ (೧) ಪುಟ ೩೨ ನೋಡಿ. ಮತ್ತು ಹನ್ನೆರಡು ನಾಡಿಗಳು ೧೨ ಇಂದ್ರಿಯಗಳಲ್ಲಿ ಅಲ್ಲಿಪ್ಪ ಗಂಗಾದಿ ನದಿಗಳು ಶ್ರೀ ವಿಜಯದಾಸರು ನಾಡಿ ಪ್ರಕರಣ ಸುಳಾದಿಯಲ್ಲಿ ಹೇಳಿದ್ದಾರೆ. ಸೃಷ್ಟಿ ಸುಳಾದಿ ಪುಟ ೨೮೧.

| | | | | |
|---|---|---|---|---|
| ೧. | ಇಡಾನಾಡಿ | ನಾಸಿಕಾ ಎರಡು | ಇಡಾ | ಭಾಗೀರಥೀನದಿ |
| ೨. | ಪಿಂಗಳಾನಾಡಿ | ಪಾರ್ಶ್ವ | ಪಿಂಗಳಾ | ಯಮುನಾನದಿ |
| ೩. | ಪೂಂಸಾ | ಕಣ್ಣುಗಳಲ್ಲಿ | ಪೂಂಸಾ | ಗಂಡಿಕಾನದಿ |
| ೪. | ಲಂಬುಸಾ | – | ಲಂಬುಸಾ | ತಾಮ್ರಪರ್ಣಿ |
| ೫. | ಗಾಂಧಾರಿ | ಎರಡು ಕಿವಿಗಳಲ್ಲಿ | ಗಾಂಧಾರಿ | ಕಾವೇರಿನದಿ |
| ೬. | ಹಸ್ತಿನಿ | – | ಹಸ್ತಿನಿಯಲ್ಲಿ | ಸಿಂಧುನದಿ |
| ೭ | ಕುಹನಾಡಿ | ಗುದದಲ್ಲಿ | ಕುಹನಾಡಿಲಿ | ಸೋಮನಂದಿನೆ |
| ೮. | ಶಂಕಿನಿ ನಾಡಿ | ಲಿಂಗದಲ್ಲಿ | ಶಂಕಿನಿನಾಡಿಲಿ | ತಪತಿನದಿ |
| ೯. | ಶಾರದಾನಾಡಿ(ಸರಸ್ವತಿ) | ಜಿಂಹ್ವೆ | ಸರಸ್ವತಿಲಿ | ಕೃಷ್ಣವೇಣಿ |
| ೧೦. | ಮಧ್ಯ ನಾಡಿಯಲ್ಲಿ | – | – | ಗೋಮತಿನದಿ |
| ೧೧. | ವಾರುಣಿ ನಾಡಿಯಲ್ಲಿ | – | – | ಗೋದಾವರಿನದಿ |
| ೧೨. | ಪೂರ್ಣಾ ನಾಡಿಯಲ್ಲಿ | – | – | ಪಯಸ್ವಿನೀನದಿ |

ದಶ ಇಂದ್ರಿಯಗಳು, ಮನೋ ಬುದ್ಧಿಗಳು, ಈ ನಾಡಿಗಳಿರುವ ಕ್ರಮ, ಅಲ್ಲಿಪ್ಪ ನಾಡಿ-ಗತ-ನದ್ಯಾದಿಗಳು ಇಲ್ಲಿ ಕೇಶವಾದಿ ಹನ್ನೆರಡು ಭಗವದ್ರೂಪ

ಚಿಂತಿಸಬೇಕು. ವೇದ ಪ್ರತಿಪಾದ್ಯನಾದ ಶ್ರೀ ಪ್ರದ್ಯುಮ್ನನಾಮಕ ಹರಿಯು ಅಂದರೆ ವೇದಾಭಿಮಾನಿಗಳಾದ ಸರಸ್ವತೀ ಭಾರತೀದೇವಿಯ ತಂದೆ, ಪ್ರದ್ಯುಮ್ನನು ದೇಹದೊಳಗೆ ಸುಷುಮ್ನಾ ನಾಡಿ ಮಧ್ಯದಲ್ಲಿದೆ. ಬಲಕ್ಕೆ ಇಡಾನಾಡಿ, ಎಡಭಾಗ ಪಿಂಗಳಾನಾಡಿ. ಇಲ್ಲಿ ೫೦೦+೫೮೦ ರೂಪ ವಿಶ್ವಾದಿ ನಾಮದಲ್ಲಿ ದೋಷರಹಿತನಾದ ನಿರ್ಮಲಾತ್ಮನಾದ ಹರಿಯು ಭಾರತೀ ಸರಸ್ವತೀ ವಾಯು ಬ್ರಹ್ಮ ಈ ನಾಲ್ವರಲ್ಲಿ ಇದ್ದು ಸಕಲ ಜೀವರ ಕರ್ಮ ಅವರ ಗುಣಗಳಿಗೆ ಅನುಸರಿಸಿ ವ್ಯಾಪಾರಮಾಡಿ, ಮಾಡಿಸುವನು, ವಿಶ್ವ ವ್ಯಾಪಕನಾಗಿದ್ದಾನೆ. ಈ ಪರಿಯಂತರ ಮೇಲೆ ವಿವರಿಸಿದ ದೇಹದಲ್ಲಿರುವ ಅಜಾದಿಗಳನ್ನು ಧ್ಯಾನೋಪಾಸನೆಯಲ್ಲಿ ಚಿಂತಿಸುವ ರೂಪಗಳ ವಿವರಣೇ ಹೇಳಿದರು.

ಈ ಎಲ್ಲ ರೂಪಗಳೇ ಕಾಲನಿಯಾಮಕ ರೂಪಗಳಿಂದ ಕಾಲದಲ್ಲಿ ಇದ್ದು, ಕಾಲನಿಯಾಮಕನಾಗಿ, ಕಾಲ ಪ್ರವರ್ತಕ ರೂಪಗಳನ್ನು ಚಿಂತಿಸುವ ಕ್ರಮ ಉಪದೇಶಿಸುತ್ತಾರೆ.

ಅಬ್ದ=ಸಂವತ್ಸರ ೧, ಅಯನಗಳ= ಉತ್ತರಾಯಣ-ದಕ್ಷಿಣಾಯನ ೨, ವಸಂತಾದಿ ಋತುಗಳು ೬, ಮಾಸ ಚೈತ್ರಾದಿ ಮಾಸಗಳು ೧೨, ಪಕ್ಷ= ಶುಕ್ಲ ಕೃಷ್ಣ ಪಕ್ಷ ತಿಂಗಳಿಗೆರಡರಂತೆ ೨೪ ಈ ನಾಮದಿಂದ ಒಟ್ಟಿಗೆ ೧+೨+೬+೧೨+೨೪=೪೫ ನಾಲ್ವತ್ತೈದು ರೂಪಗಳಿಂದ ನೀಲಮೇಘಶ್ಯಾಮ ನಾದ ಅನಿರುದ್ಧದೇವನೇ ಮೊದಲಾಗಿ ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ವಾಸುದೇವ ನಾರಾಯಣನು ೪೫ ರೂಪಗಳಿಂದ ಸರ್ವತ್ರದಲ್ಲಿ ವ್ಯಾಪಿಸಿರುವ ನೆಂದು ಈ ಪ್ರಕಾರ ಚಿಂತಿಸಿದರೆ ಕರುಣಾ ಸಮುದ್ರನಾದ ಹರಿಯು, ಲಭ್ಯ ನಾಗುವನು-ದೊರಕುವನು.

೧) ಸಂವತ್ಸರ, ೨) ಅಯನ, ೩) ಋತು, ೪) ಮಾಸ, ೫) ಪಕ್ಷ ಇವು ಐದರಲ್ಲಿ ಅನಿರುದ್ಧಾದಿ ಭಗವಂತನ ಐದು ರೂಪಗಳು. ಹೀಗೆ ೫×೫= ೨೫ ರೂಪಗಳು ಆಗುತ್ತವೆ. ಒಂದು ಪಕ್ಷದಲ್ಲಿ ೧೫ ತಿಥಿಗಳಿರುವವು. ಇವು ಗಳನ್ನು ೨೪ ಪಕ್ಷದಿಂದ ಗುಣಿಸಿದರೆ ೩೬೦ ದಿವಸಗಳು ಕಾಲನಾಮಕನ ದಿವಸ ರೂಪಗಳು. ಈ ೩೬೦ ದಿವಾ ನಾಮರೂಪಗಳಲ್ಲಿ ಮನಸ್ಸು ಇಟ್ಟು ಚಿಂತಿಸಬೇಕು. ಅಂದರೆ ತಾಪತ್ರಯಾದಿ ಮಹದೋಷ ಬಾಧೆಗಳು

ಎಂದಿಗೂ ಇಲ್ಲ. ಇಂತು ದಿವಸ ಪರಿಯಂತರವಾಗಿ ಕಾಲನಾಮಕ ರೂಪಗಳನ್ನು ಹೇಳಿ, ಒಂದು ದಿನದಲ್ಲಿ ಯಾಮ, ಮುಹೂರ್ತ, ಘಟಿಕಾ, ಪಳ, ಲವತೃಟಿ ಮುಂತಾದ ಸೂಕ್ಷ್ಮ ಕಾಲಗಳಲ್ಲಿ ಶ್ರೀಹರಿಯು ಕಾಲನಾಮಕನಾಗಿ ಆಯಾ ನಾಮದಿಂದ ಇದ್ದು, ಅತಿ ವೇಗವಾದ ಗಂಗಾ ಪ್ರವಾಹದಂತೆ ಈ ಕಾಲನಾಮಕ ಹರಿಯು ಪ್ರವಹಿಸುತ್ತಾನೆ. ತೃಟಿ ಲವಾದಿ ಕಾಲಗಳಲ್ಲಿ ವೇಗ ಕಾಲಗತಿ ಕೊಡುವನೆಂದು ತಿಳಿಯಬೇಕು. ಇಂತಹ ಅತಿ ವೇಗವಾದ ಗಂಗಾ ಪ್ರವಾಹವೆಂಬ ಕಾಲನಾಮಕನ ಕಾಲಪ್ರವಾಹದಲ್ಲಿ ಈತನ ಗುಣ ರೂಪ ಕ್ರಿಯ ಗುಣ ಸಮೂಹಗಳ ಸಮುದ್ರದಲ್ಲಿ ಮುಳುಗಾಡುತಲಿ ಭಾರ್ಗವಿ ಶ್ರೀ ಲಕ್ಷ್ಮೀದೇವಿಯು ಕಾಲದೇಶ ಸಮಳಾದರೂ, ಸದಾ ಹರಿಯ ರೂಪ ಗುಣ ಕ್ರಿಯೆಗಳಲ್ಲಿ ಮುಳುಗಿ ಆನಂದ ಮಗ್ನಳಾಗಿರುವಳು.

ಇಂತಹ ಮಹಾ ಲಕ್ಷ್ಮೀದೇವಿಯರು, ವೇದ ಸಮೂಹಕ್ಕೆ ಅಭಿಮಾನಿಗಳಾದರೂ, ಧರಾಧರನ=ಈ ಪೃಥ್ವಿ ಬ್ರಹ್ಮಾಂಡಾಭಿಮಾನಿ ಮುಖ್ಯಧರಾ ಭೂರೂಪ ದೇವಿರಮಣನ ಗುಣರೂಪ ಕ್ರಿಯೆಗಳಲ್ಲಿ ಆದಿ-ಮಧ್ಯ-ಅಂತ್ಯವನ್ನು ಕಾಣದೇ ಅಹೋ ಪರಮಾತ್ಮ ಎಂಥ ಕರುಣಾಳು ಕೃಪೆಮಾಡಿ ಎನ್ನನು ಸ್ವೀಕರಿಸಿದನು. ಈತನು ಕರುಣಾ ಸಮುದ್ರನೆಂದು ಬೇರೆ ಹೇಳಬೇಕಾದುದೇ ಇಲ್ಲ. ಹೇಗೆಂದರೆ ರಾಜಾಧಿರಾಜನಾದ ಚಕ್ರವರ್ತಿ ಸಾರ್ವಭೌಮನು ಕೇವಲ ಬಡವ-ಭಿಕ್ಷಾ ಮಾಡಿಕೊಂಡು ಉಪಜೀವನ ಮಾಡತಕ್ಕ ಅಲ್ಪನಿಂದ ಆದರಾತಿಶಯದಿಂದ ಕೊಡಲ್ಪಟ್ಟ ಔತನ=ಊಟಕ್ಕೆ ಹೇಳುವದನ್ನು ಸ್ವೀಕರಿಸಿದಂತೆ ಎನ್ನಮೇಲೆ ಅನುಗ್ರಹಿಸಿ ಎನ್ನನು ಸದಾ ಸ್ವೀಕಾರ ಮಾಡಿಹನು. ಈ ಪ್ರಕಾರ ಶ್ರೀ ಮಹಾ ಲಕ್ಷ್ಮೀದೇವಿಯರಲ್ಲಿರುವ ಮಹಾ ಭಕ್ತ್ಯಾದಿಗಳು, ಜ್ಞಾನಿಗಳಾದವರು ತಾರತಮ್ಯದಿಂದ ಚಿಂತಿಸಬೇಕು. ಈ ಕ್ರಮಾನುಸಾರ ಶ್ರೀ ಲಕ್ಷ್ಮೀದೇವಿಯರೂ ಅನಂತ ಕೋಟಿ ಗುಣದಿಂದ ತೃಣಜೀವದಿಂದ ಅಧಿಕಳು. ದೇವದೇವಕಿ=ದೇವಾನಾಂಕಂ-ದೇವತೆಗಳಿಗೆ ಸುಖವೀಯುವುದರಿಂದ ದೇವಕನೆಂದು, ಶ್ರೀಹರಿಗೆ ಪೆಸರು ಇಂಥ ನಾರಾಯಣಗೆ ಸ್ತ್ರೀಯು-ಲಕ್ಷ್ಮೀದೇವಿಯು ದೇವಕಿ ಎಂದು ಕರೆಸುವ ಲಕ್ಷ್ಮೀದೇವಿಯು ಸದಾ ಕಾಲ ಶ್ರೀಹರಿಯ ಸಮೀಪದಲ್ಲಿಪ್ಪಳು. ವಿರಂಚಿ ಚತುರ್ಮುಖನ ಜನನಿಯೂ ಆದರೂ ಯಾವಾವ ಕಾಲಕ್ಕೂ ಶ್ರೀಹರಿಯ

ಗುಣಾನಂತ್ಯಗಳನ್ನು ಅರಿಯಳು ಎಂದಮೇಲೆ ಮನುಜರ ಪಾಡೇನು ? ನರ ಗುರಿಗಳೇನು ಬಲ್ಲರು ?

ಇಂತಹ ಮಹಾನುಹಿಮನಾದ ಶ್ರೀಹರಿಯು ಜೀವರ ದೇಹಾದಿಗಳಲ್ಲಿ ಬಹಿ ಜಗತ್ತಿನಲ್ಲಿ ಸರ್ವ ವ್ಯಾಪಾರ ಮಾಡಿಸುತ್ತಾನೆಂದು ಹೇಳಿದರು. ಆದರೆ ವ್ಯಾಪಾರ, ಎಲ್ಲಿಂದ ಮಾಡಿಸುತ್ತಾನೆ. ಅವುಗಳ ಸ್ಥಾನವೇನು ? ಬಗೆ ಹೇಗೆ ಎಂದರೆ ಒಂದು ಕೆಲಸ ಮಾಡಬೇಕಾದರೆ, ಆ ಕಾರ್ಯ ಜ್ಞಾನ ತಿಳುವಳಿಕೆ, ಮೊದಲಿಗೆ ಇರಬೇಕು. ಅಲ್ಲಿಂದ ಮಾಡಬೇಕೆಂಬ ಇಚ್ಛಾ ಬೇಕು. ಈ ಜ್ಞಾನೇಚ್ಛೆಯಿಂದಾ, ಕಾರ್ಯ ಮಾಡಲು ಪ್ರಯತ್ನಬೇಕು. ಈ ಮೂರು ಜ್ಞಾನೇಚ್ಛಾ ಪ್ರಯತ್ನಕ್ಕೆ ಶಕ್ತಿಕೊಟ್ಟು, ಪ್ರೇರಕನೊಬ್ಬನಿದ್ದರೆ ಲೋಕದಲ್ಲಿ ಒಂದು ಕಾರ್ಯರೂಪಕ್ಕೆ ಬರುತ್ತದೆ. ಇದಕ್ಕೆ ಮೂಲಕಾರಣನು ಶ್ರೀಹರಿಯ ಜ್ಞಾನ-ಇಚ್ಛಾ ಕ್ರಿಯಾ, ಶಕ್ತಿ ಸ್ವರೂಪಭೂತವಾದವು. ಜೀವನ ಸ್ವರೂಪ ಭೂತ, ಜ್ಞಾನೇಚ್ಛಾ ಪ್ರಯತ್ನದಲ್ಲಿ ತನ್ನ ಮೂರು ಶಕ್ತಿಗಳಿಂದ ಪ್ರೇರಿಸಿ ಜೀವನಿಂದ ಕಾರ್ಯ ಮಾಡಿಸುವುದಕ್ಕೆ ಲಿಂಗದಲ್ಲಿ ಕಾರಣನಾಗಿ ಸ್ಥೂಲೇಂದ್ರಿಯ ಮನ ಆದಿಗಳಲ್ಲಿ ಜ್ಞಾನೇಚ್ಛಾ ಪ್ರದಾತೃನಾಗಿ ನಡೆಸುವನು. ಹೇಗಂದರೆ, ಕ್ಷೀರಕ್ಕೆ ಹೆಪ್ಪು ಕೊಟ್ಟರೆ ಮೊಸರು ಆಗುವದು. ಮೊಸರು ಕಡೆದರೆ ಬೆಣ್ಣೆ ಬರುವದು. ಬೆಣ್ಣೆ ಕಾಯಿಸಿದರೆ ತುಪ್ಪವಾಗುವುದು. ಮೊದಲಿಗೆ ಪದಾರ್ಥಜ್ಞಾನ ಕ್ಷೀರದಧಿ, ದಧಿಯಿಂದ ಬೆಣ್ಣೆ-ಬೆಣ್ಣೆಯಿಂದ ತುಪ್ಪವಾಗಬೇಕೆಂಬ ಇಚ್ಛೆ, ಈ ಇಚ್ಛೆಗೆ ಸರಿಯಾಗಿ ಪ್ರಯತ್ನ. (ಕ್ಷೀರವೆಂಬ ಜ್ಞಾನವಿಲ್ಲದೆ ನೀರಿಗೆ ಹೆಪ್ಪು ಕೊಟ್ಟರೆ ದಧಿ ಆಗುವದಿಲ್ಲ.) ಕಾರಣ, ಜ್ಞಾನೇಚ್ಛಾ ಸರಿಯಾಗಿ ಪ್ರಯತ್ನ ಮಾಡಿಸುವದು-ಮಾಡುವದು ಹರಿಯ ಶಕ್ತಿ "ಜ್ಞಾನೇಚ್ಛಾ ಕ್ರಿಯಾಶಕ್ತಿ ತ್ರಯುವಾ ಸ್ಮರಿಸುತಾನಂದಾಬಡು ಬಯಸದಿರು ಅಭಯವಾ । ಸಾನುರಾಗದಿ ಬೇಡು ದಯವಾ ॥" ಎಂದು ಜಗನ್ನಾಥ ದಾಸಾರ್ಯರ ವಚನದಂತೆ ಈ ಕ್ಷೀರಾದಿ ೪ ಪದಾರ್ಥ ಒಂದರಿಂದೊಂದು ಆಗಬೇಕಾದರೆ ಜಡವಸ್ತುಗಳಲ್ಲಿಯೂ ಕ್ರಿಯಾಶಕ್ತಿ ಸ್ವರೂಪಭೂತವಾಗಿರುವದಾದರೂ ಹರಿಯ ಅಧೀನವಾಗಿರುವುದು. ಹರಿ ಒಳಗೆ ನಿಂತು, ತನ್ನ ಸ್ವರೂಪದತ್ತ ಪ್ರಮಿತಿಸುತ್ತಾ, ಪ್ರವೃತ್ತಿಸುತ್ತಾ ಈ ಮೂರು ಶಕ್ತಿಯಿಂದ ಕಾರ್ಯಮಾಡಿದರೆ ಆಗುವುದು. ತಾನು ಜೀವನ ಸ್ವರೂಪದಲ್ಲಿ ತನ್ನ

ಮೂರು ಶಕ್ತಿಗಳನ್ನೂ ಪ್ರವೇಶಗೈಸಿ ಲಿಂಗದೇಹದಲ್ಲಿದ್ದ ಬ್ರಹ್ಮ-ವಾಯು, ವಾಣಿ-ಭಾರತಿಯರ ದ್ವಾರಾ ಕಾರ್ಯ ಪ್ರವೃತ್ತಿ ಮಾಡಿಸುತ್ತಾನೆ. ತಾನು ಸೌರಭ ರಸ ನಾಮದಿಂದ ಕರೆಸುತ್ತಾನೆ. ಜ್ಞಾನ ರೂಪದಿಂದ ಬ್ರಹ್ಮದೇವ ರಲ್ಲಿ ಇಚ್ಛಾರೂಪದಿಂದ, ವಾಯುದೇವರಲ್ಲಿ ಕ್ರಿಯಾರೂಪದಿಂದ ಸರಸ್ವತೀ ದೇವಿಯಲ್ಲಿ-ಇವೆಲ್ಲ ಶಕ್ತಿರೂಪ ಭಾರತೀದೇವಿಯರ ದ್ವಾರವಾಗಿ ಒಬ್ಬರಿಂದೊ ಬ್ಬರಿಗೆ ಪ್ರೇರಿಸಿ ಮಾಡಿಸುತ್ತಾನೆ. ಅನಿರುದ್ಧನಾಮಕ ಹರಿ ಬ್ರಹ್ಮನಲ್ಲಿ-ವಾಸುದೇವ-ವಾಯುವಿನಲ್ಲಿ-ಸಂಕರ್ಷಣ-ಸರಸ್ವತೀದೇವಿ-ಭಾರತೀದೇವಿಯ ರಲ್ಲಿ ಪ್ರದ್ಯುಮ್ನನೆಂತಲೂ, ಒಂದು ವಿಧ ಭಾರತೀದೇವಿಯಲ್ಲಿ ಶಕ್ತಿರೂಪದಿಂದ ಅನಿರುದ್ಧನಿದ್ದು ನಾಲ್ಕು ಮೂರ್ತಿಗಳಂತ ಧ್ಯಾನಿಸಬೇಕೆಂದು ದಾಸರು ಉಪ ದೇಶ ಮಾಡುತ್ತಾರೆ. ಶ್ರೀಹರಿಯು ಜ್ಞಾನೇಚ್ಛಾ ಪ್ರಯತ್ನ ಜೀವನ ಸ್ವರೂಪಭೂತ ಜ್ಞಾನೇಚ್ಛಾ ಪ್ರಯತ್ನದಲ್ಲಿ ನಿಂತು ಪ್ರೇರಿಸದಿದ್ದರೆ ಜೀವ ಜಡ ತುಲ್ಯನಾದ ಕಾರಣ ಶ್ರೀಹರಿಯೇ ಸರ್ವಸ್ವತಂತ್ರ ಕರ್ತೃ, ಜೀವ ಪರ ತಂತ್ರನು. ಜೀವನಿಗೆ ಯಾವ ಕರ್ತೃತ್ವ ಶಕ್ತಿ ಇಲ್ಲವೆಂತ ಇದೇ ಶಾಸ್ತ್ರಾರ್ಥ ವಿಚಾರ ಮುಂದೆ ದತ್ತ ಸ್ವಾತಂತ್ರ್ಯ ಸಂಧಿಯಲ್ಲಿ ವಿಶದಮಾಡುತ್ತದೆ.

ಇದೆಲ್ಲ ಜಗತ್ತಿನ ಲೀಲೆ ಶ್ರೀಹರಿಯ ವ್ಯಾಪಾರ, ಬ್ರಹ್ಮಾದಿಗಳ ದ್ವಾರಾ ಸಕಲ ತತ್ವಾಭಿಮಾನಿ ದೇವತೆಗಳು, ತತ್ವ ಕಲಾಭಿಮಾನಿ ದೇವತೆಗಳವರೆಗೆ ಅವರಲ್ಲಿ ನಿಂತು, ಈ ಸೃಷ್ಟಿ ಸ್ಥಿತ್ಯಾದಿ ವ್ಯಾಪಾರ ಮಾಡಿಸುತ್ತಾನೆ. ಇದು ಮಹಾ ಯಜ್ಞ, ಸಾಮಾನ್ಯವಾಗಿ ಪ್ರಸಿದ್ಧ ಯಜ್ಞದಲ್ಲಿ ಸಕಲ ತತ್ವೇಶರಿಗೆ ಹವಿರ್ಭಾಗ ಉಂಟು, ಕಲಾಭಿಮಾನಿಗಳಾದ ದೇವತೆಗಳು ಉಂಟು. ಇವರಿಗೆ ಯಜ್ಞದಲ್ಲಿ ಸೋಮರಸ ಪಾನ ಮಾಡುವ ಯೋಗ್ಯತೆಯು ಹರಿಯು ಪಾಲಿಸುತ್ತಾನೆ. ಕಾರಣ ಈ ಮಹಾ ಯಜ್ಞದಲ್ಲಿ ಅಂದರೆ ಪ್ರತಿಯೊಬ್ಬ ಜೀವನಲ್ಲಿ ನಿಂತು ಮಾಡುವ ಕ್ರಿಯಾದಿಗಳ ಯಜ್ಞಕ್ಕೆ ದಶವಿಹೀನಶತ= ಹತ್ತು ಕಡಿಮೆ ನೂರು ಜನ ದೇವತೆಗಳು ಇರುವರು :

೮ ಜನ ವಸುಗಳು.

೯ ಜನ ಪ್ರಜೇಶ್ವರರು.

೫೦ ಜನ ಮರುತಗಳು-ಅಹಂಕಾರಿಕ ಪ್ರಾಣ ಸಹ.

೧೧ ರುದ್ರರು-ಮಹಾ ರುದ್ರ ಸಹ.

೧೧ ಜನ ಸೂರ್ಯರು
೧ ಅಶ್ವಿನಿ ದೇವ ಇಬ್ಬರೂ ಕೂಡಿ ಒಂದೇ.

೯೦.

ಇದಕ್ಕೆ ಶ್ರುತಿ ಪ್ರಮಾಣ "ಚತುರ್ಭಿಃ ಸಾಕಂ ನವತಿ ಚ । ನಾಮ ಭಿಶ್ಚಕ್ರಂ ನವೃತ್ತಂ ವ್ಯತೀಜ ರವೀ ವಿಪತ್" ಈ ಶ್ರುತ್ಯರ್ಥ ವೇದವ್ಯಾಸ ದಾಸಾರ್ಯರು ನಿರೂಪಿಸಿದ್ದಾರೆ.

ಈ ೯೦ ಜನ ಸುಮನಸ ಕಲಾಭಿಮಾನಿ ಸೋಮಪಾನಾರ್ಹ ದೇವತೆಗಳಲ್ಲಿ ಬ್ರಹ್ಮ-ವಾಯು-ಗರುಡ-ಶೇಷ ಇವರ ದ್ವಾರಾ ನಿಂತು ಬ್ರಹ್ಮನಲ್ಲಿ-ವಾಸುದೇವ, ವಾಯುವಿನಲ್ಲಿ-ಸಂಕರ್ಷಣ, ಗರುಡನಲ್ಲಿ-ಪ್ರದ್ಯುಮ್ನ, ಶೇಷನಲ್ಲಿ ಅನಿರುದ್ಧ ಈ ನಾಲ್ಕು ರೂಪಗಳಿಂದ ನಿಯಾಮಿಸುತ್ತಲಿಪ್ಪನು. ಇಂತಹ ಸುಜ್ಞಾನ ಪಡೆಯಬೇಕು. ಸಕಲ ಕಾರ್ಯಗಳು ಶ್ರೀಹರಿಗೆ ಯಜ್ಞತ್ವೇನ ಸಮರ್ಪಣ ಮಾಡಿದರೆ ಹರಿ ಪ್ರೀತಿ ಎಂಬ ದಾರಢ್ಯದಿಂದ ಸಮರ್ಪಿಸಬೇಕು. ಇವರೆಲ್ಲ ದೇವತೆಗಳ ಹೆಸಗು ಮುಂದೆ ತಾರತಮ್ಯ ಸಂಧಿಯಲ್ಲಿ ಕೊಡಲಾಗುತ್ತದೆ. ಇದೆಲ್ಲ ಹಿಂದೆ ೧೯ ಪದ್ಯದಿ ಹೇಳಿದ-ನಾಡಿ ಇಡಾ ಪಿಂಗಳಾಂಶ ಸಹಸ್ರ ಕಿರಣದಿಂದ ಸೂರ್ಯನಲ್ಲಿ ಇದ್ದು ಈ ದೇವತೆಗಳೆಲ್ಲ ಮಧುವಿದ್ಯಾ ಉಪಾಸನೆ ಮಾಡುವರೆಂದು ಛಾಂದೋಗ್ಯ ಉಪನಿಷತ್ ೫ನೇ ಅಧ್ಯಾಯದಲ್ಲಿ ಹೇಳಿದ್ದೇ ಮಾನಸಸ್ಮೃತಿ ಶ್ಲೋಕ ೧೫೫ರಿಂದ ೧೬೭ರವರೆಗೆ ಹೇಳಿದ್ದಾರೆ.

ಹೀಗೆ ಸ್ವರೂಪ ಶಕ್ತಿ ದ್ವಾರಾ ಶ್ರೀಹರಿಯು ತನ್ನ ಮೂಲ ಸ್ವರೂಪಾಯುಧಗಳಾದ ಚಕ್ರದಲ್ಲಿ ಹಿಂಕಾರನಾಮಕ ಶಂಖದಲ್ಲಿ ಪ್ರತಿಹಾರ-ಗದೆಯಲ್ಲಿ ನಿಧನ ಪದ್ಮದಲ್ಲಿ ಪ್ರಸ್ಥಾವ ಉದ್ಗೀಥ ನಾಮದಿಂದ ಶ್ರೀಹರಿಯ ಐದು ರೂಪಗಳನ್ನು ಸ್ಮರಿಸಿ, ಧರಿಸುತಿರು ಎಂದು ದಾಸಾರ್ಯರು ಆಜ್ಞೆ ಕೊಟ್ಟಿದ್ದಾರೆ. ಇದರ ಮೂಲವೇನು ? ಬಾಹಿರ ಪಂಚಮುದ್ರಾ ಧರಿಸುವಲ್ಲಿ ಏನು ವಿಶೇಷ, ಪ್ರಮೇಯ ಇದರ ಗೂಢಭಾವವೇನು ಎಂಬುದು ವಿಚಾರಾಂಶವಾಗಿದೆ. ಶ್ರೀಹರಿಯು ತನ್ನ ಸ್ವರೂಪಭೂತವಾದ ಚಕ್ರ ಶಂಖಾದಿ ಆಯುಧಗಳ ಶಕ್ತಿ ದ್ವಾರಾ ಜಗತ್ಪ್ರವರ್ತಕನಾದುದರಿಂದ ಆತನ ಚಿನ್ಹೆ ನಾಮ ಮುದ್ರಾ ಧರಿಸಬೇಕೆಂತ ಅಭಿಪ್ರಾಯ. ಈ ಪಂಚಸಾಮಗಳ ಪಂಚ ಹಿಂಕಾರಾದಿ ರೂಪ

ವಿಚಾರವನ್ನು ಛಾಂದೋಗ್ಯದಲ್ಲಿ ಹೇಳಿದ್ದಾರೆ. ಗುರುಗಳಿಂದ ಸೂಕ್ಷ್ಮ ವಿಚಾರ ಮಾಡುವದು.

ಇನ್ನು ಬಾಹಿರದಲ್ಲಿ ಊರ್ಧ್ವ ಪುಂಡ್ರಾದಿ ತಿಲಕ ಧಾರಣೆ ಮಾಡಿದ ಸ್ಥೂಲ ದೇಹವನ್ನು ಶ್ರೀಹರಿಗೆ ರಥ–ಈ ರಥದಲ್ಲಿ ಶತ ನಾಡಿಗಳೇ ಶತ ಸ್ತಂಭಗಳು. ಈ ಮಧ್ಯ ಲಕ್ಷ್ಮ್ಯಾತ್ಮಕ ಪೀಠ· ಇದರಲ್ಲಿ ವಾಯ್ವಂತರ್ಗತ ಶ್ರೀಹರಿಯು ಬಿಂಬನೇ ರಥಿಕನಾಗಿರುವನು. ಇಂಥ ದೇಹರಥಕ್ಕೆ ಇಂದ್ರಿಯ ಗಳೇ ಕುದುರೆಗಳು ಎಂಬುವ ವಿಚಾರವನ್ನು ಐತರೇಯೋಪನಿಷತ್ ಮತ್ತು ಮಾನಸ ಸ್ಮೃತಿಯಲ್ಲಿ ಹೇಳಿದಂತೆ ದಾಸರಾಯರು ತನುವೆ ರಥ, ದೇಹವೇ ರಥ–ವಾಕ್ ಅಭಿಮಾನಿ ಉಮಾದೇವಿಯರು ಗುಣ=ಹಗ್ಗ, ಲಗಾಮು ಕುದುರೆಗಳಾದ ಇಂದ್ರಿಯಗಳನ್ನು ವಶಪಡಿಸುವಳು. ಶ್ರೋತೃಗತರಾದ ರೋಹಿಣಿದೇವಿ ತತ್ಪತಿ ಚಂದ್ರದೇವನು, ಪಾರ್ಶಗತ ಅಶ್ವಗಳು. ಇನನು= ಸೂರ್ಯ, ತತ್ಪತಿ ಸಂಜ್ಞಾದೇವಿಯರು ಚಕ್ಷುಗತ ಪುರತಃ ಮುಂದಿನ ಕುದುರೆ ಗಳು. ಈ ನಾಲ್ಕು ಅಶ್ವಗಳಿಗೆ ಅಂದರೆ ಶ್ರೋತೃ ಚಕ್ಷು ಎರಡು ಇಂದ್ರಿಯ ಗಳು ವಿಷಯದ ಕಡೆಗೆ ಧಾವಿಸುತ್ತವೆ. ಇಂಥ ವಿಷಯಾದಿಗಳಿಂದ ನಿರ್ಬಂಧ ಮಾಡಲಿಕ್ಕೆ, ವಾಕ್ ಅಭಿಮಾನಿ ಉಮೆಯರ ಅಧೀನರಾಗಿರುವುದರಿಂದ ಉಮೆಯು ಕಡಿವಾಣ ರೂಪಳಾಗಿಯೂ, ಮನಸ್ಸಿನಿಂದ ವಿಷಯಾದಿಗಳನ್ನು ದೂರ ಮಾಡಬೇಕಾದರೆ ಇಂದ್ರಿಯಗಳ ವಶದಲ್ಲಿಪ್ಪ ಉಮೆಯು ಮನೋಭಿ ಮಾನಿ ಮಹರುದ್ರದೇವರ ಅಧೀನದಲ್ಲಿಪ್ಪಳು. ಈ ಮನೋಭಿಮಾನಿ ಮಹ ರುದ್ರದೇವರೇ ರಥಕ್ಕೆ ಸಾರಥಿಯಾಗಿರುವರು. ಪ್ರಾಣಾಂತರ್ಯಾಮಿಯಾದ ಪ್ರಾಣ ಶಬ್ದ ವಾಚ್ಯನಾದ ಪ್ರಾಣನಾಮಕ ಬಿಂಬನಾದ ಹರಿಯು ರಥಿಕನು ರಥದಲ್ಲಿ ಕೂಡ್ರುವ ಯಜಮಾನನು ಎಂದು ಚಿಂತನ ಮಾಡಿದರೆ ದೇಹ ಮನ ಪರಿಶುದ್ಧವಾಗಿ ಭಗವದುಪಾಸನೆಗೆ ಅಧಿಕಾರಿಯಾಗುವನೆಂದು ಮಾನಸ ಸ್ಮೃತಿ ಶ್ಲೋಕ ೧೪೫ ರಿಂದ ೧೩೨ವರೆಗೆ ೪ ಶ್ಲೋಕಗಳಿಂದ ಪೇಳಿದ್ದಾರೆ. ಇದಕ್ಕೆ ಮೂಲ ಐತರೇಯೋಪನಿಷತ್‌ನಲ್ಲಿ ಹೇಳಿದೆ.

"ದಿವ್ಯವಾದಂಥ ವೈಷ್ಣವ ದೇಹಾಖ್ಯ ರಥವು ಪರಮಾತ್ಮಗೆ ಆಶ್ರಯ ವಾದುದು. ಸೂರ್ಯನು–ಸೂರ್ಯನ ಪತ್ನಿ ಸಂಜ್ಞಾ ಇವರಿಬ್ಬರೂ ವಾಜಿ ರೂಪದಿಂದ ಚಕ್ಷುದ್ವಿಯಗಳಲ್ಲಿ ಆಶ್ರಿತರಾಗಿ ಇದ್ದಾರೆ. ಅದೇ ಪ್ರಕಾರ

ಚಂದ್ರ-ಪತ್ನಿ ರೋಹಿಣಿ ಇವರಿಬ್ಬರು ಹಯಾಕಾರರಾಗಿ ರಥ ಹೊತ್ತಂಥವರು, ಎರಡೂ ಕರ್ಣಗಳಲ್ಲಿ ಈ ಪ್ರಕಾರ ನಾಲ್ವರು ರಥವನ್ನು ವಹಿಸಿದ್ದಾರೆ. ಆ ಅಶ್ವಗಳಿಗೆ ಬದ್ಧವಾದ ವಾಚಿಸ್ಥಿತವಾದಂಥ ಉಮಾದೇವಿಯು ರಜ್ಜುರೂಪಳಾಗಿದ್ದಾಳೆ. ಮನಸ್ಥಿತನಾದಂಥ ಉಮಾಪತಿಯು ಆ ರಥಕ್ಕೆ ಸಾರಥಿಯಾಗಿದ್ದಾನೆ. ಆ ರಥದಲ್ಲಿ ಮುಖ್ಯ ಪ್ರಾಣದೇವರು ಇದ್ದಾರೆ. ಆ ಮುಖ್ಯ ಪ್ರಾಣನಲ್ಲಿ ಉತ್ಕೃಷ್ಟನಾದಂಥ ಜ್ಞಾನರೂಪನಾದ ಪ್ರಾಣನಾಮಕ ಭಗವಂತನು ಆಸ್ವ (ರಥಿಕ ಶಬ್ದ ವಾಚ್ಯನಾಗಿರುತ್ತಾನೆ. ಆದಕಾರಣ ವೈಷ್ಣವರಾದಂಥವರು ಸರ್ವದಾ ದೇಹವನ್ನು ಊರ್ಧ್ವ ಪುಂಡ್ರಗಳಿಂದ ದೇಹಾಖ್ಯ ರಥಕ್ಕೆ ಅಲಂಕರಿಸಬೇಕು. ಹೀಗೆ ಐತರೇಯದಲ್ಲಿ ಹೇಳಿದೆ. (ಉಪಾಸನಾ ಭಾಗ ಸುಳಾದಿ ಪುಟ ೨೪೯ ಗದ್ಯಭಾಗ ನೋಡಿರಿ).

ಈ ಪರಿಯಂತರ ದೇಹಗತ ಭಗವಂತನ ರೂಪಗಳನ್ನೆಲ್ಲ ತುತಿಸಿ ಚಿಂತಿಸಿ ಧ್ಯಾನಿಸುವ ಬಗೆ ತೋರಿಸಿ ಇನ್ನು ೩ ಪದ್ಯಗಳಿಂದ ಆ ಬಿಂಬನಾದ ಹರಿಯ ಅಪಾರಗುಣ ಸ್ತೋತ್ರ ಗೈಯ್ಯುತ್ತ ಮಾತೃಕಾ ಸಂಧಿ ಉಪಸಂಹಾರ ಗೈಯ್ಯುತ್ತಾರೆ.

ಇಂತಹ ಅಮಿತ=ಅನಂತ ಮಹಿಮನಾದ ಶ್ರೀಹರಿಯ ಅಪಾರ ಗುಣಗಳನ್ನು ಸಮಿತ ಕೂಡಿದಂಥ ವರಣಾತ್ಮವಾದವು. ಅಂದರೆ ಅಜಾದಿ ವರಣಗಳಿಂದ ನಿತ್ಯದಲ್ಲಿ ಒಂದೇ ಸಮವಾಗಿ ಕೂಡಿರುವ, ಸಕಲ ಶ್ರುತಿ ಸ್ಮೃತಿಗಳು ತಿಳಿಯಲು ಎಂದಿಗೂ ಶಕ್ಯವಿಲ್ಲ ಮತ್ತು ವೇದಾಭಿಮಾನಿಗಳಾದ ಬ್ರಹ್ಮ ವಾಯು, ವಾಣಿ, ಭಾರತಿ, (ರುದ್ರ, ಇಂದ್ರಾದ್ಯರೆಲ್ಲ ಅಮುಖ್ಯಾಭಿಮಾನಿಗಳು) ಪೂರ್ಣ ಎಂದು ತಿಳಿಯಲಿಕ್ಕೆ ಶಕ್ತರಲ್ಲ. ಇಂಥ ಅನಂತವಾದ ತನ್ನ ಮಹಿಮೆಗಳನ್ನು ತಾನು ಅನಂತನಾದ ಕಾರಣ ಸರ್ವಜ್ಞ ಶಿಖಾಮಣಿಯು, ತನ್ನ ಮಹಿಮಾ ಆದಿ, ಅಂತ್ಯ, ಮಧ್ಯಗಳನ್ನು ತಿಳಿಯುತ್ತಾನೆಂದು ಫಲಿತಾಭಿಪ್ರಾಯ. ಇಲ್ಲಿ ಬಹು ಶಾಸ್ತ್ರಾರ್ಥ ವಿಚಾರ ಉಂಟು. ಶ್ರೀ ವ್ಯಾಸದಾಸ ಸಿದ್ಧಾಂತಕಾರರು ಈ ವಿಚಾರ ಶಾಸ್ತ್ರ ಮರ್ಯಾದಾದಂತೆ ಬಹು ಸಮಂಜಸವಾಗಿ ಬರೆದಿರುವರು. ಅವರ ಪರಮೋಪಕಾರ.

ಪರಮಾತ್ಮ ಸರ್ವತ್ರ ನೆಲಸಿಹ ಕಾರಣ ಪರಮಾತ್ಮ ಸಕಲರಲ್ಲಿ ಸಮನಾಗಿದ್ದುದರಿಂದ ಪ್ರೀತಿ ಹುಟ್ಟಿಸಲಿಕ್ಕೆ ಕಾರಣನು. ವಿತ್ತ ಧನಾದಿಗಳಲ್ಲಿ

ದೇಹಗಳಲ್ಲಿ-ಮನೆಗಳಲ್ಲಿ ದಾರಾ ಪುತ್ರಾದಿಗಳಲ್ಲಿ ಸ್ನೇಹಿತರಲ್ಲಿ-ಸರ್ವರಲ್ಲಿ ಶ್ರೀಹರಿಯು ಪ್ರತ್ಯಕ್ ಆತ್ಮಾ-ಪ್ರತ್ಯೇಕವಾಗಿ ಅಂತರ್ಯಾಮಿ ರೂಪದಿಂದ ನೆಲಸಿ, ಸಕಲರ ಕಾರ್ಯ ಅವರ ಗುಣ ಸ್ವಭಾವದಂತೆ ಮಾಡಿಸುವನೆಂದು ತಿಳಿದು, ಸಕಲ ಮುಕ್ತಿಯೋಗ್ಯ ಜೀವರನ್ನೂ ತೃಪ್ತಿಬಡಿಸು. ಅಂದರೆ ಉತ್ತಮರಲ್ಲಿ ಅತ್ಯಂತ ಭಕ್ತಿಮಾಡು, ಮಧ್ಯಮರಲ್ಲಿ ಪ್ರೀತಿ, ಅಧಮರಲ್ಲಿ ಅನುಕಂಪಾ ಹೀಗೆ ಪ್ರೀತಿ ತ್ರಿವಿಧವಾಗಿರುವುದು. ಹೀಗೆ ಪ್ರೀತಿ ಬಡಿಸುತ್ತ ಹರಿಸೇವಾದಲ್ಲಿ ಕೃತಕೃತ್ಯ=ಭಗವಂತನ ಪೂಜೆಯೆಂದು ಮಾಡುವ ಕೃತ್ಯ ಮಾಡಿ ಕೃತಾರ್ಥ-ಧನ್ಯನಾಗು-ಉನ್ಮತ್ತನಾಗಬೇಡ, ವಿತ್ತ ದೇಹ ದಾರಾ ಪುತ್ರಾದಿಗಳಿಗೆ ನಾನೇ ಸಂರಕ್ಷಣಕರ್ತಾ ಎಂದು ಅಹಂಕಾರಪಡಬೇಡ. ನಾನು ಸದಾ ಹರಿಯ ಭೃತ್ಯ, ದಾಸರ ದಾಸ-ಎಲ್ಲರೂ ಶ್ರೀದಾಸರು ಎಂಬ ಭಾವನೆಯಿಂದ ಪ್ರೀತಿಮಾಡು.

ಈ ಪ್ರಕಾರ ಅನಂತ ಕ್ರೀಡಾದಿಗುಣ ವಿಶಿಷ್ಟನಾದ ದೇವ, ದೇವೇಶ ದೇವತೆಗಳ ಒಡೆಯನಾದ ಶ್ರೀಹರಿಯ ರೂಪಗಳನ್ನು ಈ ಶರೀರಗಳಲ್ಲಿ ಅನವರತ=ನಿತ್ಯದಲ್ಲಿ ಸಂಭಾವಿಸುತ-ಒಳ್ಳೆ ಗೌರವದಿಂದ ಮಹಿಮೆಗಳನ್ನು ಗೌರವ ಮಾಡುತ ಮಹಾ ಭಕ್ತಿಯಿಂದ ಮನ್ನಿಸುತ್ತ, ಅಲ್ಲಲ್ಲಿ ದೇಹ ಅವಯವಗಳಲ್ಲಿಪ್ಪ ಮೂರ್ತಿಗಳ ಚಿಂತನೆ ಮಾಡುತ್ತ ಧ್ಯಾನೋಪಾಸನಾ ತತ್ಪರನಾಗಿ ಗುರುಗಳ ಅನುಗ್ರಹದಿಂದ ನಿತ್ಯ ಬಿಡದಲೇ ನೋಡುತ್ತ ಆನಂದಪಡುತ್ತಲಿರು. ಈ ಪ್ರಕಾರ ಚಿಂತನಾ ಧ್ಯಾನ ಮಾಡಿದರೆ ಶ್ರೀ ಲಕ್ಷ್ಮೀನರನಾದ ಶ್ರೀ ಜಗನ್ನಾಥ ವಿಠಲನು ಕಾರುಣ್ಯದಿಂದ ತಾನು ವೊಲಿದು ಭವಬಂಧನವನ್ನು ಬಿಡಿಸಿ ಸುಖವನೀವನು. ಈತನು ವ್ಯಾಪ್ತನೂ, ದೀನರನ್ನು ಉದ್ಧಾರ ಮಾಡುವ ಕರುಣಾಳುವಾದ ಬಿಂಬನಾದ ಹರಿಯನ್ನು ಮರೆಯಬೇಡವೆಂದು ಉಪದೇಶಿಸಿದ ದಾಸಾರ್ಯರ ಅಂತರ್ಗತ ಭಾರತೀರಮಣನಂತಸ್ಥ ದೇಹಾಖ್ಯ ರಥಾರೂಢನಾದ ಪ್ರಾಣನಾಮಕ ಬಿಂಬನಾದ ಶ್ರೀ ಲಕ್ಷ್ಮೀ ನರಸಿಂಹ ಅಡಿಗೆ ಸದಾ ಶಿರವೆರಗಿರಲಿ, ದಾಸರೇ ಸಂತತ ಈ ಬುದ್ಧಿ ಪಾಲಿಸಿರಿ.

॥ ಶ್ರೀ ರಾಘವೇಂದ್ರ ಗುರು-ಶ್ರೀ ವರದೇಂದ್ರ ಗುರು ॥

# ೮. ಮಾತೃಕಾ ಸಂಧಿ




ಹರಿಕಥಾಮೃತಸಾರ ಗುರುಗಳ।
ಕರುಣದಿಂದಾಪನಿತು ಪೇಳುವೆ।
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ॥ ಪಲ್ಲ।

ಮೂಲ :

**ಪಾದಮಾನಿ ಜಯಂತನೊಳಗೆ ಸು ।**
**ಮೇಧನಾಮಕನಿಪ್ಪ ದಕ್ಷಿಣ ।**
**ಪಾದದಂಗುಟದಲ್ಲಿ ಪವನನು ಭಾರಭೃದ್ರೂಪ ॥**
**ಕಾದುಕೊಂಡಿಹಟಂಕಿತರ ಮೊದ ।**
**ಲಾದ ನಾಮದಿ ಸಂಧಿಗಳಲೀ ।**
**ರೈದು ರೂಪದಲಿಪ್ಪ ಸಂತತ ನಡೆದು ನಡೆಸುತಲಿ ॥ ೧ ॥**

**ಅವತರಣಿಕಾ :** ಈ ಮಾತೃಕಾ ಸಂಧಿಯಲ್ಲಿ ದೇಹದಲ್ಲಿರುವ ಅಜಾದಿ ೫೧ ರೂಪಗಳು ಎಲ್ಲೆಲ್ಲಿರುವವು. ಮಾತೃಕಾನ್ಯಾಸ ಮತ್ತು ಆಯಾ ಅಂಗ ಉಪಾಂಗಗಳಲ್ಲಿಪ್ಪ ಕಾರಣಕಾರ್ಯ ಭಗವದ್ರೂಪಗಳು, ನಾಡಿಗಳ ಕ್ರಮ, ನಾಡಿಗಳಲ್ಲಿಪ್ಪ ೩೨ ಕಮಲಗಳ ಸ್ಥಾನ, ಅಲ್ಲಿಪ್ಪ ಅಭಿಮಾನಿ ದೇವತೆಗಳು, ಹರಿಯ ರೂಪಗಳೂ ಮತ್ತು ಕಾಲನಾಮಕನ ರೂಪಗಳಲ್ಲೆ ಸಮನ್ವಯ ಮುಂತಾದ ಧ್ಯಾನೋಪಾಸನೆ ವಿಧಾನ, ತಂತ್ರಸಾರ, ಐತರೇಯ ಬೃಹದಾರಣ್ಯಕಾ ಛಾಂದೋಗ್ಯಾದಿ ಅನೇಕ ಉಪನಿಷದ್ರಹಸ್ಯಗಳನ್ನು ವಿವರಿಸುತ್ತಾರೆ. ಶ್ರೀ ಮಾನಸಸ್ಮೃತಿಯಲ್ಲಿ ಹೇಳಿದಂತೆ ಎಲ್ಲ ರೂಪಗಳ ವಿವರ ಪೇಳುತ್ತಾ, ದೇಹಾಖ್ಯ ರಥ ವಿವರವನ್ನು ಕರುಣಾಳುಗಳಾದ ದಾಸಾರ್ಯರು ಉಪದೇಶಿಸುತ್ತಾರೆ. ಇಲ್ಲಿ ಸಾಧನ ಜೀವರು ಧ್ಯಾನಗೈಯ್ಯಲು ಮೊದಲು ಸ್ಥೂಲೋಪಾಸನ "ಪಾತಾಳಮೇತಸ್ಯಹಿ ಪಾದಮೂಲಂ" ಎಂಬುವಂತೆ; ಪಾದವಾರಂಭಿಸಿ ಮೌಳಿ ಪರಿಯಂತರ ಭಗವನ್ಮೂರ್ತಿಗಳನ್ನು ವಿವರಿಸುತ್ತಾರೆ. ಇದು ಕೇವಲ ಮುಕ್ತಿಗೆ ಸಾಧನವಾದುದು.

**ಪದ್ಯಾರ್ಥ :** ಪಾದಮಾನಿ=ಬಲಪಾದಕ್ಕೆ ಅಭಿಮಾನಿಯಾದ ಇಂದ್ರಪುತ್ರ ಜಯಂತ-ಎಡಪಾದಕ್ಕೆ ಅಭಿಮಾನಿಯಾದ ಶಂಭು ಇವರಲ್ಲಿ ಸುಮೇಧನಾಮಕ=ಯಜ್ಞನಾಮಕ ಪರಮಾತ್ಮನಿರುವನು. ಈ ಯಜ್ಞನಾಮಕ ಹರಿಯ ಅನುಗ್ರಹದಿಂದ ಜಯಂತನು ತತ್ವೇಶರೊಳಗೆ ಗಣನೆ. ಇನ್ನು

ದಕ್ಷಿಣ ಪಾದ ಬಲಪಾದ ಅಂಗುಷ್ಟದಲ್ಲಿ ಪವನನು=ವಾಯುದೇವರು ಕೂರ್ಮ ರೂಪದಿಂದ ಇದ್ದಾರೆ. ಇಲ್ಲಿ ಶ್ರೀಹರಿಯು ಭಾರಭೃತ್=ಜಗತ್ತಿನ ಸರ್ವ ಭಾರವನ್ನೂ ವಹಿಸುವನೂ, ರಮಾದೇವಿಯನ್ನೂ ಸಹ ಧರಿಸುವನು ದೇಹದ ಅಂದರೆ ಪಿಂಡಾಂಡ, ಬ್ರಹ್ಮಾಂಡ ಎರಡೂ ಭಾರವನ್ನು ವಹಿಸುವವನಾಗಿರುವನು. ಇನ್ನು ಬಲಪಾದ ಸಂಧಿಗಳಲ್ಲಿ ಕಾದುಕೊಂಡಿಹ ಟಂಕಿ ಓಂ ಟಂಕಿನೇ ನಮಃ ಓಂ ಕಳಕಾಯ ನಮಃ ಓಂ ಡರಕಾಯ ನಮಃ ಓಂ ಧರಿಣೇ ನಮಃ ಓಂಣಾತ್ಮನೇ ನಮಃ ಹೀಗೆ ಐದು ರೂಪಗಳು, ತರ ಮೊದಲಾದ=ಓಂ ತಾರಾಯ ನಮಃ ಓಂ ಥಬಾಯನಮಃ ಓಂ ದಂಡಿನೇನಮಃ ಓಂ ಧನ್ವಿನೇ ನಮಃ ಓಂ ನಮ್ಯಾಯ ನಮಃ ಈ ೫ ರೂಪಗಳು. ಎಡಪಾದಗಳ ಸಂಧಿಯಲ್ಲಿ, ಈರೈದು ರೂಪದಲ್ಲಿಪ್ಪ=೧೦ ಹತ್ತುರೂಪಗಳಿಂದ ಇದ್ದು ಸಂತತ-ನಿರಂತರವಾಗಿ, ನಡೆದು ನಡೆಸುತಲಿ= ಈ ಹತ್ತು ರೂಪಗಳು, ಪಾದಾಭಿಮಾನಿಗಳಿದ್ದು ನಡೆಯುತ್ತಾ, ಪಾದಾಭಿಮಾನಿಗಳ ದ್ವಾರಾ ಜೀವರನ್ನು ನಡೆಸುತ್ತಲಿರುವರು.

ದ್ರೌಪದೀಶಪತಿ ವಿಠಲರು: ೧೭ ಪದ್ಯದವರೆಗೆ ಟಿಪ್ಪಣಿ ಬರೆದಿಲ್ಲ.

ಭಾವಸೂಚನ: ಅಜ ಆನಂದ ಇಂದ್ರೇಶ ಇತಿ ತಂತ್ರಸಾರಂ ಮನಸಿ ನಿಧಾಯ ದಾಸವರ್ಯಃ ಸರ್ವಾಧಿಕಾರಿ ಬೋಧನಾರ್ಥಂ ಪ್ರಾಕೃತ ಭಾಷಯಾಂ ರಚಯತಿ॥ ತದರ್ಥಂ ಮಾತೃಕಾ ಸಂಧಿ ಮುಪಕ್ರಮ ತೇ ಪಾದೇತಿ॥ ಉಕ್ತಂ ಚ ಮಂಜೂಷಾಯಾಂ ॥ ಭಾಮಿನಿ ಷಟ್ಪದಿ :

ತಂತ್ರಸಾರದೊಳಿಪ್ಪ ಮಾತೃಕ ।
ಮಂತ್ರಗತ ರೂಪಂಗಳ ವಿರತ ।
ಚಿಂತನೆಗೆ ನೆಲೆಗೊಳದೆ ಕರ್ಮವ ಮಾಡಿ ಫಲವಿಲ್ಲಾ ॥
ಎಂತ ಸುಜನಗಳರಿತು ತಮ್ಮಯ ।
ಸ್ವಾಂತದಿಂ ನಿಲಕುತ್ತ ಮೋದದಿ ।
ಸಂತಸಂಗವ ಮಾಡೆನುತ ಪೇಳಿದರು ಕರುಣದಲಿ ॥ ೮ ॥

ಸುಮೇಧೇತಿ । ಸುಮೇಧಾ ಮೇಧಜೋಧನ್ಯ ಇತ್ಯುಕ್ತೇಃ ॥ ಭಾರಭೃತ್ ಕಥಿತೋ ಯೋಗಿ ಇತಿ ಚ ॥ ಟಂಕಕರ=ಟಂಕಿದೇವರು=ಟಂಕ ಪಾಷಾಣವಿದಾರಣ ಆಯುಧಧಾರಿ ಟಂಕಿನೆ ॥ ೧ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಅಥ ಮಾತೃಕಾ ಸಂಧಿಃ (ನ್ಯಾಸಃ) "ಅಥ ಮಾತೃಕ ವಿನ್ಯಾಸಂ ಕೃತ್ವಾ ಮಂತ್ರಾನ್ ಜಪೇತ್ ಸುಧೀಃ" ಇತ್ಯುಕ್ತೇಃ ತಂ ಸುಬೋಧಮಾಹ "ಪಾದಮಾನಿ* ಇತಿ ॥ "ಸುಮೇಧಾಃ" ಓಂ* ವೃಷಾ ತ್ವಂ ಶತಕ್ರತೋ ವೃಷಾ ಹವಃ ವೃಷಾ ಗ್ರಾವಾ ವೃಷಾಮದೋ ವೃಷಾ ಸೋಮೋ ಅಯಂ ಸುತಃ ॥ ವೃಷಾ ಯಜ್ಞೋಯ ಮಿನಸ್ವಿ ವೃಷಾ ॥* ಓಂ ॥ ಸು ಸಮೀಚೀನಾಃ ಮೇಧಾಃ ಸಂರಾಧಯಃ ರಥ ಹವಗ್ರಾವ ಸೋಮ ಯಜ್ಞಾದ್ಯಾಃ ಶ್ರೇಷ್ಠಾಃ ಸಂತಿ ಇತಿ (ಸ) ತಥೋಕ್ತಃ ॥ ಭಾರಭೃತ್ ಇತಿ । ನಿರುಕ್ತಂ ಚ ಏತತ್ ॥ ತರ-ತಾರ ಈರೈದು = ದಶ ॥ ೧ ॥

### ಕನ್ನಡಾರ್ಥ

"ಮಾತೃಕಾ (ವರ್ಣ) ಗಳಲ್ಲಿರುವ ಭಗವದ್ರೂಪಗಳನ್ನು ದೇಹಗತ ತತ್ತದವಯವಗಳಲ್ಲಿ ಚಿಂತಿಸಿ ಮಾತೃಕಾ ವಿನ್ಯಾಸವನ್ನು ಮಾಡಿ ನಂತರ ಮಂತ್ರಗಳನ್ನು ಜಪಿಸತಕ್ಕದು" ಎಂದು ಶ್ರೀಮದಾಚಾರ್ಯರ ವಚನವಿರುವದರಿಂದ ಮಾತೃಕಾ ಸಂಧಿ ರೂಪವಾಗಿ ಮಾತೃಕಾ ರೂಪಗಳನ್ನು ವಿವರಿಸಲು ಈ ಸಂಧಿಯನ್ನು ವಿರಚಿಸುತ್ತಾರೆ—"ಪಾದಮಾನಿ" ಇತಿ ॥

ಸುಮೇಧಾ—ಈ ನಾಮದ ಅರ್ಥವನ್ನು ಬೃಹತೀ ಮಂತ್ರವು ವಿವರಿಸುತ್ತದೆ. ಸು = ಉತ್ತಮವಾದ, ಮೇಧಾ = ಯಜ್ಞ ಮುಂತಾದ ಶ್ರೇಷ್ಠವಾದ ಪೂಜೆಗಳುಳ್ಳವನು-ಶೋಭನವಾದ ಪೂರ್ಣ ಜ್ಞಾನವುಳ್ಳವನು ಅಥವಾ ಉತ್ತಮ ಸಂಸಿದ್ಧಿಯುಳ್ಳವನು ಎಂದು ಅರ್ಥ. "ಭಾರಭೃತ್" ಈ ನಾಮದ ಋಜ್ಮತ್ರಾರ್ಥವನ್ನೂ ಮಂತ್ರವನ್ನೂ ಹಿಂದೆ ಬರೆಯಲಾಗಿರುತ್ತದೆ. (ಸ. ೭, ಪ. ೧೨).

ತರ ಎಂಬುದಕ್ಕೆ ತಾರವೆಂದು ಅರ್ಥ. ಈರೈದು-ಹತ್ತು ॥ ೧ ॥

**ಅವತರಣಿಕಾ:** ಮೊದಲನೇ ಪದ್ಯದಲ್ಲಿ ಪಾದಗಳ ಸಂಧಿಗಳಲ್ಲಿಪ್ಪ ೧೦ ಟಂಕ್ಯಾದಿ ತಾರಾದಿ ರೂಪಗಳನ್ನು ಪೇಳಿ ಈ ಪದ್ಯದಲ್ಲಿ ಎರಡೂ ಕೈಗಳ ಸಂಧಿಗಳಲ್ಲಿ ಕಪಿಲಾದಿ ೫, ಚಾರ್ವಾಂಗಾದಿ ೫, ಪವರ್ಗಾದಿ ೫, ಪರಫಲಿ ರೂಪಗಳಿರುವದು. ತತ್ಕಾರ್ಯ ವಿವರಿಸುತ್ತಾರೆ.

* ಈ ಚಿನ್ಹಗಳು ಹಾಕಿದವೆಲ್ಲಾ ಬೃಹತೀ ಸಹಸ್ರ ಋಕ್ಕುಗಳು.

**ಮೂಲ :**

**ಕಪಿಲ ಚಾರ್ವಾಂಗಾದಿ ರೂಪದಿ ।**
**ವಪುಗಳೊಳು ಹಸ್ತಗಳ ಸಂದಿಯೊಳ ।**
**ಳಪರಿಮಿತ ಕರ್ಮಗಳ ಮಾಡುತಲಿಪ್ಪ ದಿನದಿನದಿ ॥**
**ಕೃಪಣ ವತ್ಸಲ ಪಾರ್ಶ್ವದೊಳು ಪರ ।**
**ಸುಫಲಿಯೆನಿಸುವ ಗುದ ಉಪಸ್ಥದಿ ।**
**ವಿಪುಳ ಬಲಿಭಾಗ ಮನವೆನಿಸಿ ತುಂದಿಯೊಳಗಿರುತಿಹನು ॥ ೨ ॥**

**ಪದ್ಯಾರ್ಥ :** ಕಪಿಲ=ಓಂ ಕಂ ಕಪಿಲಾಯ ನಮಃ ಓಂ ಖಂ ಖಪತಯೇನಃ ಓಂ ಗಂ ಗರುಡಾಯ ನಮಃ ಓಂ ಘಂ ಘರ್ಮಾಯ ನಮಃ ಓಂ ಙ ಸಾರಾಯ ನಮಃ ಎಂದು ಬಲಗೈ ಸಂಧಿ ೫ರಲ್ಲಿಪ್ಪ ಐದು ಕಪಿಲಾದಿ ರೂಪಗಳು, ಎಡಗೈ ಐದು ಸಂಧಿಗಳಲ್ಲಿರುವ ಚಾರ್ವಾಂಗಾದಿ=ಓಂ ಚಂ ಚಾರ್ವಾಂಗಾಯ ನಮಃ ಓಂ ಛಂ ಛಂದೋಗವ್ಯಾಯ ನಮಃ ಓಂ ಜಂ ಜನಾರ್ದನಾಯ ನಮಃ ಓಂ ಝಂ ಝಟಿತಾರಾಯ ನಮಃ ಓಂ ಞಂ ಞಮಾಯ ನಮಃ ಐದು ರೂಪ, ಈ ಪ್ರಕಾರ ಹತ್ತು ರೂಪಗಳಿಂದ ಎರಡೂ ಕೈಗಳಲ್ಲಿದ್ದು ಅಪರಿಮಿತ ಕರ್ಮಗಳ ಮಾಡುತಲಿಪ್ಪ ದಿನದಿನದಿ=ನಿತ್ಯದಿ ಅನೇಕ ಜೀವರಲ್ಲಿದ್ದು ಕೊಡೋಣ, ತೆಗೆದುಕೊಂಬೋಣ, ಬರೆಯೋಣ, ತುತ್ತು ಬಾಯೊಳಗೆ ಹಾಕೋಣ ಮುಂತಾದ ಅನೇಕ ಕರ್ಮಗಳನ್ನು ಕೈಗಳಿಂದ ಮಾಡಿಸುವನು. ಕೃಪಣ ವತ್ಸಲ ಕರುಣಾಳುವಾದ ಹರಿಯು ಬಲಪಾರ್ಶ್ವದಲ್ಲಿ ಓಂ ಪಂಾಯ ನಮಃ ಎಡಪಾಶ್ವದಲ್ಲಿ ಓಂ ಫಲಿನೇ ನಮಃ ಎಂಬುವ ನಾಮದಿಂದ ಗುದದಲ್ಲಿ=ಬಲಿ–ಓಂ ಬಲಿನೇ ನಮಃ ಉಪಸ್ಥದಲ್ಲಿ=ಭಗ=ಓಂ ಭಗಾಯ ನಮಃ ಎಂದು ಮತ್ತು ತುಂದಿ ವೃಷಣಾಸನದಲ್ಲಿ ಮನವೆಂಬ ನಾಮ ಓಂ ಮನುವೇ ನಮಃ ಎಂದು ಈ ೧೫ ಸ್ಥಾನಗಳಲ್ಲಿರುವನು ಎಂದು ಹಿಂದಿನ ಪದ್ಯದಲ್ಲಿ ೧೦ ಇಲ್ಲಿ ೧೫ ಕವರ್ಗಾದಿ ಪವರ್ಗ ಪರಿಯಂತ (೫) ವರ್ಗದಲ್ಲಿಪ್ಪ ೨೫ ರೂಪಗಳನ್ನು ವಿವರಿಸಿರುತ್ತಾ ಮುಂದೆ ಪದ್ಯ (೧೭)ದಲ್ಲಿ ಅಜಾದಿ ೧೬ ರೂಪಗಳನ್ನು, ಯಜ್ಞಾದಿ ೧೦ ರೂಪಗಳನ್ನು ಸಂಧಿ ೯, ಪದ್ಯ ೨೮ದಲ್ಲಿ ಸಮಯೋಚಿತ ವಿವರಿಸುತ್ತಾರೆ.

**ಭಾವಸೂಚನ :** ಕಪಿಲೇತಿ ಅಯಂ ಮಾತೃಕಾನ್ಯಾಸ ಕ್ರಮಃ ॥ ಪರ

ಮೋಃತಿ । ಪಂ ಪರಾಯನಮಃ ಇತಿ ಪಾರ್ಶ್ವಯೋಃ ಫಲಿನೇನಮಃ ಇತಿ ಚ, ಬಂ ಬಲಿನೇನಮಃ ಇತಿ, ಗುದೇ ಭಂ ಭಗಾಯನಮಃ ಇತಿ ಉಪಸ್ಥೇ । ಮಂ ಮನವೇನಮಃ, ನಾಭ್ಯಧೋ ದೇಶೇ ॥ ೨ ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಕಪಿಲ" ಇತಿ ॥ ಭಾವವು ಸ್ಪಷ್ಟವಿರುವದರಿಂದ ವ್ಯಾಖ್ಯಾನಿಸಿರುವದಿಲ್ಲ. ॥ ೨ ॥

**ಅವತರಣಿಕಾ :** ಎರಡು ಕಾಲುಗಳ ಮೇಲೆ ಕಟಿಯಿಂದಾರಂಭಿಸಿ ಶಿರಃಪರಿಯಂತರವಾಗಿರುವ ಅವಯುವಗಳಲ್ಲಿ ಇಪ್ಪ ರೂಪಗಳು. ವಿವರಿಸಲು ಮೊದಲಿಗೆ ಸುಷುಮ್ನಾದಿ ೫ ನಾಡಿಗಳಲ್ಲಿಪ್ಪ ಕಮಲಗಳು-ಕಮಲಗತ ರೂಪ-ತುಂದಿ-ನಾಭಿಯಲ್ಲಿರುವ ರೂಪ-ಈ ಪದ್ಯದಲ್ಲಿ ಹೇಳುತ್ತಾರೆ.

**ಮೂಲ :**

**ಐದು ಮೇಲೊಂದಧಿಕ ದಳ ವು ।**
**ಕೈದು ಪದ್ಮವು ನಾಭಿ ಮೂಲದಿ ।**
**ಐದು ಮೂರ್ತಿಗಳಿಹವು ಅನಿರುದ್ಧಾದಿ ನಾಮದಲಿ ॥**
**ಐದಿಸುತ ಗರ್ಭವನು ಜೀವರ ।**
**ನಾದಿ ಕರ್ಮ ಪ್ರಕೃತಿ ಗುಣಗಳ ।**
**ಹಾದಿ ತಪ್ಪಲು(ಲಿ) ಗೊಡದೆ ವ್ಯಾಪಾರಗಳ ಮಾಡುತಿಹ ॥ ೩ ॥**

**ಪದ್ಯಾರ್ಥ :** ಕಟಿ ಮೇಲ್ಭಾಗ ವೃಷಣಾಸನದಿಂದ ಸುಷುಮ್ನಾನಾಡಿಯು, ನೆಟ್ಟಗೆ ಶಿರಃಪರಿಯಂತವಾಗಿ ಹೋಗಿದೆ. ಇದಕ್ಕೆ ಪಶ್ಚಿಮಭಾಗ ವಜ್ರಿಕಾ, ಉತ್ತರಕ್ಕೆ ಆರ್ಯಾ, ಪೂರ್ವಕ್ಕೆ ಪ್ರಕಾಶಿನಿ, ದಕ್ಷಿಣಕ್ಕೆ ವೈದ್ಯುತಾ, ಮಧ್ಯ ಬ್ರಹ್ಮನಾಡಿ ಎಂತ ೫ ಪ್ರಭೇದಗಳಿರುವವು. ಈ ಐದು ನಾಡಿಗಳಲ್ಲಿ ನಾಭಿ ಮೂಲ ತುಂದಿ-ನಾಭಿ-ಹೃದಯ-ಉರು-ಕಂಠ-ಭ್ರೂಮಧ್ಯ-ಶಿರ-ಶಿರದ ಮೇಲ್ಭಾಗ ಈ ಸ್ಥಳಗಳಲ್ಲಿಪ್ಪ ಕಮಲಗಳ ವಿವರ ಹೇಳುತ್ತಾರೆ.

೧. ನಾಭಿ ಮೂಲದಿ = ಚತುರ್ದಳ ಕಮಲ. ಹೀಗೆ ೫ ನಾಡಿಗಳಲ್ಲಿ ೫ ಕಮಲಗಳು. ಇಲ್ಲಿ ಅನಿರುದ್ಧಾದಿ ಅ-ಅ-ಅ-ಪ್ರ-ಅ-ಸ-ಅ-ವಾ-ಅ-ನಾ-ಹೀಗೆ ಐದು ರೂಪಗಳು. ನಾಭಿ ಮೂಲವೆಂಬುವ ಪದಕ್ಕೆ ಈ ಪ್ರಕಾರ

ಅರ್ಥ ತಂತ್ರಸಾರ. ಶ್ರೀ ವಿಜಯದಾಸರ ಸುಳಾದಿ ಮಾನಸ ಸ್ಮೃತಿಯಂತೆ ಅರ್ಥ ಮಾಡಲೇಬೇಕು.

೨. ನಾಭಿಯಲಿ–ಐದು ಮೇಲೊಂದಧಿಕ ದಳ ಉಳ್ಳಿದು ಪದ್ಮವು= ಐದು ಮೇಲೆ ಒಂದು ಹೆಚ್ಚು. ಆರು ದಳಗಳು ಉಳ್ಳ ಐದು ಕಮಲಗಳು ಇರುವವು. ಇಲ್ಲಿ ಪ್ರದ್ಯುಮ್ನ ರೂಪಿ ಹರಿಯು ಪ್ರ-ಅ-ಪ್ರ-ಪ್ರ-ಪ್ರ-ಸ-ಪ್ರ-ವಾ-ಪ್ರ-ನಾ-ಈ ಪ್ರಕಾರ ೫ ರೂಪಗಳು ಇರುವವು. (ಇವೆಲ್ಲ ಸವಿಸ್ತರ ಸಂಧಿ ಸಾರದಲ್ಲಿ ವಿವರಿಸಿದೆ.) ಇಲ್ಲಿ ವಾಯ್ವಂತರ್ಗತ ಹರಿಯು, ಜೀವರ=ಸಕಲ ಜೀವರ, ಅನಾದಿ ಕರ್ಮ-ಪ್ರಕೃತಿ, ಜೀವರ ಸ್ವಭಾವ ಗುಣಗಳನ್ನು ಅನುಸರಿಸಿ ಗರ್ಭವನು ಐದಿಸುವನು. ಅಂದರೆ ಈ ೬ ದಳ ಕಮಲ ಸ್ಥಾನ ಗರ್ಭ ಸ್ಥಾನ "ಮಜ್ಜೈವ ರೇತೋಭವತಿ ತಸ್ಮಿನ್ ಪ್ರಾಣಪ್ರತಿಷ್ಠಿತಾ ॥ ಪ್ರಾಣೋ ನಾರಾಯಣಃ ತಸ್ಮಾತ್ ರೇತೋ ಗರ್ಭತ್ವಮೇಷ್ಯತಿ ॥ ಎಂದು ಮಾನಸ ಸ್ಮೃತಿ ಶ್ಲೋಕ ॥ ೨೧ ॥ ಮಜ್ಜಾದಿಂದ ರೇತಸ್ಸು ಹುಟ್ಟುತ್ತದೆ. ಆ ರೇತಸ್ಸಿನಲ್ಲಿ ಪ್ರಾಣ ಇರುತ್ತಾನೆ ಆ ಪ್ರಾಣನಲ್ಲಿ ನಾರಾಯಣನು ಇರುತ್ತಾನೆ. ಕಾರಣ ರೇತಸ್ಸು ಗರ್ಭತ್ವವನ್ನು ಐದುತ್ತದೆ (ಉಪಾಸನಾ ಸುಳಾದಿ ಪುಟ ೨೪೫) ಹೀಗೆ ಗರ್ಭವನ್ನು ಐದಿಸಿ ಹಾದಿ ತಪ್ಪಲಿಗೊಡದೆ ಶ್ರೀ ಹರಿಯು ಸತ್ಯ ಸಂಕಲ್ಪಾನುಸಾರ ಜೀವ ಕರ್ಮಾನುಸರಿಸಿ ದೇಹಗಳ ಕೊಟ್ಟು ವ್ಯಾಪಾರ ಮಾಡಿಸುವನೆಂದು ತಾತ್ಪರ್ಯ.

**ಭಾವಸೂಚನ :** ಐದೇತಿ ॥ ಪ್ರಾಕೃತಾಧ್ಯಾತ್ಮೇಚ ॥ ಸ್ಥೂಲ ದೇಹದಲ್ಲಿ ನಾಭಿ ಕೆಳಗೆ ಆರಂಗುಲ ಪರಿಮಿತ ದೇಶಾರಂಭಿಸಿಕೊಂಡು, ಶಿರಸ್ಸಿನ ಪರಿಯಂತ ಬ್ರಹ್ಮನಾಡಿ ಅದೆ. ಅದು ಒಂದು ಕೂದಲು ಸಹಸ್ರ ಭಾಗ ಮಾಡಿದರೆ, ಒಂದು ಭಾಗ ಎಷ್ಟು ಸಣ್ಣವೋ ಅಷ್ಟು ಸಣ್ಣವದೆ. ಸುಷುಮ್ನಾ ನಾಡಿಯು ವಜ್ರಿಕಾ ಆರ್ಯಾ ಪ್ರಕಾಶಿನೀ ವೈದ್ಯುತಾ ಬ್ರಹ್ಮನಾಡಿಯೆಂತ ಪಂಚ ಪ್ರಭೇದ ಉಳ್ಳದ್ದು. ಬ್ರಹ್ಮನಾಡಿ ಮಧ್ಯದಲ್ಲಿದೆ. ಇದರ ಹಿಂಭಾಗದಲ್ಲಿ ಇದ್ದ ವಜ್ರಿಕಾ ನಾಡಿಯಲ್ಲಿ ಹರಿದ್ವರ್ಣ ಪ್ರದ್ಯುಮ್ನ, ಇದಕ್ಕೆ ಎಡಭಾಗದಲ್ಲಿದ್ದ ಆರ್ಯಾ ನಾಡಿಯಲ್ಲಿ ನೀಲವರ್ಣ ಅನಿರುದ್ಧ, ಮುಂಭಾಗದಲ್ಲಿ ಪ್ರಕಾಶಿನೀ ಎಂಬೋ ನಾಡಿಯಲ್ಲಿ ಶ್ವೇತವರ್ಣ ವಾಸುದೇವ, ಬಲದಲ್ಲಿ ವೈದ್ಯುತಾ ಎಂಬೋ ನಾಡಿಯಲ್ಲಿ ಪಿಂಗಳವರ್ಣ ಸಂಕರ್ಷಣ, ಮಧ್ಯದಲ್ಲಿಯು

ಬ್ರಹ್ಮನಾಡಿಯಲ್ಲಿ ರಕ್ತವರ್ಣ ನಾರಾಯಣ. ಈ ವಿಷಯದಲ್ಲಿ ಪ್ರಮಾಣ ತಂತ್ರಸಾರವೇ ಅದೆ. "ಮೂಲಾಧಾರಂ ಸಮಾರಭ್ಯ ತ್ವಾಮೂರ್ಧ್ನಾನ್ಮೃಜು ಸ್ಥಿತಾ ॥ ಮಧ್ಯೇ ಸುಷುಮ್ನಾ ವಿಜ್ಞೇಯಾ ವಜ್ರಕಾರ್ಯಾ ಪ್ರಕಾಶಿನೀ ವೈದ್ಯುತಾ ಬ್ರಹ್ಮನಾಡೀತಿ ಸೈವಪಂಚ ಪ್ರಭೇದಿನಿ ॥ ಪೃಷ್ಠವಾಮಾಗ್ರ ದಕ್ಷಾಂತರ್ಭೇದಾಸ್ತಾವತ್ಕ್ರಮೇಣತ್ವಿತಿ"॥ ಈ ನಾಡಿಯೊಳಗೆ ಮೂಲಸ್ಥಾನ ದಲ್ಲೆ ರಕ್ತವರ್ಣ ಪಂಚ ಪದ್ಮಗಳು ಅವೆ. ಆ ಪದ್ಮಗಳ ಮೇಲೆ ತ್ರಿಕೋಣ ವಹ್ನಿ ಮಂಡಲಗಳವೆ. ನಾಡಿ ಈ ಪದ್ಮಗಳಲ್ಲಿ ರಕ್ತವರ್ಣ. ಪ್ರದ್ಯುಮ್ನಾದಿ ಕರು ಉಕ್ತ ಕ್ರಮದಿಂದೇ ಇದ್ದಾರೆ. ಇಲ್ಲಿ ಪ್ರಮಾಣ ಸಾರ ಸಂಗ್ರಹವೇ ಸರಿ. "ಹರಿನ್ನೀಲಾಸಿತ ಪಿಂಗಲೋಹಿತಾಶ್ಚಾತ್ರ, ಕೇಶವಃ ಪ್ರದ್ಯುಮ್ನಾದಿ ಸ್ವರೂಪೇಣಧ್ಯೇಯ ಸಿದ್ಧ ಮಭೀಪ್ಸಿತಾ"ಯಂತ ಪ್ರಮಾಣ ॥ ೩ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಐದು" ಇತಿ ॥ ಪಂಚನಾಡೀಸ್ಥಂ ಪದ್ಮಪಂಚಕಮ್ ॥ "ಮೂಲಾ ಧಾರಂ ಸಮಾರಭ್ಯ ತ್ವಾಮೂರ್ಧಾನಂ ಋಜುಸ್ಥಿತಾ ॥ ಮಧ್ಯೇ ಸುಷುಮ್ನಾ ವಿಜ್ಞೇಯಾ ವಜ್ರಕಾರ್ಯಾ ಪ್ರಕಾಶಿನೀ ॥ ವೈದ್ಯುತಾ ಬ್ರಹ್ಮನಾಡೀತಿ ಸೈವ ಪಂಚ ಪ್ರಭೇದಿನೀ ॥ ಪೃಷ್ಠ ವಾಮಾಗ್ರ ದಕ್ಷಾಂತರ್ಭೇದಾಃ ತೇಷು ಕ್ರಮೇಣ ತು ॥ ಹರಿನ್ನೀಲಃ ಸಿತಃ ಪಿಂಗಃ ಲೋಹಿತಶ್ಚಾಸ್ಯ ಕೇಶವಃ ॥ ಪ್ರದ್ಯುಮ್ನಾದಿ ಸ್ವರೂಪೇಣ ಧ್ಯೇಯಃ ಸಿದ್ಧಿಮಭೀಪ್ಸಿತಾ" ॥ ಇತಿ ಸಾರ ಸಂಗ್ರಹೇ ॥ "ಮೂಲೇ ಚ ನಾಭೌ ಹೃದಯೇಂದ್ರ ಯೋನಿಃ ಭ್ರೂಮಧ್ಯೇ" ಇತ್ಯುಕ್ತ್ವಾ "ಪದ್ಮೇಷು" ಇತಿ ಚ ಉಕ್ತಮ್ ॥ "ಐದಿಸುತ" ಇತಿ ॥ ಅನಿ ರುದ್ಧಾಶ್ರಯತ್ವಾತ್ ಗರ್ಭಾಣಾಂ ಪಿತುಃ ಶರೀರಾತ್ ಅನ್ಯತ್ರ ಪ್ರತಿಹೃತಾಃ ಅಪಿ ನ ವಿನಶ್ಯಂತಿ ವರ್ಧಂತೇ (ತಿ) ಚ ತತ್ರೈವ ॥ "ಧಾತಾ ಗರ್ಭಂ ದಧಾತು" ಇತಿ ಶ್ರುತೇಃ ॥ ಧಾತಾ ಹಿ ಭಗವಾನ್ ಅನಿರುದ್ಧಃ ॥ "ಯೋನಿ ಕ್ಲೃಪ್ತಿಃ ವಾಸುದೇವಾತ್ ರೂಪಂ ಸಂಕರ್ಷಣಾತ್ ಭವೇತ್ ॥ ಆಸ್ಮೈಕ ಕರ್ಮ ಪ್ರದ್ಯುಮ್ನಾತ್ ಅನಿರುದ್ಧಾತ್ ಚ ಧಾರಣಮ್ ॥ ಇತಿ ಛಾಂದೋಗ್ಯೇ ॥ ಭೃಗ್ವಿಂದ್ರದ್ಯುಮ್ನ ಸಂವಾದೇ ವಿಷ್ಣುರಹಸ್ಯೇ ಕರ್ಮಾದಿ ನಿರೂಪಣ ಪ್ರಕರಣೇ ॥ "ಯದೇಶ್ವರಃ ಪ್ರಾಣಯುತಃ ಪಿತರಿ ಸ್ಥಾಪಯತ್ಯ ಮುಮ್ ॥ ತದಾಪ್ರಭೃತಿ ತದ್ದೇಹಸ್ಥಿತೋ ಮಾಸದ್ವಯಾವಧಿ ॥ ರೇತೋ

ರೂಪೋ ಮಾತರಿ ಸ ಕಾಲೇ ಯೋನಿಂ ವಿಶತ್ಯಪಿ || ಯೋನಿಂ ಶೋಧಯತೇ ತತ್ರ ವಾಸುದೇವಾಭಿಧೋ ಹರಿಃ || ರೇತಃ ಸಿಂಚತಿ ತತ್ರೈವ ಪ್ರದ್ಯುಮ್ನೋ ಹಿ ಪ್ರಜಾಪತಿಃ || ತ್ವಷ್ಟಾ ಸಂಕರ್ಷಣಃ ತತ್ರ ಧತ್ತೇ ರೂಪ ವಿಭಾಗಕಾನ್ || ಧೃತ್ವಾ ಪುಷ್ಣಾತಿ ತಂ ಗರ್ಭಂ ಸ್ವಯಂ ಧಾತ್ರಾsನಿರುದ್ಧಕಃ || ಗ್ರಹಾಸ್ತು ತೇಜಮೇಷಾದ್ಯಾಃ ತದ್ರೋsಪದ್ರವಕಾರಿಣಃ|| ಅತೋ ರಾಜನ್ ಸ್ವೇಚ್ಛಯಾ ನಃ ಜಾಯತೇ ಗರ್ಭ ಸಂಭವಃ || ಇತಿ || ೩ ||

## ಕನ್ನಡಾರ್ಥ

"ಐದು ಮೇಲೊಂದು" ಎಂಬ ಪದ್ಯದಲ್ಲಿ ನಾಭಿ ಮೂಲಗತವಾದ ಭಗವದ್ರೂಪವನ್ನು ತಿಳಿಸುತ್ತಾರೆ.

"ಐದು ನಾಡಿಗಳಲ್ಲಿ ಐದು ಪದ್ಮ (ಕಮಲ)ಗಳಿರುತ್ತವೆ. "(ನಾಭಿಯ) ಮೂಲಾಧಾರ ಸ್ಥಾನದಿಂದ ಆರಂಭಿಸಿ ಮಸ್ತಕ (ಮೂರ್ಧ) ನೆತ್ತಿಯವರೆಗೂ ನೇರವಾಗಿ ಹೊರಟಿರುವ ದೇಹ ಮಧ್ಯಗತವಾದ ನಾಡಿಗೆ "ಸುಷುಮ್ನಾನಾಡಿ" ಎಂದು ಕರೆಯುತ್ತಾರೆ. "ವಜ್ರಿಕಾ-ಆರ್ಯಾ (ಕಾ) ಪ್ರಕಾಶಿನೀ ವೈದ್ಯುತಾ-ಬ್ರಹ್ಮನಾಡೀ" ಎಂದು ಆ ಸುಷುಮ್ನಾ ನಾಡಿಯು ಭಾಗಗಳೇ ಆಗಿರುತ್ತವೆ. ಹಿಂದೆ (ಪೃಷ್ಠ) ಎಡ ಬಲ ಪಾರ್ಶ್ವಗಳಲ್ಲಿ ಮುಂದೆ (ಪೂರ್ವ) ಮಧ್ಯ=ಒಳಗೆ ಪ್ರಭೇದಗಳಿಂದ ಇರುತ್ತವೆ. ಕ್ರಮವಾಗಿ ಹರಿತ್-ನೀಲ-ಸಿತ (ಶುಭ್ರ) ಪಿಂಗ (ನಸುಗೆಂಪು) ಲೋಹಿತ (ಕೆಂಪು) ಹೀಗೆ ಈ ಪಾರ್ಶ್ವಗತ ನಾಡಿಗಳಿಗೆ ಬಣ್ಣಗಳಿರುತ್ತವೆ. ಇವುಗಳಲ್ಲಿ ನಾರಾಯಣನು ಶ್ರೀ ಹರಿಯು ಪ್ರದ್ಯುಮ್ನ ಮುಂತಾದ ರೂಪಗಳಿಂದ ಇರುತ್ತಾನೆ. ಆದುದರಿಂದ ಪ್ರದ್ಯುಮ್ನ ಮುಂತಾದ ರೂಪಗಳನ್ನು ಅಲ್ಲಿ ಧ್ಯಾನಮಾಡಬೇಕು" ಎಂದು ತಂತ್ರಸಾರ ಸಂಗ್ರಹದಲ್ಲಿ ಶ್ರೀಮದಾಚಾರ್ಯರು ನಿರೂಪಿಸಿರುತ್ತಾರೆ. ಇದಲ್ಲದೇ ಮೂಲಾಧಾರ ಸ್ಥಳದಲ್ಲಿ-ನಾಭಿಯಲ್ಲಿ.ಹೃದಯದಲ್ಲಿ ಇಂದ್ರಯೋನಿ (ತಾಲುವಿನ ಹತ್ತಿರವಿರುವ ಕಿರುನಾಲಿಗೆ)ಯಲ್ಲಿ ಭ್ರೂ ಮಧ್ಯದಲ್ಲಿ (ಹುಬ್ಬುಗಳ ನಡುವೆ), ಹಣೆಯಲ್ಲಿ" ಎಂದು ಹೇಳಿ ಕೊನೆಗೆ "ಪದ್ಮಗಳಲ್ಲಿ ಪಂಚಾತ್ಮಕನಾದ ಶ್ರೀ ಹರಿಯನ್ನು ಧ್ಯಾನಿಸಬೇಕು" ಎಂದೂ ನಿರೂಪಿಸಿರುತ್ತಾರೆ. "ಐದಿಸುತ್ತ" ಎಂಬಲ್ಲಿ ಅನಿರುದ್ಧ ರೂಪೀ ಹರಿಯು ಗರ್ಭವನ್ನು ಹೊಂದಿಸುವ ಬಗೆಯು ಹೀಗೆ ಇರುತ್ತದೆ. ಗರ್ಭಗಳು ಅನಿರುದ್ಧನ ಆಶ್ರಯವನ್ನು ಪಡೆದು ಸುಭದ್ರವಾಗಿ

ರುವದರಿಂದ "ಪಿತೃ-(ತಂದೆ) ಶರೀರದಿಂದ ಹೊರಬಂದು ತಾಯಿಯ ಹತ್ತಿರ ತರಲ್ಪಟ್ಟರೂ ನಾಶವನ್ನು ಹೊಂದಲಾರವು. "ಧಾತನು ನಿನ್ನ ಗರ್ಭವನ್ನು ಧಾರಣ ಮಾಡಲಿ" ಎಂಬ ಅರ್ಥವನ್ನು ಶ್ರುತಿಯು ಹೇಳುತ್ತದೆ. ಇಲ್ಲಿ ಇರುವ "ಧಾತಾ" ಎಂಬ ಶಬ್ದಕ್ಕೆ "ಅನಿರುದ್ಧ" ಎಂದು ಕರೆಯುತ್ತಾರೆ. ಇನ್ನು ಅನಿರುದ್ಧನು "ಗರ್ಭವನ್ನೈದಿಸುವನು" ಎಂಬಲ್ಲಿ ಛಾಂದೋಗ್ಯ ಭಾಷ್ಯವೇ ಆಧಾರವಾಗಿದೆ. "ಯೋನಿಗೆ ಪುತ್ರೋತ್ಪತ್ತಿ ಸಾಮರ್ಥ್ಯವನ್ನೀಯುವನು, ಅಥವಾ ಯೋನಿ ಶುದ್ಧಿಯನ್ನು ಮಾಡುವವನು ವಾಸುದೇವನು ಗರ್ಭಸ್ಥ ಶಿಶುವಿನ ಅಂಗ ರೂಪಗಳನ್ನು ಮಾಡುವವನು ಸಂಕರ್ಷಣನು. ಗರ್ಭದಿಂದ ಶಿಶು (ಸಂತಾನ)ವು ಬೀಳುವಂತೆ ಮಾಡುವವನು ಪ್ರದ್ಯುಮ್ನನು, ಗರ್ಭವನ್ನು ಧಾರಣವನ್ನು ಮಾಡುವವನು ಅನಿರುದ್ಧನು" ಎಂದು ಛಾಂದೋಗ್ಯ ಭಾಷ್ಯದಲ್ಲಿ ಹೇಳಲಾಗಿರುತ್ತದೆ. ಇದನ್ನೇ ಶ್ರೀ ವಿಷ್ಣು ರಹಸ್ಯದಲ್ಲಿ ಭೃಗು-ಇಂದ್ರದ್ಯುಮ್ನರುಗಳ ಸಂವಾದ ರೂಪವಾಗಿ ಹೊರಟ ಕರ್ಮಾದಿ ನಿರೂಪಣ ಪ್ರಕರಣದಲ್ಲಿ ಪ್ರತಿಪಾದಿಸಲಾಗಿರುತ್ತದೆ.

ಮೂಲಾಧಾರ ತುಂದಿ ಪಂಚನಾಡಿಯಲ್ಲಿ ರಕ್ತವರ್ಣ ೫ ಕಮಲ ೯ ದಳದವು.




ಈ ಕಮಲಬುಡ ಹಸರು ದೇಟು. ಅನಿರುದ್ಧಮೂರ್ತಿ
ಅರುಣ ಕೆಂಪು ವರ್ಣ ಚತುರ ಹಸ್ತ, ಶಂಖ, ಚಕ್ರ, ಅಭಯವರ,
ಕಿರೀಟ ಹಳದಿ, ಉಟ್ಟದ್ದು ಚಾಕಲೇಟ, ಹೊದ್ದದ್ದು ಹಸರು.

ಹರಿಯು ಪ್ರಾಣಯುಕ್ತನಾಗಿ ಪ್ರಾಣ ಸಂಬದ್ಧನಾಗಿ ತಂದೆಯಲ್ಲಿ ಯಾವಾಗ ಈ ಜೀವನನ್ನು ಇಡುತ್ತಾನೋ ಅಂದಿನಿಂದ ಎರಡು ತಿಂಗಳ ವರೆಗೆ ತಂದೆಯ ಶರೀರದಲ್ಲಿಯೇ ಇದ್ದು, ರೇತೋ ರೂಪದಿಂದ ಕಾಲಾನುಸಾರವಾಗಿ ತಾಯಿಯ ಗರ್ಭ (ಯೋನಿ) ವನ್ನು ಪ್ರವೇಶಿಸುತ್ತಾನೆ. ಆಗ ವಾಸುದೇವ ಮೂರುತಿಯು ಯೋನಿಗೆ ಸಾಮರ್ಥ್ಯ ಅಥವಾ ಶುದ್ಧಿಯನ್ನೀಯುವನು. ಪ್ರದ್ಯುಮ್ನ ಮೂರುತಿಯು ಪ್ರಜಾಪತಿಯೆನಿಸಿ ರೇತಸ್ಸನ್ನು ಸೇಚನ ಮಾಡುತ್ತಾನೆ. ತ್ವಷ್ಟ್ರನಲ್ಲಿ ಇದ್ದು ಸಂಕರ್ಷಣನು ಆ ಗರ್ಭಕ್ಕೆ ಅವಯವ ವಿಭಾಗಗಳನ್ನು ಮಾಡುತ್ತಾನೆ. ಅನಂತರ ಅನಿರುದ್ಧನು ಅದನ್ನು ಧರಿಸಿ ಸಂರಕ್ಷಣ ಮಾಡುತ್ತಾನೆ. ಆಗ ಗ್ರಹಗಳು ಎಷ್ಟೋ ಉಪದ್ರವಗೊಳಿಸುತ್ತವೆ. ಆದುದರಿಂದ ಹೇ ರಾಜನೇ! ಅವರವರ ಇಚ್ಛೆಗೆ ಅನುಸಾರವಾಗಿ ಗರ್ಭಗಳು ಆಗುವದಿಲ್ಲ (ಸಂಭವಿಸುವದಿಲ್ಲ) ಎಂದು ವಿಷ್ಣು ರಹಸ್ಯ ವಾಕ್ಯಗಳ ಅರ್ಥ || ೩ ||

ನಾಭಿಯಲ್ಲಿ ೫ ನಾಡಿಗತ ೬ ದಳಗಳುಳ್ಳ ೫ ಕಮಲಗತ
ಹಸರು ದೇಟಿನಲ್ಲಿ ಅರುಣ (ಗುಲಾಬಿ)




ವರ್ಣಕಮಲದಲ್ಲಿ ಪ್ರದ್ಯುಮ್ನಮೂರ್ತಿ
ಕಿಂಚಿತ ಕೆಂಪು, ಕಿರೀಟ ಹಳದಿ. ಚಕ್ರ-ಶಂಖ-ವರ-ಅಭಯ ನಾಲ್ಕು ಬಾಹು
ಉಟ್ಟದ್ದು-ಚಾಕಲೇಟ, ಹೊದ್ದದು-ಹಸರು.

**ಅವತರಣಿಕಾ :** ನಾಭಿಯಲ್ಲಿ ಆರು ಕೋಣ ವಾಯು ಮಂಡಲ, ಅಲ್ಲಿ ಪಾಪ ಪುರುಷನನ್ನು ವಾಯ್ವಂತರ್ಗತ ಹರಿಯು ಶೋಷಿಸುತ್ತಾನೆಂದು ಗುರುಮಂತ್ರ, ತಂತ್ರಸಾರ ವಿಷಯವನ್ನೇ ಪ್ರತಿಪಾದಿಸುತ್ತಾರೆ.

**ಮೂಲ :**

**ನಾಭಿಯಲಿ ಷಟ್ಕೋಣ ಮಂಡಲ ।**
**ದೀ ಭವಿಷ್ಯದ್ಬ್ರಹ್ಮನೊಳು ಮು ।**
**ಕ್ತಾಭಿ ಶ್ರೀ ಪ್ರದ್ಯುಮ್ನನಿಪ್ಪನು ವಿಬುಧಗಣಸೇವ್ಯ ॥**
**ಶೋಭಿಸುವ ಕೌಸ್ತುಭವೆ ಮೊದಲಾ ।**
**ದಾಭರಣ ಆಯುಧಗಳಿಂದ ಮ ।**
**ಹಾ ಭಯಂಕರ ಪಾಪ ಪುರುಷನ ಶೋಷಿಸುತ ನಿತ್ಯ ॥ ೪ ॥**

**ಪದ್ಯಾರ್ಥ :** ನಾಭಿಯಲ್ಲಿ ಹೊಕ್ಕುಳ ಪ್ರದೇಶದಲ್ಲಿ ಷಟ್ಕೋಣ ಮಂಡಲ=ಆರು ಮೂಲೆಯ ವಾಯು ಮಂಡಲ ಇರುವುದು. ಇಲ್ಲಿ ಭವಿಷ್ಯದ್ಬ್ರಹ್ಮನೊಳು=ಮುಂದೆ ಬ್ರಹ್ಮದೇವರ ಪದವಿಗೆ ಬರುವ ವಾಯುದೇವರಲ್ಲಿ, ಮುಕ್ತಾಭ=ಮುತ್ತಿನ ವರ್ಣದಂತೆ ಪ್ರಕಾಶಮಾನನಾದ, ಪ್ರದ್ಯುಮ್ನದೇವನು, ಶೋಭಿಸುವ ಕೌಸ್ತುಭವೆ ಮೊದಲಾದಾಭರಣ ಆಯುಧಗಳಿಂದಲಿ=ಕೌಸ್ತುಭಮಣಿಯಿಂದ ಶೋಭಿಸುತ್ತಾನೆ ಎಂದರೆ, ಕೌಸ್ತುಭಮಣಿ (ಬ್ರಹ್ಮದೇವ)ಗೆ ಪರಮಾತ್ಮನ ಕಾಂತಿಯಿಂದಲೆ ಶೋಭೆ ಹೊರತಾಗಿ ಮಣಿಯಿಂದ ಪರಮಾತ್ಮಗೆ ಶೋಭಾವಿಲ್ಲ. ಶಂಖ-ಗದಾ-ಚಕ್ರ-ಪದುಮ ಆಯುಧಗಳಿಂದ ಧರಿಸಿರುವನು, ವಿಬುಧ ಗಣದಿಂದ ಸೇವ್ಯನು=ಜ್ಞಾನಿಗಳಾದ ಬ್ರಹ್ಮಾದಿ ದೇವ ಸಮೂಹದಿಂದ ಸೇವಿತನು. ಮಹಾ ಭಯಂಕರ ಪಾಪ ಪುರುಷನನ್ನು ನಿತ್ಯ ಶೋಷಿಸುವನು. (ಗುರು ಮಂತ್ರ ರೀತ್ಯಾ ಸಂಧಿಯ ಸಾರದಲ್ಲಿ ವಿಸ್ತರಿಸಿದೆ).

**ಭಾವಸೂಚನ :** ತದುಕ್ತಂ ತಂತ್ರಸಾರೆ "ತ್ರಿಕೋಣವನ್ಹ್ಯಾಚ ಷಡಸ್ರ ವಾಯು, ದ್ವಿಸ್ತಾವದಸ್ರ ರವಿವೃತ್ತ ಶಶಿ ತ್ರಿವನ್ಹ್ಯಾ ॥ ವೃತ್ತೇ ವಿಧಾವಪಿ ವಿಚಿಂತ್ಯ ಮಿದಂ ದಶಾರ್ಧ ರೂಪಂ ಶಿತಂ ತದಖಿಳಂ ಹೃದಯಾತ್ಪರಸ್ಥಂ ಇತಿ ॥ ೪ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ನಾಭಿಯಲಿ" ಇತಿ ॥ "ವಾಯ್ವಗ್ನಿವಾರುಣೈಃ ಬೀಜೈಃ ಧ್ಯಾತ್ವಾ ತನ್ಮಂಡಲೇ ಹರೀಂ ॥" "ಪಾಪ" ಇತಿ ॥ ಶೋಷಣಂ ದಹನಂ ಪ್ಲುತಿವಕ್॥" ಇತಿ ಸಾರ ಸಂಗ್ರಹೇ ॥ ವಾಯು ಪುರಾಣೇ ಚ "ಷಟ್ ಕೋಣ ಚಕ್ರಗಂ ನೀಲಂ ಭಗವಂತಂ ಅನುಸ್ಮರನ್ ॥ ದೇಹಸ್ಥಂ ಪಾಪ ಪುರುಷಂ ವಾಯುನಾ ಶೋಷಯೇತ್ತತಃ ॥ ೪ ॥

## ಕನ್ನಡಾರ್ಥ

"ನಾಭಿಯಲಿ" ಎಂಬ ಪದ್ಯದಿಂದ ನಾಭಿಯಲ್ಲಿ ಷಟ್ಕೋಣ ಮಂಡಲ ಗತನಾದ ಪಾಪ ಪುರುಷ ಶೋಷಕನಾದ ವಾಯುದೇವನಲ್ಲಿ ಇರುವ ಭಗವದ್ರೂಪವನ್ನು ತಿಳಿಸುತ್ತಾರೆ. ವಾಯು-ಅಗ್ನಿ-ವಾರುಣ ಬೀಜಾಕ್ಷರಗಳಿಂದ ಮೊದಲನೇ ಕ್ರಮವಾಗಿ ಶೋಷಣ-ದಹನಗಳನ್ನು ಮಾಡಿ ಅನಂತರ ವಾರುಣ ಬೀಜದಿಂದ (ವಂ) ಅಮೃತ ವೃಷ್ಟಿಯನ್ನು ಪ್ಲುತಿಯನ್ನು ಮಾಡಬೇಕು, ಎಂದು ತಂತ್ರಸಾರದಲ್ಲಿ ಹೇಳಲ್ಪಟ್ಟಿರುತ್ತದೆ. ವಾಯು ಪುರಾಣದಲ್ಲಿ ನಾಭಿಯಲ್ಲಿಯ ಷಟ್ಕೋಣ ಮಂಡಲದಲ್ಲಿ ನೀಲವರ್ಣಯುಕ್ತನಾದ ಭಗವಂತನನ್ನು ಚಿಂತಿಸಿ ವಾಯುವಿನಿಂದ ಪಾಪಪುರುಷನನ್ನು ಶೋಷಿಸತಕ್ಕದ್ದು" ಎಂದು ಹೇಳಲಾಗಿರುತ್ತದೆ ॥ ೬ ॥

**ಅವತರಣಿಕಾ :** ಹಿಂದಿನ ಪದ್ಯದಲ್ಲಿ ಷಟ್ಕೋಣ ವಾಯು ಮಂಡಲ ವಿಚಾರ ಹೇಳಿ ದ್ವಾದಶಾರ್ಕರ ಮಂಡಲದಲ್ಲಿಪ್ಪ ರೂಪಗಳನ್ನು ತತ್ಕಾರ್ಯಗಳನ್ನು ಈ ಪದ್ಯದಿಂದ ವಿವರಿಸುತ್ತಾರೆ.

**ಮೂಲ :**

ದ್ವಾದಶಾರ್ಕರ ಮಂಡಲವು ಮ ।
ಧ್ಯೋದರದೊಳು ಸುಷುಮ್ನದೊಳಗಿಹ ।
ದೈದು ರೂಪಾತ್ಮಕನು ಅರುವತ್ತಧಿಕ ಮುನ್ನೂರು ॥
ಈ ದಿವಾ ರಾತ್ರಿಗಳ ಮಾನಿಗ ।
ಳಾದ ದಿವಿಜರ ಸಂತಯಿಸುತ ನಿ ।
ಷಾದರೂಪಕ ದೈತ್ಯರನು ಸಂಹರಿಪ ನಿತ್ಯದಲಿ ॥ ೫ ॥

ಉರು ವಕ್ಷಸ್ಥಳ
ಪಂಚನಾಡೀಗತ ಹೃನ್ಮಂಟಪ ತೇರಿನ ಕಲಶ
ಒಂದೇ ದ್ವಾದಶದಳ ಕಮಲ ಅರುಣ ವರ್ಣ ಚತುರ್ಭುಜ
ಶಂಕ, ಚಕ್ರ, ವರ, ಅಭಯ ಕುಳಿತ ಹರಿಮೂರ್ತಿ






ಕಿರೀಟ-ಉಟ್ಟದ್ದು ಬಂಗಾರವರ್ಣ
ಹೊದ್ದ ಶಲ್ಯ-ಹಸರು, ಉಟ್ಟದ್ದು ಸ್ವಲ್ಪ ಕೆಂಪು ಮಿಶ್ರಿತ
೧೨ ದಳ ಒಂದೇ ಕಮಲ

**ಪದ್ಯಾರ್ಥ :** ದ್ವಾದಶಾರ್ಕರ ಮಂಡಲವು=ಹನ್ನೆರಡು. ಕೋಣ ; ೧೨ ದಳ ಉಳ್ಳ, ಹನ್ನೆರಡು ಜನ ಸೂರ್ಯ ಮಂಡಲವು ಮಧ್ಯೋದರದಲ್ಲಿ-ಮಧ್ಯ ಹೊಟ್ಟೆಯಲ್ಲಿ ಶೋಭಿಸುವದು. ಇದು ಸುಷುಮ್ನಾ ನಾಡಿಯಲ್ಲೇ ಇರುವದು. ಐದು ರೂಪಾತ್ಮಕನು, ಪ್ರದ್ಯುಮ್ನಾದಿ ಐದು ರೂಪ ನಾಮ ಗಳುಳ್ಳ ಹರಿಯು, ಅರವತ್ತಧಿಕ ಮುನ್ನೂರು=ಮುನ್ನೂರ ಅರವತ್ತು ದಿವಾ=ಹಗಲು ರಾತ್ರಿಗೆ ಅಭಿಮಾನಿಗಳಾದ ದೇವತೆಗಳನ್ನು, ಸಂತೈಸುತ್ತ= ಸಮಾಧಾನಪಡಿಸುತ್ತ, ಆದರಿಸಿ-ಪ್ರೀತಿ ಪಡಿಸುತ್ತಾ ಈ ದೇವತೆಗಳ ವಿರೋಧಿ ಗಳಾದ ನಿಷಾದರೂಪಕ=ನಿಷಾದ ಬೇಡರಂತೆ ಭಯಂಕರ ರೂಪಗಳನ್ನು ಧರಿಸಿದ ದೈತ್ಯರನ್ನು ನಿತ್ಯದಲ್ಲಿ, ಸಂಹರಿಪ=ನಾಶ ಮಾಡುತ್ತಾನೆ.

**ಸೂಚನೆ :** ದ್ವಾದಶದಳ ಕಮಲ ಒಂದೇ ಉರುಸ್ಥಾನದಲ್ಲಿದ್ದದ್ದು ದಾಸಾರ್ಯರು ಇದರಲ್ಲೇ ಸಮನ್ವಯಿಸಿ ಪೇಳಿದ್ದಾರೆ. ಕಾರಣ ಉರದಲ್ಲಿಪ್ಪ ೧೨ ದಳದ ಒಂದೇ ಕಮಲದ ಚಿತ್ರ ಇಲ್ಲಿ ಕೊಡಲಾಗಿದೆ.

**ಭಾವಸೂಚನ :** ದ್ವಾದಶೇತಿ ।। ಸುಷುಮ್ನೇತಿ ತತ್ರಭಿನ್ನಾಸುನಾಡಿಷು ।। ೫ ।।

### ಶ್ರೀ ವಾಸದಾಸ ಸಿದ್ಧಾಂತ ಕೌಮುದೀ

"ದ್ವಾದಶ ಇತಿ" ತತೋಽಹೃದಿಕರಂ ನ್ಯಸ್ಯ ವನ್ಹಿ ಬೀಜ ಮನುಸ್ಮರನ್ ತ್ರಿಕೋಣ ಚಕ್ರಗಂ ರಕ್ತಂ ಭಗವಂತಂ ಅನುಸ್ಮರನ್ ದೇಹಸ್ಥಂ ಪಾಪಂ ಪುರುಷಂ ವನ್ಹಿನಾ ನಿರ್ದಹೇತತ್ ಇತಿ ಚ ।। ೫ ।।

### ಕನ್ನಡಾರ್ಥ

ದ್ವಾದಶರವಿ ಮಂಡಲವೆನಿಸಿರುವ ಉದರ ಮಧ್ಯದಲ್ಲಿ ಇರುವ ದ್ವಾದಶ ಕಮಲದಲ್ಲಿ ಶ್ರೀಹರಿಯು ಐದು ರೂಪಗಳಿಂದ ಇದ್ದು ೩೬೦ ದಿನಗಳ ಹಗಲು-ರಾತ್ರಿಗಳ ಅಭಿಮಾನಿ ದೇವತೆಗಳನ್ನು ಸಂತೋಷಪಡಿಸುತ್ತ ವಿರೋಧಿಗಳಾದ ನಿಷಾಧ-ಕಿರಾತರೂಪಿ ದೈತ್ಯರನ್ನು ಸಂಹರಿಸುತ್ತಾನೆ ಎಂದು ಭಾವ. ದ್ವಾದಶ ಕಮಲದಲ್ಲಿ ಭಗವದ್ರೂಪವನ್ನು ಚಿಂತಿಸುತ್ತಿರುವಂತೆ ಹೃದಯದಲ್ಲಿಯೇ ಇರುವ ತ್ರಿಕೋಣ ಮಂಡಲದಲ್ಲಿ ರಕ್ತವರ್ಣ ವಿಶಿಷ್ಟನಾದ ಅಗ್ನಿಬೀಜದಿಂದ ವಾಚ್ಯನಾಗಿರುವ ಅಗ್ನ್ಯಂತರ್ಗತನಾದ ಸಂಕರ್ಷಣ ರೂಪೀ ಹರಿಯನ್ನು ಧ್ಯಾನಿಸಿ ; ಅವನಿಂದ "ಪಾಪ ಪುರುಷನು ಸುಟ್ಟು ಹೋದನು-ಹೋಗಲಿ" ಎಂದು ಭಾವಿಸಬೇಕು. ಹೀಗೆ ಶ್ರೀಮದಾಚಾರ್ಯರು ಹೇಳಿರುತ್ತಾರೆ ।೫।

**ಅವತರಣಿಕಾ:** ಹೃದಯಾಷ್ಟದಳ ಕಮಲಗಳು ಐದು. ಅದರಲ್ಲಿರುವ ಪ್ರಾದೇಶ ನಾಮಕನ ರೂಪವನ್ನು ಸವಿಸ್ತರ ಈ ಪದ್ಯದಿಂದ ವರ್ಣಿಸುತ್ತಾರೆ.

**ಮೂಲ:**

**ಹೃದಯುದೊಳಗಿಹ ದಷ್ಟ ಕಮ ।**
**ಲದರೊಳಗೆ ಪ್ರಾದೇಶ ನಾಮಕ ।**
**ಉದಿತ ಭಾಸ್ಕರನಂತೆ ತೋರ್ಪನು ಬಿಂಬನೆಂದೆನಿಸಿ ॥**
**ಪದುಮ ಚಕ್ರ ಸುಶಂಖ ಸುಗದಾಂ ।**
**ಗದಕಟಕ ಮಕುಟಾಂಗುಲೀಯಕ ।**
**ಪದಕ ಕೌಸುಭಹಾರಗ್ರೈವೇಯಾದಿ ಭೂಷಿತನು ॥ ೬ ॥**

**ಪದ್ಯಾರ್ಥ:** ಹೃದಯುದೊಳಗಿಹ=ಎದೆಯಲ್ಲಿರುವ ಅಷ್ಟದಳ ಕಮಲಗಳು ಐದು. ಇದರೊಳಗೆ ಪ್ರಾದೇಶನಾಮಕನು (ಸಂಕರ್ಷಣ ರೂಪಿ) ಬಿಂಬನೆಂದೆನಿಸಿ ಕಮಲ ಮಧ್ಯ ಭೂಭಾಗಕ್ಕೆ ಆಶ್ರಯನಾಗಿದ್ದಾನೆ. ಈತನೇ ಬಿಂಬನೆಂದೆನಿಸುತ್ತಾನೆ. ಈತನು ಉದಿತ ಭಾಸ್ಕರನಂತೆ=ಉದಯವಾಗುವ ಸೂರ್ಯನ ಪ್ರಕಾಶದಂತೆ ತೋರ್ಪನು=ತೋರುವನು ಹೊಳೆಯುವನು. ಪದ್ಮ ಚಕ್ರ ಶಂಖ ಗದಾ ಆಯುಧಗಳನ್ನು ಧರಿಸಿರುವನು. ಅಂಗದ ಕಟಕ=ಭುಜಕೀರ್ತಿ, ಮುಕುಟ=ಕಿರೀಟ, ಅಂಗುಲೀಯಕ=ಹತ್ತು ಬೆರಳಲ್ಲಿ ೧೦ ಉಂಗುರುಗಳು, ನವರತ್ನ ಪದಕಗಳು, ಕೌಸ್ತುಭಮಣಿ, ವೈಜಯಂತಿ ಮುಕ್ತಿನಮಾಲಾದಿ ಹಾರಗಳು, ಗ್ರೈವೇಯಾದಿ, ಭೂಷಿತನು—ಕಂಠದಲ್ಲಿ ಧರಿಸಿ ಆ ಎಲ್ಲ ಹಾರಗಳಿಗೆ ತನ್ನ (ಕಂಬುತ್ರಿವಳಿ) ಶೋಭಿಪ ಕಂಠದಿಂದ ಭೂಷಿತನು=ಶೋಭೆಯನ್ನು ಕೊಡುವನಲ್ಲದೇ ಹಾರಗಳಿಂದ ಪರಮಾತ್ಮ ಶೋಭಿತನಲ್ಲ, ಇವೆಲ್ಲ ಹಾರಗಳು ಪರಮಾತ್ಮನ ಸ್ವರೂಪ ಭೂತವಾದವು. ಲಕ್ಷ್ಮ್ಯಾತ್ಮಕವಾದವುಗಳು. ಇದನ್ನು ಚೆನ್ನಾಗಿ ಅರಿವುದು. ಇದೇ ದಾಸರ ಹೃದಯ (ಇದು ನಿಂತ ಮೂರ್ತಿ ಎಂದು ಶೌನಕ ಸ್ಮೃತಿ).

ಭಾವಸೂಚನ: ಹೃದಯೇತಿ ಪ್ರಾದೇಶೇತಿ ॥ "ಯ ಸ್ತ್ವೇತಮೇವಂ ಪ್ರಾದೇಶಮಾತ್ರ ಮಿತಿಶ್ರುತೇಃ ॥ ಪದ್ಮೇತಿ ಕುಂಡಲೇ ಮಕರಾಕಾರೇ ವಕ್ಷಶ್ಚೈವ ಸಕೌಸ್ತುಭಂ ॥ ಸಶ್ರೀವತ್ಸಂ ದಕ್ಷಣತಃ ಪೀನ ತುಂಗಮುದಾಹೃತಂ। ಹಾರಗ್ರೈವೇಯ ಸಹಿತಂ ಉಪವೀತಯುತಂ ತಥಾ ॥ ಬಾಹವಶ್ಚ ಸಕೇ

ಯೂರಾ ಕಂಕಣಾಂಗದ ಮುದ್ರಿಕಾಃ ॥ ಸೋತ್ತರೀಯಂಚ ಚಕ್ರಾದ್ಯೈರಾಯುಧೈಶ್ಚ ಸಮನ್ವಿತ ಮಿತಿವಚನಾತ್ ॥ ಗ್ರೈವೇಯಾ ಕಂಠದಲ್ಲಿ ಇಡತಕ್ಕ ಆಭರಣ ವಿಶೇಷ ॥ ೬ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಹೃದಯು" ಇತಿ ಹೃದಯೇ ಸರ್ವತೋವ್ಯಾಪೀ ಪ್ರಾದೇಶಃ ಪುರುಷೋತ್ತಮೇ ॥ ಇತಿ ವಚನಾತ್ ॥

ಸ್ಥೂಲ ಹೃದಯಾಷ್ಟದಳ (೮) ರಕ್ತವರ್ಣ ೫ ಕಮಲದಲ್ಲಿ
ನೀಲವರ್ಣ ನಿಂತ ಸಂಕರ್ಷಣಮೂರ್ತಿ
ಚಕ್ರ–ಹಳದಿ, ಶಂಖ–ಬಿಳುಪು






ಕೆಳ ಬಲಗೈ ಅಭಯ ನೀಲಿ–ಕೆಳ ಎಡಗೈ ಗದಾ ಸ್ವರ್ಣವರ್ಣ
ಕಿರೀಟ ಹಳದಿವರ್ಣ, ಉಟ್ಟದ್ದು–ಗುಲಾಬಿವರ್ಣ, ಹೊದ್ದದ್ದು–ಹಸರು
ಸುಂದರವಾದ ಸಂಕರ್ಷಣ.

## ಕನ್ನಡಾರ್ಥ

"ಹೃದಯ" ಇತಿ || ಹೃದಯದೊಳಗೆ ಅಷ್ಟದಲ ಕಮಲದಲ್ಲಿ ಸೂರ್ಯನಂತೆ ಹೊಳೆಯುವ "ಪ್ರಾದೇಶ" ಎಂದು ಕರೆಯಿಸಿಕೊಳ್ಳುವ ಬಿಂಬರೂಪಿಯು ಆಯುಧಾಭರಣಗಳಿಂದ ಭೂಷಿತನಾಗಿರುವನು. "ಪುರುಷೋತ್ತಮನಾದ ಬಿಂಬರೂಪಿ ಶ್ರೀಹರಿಯು ಪ್ರಾದೇಶನಾಮಕನಾಗಿ ಪ್ರಾದೇಶ ಪರಿಮಿತ ಆಕಾರವುಳ್ಳವನಾಗಿ ಹೃದಯದಲ್ಲಿ ಸರ್ವತಃ ವ್ಯಾಪಿಸಿರುತ್ತಾನೆ" ಹೀಗೆಂದು ಭಾಗವತಾದಿ ವಚನಗಳಿರುತ್ತವೆ || ೬ ||

ಅವತರಣಿಕಾ : ಇನ್ನು ಉರದ ಮೇಲೆ ಕಂಠದಲ್ಲಿ ಇರುವ ೫ ಪದುಮಗಳು ಎರಡೇ ದಳಗಳು ಉಳ್ಳವು. ಅಲ್ಲಿಪ್ಪ ಭಾರತೀಪತಿ ಮುಖ್ಯ ಪ್ರಾಣ ಹಂಸ ಮಂತ್ರ ಜಪಕ್ರಮಾ. ಇದೇ ಕಂಠದಲ್ಲಿ ತೈಜಸನಿರುವನು. ಮುಂದೆ ಹೇಳುತ್ತಾರೆ.

ಮೂಲ :

**ದ್ವಿದಳ ಪದ್ಮವು ಶೋಭಿಪ್ಪುದು ಕಂ |**
**ಠದಲಿ ಮುಖ್ಯ ಪ್ರಾಣ ತನ್ನಯ |**
**ಸುದತಿಯಿಂದೊಡಗೂಡಿ ಹಂಸೋಪಾಸನೆಯ ಮಾಳ್ಪ ||**
**ಉದಕ ಅನ್ನಾದಿಗಳಿಗವಕಾ |**
**ಶದನು ತಾನಾಗಿದ್ದು ದಾನಾ |**
**ಭಿದನು ಶಬ್ದವ ನುಡಿದು ನುಡಿಸುವ ಸರ್ವಜೀವರೊಳು || ೭ ||**

**ಪದ್ಯಾರ್ಥ:** ಕಂಠದಲಿ = ಕುತ್ತಿಗೆಯ ಭಾಗ ಕೊರಳಲ್ಲಿ. ಸುಷುಮ್ನಾನಾಡಿಗತ ಕಮಲಗಳು ಐದು. ಇವು ಎರಡೇ ದಳವುಳ್ಳವುಗಳು (ಇದರಲ್ಲಿ ಪ್ರಭೇದವಾಗಿ ಹದಿನಾರು ದಳವೆಂದು ಕೆಲವರ ಅಭಿಪ್ರಾಯ). ಈ ಐದು ಕಮಲಗಳಲ್ಲಿ ಭಾರತೀರಮಣ ಮುಖ್ಯ ಪ್ರಾಣದೇವರು. ತನ್ನ ಸುದತಿ-ಹೆಂಡತಿಯಾದ ಭಾರತೀದೇವಿಯರಿಂದ ಒಡಗೂಡಿ (ಉದಾನನಾಮಕ) ಶ್ವಾಸ ರೂಪವಾದ ಹಂಸ ಮಂತ್ರಗಳನ್ನು ಸಕಲ ಜೀವರಲ್ಲಿ ಮಾಡುತ್ತಾನೆ. (ಅಂದರೆ ಬ್ರಹ್ಮದೇವರ ಕಂಠದಲ್ಲಿದ್ದು ಈ ಕಲ್ಪದಲ್ಲಿ ಉದಾನ ನಾಮಕ ವಾಯು ಹಂಸ ಮಂತ್ರ ಹಂಸ ನಾಮಕನಾಜ್ಞೆಯಿಂದ ಮಾಡಿಸುವನೆಂದು ಶ್ರೀ ಗುರು ವಿಜಯದಾಸರ ಸುಳಾದಿ | ಮಟ್ಟತಾಳ | ಮಿನುಗುವ ಕಂಠದಲಿ ಎರಡು ದಳದ ಕಮಲ | ಕರ್ಣಿಕಿ ಮಧ್ಯದಲಿ ಸತಿ ಸಹಿತದಲಿದ್ದು | **ವನಜಾ**

ಸನವಿಡಿದು ತೃಣಜೀವರ್ಪ್ಯತನಕ ತನುವಿನೊಳಗೆ ವಿಹಿತವಾದ ಶಬ್ದಗಳನ್ನು ನೀನೆ ಮಾಡಿ ।"* ಎಂಬ ಉಕ್ತಿ ಹೀಗೆ ಸಕಲ ಜೀವರ ಕಂಠದಲ್ಲಿದ್ದು ಹಂಸ ಮಂತ್ರ ಮಾಡುತ್ತಾನಲ್ಲದೇ, ಉದಕ ಅನ್ನಾದಿಗಳಿಗೆ ಅವಕಾಶದನು

ಕಂಠದಲ್ಲಿ ೫ ನಾಡಿಯಲ್ಲಿ ೫ ದ್ವಿದಳ್ಯಕಮಲ
ತೈಜಸನಾಮಕ ಪರಮಾತ್ಮ
ಅರುಣ ವರ್ಣ ವಿಶ್ವನಂತೆ ೧೬ ಪುರುಷ ಮುಖ



ಮಧ್ಯೆ ಗಜಮುಖ (೧) ೧೯ ಮುಖ.
ಚತುರ್ಭುಜ, ಚಕ್ರ, ಶಂಖ, ವರ, ಅಭಯ
ಅರುಣ ವರ್ಣ ಕಿರೀಟ ಸ್ವರ್ಣವರ್ಣ
ಉಟ್ಟದ್ದು ಚಾಕಲೇಟ್, ಹೊದ್ದದ್ದು ಹಸರು ವರ್ಣ

---

* ಗುರು ವಿಜಯವಿಠಲರು ಇಂದ್ರಾಂಶರು, ಅವರು ಪ್ರಾಣ ಮಹಿಮೆ ಅರಿತವರು ಪೇಳಿದ ವಚನ ಭಗವಂತನ ಅನುಗ್ರಹದಿಂದ ಹಂಸನಾಮಕ ಅಧೀನರಾಗಿ ಬ್ರಹ್ಮದೇವರ ಕಂಠದಲ್ಲಿರುವರು. ಸು. ಪುಟ ॥ ೧೨ ॥

ತಾನಾಗಿ=ಊಟಮಾಡುವ ಅನ್ನ, ಕುಡಿಯುವ ನೀರಿಗೆ ಕಂಠದ್ವಾರದಿಂದಲೇ ಉದರದಲ್ಲಿ ಹೋಗಲಿಕ್ಕೆ ಅವಕಾಶವನ್ನು ಕೊಡುವನಾಗಿಯೂ, ಉದಾನಾಭಿದದು=ಈ ಉದಾನ ನಾಮಕ ವಾಯುದೇವರು, ಈ ಕಂಠದಿಂದಲೇ ಸಕಲ ಶಬ್ದಗಳನ್ನು ಸರ್ವಜೀವರೊಳಿದ್ದು ನುಡಿಸುವನೆಂದು ವಾಯುದೇವರ ಮಹಾ ಮಹಿಮೆ ವರ್ಣಿಸಿದ ದಾಸರಡಿಗಳು ಶಿರದಲ್ಲಿರಲಿ.

**ಭಾವಸೂಚನ :** ದ್ವಿದಳೇತಿ । ತದುಕ್ತಂ । ಮೂಲೇ ಚನಾಭಾ ಹೃದಯೇಂದ್ರ ಯೋನಿ ಭ್ರೂ ಮಧ್ಯಕೇ ದ್ವಿಷಡಂತಕೇಷು । ಚತುಃಷಡಷ್ಟ ದ್ವಿಚತುರ್ದ್ವಿಷಟಕ್‌ದಳೇಷು ಪದ್ಮೇಷು ಸಿತಾರುಣೇಷು । ಪಂಚಾತ್ಮಕೋನ್ವೈ ಭಗವಾನ್ ಸದೈವ । ಧ್ಯೇಯೋಹೃದಂತಾನ್ಯರುಣಾನಿತಾ ನೀತಿ । ೭ !

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ದ್ವಿದಲ" ಇತಿ । "ಉದಾನಃ ಕಂಠದೇಶಗಃ" ಇತ್ಯುಕ್ತೇಃ । ೭ ।

## ಕನ್ನಡಾರ್ಥ

ಕಂಠದಲ್ಲಿ ದ್ವಿದಲ (ಎರಡು ದಲವುಳ್ಳ) ಪದ್ಮವಿರುತ್ತದೆ. ಅದರಲ್ಲಿ ಮುಖ್ಯ ಪ್ರಾಣನು. ತನ್ನ ಸತಿಯಿಂದ ಸಹಿತನಾಗಿ ಉದಾನ ನಾಮಕನಾಗಿ ಇದ್ದು ಶ್ವಾಸರೂಪ ಹಂಸ ಮಂತ್ರಗಳನ್ನು ಜಪಿಸುತ್ತಾನೆ. ಅವನಲ್ಲಿ ಹರಿಯು ಉದಾನ ನಾಮಕನಾಗಿರುತ್ತ ಭೋಜನ ವಸ್ತುಗಳಿಗೆ ಒಳಗೆ ಹೋಗಲು ಅವಕಾಶವನ್ನೀಯುತ್ತ, ಶಬ್ದ ಪ್ರಯೋಗಗಳನ್ನು ನಡೆಸುತ್ತ ಇರುವನು. "ಉದಾನನು ಕಂಠದಲ್ಲಿ ಇರುತ್ತಾನೆ" ಎಂದು ಹೇಳುವ ಪುರಾಣ ವಚನವು ಇದಕ್ಕೆ ಆಧಾರವಾಗಿರುತ್ತದೆ.

**ಅವತರಣಿಕಾ :** ಈ ಪದ್ಯದಿಂದ ನಾಶಿಕಾ, ನೇತ್ರಗಳಲ್ಲಿಪ್ಪ ಹರಿಯ ಅನೇಕ ಕಾರ್ಯರೂಪಗಳನ್ನೂ ಅನೇಕ ಉಪನಿಷತ್ ಆಧಾರಗಳೊಂದಿಗೆ ಮಾನಸ ಸ್ಮೃತಿಯಲ್ಲಿ ಪೇಳಿದಂತೆ ಆಯಾ ಭಗವದ್ರೂಪಗಳ ಕಾರ್ಯ ವಿವರಿಸುತ್ತಾರೆ.

**ಮೂಲ :**

**ನಾಸಿಕದಿ ನಾ ಸತ್ಯ ದಸ್ರರು ।**
**ಶ್ವಾಸಮಾನೀ ಪ್ರಾಣ ಭಾರತಿ ।**
**ಹಂಸ ಧನ್ವಂತ್ರಿಗಳು ಅಲ್ಲಲ್ಲಿಪ್ಪರವರೊಳಗೆ ॥**

**ಭೇಶ ಭಾಸ್ಕರ ರಕ್ಷಿಯುುಗಳ ಕ ।**
**ಧೀಶರೆನಿಪರು ಅವರೊಳಗೆ ಲ ।**
**ಕ್ಷ್ಮೀಶ ದಧಿವಾಮನರು ನೀಯಾಮಿಸುತಲಿರುತಿಹರು ॥ ೮ ॥**

**ಪದ್ಯಾರ್ಥ :** ನಾಸಿಕದಿ=ಎರಡೂ ಹೊಳ್ಳೆಯುಳ್ಳ ಮೂಗಿನಲ್ಲಿ, ೧ ನಾಸತ್ಯ, ೨ ದಸ್ರರೆಂಬ ನಾಮಉಳ್ಳ ಇಬ್ಬರು ಅಶ್ವಿನೀ ದೇವತೆಗಳು ಶ್ವಾಸಕ್ಕೆ ಅಮುಖ್ಯಾಭಿಮಾನಿಗಳು. ಭಾರತಿ ಪ್ರಾಣದೇವರು. ಬಲಶ್ವಾಸಕ್ಕೆ ಸೂರ್ಯ ಭಾಸ್ಕರನಲ್ಲಿ ಪ್ರಾಣ, ಎಡಶ್ವಾಸದಲ್ಲಿ ಚಂದ್ರ ಇವರಲ್ಲಿ ಭಾರತಿ ದೇವೇರು (ಊರ್ಧ್ವ ಅಧೋಶ್ವಾಸಗಳಿಗೆ) ಮುಖ್ಯಾಭಿಮಾನಿ ಪ್ರಾಣದೇವರು ತತ್ಪತ್ನಿ ಭಾರತೀ ದೇವಿಯರಲ್ಲಿ ಹಂಸನಾಮಕ ಪರಮಾತ್ಮ ಧನ್ವಂತರಿನಾಮಕ ಹರಿಯು, (ಮತ್ತೂ ಮಾನಸ ಸ್ಮೃತಿಯ ಆಜ್ಞೆಯಂತೆ ಸಂಧಿ ಸಾರದಲ್ಲಿ ಪೇಳಿದ ಇನ್ನೂ ಕೆಲವು ಹರಿಯ ರೂಪಗಳು) ಇರುವವನ್ನು ಚಿಂತಿಸಬೇಕು ಅಕ್ಷಿಯುುಗಳಕೆ=ಎರಡೂ ಕಣ್ಣುಗಳಿಗೆ, ಭೇಶ ಭಾಸ್ಕರ=ಚಂದ್ರ ಸೂರ್ಯರು.



ಬಲಗಣ್ಣಿನಲ್ಲಿ ಇಂದ್ರಾಯನಮಃ ಸೂರ್ಯ-ವಿಶ್ವವಿಷ್ಣು ಮೊದಲಾಗಿ ೯ಮೂರ್ತಿಗಳು

ಬಲಗಣ್ಣಿಗೆ ಸೂರ್ಯ, ಎಡಗಣ್ಣಿನಲ್ಲಿ ಚಂದ್ರರು ಇವರಲ್ಲಿ ಸೂರ್ಯನಲ್ಲಿ, ಲಕ್ಷ್ಮೀಶ=ನಾರಾಯಣ. ಚಂದ್ರನಲ್ಲಿ ದಧಿ ವಾಮನದೇವರು ನಿಯಾಮಿಸುತ್ತ ಇರುವರೆಂದು ಚಿಂತಿಸಬೇಕು. ಈ ಪದ್ಯ ಆರಂಭಿಸಿ ೧೨ ಪದ್ಯ ಪೂರ್ತಿ ನೇತ್ರಗಳಲ್ಲಿಪ್ಪ ಎಲ್ಲ ಅಭಿಮಾನಿಗಳು ಭಗವದ್ರೂಪಗಳನ್ನು ವರ್ಣಿಸಿದ್ದಾರೆ. ದಾಸರ ಗುರುಗಳಾದ ಶ್ರೀ ಗೋಪಾಲದಾಸಾರ್ಯರು ಬರೆದ ಚಿತ್ರದಲ್ಲಿ ನೋಡಬಹುದು. ಎರಡೂ ನೇತ್ರಗಳ ಚಿತ್ರಗಳನ್ನು ಕೊಡಲಾಗಿದೆ. ಈ ವಿಷಯ ಪದ್ಯ ೮ ರಿಂದ ೪ ಪದ್ಯ ೮-೯-೧೦-೧೧ ಪದ್ಯ ಪೂರ್ತಿ ವಿಷಯ ಚಿತ್ರಗಳಿವೆ.

**ಭಾವಸೂಚನ : ನಾಸಿಕೇತಿ ॥ ೮ ॥**

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

**"ನಾಸಿಕದಿ" ಇತಿ ॥ ನಾಸತ್ಯ-ದಸ್ರೌ ತನ್ನಾಮಕೌ । ೮ ।**

**ಕನ್ನಡಾರ್ಥ**

ನಾಸಿಕೆಯಲ್ಲಿ ಅಶ್ವಿನೀ ದೇವತೆಗಳಿರುತ್ತಾರೆ. ಅವರಿಗೆ ದಸ್ರರೆಂದು ಹೆಸರು. ಅವರಲ್ಲಿ ಶ್ವಾಸಾಭಿಮಾನಿ ಪ್ರಾಣ-ಭಾರತೀದೇವಿಯರು ಇರುತ್ತಾರೆ. ಅಲ್ಲಿ ಹಂಸ-ಧನ್ವಂತರಿ ರೂಪಗಳಿರುತ್ತವೆ. ಎರಡೂ ಕಣ್ಣುಗಳಲ್ಲಿ




ಎಡಗಣ್ಣಿನಲ್ಲಿ ಈಶಾನಾಯನಮಃ ಚಂದ್ರ-ಭಾಮಿನಿ ರೂಪ

ಚಂದ್ರಸೂರ್ಯರು ಅಧಿಪತಿಗಳು. ಅವರಲ್ಲಿ ಲಕ್ಷ್ಮೀಪತಿ ಹಾಗೂ ದಧಿವಾಮನವೆಂಬ ಭಗವದ್ರೂಪಗಳು ನಿಯಾಮಕವಾಗಿರುತ್ತವೆ. ।೮।

**ಅವತರಣಿಕಾ:** ಹಿಂದಿನ ಪದ್ಯದಲ್ಲಿ ನೇತ್ರಗಳಲ್ಲಿ ರೂಪಗಳನ್ನು ಹೇಳಿ. ಈ ಪದ್ಯದಿಂದ ಆರಂಭಿಸಿ ೯-೧೦-೧೧ ಮೂರು ಪದ್ಯಗಳಿಂದ ಬೃಹದಾರಣ್ಯ ಶಿಶುಬ್ರಾಹ್ಮಣದಲ್ಲಿ ವರ್ಣಿಸಿದಂತೆ ವಿಶ್ವನಾಮಕ ಹರಿಯ ರೂಪ, ಲಕ್ಷ್ಮೀ ವಾಯು ರೂಪ ತತ್ಕಾರ್ಯ, ರುದ್ರಾದಿ ಸಪ್ತ ದೇವತೆಗಳು ನೇತ್ರ ಉಪಾಂಗಗಳಲ್ಲಿದ್ದು ಮಾಡಿಸುವ ತತ್ಕಾರ್ಯ, ಪ್ರಾಣಹರಿ ಈರ್ವರ ಸೇವೆಗಳನ್ನು ವಿವರಿಸುತ್ತಾರೆ.

**ಮೂಲ:**

**ಸ್ತಂಭರೂಪದಲಿಪ್ಪ ದಕ್ಷಿಣ ।**
**ಅಂಬಕದಿ ಪ್ರದ್ಯುಮ್ನ ಗುಣ ರೂ ।**
**ಪಂಭ್ರಣಿಯು ತಾನಾಗಿ ಇಪ್ಪಳು ವತ್ಸ ರೂಪದಲಿ ॥**
**ಪೊಂಬಸಿ (ಸು)ರ ಪದಯೋಗ್ಯ ಪವನ ತ್ರಿ ।**
**ಯಂಬಕಾದಿ ಸಮಸ್ತ ದಿವಿಜ ಕ ।**
**ದಂಬ ಸೇವಿತನಾಗಿ ಸರ್ವ ಪದಾರ್ಥಗಳ ತೋರ್ಪ ॥ ೯ ॥**

**ಪದ್ಯಾರ್ಥ:** ಬೃಹದಾರಣ್ಯ ಉಪನಿಷತ್ತಿನಲ್ಲಿ ವಿಶದವಾಗಿ ವರ್ಣಿಸಿದಂತೆ, ಸಂಧಿಯ ಸಾರದಲ್ಲಿ ಕೊಟ್ಟಿದೆ ನೋಡುವದು. ಸ್ತಂಭ ರೂಪದಲ್ಲಿಪ್ಪ ದಕ್ಷಿಣ ಅಂಬಕದಿ=ಬಲನೇತ್ರದಲ್ಲಿ ಹರಿಯು ಕಂಭ ರೂಪದಂತೆ ಸಕಲರಿಗೆ ಆಧಾರನಾಗಿಪ್ಪನು. ಪ್ರದ್ಯುಮ್ನನೆಂತ ಈತನ ಹೆಸರು. ಗುಣರೂಪಾಂಭ್ರಣಿಯು ತಾನಾಗಿ ಇಪ್ಪಳು=ಹಗ್ಗದಾಮರೂಪವಾಗಿ ಆಂಭ್ರಣೀ=ಶ್ರೀಲಕ್ಷ್ಮೀದೇವಿಯು, ತಾನು ಆಗಿರುವಳು, (ಅಂದರೆ ವಿಷ್ಣು ಮೂಲಾಧಾರವಾದ ಕಂಭ, ತನ್ನ ವಶದಲ್ಲಿ ಸರ್ವರನ್ನೂ ಇರಿಸಲು, ಚಿತ್ ಪ್ರಕೃತಿಯಾದ ಶ್ರೀಲಕ್ಷ್ಮೀದೇವಿಯರ ದ್ವಾರಾ ಸಕಲ ಜೀವರನ್ನೂ ಕಟ್ಟಿ ತನ್ನ ವಶದಲ್ಲಿರಿಸುವನು.) ವತ್ಸ ರೂಪದಲ್ಲಿ=ಕರುವು, ಆಕಳ ಕರುವಿನ ರೂಪದಿಂದಲಿರುವ ವಾಯುದೇವರು ಗೋವತ್ಸ ರೂಪದಿಂದ ಇದ್ದು, ಗೋವಿಂದ ಮುಕ್ತಿಪ್ರದಾತೃವಾದ ಗೋ–ಆಕಳ ಹಾಲನ್ನು ತಾನುಂಡು, ಸರ್ವ ಜೀವರಿಗೆ ಜ್ಞಾನಾಯು ರೂಪ ಕ್ಷೀರವನ್ನು ಕೊಡುವನು. ಈತನೆ ಮುಂದಿನ ಕಲ್ಪದಲ್ಲಿ, ಪೊಂಬಸಿರ ಪದಯೋಗ್ಯ=ಬಂಗಾರದೊಡಲನಾದ ಬ್ರಹ್ಮದೇವರ ಪದಯೋಗ್ಯನು. ಈ

ಪವನನು ವಾಯುವು ಗೋವತ್ಸ ರೂಪದಿಂದ ಮತ್ತು ವಿಶ್ವನೂ ತ್ರಿಯಂಬಕಾದಿ ಸಮಸ್ತ ದಿವಿಜಿ ಕದಂಬ ಸೇವಿತನಾಗಿ=ರುದ್ರಾದಿ ಸಮಸ್ತ ದೇವತೆಗಳ ಸಮೂಹದಿಂದ ಸೇವಿತನಾಗಿ, ಜಾಗ್ರತಾವಸ್ಥಾ ಪ್ರೇರಕ ನಿಯಾಮಕನಾದ ವಿಶ್ವನು, ಸರ್ವ ಪದಾರ್ಥಗಳ ತೋರ್ಪ=ಬಾಹಿರದಲ್ಲಿದ್ದ ಸಕಲ ವಸ್ತುಗಳ ನಿಜ ಜ್ಞಾನವನ್ನು ಮಾಡಿ ತೋರಿಸುವನು.

**ಭಾವಸೂಚನ:** ಸ್ತಂಭೇತಿ । ಪೊಂಬಸರು ಬ್ರಹ್ಮಾ । ತದುಕ್ತಂ ಪ್ರಾಕೃತಾಧ್ಯಾತ್ಮೇ । ದಕ್ಷಿಣಾಕ್ಷಿಯಲ್ಲಿ ಪ್ರದ್ಯುಮ್ನನು ಸ್ತಂಭರೂಪನಾಗಿಯೇ ಇದ್ದಾನೆ. ರಮಾ ದಾಮ ರೂಪಳು, ವಾಯು ವತ್ಸ ರೂಪನು, ಏವಂ ಭೂತ (ಈ ಪ್ರಕಾರದಿಂದಿರುವ) ವಾಯುದೇವರನ್ನ ದೇವತೆಗಳು ಉಪಾಸನಾ ಮಾಡುತ್ತಾರೆ. । ೯ ।

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಸ್ತಂಭರೂಪದಲಿ" ಇತಿ ॥ ಪ್ರಾಣೋ ನಾರಾಯಣಃ ಸ್ಥೂಣಾ ॥ (ಸ್ಥೂಣಾ) ॥ ವಾಯುಃ ಗೋವತ್ಸರೂಪೇಣ ಸರ್ವಪ್ರಾಣಿಷು ಸಂಸ್ಥಿತಃ ॥ ಅನ್ನಂ ದಾಮಾತ್ಮಕಂ ತಸ್ಯ ಸ್ಥೂಣಾ ತು ಭಗವಾನ್ ಹರಿಃ ॥ ಧ್ಯಾಯತ್ಯೇವಂ ಹಿ ಯೋ ವಾಯುಂ ಶ್ರೋತ್ರಾದೀನ್ ಮನಸಾ ಸಹ ॥ ಬುದ್ಧಿಂ ಚ ಸಪ್ತಶತ್ರೂಂಶ್ಚ (ನ್ ಚ) ವಿಷಯೇಷ್ವಭಿಧಾವತಃ ॥ ಅಸುರಾನ್ ಸ ನಿರುಧ್ಯೈವ ವೇತ್ತಿ ನಾರಾಯಣಂ ಪರಮ್ ॥ ದಕ್ಷಿಣಾಕ್ಷಿಸ್ಥಿತಂ ವಾಯುಂ ಸಪ್ತ ದೇವಾಃ ಉಪಾಸತೇ ॥ ಅಕ್ಷೀಣ ಜ್ಞಾನ ಮನಸಃ ಸದಾಶಿವ ಪುರಸ್ಸರಾಃ ॥ ಉಪಾಸ್ಯಮಾನಂ ತೈಃ ದೇವೈಃ ಮೋಕ್ಷಾರ್ಥಂ ವಾಯುಮೀಶ್ವರಮ್ ॥ ಸ್ಥೂಣಯಾ ವಿಷ್ಣುನಾ ಸಾರ್ಥಂ ಯೋ ವಿದ್ಯಾತ್ ಸೋನ್ನಮಶ್ನುತೇ ॥" ಇತ್ಯುಕ್ತಂ ಬೃಹದ್ಭಾಷ್ಯೇ ॥ ಛಾಂದೋಗ್ಯೇ ಚ "ಧರ್ಮಜ್ಞಾನಾದಿರೂಪೇಣ ವಿಷ್ಣೋಃ ಬಾಹು ಚತುಷ್ಟಯಾತ್ ॥ ಜಾತಂ ವಾಯುಂ ವಿದಿತ್ವೈವಂ ಪುತ್ರೋ ಭೂತ್ವಾ ನ ರೋದಿತಿ ॥ ನ ಜಾಯತೇ ನ ಮ್ರಿಯತೇ ಮುಕ್ತೋ ಭೂತ್ವಾ ಸುಖೀ ಭವೇತ್ ॥ ವಾಯುಂ ಹರೇಃ ಸುತಂ ಜ್ಞಾತ್ವಾ ನಾಹಂ ಪುತ್ರತಯಾ ರುದಮ್ ॥ ಹರೇಃ ಪ್ರಸಾದ ಸಾಮರ್ಥ್ಯಾತ್ ಅಜರಾಃ (ಚ) ಚಾಮರೋಸ್ಮ್ಯಹಮ್ ॥ ಅನಾದಿಕಾಲ ಸಂಬಂಧಾತ್ ಇತ್ಯುವಾಚ ಪುರಾ ರಮಾ" ॥ ಇತಿ ॥ ೯ ॥

## ಕನ್ನಡಾರ್ಥ

ಬೃಹದಾರಣ್ಯಕ ಉಪನಿಷತ್ತಿನಲ್ಲಿ ಶಿಶು ಬ್ರಾಹ್ಮಣದಲ್ಲಿ ಈ ವಿದ್ಯೆಯು ಹೇಳಲ್ಪಟ್ಟಿರುತ್ತದೆ. ಸರ್ವ ಪ್ರಾಣಿಗಳಲ್ಲಿ ಗೋವತ್ಸ (ಆಕಳ ಕರು) ರೂಪದಿಂದ ವಾಯುದೇವರು ಇರುತ್ತಾರೆ. ಈ ವಾಯುದೇವರ ಗೋವತ್ಸರೂಪಕ್ಕೆ ಪ್ರಾಣಪತಿ ಪರಮಾತ್ಮನು ಕಟ್ಟುವ ಸ್ತಂಭ-ಗೂಟನಾಗಿರುತ್ತಾನೆ. ಅನ್ನಾಭಿಮಾನಿಯಾದ ಶ್ರೀ ಲಕ್ಷ್ಮೀದೇವಿಯು ದಾಮ-ಹಗ್ಗರೂಪಳು. ಹೀಗೆ ಪರಮಾತ್ಮನೆಂಬ ಗೂಟದಲ್ಲಿ ಶ್ರೀ ಲಕ್ಷ್ಮೀದೇವಿಯೆಂಬ ಹಗ್ಗದಿಂದ ಗೋವತ್ಸರೂಪಿಯಾದ ವಾಯುದೇವನು ಕಟ್ಟಲ್ಪಟ್ಟಿರುತ್ತಾನೆ ಎಂದು ತಿಳಿದು ಉಪಾಸನೆಯನ್ನು ಮಾಡುವವನಿಗೆ ವಿಷಯಗಳಲ್ಲಿಯೇ ಧಾವಿಸುವ ಸಪ್ತ ಶತ್ರುಗಳಾದ ಇಂದ್ರಿಯಗಳನ್ನು ಪಂಚ ಜ್ಞಾನೇಂದ್ರಿಯ, ಮನಸ್ಸು, ಬುದ್ಧಿ ಇವುಗಳನ್ನು ವಶಪಡಿಸಿಕೊಂಡು (ಈ ಇಂದ್ರಿಯಾಭಿಮಾನಿ) ಅಸುರರನ್ನು ನಿಗ್ರಹಿಸಿ ಸರ್ವೋತ್ತಮನಾದ ಶ್ರೀಮನ್ನಾರಾಯಣನನ್ನು ತಿಳಿದುಕೊಳ್ಳುತ್ತಾನೆ. ಹೀಗೆ ಬಲಗಣ್ಣಿನಲ್ಲಿದ್ದ ವಾಯುದೇವನನ್ನು ಕ್ಷೀಣವಾಗದ (ಬಹಳವಾದ) ಜ್ಞಾನ ಹಾಗೂ ಮನಸ್ಸುಗಳುಳ್ಳ ರುದ್ರ ಮುಂತಾದ ದೇವತೆಗಳು ಉಪಾಸಿಸುತ್ತಾರೆ. ಹೀಗೆ ಬಲಗಣ್ಣಿನಲ್ಲಿ ಗೂಟರೂಪದಿಂದಿರುವ ಪ್ರದ್ಯುಮ್ನರೂಪಿ ಪರಮಾತ್ಮನಲ್ಲಿ ಶ್ರೀ ರಮಾದೇವೀ ರೂಪ ಹಗ್ಗದಿಂದ ಬದ್ಧನಾದ ವಾಯುದೇವನನ್ನು ರುದ್ರ ಮುಂತಾದ ಸಪ್ತ ದೇವತೆಗಳು ಮೋಕ್ಷಕ್ಕೆ ಅಲ್ಲಿ ಆನಂದೋದ್ರೇಕಕ್ಕೋಸ್ಕರವಾಗಿಯೂ ಉಪಾಸಿಸುತ್ತಾರೆ" ಎಂದು ತಿಳಿದು ಭಜಿಸುವವನು ಸವೆಯಲಾರದ ಭೋಗವನ್ನು ಹೊಂದುವನು" ಎಂದು ಬೃಹದಾರಣ್ಯಕ ಭಾಷ್ಯದ ಆಶಯವಿರುತ್ತದೆ.

ಛಾಂದೋಗ್ಯೋಪನಿಷದ್ ಭಾಷ್ಯದಲ್ಲಿ "ಧರ್ಮ-ಜ್ಞಾನ-ವೈರಾಗ್ಯ-ಐಶ್ವರ್ಯಗಳೆಂಬ ನಾಲ್ಕು ಬಾಹುಗಳಿಂದ ಉತ್ಪನ್ನನಾದವನು-ವಾಯುದೇವನು" ಎಂದು ತಿಳಿದು ವಾಯುದೇವನನ್ನು ಉಪಾಸಿಸತಕ್ಕವನು ಪುತ್ರನಾಗಿ ರೋದಿಸುವದಿಲ್ಲ ಅಂದರೆ ಮುಕ್ತನಾಗುತ್ತಾನೆ. ಜನನ ಮರಣರೂಪ ಸಂಸಾರದಿಂದ ಮುಕ್ತನಾಗಿ ಸುಖಿಯಾಗುತ್ತಾನೆ. ವಾಯುವು ಹೀಗೆ ಹರಿಯ ಸುತನೆಂದು ವಾಯು ಜನಕನೆಂಬ ಹರಿಯ ಜ್ಞಾನವು ನಿತ್ಯದಲ್ಲಿಯೂ ಅನಾದಿ ಕಾಲದಿಂದ ನನಗೆ ಇರುವದರಿಂದ-ನಾನು ನಿತ್ಯಮುಕ್ತಳಾಗಿರು

ತ್ತೇನೆ. ಜರಾಮರಣರಹಿತಳಾಗಿರುತ್ತೇನೆ ಎಂದು ಶ್ರೀ ರಮಾದೇವಿಯು ಪೂರ್ವದಲ್ಲಿ ಹೇಳಿರುತ್ತಾಳೆ" ಎಂಬುದಾಗಿ ಶ್ರೀಮದಾಚಾರ್ಯರ ನುಡಿ ಇರುತ್ತದೆ. ಹೀಗೆ ವಾಯುದೇವರಿಗೆ ಗೋವತ್ಸ ರೂಪತ್ವವನ್ನೂ ದಿಗ್ವತ್ಸ ಭಗವತ್ಪುತ್ರತ್ವವನ್ನೂ ತಿಳಿಯಬೇಕು ಎಂಬುದಾಗಿ ವತ್ಸ ಪದದ ಧ್ವನಿತಾರ್ಥ ॥ ೯ ॥

**ಅವತರಣಿಕಾ :** ಕಣ್ಣಿನಲ್ಲಿರುವ ಕೆಂಪುರೇಖೆ ಬಿಳಿಗುಡ್ಡೆ, ಕರಿಗುಡ್ಡೆ ಮೇಲಿರುವ ಕನೀಕಾ ಪುತ್ಥಳಿ, ಕಣ್ಣಿನಲ್ಲಿಯ ನೀರುಭಾಗ, ಕೆಳರೆಪ್ಪೆ ಮೇಲುರೆಪ್ಪೆಯಲ್ಲಿರುವ ದೇವತೆಗಳು ಜ್ಞಾನಪ್ರದನಾದ ವಾಯುವನ್ನು ಸೇವಿಸಲು, ಜ್ಞಾನಿ=ಋಷಿಗಳ ನಾಮದಿಂದ ಇರುವರೆಂದು ಈ ಪದ್ಯದಿಂದ ವಿಶದೀಕರಿಸುತ್ತಾರೆ.

**ಮೂಲ :**

**ನೇತ್ರಗಳಲಿ ವಸಿಷ್ಠ ವಿಶ್ವಾ ।**
**ಮಿತ್ರ ಭಾರದ್ವಾಜ ಗೌತಮ ।**
**ಅತ್ರಿ ಆ ಜಮದಗ್ನಿ ನಾಮಗಳಿಂದ ಕರೆಸುತಲಿ ॥**
**ಪತ್ರತಾಪಕ ಶಕ್ರ ಸೂರ್ಯ ಧ ।**
**ರಿತ್ರಿ ಪರ್ಜನ್ಯಾದಿಸುರರು ಜ ।**
**ಗತ್ರಯೇಶನ ಭಜಿಪರನುದಿನ ಪರಮ ಭಕುತಿಯಲಿ ॥ ೧೦ ॥**

**ಪದ್ಯಾರ್ಥ:** ನೇತ್ರಗಳಲಿ ಕಣ್ಣಿನಲ್ಲಿ ವಶಿಷ್ಠಾದಿ ಋಷಿಗಳು ಇರುವ ಬಗೆ :

ಕಣ್ಣಿನ ಅವಯವ ಗೌತಮಾದಿ ಋಷಿಗಳು ದೇವತೆ ನಾಮ.

೧. ಕೆಂಪುರೇಖಾದಲ್ಲಿ–ಗೌತಮಾಖ್ಯ–ರುದ್ರದೇವರು.
೨. ಬಿಳೆಗುಡ್ಡೆಯಲ್ಲಿ–ವಸಿಷ್ಠಾಖ್ಯ–ಇಂದ್ರದೇವರು.
೩. ಕಣ್ಣಿನ ಕನೀಕಾ–ವಿಶ್ವಾಮಿತ್ರನಾಮಕ–ಸೂರ್ಯನು.
೪. ಕರೆಗುಡ್ಡೆಯಲ್ಲಿ–ಜಮದಗ್ನಿನಾಮಕ–ಅಗ್ನಿಯು.
೫. ಕಣ್ಣಿನ ನೀರಿನ ಭಾಗ–ಭರದ್ವಾಜಾಖ್ಯ–ವರುಣನು.
೬. ಕೆಳಗಿನ ರೆಪ್ಪೆಯಲ್ಲಿ-ಕಶ್ಯಪನಾಮ–ಧರಾದೇವಿ.
೭. ಮೇಲಿನ ರೆಪ್ಪೆಯಲ್ಲಿ—ಅತ್ರಿನಾಮಕಳಾಗಿ-ಭಾರತಿದೇವಿಯರು

ಇರುವರು. ಈ ದೇವತೆಗಳು ಋಷಿ ನಾಮದಿಂದ ಕರೆಸುತ್ತ ಜಗತ್ರಯೇಶನ ಮೂರು ಲೋಕಕ್ಕೆ ಈಶನಾದ ಹರಿಯನ್ನು ಅನುದಿನದಲಿ-ಪ್ರತಿನಿತ್ಯದಲ್ಲಿ, ಪರಮ-ಉತ್ತಮವಾದ ಭಕ್ತಿಯಲ್ಲಿ ಭಜಿಸುತ್ತಾರೆ. ಈ ನಾಮಗಳ ವಿವರ ಸಂಧಿಯ ಸಾರದಲ್ಲಿ ಕೊಟ್ಟಿದೆ.

**ಭಾವಸೂಚನ:** ನೇತ್ರಗಳಲಿ ವಸಿಷ್ಠ-ವಿವಸ್ವಾನ್ನಾಮಕ ಸೂರ್ಯ ಉದಕಾಗಮ ಸ್ಥಾನದಲ್ಲಿ ಭಾರದ್ವಾಜ ನಾಮಕ, ಊರ್ಧ್ವಯವೆಯಲ್ಲಿ ಅತ್ರಿ ನಾಮಕ, ದ್ಯು ಭಾರತಿ, ಅಧೋಯವೆಯಲ್ಲಿ ಕಶ್ಯಪನಾಮಕ ಪೃಥ್ವಿ, ಕರೆ ಗುಡ್ಡಿಯಲ್ಲಿ ಜಮದಗ್ನಿ ನಾಮದಿಂದ ವಾಸ ಮಾಡಿದ್ದಾನೆಂದು ಅಧ್ಯಾತ್ಮ ಮಾಲಿಕಾ ಇದೆ ॥ ೧೦ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ನೇತ್ರ" ಇತಿ ॥ ಬೃಹದ್‌ಭಾಷ್ಯೇ ಶಿಶು ಬ್ರಾಹ್ಮಣೇ ಚ "ವಿಶ್ವರೂಪಂ ಯಶಶ್ಚೇತಿ ನಾಮ್ನಾ ವಿಷ್ಣೂ ರಮಾ ತಥಾ ॥ ವಾಯುಶ್ಚ ಸಂಸ್ಥಿತೋ ನಿತ್ಯಂ ಸರ್ವೇಷಾಂ ದಕ್ಷಿಣಾಕ್ಷಿಣಾಃ ॥ ಪೂರ್ಣತ್ವಾತ್ ವಿಶ್ವತೋ ವಿಷ್ಣೋಃ ರಮಾಯಾಃ ಸ್ತ್ರೀಷು ಪೂರ್ಣತಃ ॥ ವಾಯುಃ ಜೀವೇಷು ಪೂರ್ಣತ್ವಾತ್ ಯಶೋಜ್ಞಾನ ಸುಖಾತ್ಮಕಾಃ॥ ಪ್ರಾಣಾಶ್ಚೈತೇ ಪ್ರಣೇತೃತ್ವಾತ್ ಋಷಯಃ ರುದ್ರಪೂರ್ವಕಾಃ ॥ ಗೌತಮೋ ನಾಮ ರುದ್ರಸ್ತು ಸರ್ವಜ್ಞತ್ವಾತ್ ಪ್ರಕೀರ್ತಿತಃ ॥ ಭರದ್ವಾಜಸ್ತು ಪರ್ಜನ್ಯಃ ವಾಜಮನ್ನಂ ಭರೇತ್ ಯತಃ ॥ ವೃಷ್ಟೈವ ವಿಶ್ವಾಮಿತ್ರಾಖ್ಯಃ ಆದಿತ್ಯಃ ಯತ್ಪ್ರಕಾಶನಾತ್ ॥ ವಿಶ್ವಂ ವಿಜ್ಞಾಪಯೇನ್ನಿತ್ ಅಗ್ನಿಸ್ತು ಜಮದಗ್ನಿಕಃ ॥ ಜಾತಂ ಮಿತಂ ಚಾತ್ತಿ ಯಸ್ಮಾತ್ ವಸಿಷ್ಠಾಖ್ಯಸ್ತು ವಾಸವ- ॥ ವಸತಾಂ ಉತ್ತಮಃ ಯಸ್ಮಾತ್ ಪೃಥ್ವೀ ಕಶ್ಯಪನಾಮಿಕಾ ॥ ಮೇಷು ವೃಷ್ಟಂ ಪಿಬೇತ್ ಯತ್ ಕಂ ಶಯಾನ್ನೈವ ಹಿ ಸಾ ಸದಾ ॥ ಧ್ಯಾ ರಾತ್ರಿರಿತಿ ಸಂಪ್ರೋಕ್ತಾ ತತ್‌ಸ್ಥೈರ್ಹಿ ಹುತಮದ್ಯತೇ ॥ ಶ್ರೋತ್ರ ದೃಙ್‌ನಾಸಿಕಾ ವಾಕ್ಷು ದಾಕ್ಷಿಣಾಕ್ಷಿಷು ಸಂಸ್ಥಿತಾಃ॥ ದ್ವಿತೀಯೇನ ತು ರೂಪೇಣ ದೇವಾ ಏತೇ ಶಿವಾದಯಃ ॥ ಏವಮೇಷಾಂ ತು ನಾಮಾನಿ ವೇತ್ತಿ ಯಃ ಸರ್ವಭುಗ್ ಭವೇತ್ ॥" ಇತಿ ॥

## ಕನ್ನಡಾರ್ಥ

"ನೇತ್ರಗಳಲ್ಲಿ ವಸಿಷ್ಠ" ಎಂದು ಮುಂತಾಗಿ ಹೇಳಿದ ಪ್ರಮೇಯಗಳಿಗೆ

ಬೃಹದಾರಣ್ಯ ಭಾಷ್ಯ ವಚನಗಳ ಸಮ್ಮತಿಯನ್ನು ತೋರಿಸುತ್ತಾರೆ. ಬೃಹದಾರಣ್ಯಕ ಶಿಶು ಬ್ರಾಹ್ಮಣವನ್ನು ವಿವರಿಸುತ್ತ ಭಾಷ್ಯದಲ್ಲಿ ಹೀಗೆ ನಿರೂಪಿಸಿರುತ್ತಾರೆ. ಹೇಗೆಂದರೆ "ವಿಶ್ವರೂಪ-ಯಶ" ಎಂಬ ನಾಮಗಳುಳ್ಳ (ಎಂದು ಕರೆಯಲ್ಪಡುವ) ವಿಷ್ಣು, ರಮಾ, ವಾಯು ಇವರು ಎಲ್ಲರ ಬಲಗಡೆಯ ಕಣ್ಣುಗಳಲ್ಲಿ ಇರುತ್ತಾರೆ. ವಿಷ್ಣುವು ಎಲ್ಲರಿಗಿಂತಲೂ ಯಾವಾಗಲೂ ಸರ್ವಗುಣ ಪರಿಪೂರ್ಣನು; ಶ್ರೀ ರಮಾದೇವಿಯೂ ತದನಂತರ ಸರ್ವ ಸ್ತ್ರೀಯರುಗಳಲ್ಲಿ ಅಂದರೆ ಪರತಂತ್ರರಾದ ಚೇತನ ವರ್ಗದಲ್ಲಿ ಪೂರ್ಣಳು. ವಾಯುವು ತದನಂತರ ಜೀವರುಗಳಲ್ಲಿ ಪೂರ್ಣನು. ಆದುದರಿಂದ ಈ ಮೂವರೂ "ವಿಶ್ವರೂಪ" ಎಂದು ಕರೆಯಲ್ಪಡುತ್ತಾರೆ. ಹಾಗೂ ಜ್ಞಾನ-ಸುಖ-ಸ್ವರೂಪರಾದುದರಿಂದ "ಯಶ" ಎಂದೂ ಕರೆಯಿಸಿಕೊಳ್ಳುತ್ತಾರೆ. ಇವರು ಪ್ರವರ್ತಕರಾದುದರಿಂದ ಸರ್ವ ಪ್ರೇರಕರಾದುದರಿಂದ "ಪ್ರಾಣ" ಎಂತಲೂ ಕರೆಯಿಸಿಕೊಳ್ಳುತ್ತಾರೆ. "ರುದ್ರ ಮುಂತಾದವರು ಋಷಿಗಳು" ಎಂದು ತಿಳಿಯಬೇಕು. ಸರ್ವಜ್ಞನಾದುದರಿಂದ ರುದ್ರನು ಗೌತಮನೆನಿಸಿಕೊಳ್ಳುತ್ತಾನೆ. ಅನ್ನವನ್ನು ತುಂಬಿಕೊಡುವನು. (ಮಳೆಯಿಂದ ಅನ್ನವನ್ನು ಬೆಳೆಯಿಸುವನು). ಆದುದರಿಂದ ಪರ್ಜನ್ಯನು ಭರದ್ವಾಜನೆನಿಸಿಕೊಳ್ಳುತ್ತಾನೆ. ವಿಶ್ವವನ್ನು ತನ್ನ ಪ್ರಕಾಶದಿಂದ ತೋರಿಸಿಕೊಡುವದರಿಂದ ಆದಿತ್ಯನು "ವಿಶ್ವಾಮಿತ್ರ"ನೆಂದೆನಿಸಿಕೊಳ್ಳುತ್ತಾನೆ. ಹುಟ್ಟಿದುದೆಲ್ಲವನ್ನೂ ಅಮಿತವಾಗಿ ಭಕ್ಷಿಸುವದರಿಂದ (ತಿನ್ನುವದರಿಂದ) ಅಗ್ನಿಯು "ಜಮದಗ್ನಿ" ಎನ್ನಿಸಿಕೊಳ್ಳುತ್ತಾನೆ. ವಾಸಿಸುವರಲ್ಲಿ ಉತ್ತಮನಾದುದರಿಂದ ಇಂದ್ರನು "ವಸಿಷ್ಠ"ನೆಂದೆನಿಸಿಕೊಳ್ಳುತ್ತಾನೆ "ಕಂ"=ಮಳೆಯನ್ನು, "ಶ್ಯ"=ಶಯನ ಮಾಡಿದವಳಾಗಿಯೇ-ಮಲಗಿಯೇ "ಪ"=ಕುಡಿಯುವದರಿಂದ-ಪಾನ ಮಾಡುವದರಿಂದ ಭೂದೇವಿಯು "ಕಶ್ಯಪ" ಎಂದು ಎನಿಸಿಕೊಳ್ಳುತ್ತಾಳೆ. ವಾಕ್ ಅಭಿಮಾನಿಯಾದ ದ್ಯಾ=ದ್ಯುಶಬ್ದವಾಚ್ಯಳಾದ ಉಮಾದೇವಿಯು ದ್ಯುಲೋಕದಲ್ಲಿ ವಾಸಿಸುವದರಿಂದ ಹೋಮಿಸಲ್ಪಟ್ಟದ್ದನ್ನು ತಿನ್ನುವದರಿಂದ "ಅತ್ರಿ" ಎಂದು ಕರೆಯಲ್ಪಡುತ್ತಾಳೆ. ಒಂದು ರೂಪದಿಂದ ಕಿವಿ, ಕಣ್ಣು, ಮೂಗು, ನಾಲಿಗೆ, ತ್ವಕ್, ಮನೋ ಬುದ್ಧಿ ಹೀಗೆ ಸಪ್ತೇಂದ್ರಿಯಗಳಲ್ಲಿ ನಿಯಾಮಕರಾಗಿರುವ ಈ ರುದ್ರಾದಿ ದೇವತೆಗಳು ಇನ್ನೊಂದು ರೂಪದಿಂದ ಎರಡನೆಯ

ರೂಪದಿಂದ ಬಲಗಡೆಯ ಕಣ್ಣಿನಲ್ಲಿ ಇರುತ್ತಾರೆ. ಹೀಗೆ ಇವರ ನಾಮಗಳನ್ನು ತಿಳಿದವನು ಸರ್ವಸುಖ ಭೋಗಿಯಾಗುತ್ತಾನೆ" ಎಂದು ನಿರೂಪಿಸಿರುತ್ತಾರೆ.

**ಅವತರಣಿಕಾ :** ಕಣ್ಣಿನಲ್ಲಿಪ್ಪ ಕಪಿಲನಾಮಕ ಹರಿಯು, ರುದ್ರ, ಇಂದ್ರ ಮೊದಲಾದ ದೇವತೆಗಳಿಂದ ಸೇವಿತನಾಗಿರುವನೇ ವಿಶ್ವರೂಪಿ ಹರಿಯು, ಆ ವಿಶ್ವ ನಾಮಕ ಪರಮಾತ್ಮನ ಸಲ್ಲಕ್ಷಣಗಳನ್ನು ವರ್ಣಿಸುತ್ತಾರೆ.

**ಮೂಲ :**

**ಜ್ಯೋತಿಯೊಳಗಿಪ್ಪನು ಕಪಿಲ ಪುರು ।**
**ಹೂತ ಮುಖ ದಿಕ್ಪತಿಗಳಿಂದ ಸ ।**
**ಮೇತನಾಗೀ ದಕ್ಷಿಣಾಕ್ಷಿಯ ಮುಖದೊಳಿಹ ವಿಶ್ವ ॥**
**ಶ್ವೇತವರ್ಣ ಚತುರ್ಭುಜನ ಸಂ ।**
**ಪ್ರೀತಿಯಿಂದಲಿ ಸ್ಥೂಲ ವಿಷಯವ ।**
**ಚೇತನರಿಗುಂಡುಣಿಪ ಜಾಗ್ರತೆಯಿತ್ತು ನೃಗಜಾಸ್ಯ ॥ ೧೧ ॥**

**ಪದ್ಯಾರ್ಥ :** ಕಣ್ಣಿನೊಳಗಿಪ್ಪ ಜ್ಯೋತಿ=ಪ್ರಕಾಶವೆಂದರೆ ಪುತ್ಥಳಿಯಲ್ಲಿ ಕಪಿಲನಾಮಕ ಹರಿಯು ಇರುವನು. ಈತನೇ ವಿಶ್ವನಾಮಕನಾಗಿರುವನು. ಹಿಂದಿನ ಪದ್ಯದಲ್ಲಿ ಪೇಳಿದ ಪುರುಹೂತ ಮುಖ ಎಂಟು ದಿಕ್ಪತಿಗಳಿಂದ ಸಮೇತನಾಗಿ-ಸೇವಿತನಾಗಿ, ದಕ್ಷಿಣಾಕ್ಷಿಯ ಮುಖದೊಳಿಹ ವಿಶ್ವ= ಈ ವಿಶ್ವ-ಸಮಸ್ತ ಜಗತ್ತಿನಲ್ಲಿ ವ್ಯಾಪಿಸಿರುವ ಹರಿಯೇ ಕಣ್ಣಿನ ಮುಖ್ಯ ಎಲ್ಲ ಭಾಗದಲ್ಲಿಯೂ ಇರುವನು ಈ ವಿಶ್ವನು-ಶ್ವೇತವರ್ಣ ಬಿಳುಪಾದ ಮೈ ಬಣ್ಣ, ಚತುರ್ಭುಜ-ನಾಲ್ಕು ಭುಜವುಳ್ಳವನು, ನೃಗಜಾಸ್ಯನು=ನೃ=ಗಲ ಮನುಜಾಕೃತಿ ಮುಖವುಳ್ಳವನು ಒಂದು ಗಜಾಸ್ಯ=ಒಂದು ನಡುವಿನ ಮುಖ-ಆನೆ ಮುಖವುಳ್ಳವನು. ಸಮಸ್ತ ಜೀವರಿಗೆ ಬಾಹಿರದಲ್ಲಿಪ್ಪ ಸ್ಥೂಲ ಭೋಗ್ಯ ಪದಾರ್ಥಗಳಲ್ಲಿಪ್ಪ ಶುಭರಸವಾದ ತನ್ನ ಸ್ವರಸವನ್ನು ಉಂಡು ಸ್ವೀಕರಿಸಿ, ಜೀವ ಭೋಗ್ಯವಾದ ಸ್ಥೂಲ ರಸವನ್ನು ಜೀವರಿಗೆ ಉಣಿಸುತ್ತಾನೆ. ಈತನಿಗೆ ಸ್ಥೂಲ ಭುಕು ಎಂತ ಹೆಸರು.

**ಭಾವಸೂಚನ:** ಜ್ಯೋತೀತಿ ॥ ಜ್ಯೋತಿಷ ಕಪಿಲ ಇತಿ ಚಾಧ್ಯಾತ್ಮೆ। ವಿಶ್ವೇತಿ ನೃತಿ ಆಧ್ಯಾತ್ಮೇಚ ॥ ದಕ್ಷಿಣಾಕ್ಷಿಯಲ್ಲಿ ವಿಶ್ವಾ ನವ (೯) ಮುಖಾ-

ಮಧ್ಯದಲ್ಲಿ ಇರುವ ಮುಖ ಗಜದ್ದು, ಆಚೇಲಿ ನವಮುಖಾ (೯) ಮನುಷ್ಯ ಮುಖಾ, ನಾಲಕು ಹಸ್ತ, ಎರಡು ಪಾದ, ಒಂದು ಆನೆಯ ಸೊಂಡಿಲು ಕೂಡಿ ಹೀಗೆ ವಿಶ್ವನಿಗೆ ಸಪ್ತಾಂಗನೆನ್ನುತ್ತಾರೆ. ಆತನ ಸುತ್ತಲೂ ಅಷ್ಟ ದಿಕ್ಪಾಲಕರಿದ್ದಾರೆ. ವಿಶ್ವನು ಜಾಗ್ರದವಸ್ಥಾಪ್ರದನಾಗಿ "ಸರ್ವತ್ರ ಸಾರ ಭುಕ್" ಎಂಬ ವಾಮನ ಪುರಾಣಾನುಸಾರ, ಜಾಗ್ರತ್ ಪದಾರ್ಥ ಶುಭ ರಸಾನುಭವ ಮಾಡುವ ಎಂತ ಹೇಳಿದೆ ॥ ೧೧ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಜ್ಯೋತಿ" ಇತಿ ॥ ಚಕ್ಷುಷಿ–"ಜ್ಯೋತಿರಾದ್ಯಧಿಷ್ಠಾನ ಮಿತಿ ಚ ॥ ಜ್ಯೋತಿರ್ವ್ಯಾಪ್ತಸ್ತು ಕಪಿಲಃ ವಿಶ್ವೋ ಹಿ ಸ್ಥೂಲಭುಕ್ ಇತಿ ॥ ಜಾಗರಿತ ಸ್ಥಾನಃ ಬಹಿಃಪ್ರಜ್ಞಃ ಸಪ್ತಾಂಗ ಏಕೋ ನವಿಂಶತಿ ಮುಖಃ ಸ್ಥೂಲಭುಕ್ ವೈಶ್ವಾನರಃ ಪ್ರಥಮಃ ಪಾದಃ ॥ ವೈಶ್ವಾನರೋ ಜಾಗರಿತ ಸ್ಥಾನ ಗೋಗಜ ವಕ್ತ್ರಃ ॥ ನಿರ್ಮಾತಾ ಬಾಹ್ಯಸಂವಿತ್ತೇಃ ಜೀವಾನಾಂತದಗೋಚರಃ॥ ಅಷ್ಟಾದಶ ಮುಖಾನ್ಯಸ್ಯ ಪುಮಾಕಾರಾಣಿ ಸರ್ವಶಃ ॥ ಮಧ್ಯಮಂ ತು ಗಜಾಕಾರಂ ಚತುರ್ಬಾಹುಃ ಪರಃ ಪುಮಾನ್ ॥ ಸ್ಥೂಲಾನ್ ಭೋಗಾನ್ ಇಂದ್ರಿಯೈಃ ಸಹ ಶುಭಾನ್ ಭುಂಕ್ತೇ ನ ಚಾಶುಭಾನ್ ॥ ಇತಿ ॥ ಚ ॥

## ಕನ್ನಡಾರ್ಥ

ಓಂ ॥ ಜ್ಯೋತಿರಾದ್ಯಧಿಷ್ಠಾನಂ ತು ತದಾಮನನಾತ್ ॥ ಓಂ ॥ ಎಂಬ ಸೂತ್ರದಲ್ಲಿ ಜ ಚಕ್ಷುಮುರ್ಂತಾದವುಗಳಲ್ಲಿ ಅಧಿಷ್ಠಿತವಾಗಿರುವದು. ಅಂದರೆ "ಯಃ ಚಕ್ಷುಷಿ ತಿಷ್ಠನ್" ಎಂದು ಉಕ್ತವಾಗಿರುವದು ಪರಬ್ರಹ್ಮವೇ-ನಾರಾಯಣನೇ! ಎಂದು ಹೇಳಿರುವದರಿಂದ "ಜ್ಯೋತಿಯೊಳಗಿಪ್ಪನು" ಎಂದು ಹೇಳಿರುತ್ತಾರೆ-ದಾಸವರ್ಯರು. ಕಣ್ಣಿನ ತೇಜಸ್ಸಿನಲ್ಲಿ-ಜ್ಯೋತಿಯಲ್ಲಿ ಅಧಿಷ್ಠಿತನಾಗಿರುವವನು ಕಪಿಲನು, ವಿಶ್ವನಾಮಕನು, ಸ್ಥೂಲ ವಸ್ತುಗಳನ್ನು ಭುಂಜಿಸುವವನು. ಜಾಗ್ರದವಸ್ಥೆಯನ್ನು ಹುಟ್ಟಿಸುವ, ಕಣ್ಣಿನಲ್ಲಿರುವ, ಬಾಹ್ಯ ವಿಷಯಕ ಜ್ಞಾನವನ್ನು ಹುಟ್ಟಿಸುವ, ಏಳು ಅವಯವಗಳುಳ್ಳ ೧೯ ಮುಖಗಳುಳ್ಳ "ಸ್ಥೂಲಭುಕ್" ಎನಿಸಿದ ವೈಶ್ವಾನರ (ವಿಶ್ವನು) ಮೊದಲನೆಯ ಪಾದ ಅಂದರೆ ಅಂಶ ಅಂದರೆ ಅಕಾರ ವಾಚ್ಯನಾದವನು. ವೈಶ್ವಾನರನು ಜಾಗರಿತ ಸ್ಥಾನವಾದ ಚಕ್ಷುಸ್ಸಿನಲ್ಲಿ ಜೀವರಿಗೆ ತಿಳಿಯುದವನಾಗಿ ಇರುತ್ತಾನೆ. ಅವನು

ಆನೆಯ ಮುಖದಂತೆ ಮುಖವುಳ್ಳವನು ; ಅವನಿಗಿರುವ ೧೯ ಮುಖಗಳಲ್ಲಿ ೧೮ ಮುಖಗಳು ಮನುಷ್ಯನ ಮುಖದಂತೆ ಇರತಕ್ಕವುಗಳು. ಮಧ್ಯದ ಮುಖವು ಮಾತ್ರ ಆನೆಯ ಮುಖದಂತಿರುತ್ತದೆ. ಅವನಿಗೆ ನಾಲ್ಕು ಪುರುಷಾಕಾರದ ಬಾಹುಗಳಿರುತ್ತವೆ. ಇಂದ್ರಿಯಗಳ ಸಂಪರ್ಕವನ್ನೀಯುತ್ತ ಸ್ಥೂಲ ವಿಷಯಗಳ ಸಾರ ಶುಭ ಭಾಗಗಳನ್ನು ಭುಂಜಿಸುತ್ತಾನೆ." ಹೀಗೆ ಹೇಳುವ ವಾಕ್ಯಗಳು ಈ ಪದ್ಯಭಾವಕ್ಕೆ ಆಧಾರಗಳು. ॥ ೧೨ ॥

ಅವತರಣಿಕಾ : ಎರಡು ಕಿವಿಯಲ್ಲಿರುವ ದಿಗ್ದೇವತೆಗಳು ಹರಿಯ ರೂಪಗಳು. ಮತ್ತು ಗಂಗಾದಿ ಸಕಲ ತೀರ್ಥಂಗಳು ಗಂಗಾಜನಕ ತ್ರಿವಿಕ್ರಮನೂ ಇದ್ದು, ಬಲಕಿವಿ ಸ್ಪರ್ಶಮಾಡಿದರೆ ಕ್ಷುದ್ರ ಪಾಪಗಳು ಪರಿಹಾರಕವೆಂದು ಈ ಪದ್ಯದಿಂದ ಹೇಳುತ್ತಾರೆ.

ಮೂಲ :

ನೆಲ (ಲೆ) ಸಿಹರು ದಿಗ್ದೇವತೆಗಳಿ ।
ಕ್ಕೆಲದ ಕರ್ಣಾಂಗಳಲಿ ತೀರ್ಥಂ ।
ಗಳಿಗೆ ಮಾನಿಗಳಾದ ಸುರನದಿ ಮುಖ್ಯ ನಿರ್ಜರರು ॥
ಬಲದ ಕಿವಿಯಲಿ ಇರುತಿಹರು ಬಾಂ ।
ಬೊಳೆಯ ಜನಕ ತ್ರಿವಿಕ್ರಮನು ನಿ ।
ರ್ಮಲಿನರನು ಮಾಡುವನು ಈಪರಿ ಚಿಂತಿಸುವ ಜನರ ॥೧೨॥

ಪದ್ಯಾರ್ಥ : ಇಕ್ಕೆಲದ ಕರ್ಣಾಂಗಳಲಿ, ನೆಲಸಿಹರು ದಿಗ್ದೇವತೆಗಳು= ಎರಡೂ ಕಿವಿಗಳಲ್ಲಿ ದಿಗ್ ಅಭಿಮಾನಿ ದೇವತೆಗಳು ಇರುವರು. ಇವರು ಯಾರ್‍ಯಾರು ಎಂದರೆ-ಪೂರ್ವಕ್ಕೆ ಇರುವ ದಿಗಭಿಮಾನಿಗಳು-ಪ್ರಾಣಾದಿಗಳು, ದಕ್ಷಿಣಕ್ಕೆ ಇರುವವರು-ಯಮಾದಿಗಳು, ಪಶ್ಚಿಮಕ್ಕೆ ಇರುವವರು-ವರುಣಾದಿಗಳು, ಉತ್ತರಕ್ಕಿರುವವರು-ಚಂದ್ರ ಕುಬೇರಾದಿಗಳು. ಈ ಪ್ರಕಾರ ದೇವತೆಗಳು ಇರುವರಲ್ಲದೇ-ಇಡಾನಾಡಿಯು ಪೊಕ್ಕಳ ಎಡಭಾಗದಿಂದ ಬಲಭಾಗಕ್ಕೆ ಬಲಕಿವಿ ಪರಿಯಂತರವಾಗಿ ಹಬ್ಬಿದೆ. ಈ ಕಾರಣ ಕಿವಿಯಲ್ಲಿ ತೀರ್ಥಂಗಳಿಗೆ ಮಾನಿಗಳಾದ=ತೀರ್ಥಗಳಿಗೆ ಅಭಿಮಾನಿ ದೇವತೆಗಳಾದ, ಸುರನದಿ-ಮುಖ್ಯ ನಿರ್ಜರರು=ಗಂಗಾನದಿ ಭಾಗೀರಥಿಯೇ ಮೊದಲಾದ ನಿರ್ಜರರು=ದೇವತೆಗಳು ಬಲದ ಕಿವಿಯಲ್ಲಿ ಇರುವರು. ಗಂಗಾ(ಬಾಂಬೊಳೆ)

ಜನಕನಾದ ತೀರ್ಥಪಾದ ತ್ರಿವಿಕ್ರಮನು ಇಲ್ಲಿರುವನು. ಈ ಪ್ರಕಾರ ಚಿಂತಿಸಿದರೆ, ನಿರ್ಮಲಿನರನು ಮಾಡುವನು=ಅಲ್ಪ ಪಾಪಗಳಾದ ಅಶುಚಿ ದೋಷದಿಂದ ಪಾಪಮುಕ್ತರನ್ನು ಮಾಡುವನು. ಕಾರಣ ಅಶುಚಿಯಾದರೆ ಬಲದ ಕಿವಿ ಮುಟ್ಟುವ ಪದ್ಧತಿ ಇದೆ. (ಸಂಧಿಯ ಸಾರದಲ್ಲಿ ವಿಸ್ತರಿಸಿದೆ.)

**ಭಾವಸೂಚನ :** ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಸರಿತಸ್ತಥಾ। ವಿಪ್ರಸ್ಯ ದಕ್ಷಿಣೇ ಕರ್ಣೇ ಸಂತೀತಿ ಮನುರಬ್ರವೀದಿತಿ ಪಾರಾಶರೋಕ್ತೇ। ತೀರ್ಥಾನಿ ನಿವಸಂತ್ಯಸ್ಮಾತ್ ಸ್ವಕರ್ಣ ಸ್ಪರ್ಶನಾಚ್ಛುಚಿರಿತಿ। ಮಾನಸಸ್ಮೃತೇ। ಇಕ್ಕೆಲದಿ=ಎಡಬಲ ಕಡಿಗೆ, ನಿರ್ಜರರು=ದೇವತೆಗಳು। ಬ್ರಾಹ್ಮಣನ ದಕ್ಷಿಣ ಕರ್ಣದಲ್ಲಿ ಭಾಗೀರಥ್ಯಾದಿ ಸಕಲ ತೀರ್ಥಗಳು ಶ್ರೀ ತ್ರಿವಿಕ್ರಮಸ್ವಾಮಿಯೆಂತ ಹೇಳಿದೆ. ।೧೨।






ಬಲ ಕಿವಿ




ಎಡ ಕಿವಿ

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ನೆಲೆಸಿ" ಇತಿ । ನೆಲೆಸಿಹರು=ನಿಂತಿರುತ್ತಾರೆ. ಇಕ್ಕೆಲ=ಈ ಎಡದ (ಎಡಬಲದ) । ೧೨ ।

**ಕನ್ನಡಾರ್ಥ**

ಎರಡೂ ಕಿವಿಗಳಲ್ಲಿರುವ ಅಭಿಮಾನಿ ನಿಯಾಮಕ ಭಗವದ್ರೂಪಗಳನ್ನು ಈ ಪದ್ಯದಿಂದ ತಿಳಿಸುತ್ತಾರೆ. ಕಿವಿಗಳಲ್ಲಿ ದಿಗ್ದೇವತೆಗಳೆನಿಸಿದ ಇಂದ್ರ-ಯಮ-ವರುಣ-ಕುಬೇರ-ಚಂದ್ರ ಇವರು. ತೀರ್ಥಾಭಿಮಾನಿಗಳಾದ ಗಂಗಾದಿ ದೇವತೆಗಳು ಬಲಗಿವಿಯಲ್ಲಿ. ಹೀಗೆ ಚಿಂತಿಸುವವರ ಪಾಪಗಳನ್ನು ತೊಳೆಯುತ್ತ ತ್ರಿವಿಕ್ರಮನೂ ಅಲ್ಲಿ ಇರುತ್ತಾನೆ. । ೧೨ ।

**ಅವತರಣಿಕಾ:** ಮನಃಪ್ರಭೇದವಾದ ಚಿತ್ತ ಚೇತನ ಅಹಂಕಾರದಲ್ಲಿ ಇರುವ ದೇವತೆಗಳು. ಮತ್ತು ಜೀವನನ್ನು ಈ ಎಲ್ಲ ದೇವತೆಗಳನ್ನು ವಿಶ್ವನು ತೈಜಸನ ವಶಪಡಿಸಲು, ಹತ್ತೊಂಭತ್ತು ಮುಖವುಳ್ಳ ತೈಜಸನು ಜೀವರಿಗೆ ಸ್ವಪ್ನಾವಸ್ಥೆ ಕೊಡುವನೆಂದು ಈ ಪದ್ಯದಿಂದ ವಿವರಿಸುತ್ತಾರೆ.

**ಮೂಲ :**

**ಚಿತ್ತಜೇಂದ್ರರು ಮನದೊಳಿಪ್ಪರು ।**
**ಕೃತ್ತಿವಾಸನು ಅಹಂಕಾರದಿ ।**
**ಚಿತ್ತ ಚೇತನ ಮಾನಿಗಳು ವಿಹಗೇಂದ್ರ ಫಣಿಪರೊಳು ॥**
**ನಿತ್ಯದಲಿ ನೆಲೆಗೊಂಡು ಹತ್ತೊಂ ।**
**ಭತ್ತು ಮೊಗ ತೈಜಸನು ಸ್ವಪ್ನಾ ।**
**ವಸ್ಥೆಯೈದಿಸಿ ಜೀವರನು ಪ್ರವಿವಿಕ್ತ ಭುಕುವೆನಿಪ ॥ ೧೩ ॥**

**ಪದ್ಯಾರ್ಥ:** ಚಿತ್ತಜ=ಕಾಮ, ಇಂದ್ರ=ಇಂದ್ರ ದೇವರು ಯಜ್ಞ ಯಾಗ ಕಾರ್ಯಾದಿಗಳನ್ನು ಮಾಡಿಸಲು ಪ್ರೇರಿಸುವರು, ಮನಸ್ಸಿನಲ್ಲಿ ಇರುವರು. ಕೃತ್ತಿವಾಸನು=ಚರ್ಮಾಂಬರಧಾರಿಯಾದ ಮಹರುದ್ರರು, ಅಹಂಕಾರದಲ್ಲಿ ಇರುವರು. ಚಿತ್ತಾಭಿಮಾನಿ ಗರುಡ=ಭಗವದುಪಾಸನಕ್ಕೆ ಏಕಾಗ್ರತೆ ಕೊಡುವ ಚಿತ್ತಕ್ಕೆ ಅಭಿಮಾನಿ ಗರುಡ ದೇವರು. ಚೇತನ=ಮನ ಪ್ರಭೇದವಿದು, ಚೇತನ ಭಗವಂತನನ್ನು ಧ್ಯಾನದಿಂದ ಒಲಿಸಿದ ಮೇಲೆ ಭಗವಂತನ ಗುಣ ತುತಿಸಲು ಚೇತನ ನಿಷ್ಟವಾದ ಧರ್ಮಕ್ಕೆ ಫಣಿಪ=ಶೇಷ ದೇವರು, "ಶೇಷೋ ವ್ಯಾಖ್ಯಾನ ಕರ್ತಾ" ಎಂತೆಂದು ಮಧ್ವ ಸಿದ್ಧಾಂತ ಸಾರದಲ್ಲಿ ಹೇಳಿದ್ದಾರೆ. ಹೀಗೆ ಮನಸ್ಸು ಪ್ರಭೇದಗಳಾದ ಮನಸ್ಸು ತತ್ವಾಭಿಮಾನಿಗಳಿಗೆ ಉಪರಮೆಯಿತ್ತು, ಅಹಂಕಾರ ಚಿತ್ತಚೇತನ ರುದ್ರ ವಿಹಗೇಂದ್ರ ಗರುಡ ಇವರನ್ನು ಅಂದರೆ ಜೀವನ ಮನಾದಿಗಳಲ್ಲಿಪ್ಪ ದೇವತೆಗಳನ್ನು ವಿಶ್ವನು ಕಂಠಸ್ಥಾನವೈದಿಸಿ ತೈಜಸನ ವಶಮಾಡಲು, ಹತ್ತೊಂಭತ್ತು ಮೊಗ ತೈಜಸನು ನಿತ್ಯ ಕಂಠದಲ್ಲಿ ನೆಲೆಗೊಂಡಿರುವನು. ಜೀವನಿಗೆ ಸ್ವಪ್ನಾವಸ್ಥೆ ಐದಿಸಿ=ಸ್ವಪ್ನಗಳು ಬೀಳುವಂತೆಮಾಡಿ, ಪ್ರವಿವಿಕ್ತ ಭುಕು ಎನಿಪ=ಮನಸಾ ವಾಸನಾಗಳಿಂದ ಹುಟ್ಟಿಸಿ ತೋರುವ ವಿಷಯಗಳು ಪ್ರವಿವಿಕ್ತವೆನಿಸುತ್ತವೆ. ತೈಜಸನು ಇಂಥ ವಾಸನಾಮಯ ಶುಭ ಸಾರವನ್ನು ತನ್ನ ಸ್ವಾಖ್ಯರಸ ಭುಂಜಿಸಿ, ಜೀವರಿಗೆ ಸ್ವಪ್ನಾದಿ ಅನೇಕ ಪ್ರವಿವಿಕ್ತ=ಸಂಸ್ಕಾರಗಳಿಂದ ಅನುಭವವೀಯುವನು.

**ವಿಶೇಷ ಸೂಚನೆ :** ಇಲ್ಲಿ ಸ್ವಪ್ನದಲ್ಲಿ ಅನುಭವ ಪದಾರ್ಥಗಳು. ಸತ್ಯವೋ ಮಿಥ್ಯವೋ .ಈ ಪದಾರ್ಥಗಳೆಲ್ಲ ಸ್ವಪ್ನಜೀವರುಗಳೆಲ್ಲ ಯಾರು? ತೈಜಸನೇ ಎಲ್ಲ ರೂಪಗಳನ್ನು ತಾನಾಗಿ ತೋರುವನೋ ಅಥವಾ ಬೇರೆಯೋ?

ಇತ್ಯಾದಿ ವಿಷಯಗಳು ಅನೇಕ ಮಹಾನ್ ಪಂಡಿತರುಗಳೇ ವಾಕ್ಯಾರ್ಥ ವಿಚಾರ ಪ್ರಶ್ನೆ ಮಾಡುತ್ತಾರೆ. ಕಾರಣ ಇದು ಅವಶ್ಯ ವಿಚಾರಾರ್ಹವಾಗಿದೆ. ಸ್ವಪ್ನವೂ ಸ್ವಪ್ನ ಪದಾರ್ಥಗಳೆಲ್ಲವೂ ಸತ್ಯವೆಂದು ಬ್ರಹ್ಮಸೂತ್ರ ಭಾಷ್ಯಾದಿಗಳಲ್ಲಿ ಶ್ರೀ ಸರ್ವಜ್ಞರು ನಿರ್ಣಯ ಮಾಡಿದ್ದಾರೆ. ಉಳಿದ ಎಲ್ಲ ವಿಷಯಗಳನ್ನೂ ಸೂಕ್ಷ್ಮವಾಗಿ ತೋರಿದ್ದಾರೆ. ಕಾರಣ ನಮ್ಮಂಥ ಜಡಮತಿಗಳಿಗೆ ನಿಜಾರ್ಥ ತೋರದಾದುದರಿಂದ ಶ್ರೀ ವಿಜಯದಾಸರು ಶ್ರೀ ಗೋಪಾಲದಾಸರು ಈ ವಿಷಯ ಆಜ್ಞಾಪಿಸಿದ್ದಾರೆ. ಸ್ವಪ್ನ ಪ್ರಕರಣ ಸುಳಾದಿ ೨ನೇ ಪ್ರಮೇಯ ಭಾಗ ಪುಟ ೯೦ ರಿಂದ ೯೩ ವರೆಗೆ ಈ ಸುಳಾದಿ ಬಹು ವಿಸ್ತಾರವಿದೆ. ನೋಡಿ ಮನನ ಮಾಡಲು ಬಿನ್ನಹ.

ಈ ಸುಳಾದಿ ಇದರ ಸಾರಾಂಶವೇನಂದರೆ,–ಸ್ವಪ್ನ ಪ್ರಕರಣವು ಬಹು ಗುಪ್ತವಾಗಿದೆ. ೧೪ ಲೋಕದಲ್ಲಿ ಸುಖದುಃಖಕ್ಕೆ ಕಾರಣವಾದ ಅಪರಿಮಿತ ಜನ್ಮಗಳು ಬಂದರೂ ಉಪಕ್ರಮಾದಿ ಕ್ರಮದಿಂದ ಇವೆಲ್ಲ ಜನ್ಮಗಳ ಸಂಸ್ಕಾರಕ್ಕೆ ಮನಸ್ಸು ಇದಕ್ಕೆ ಮುಖ್ಯವಾದುದು. ಈ ಸ್ವಪ್ನವು ಕಂಠಗತನಾದ ತೈಜಸನಿಂದ ಆಗುವದು. ಅನೇಕ ಜನ್ಮ ಸಂಸ್ಕಾರ ಮನೆಮಾಡಿ ತೈಜಸನು, ಸುಪರ್ಣ ದೇವತೆಗಳನ್ನು, ಸುಪರ್ಣರೆಂಬ ದೈತ್ಯರನ್ನು ಪುಟ್ಟಿಸುವ. ಸುಪಥ ಒಳ್ಳೇ ಸ್ವಪ್ನಗಳಿಗೆ ಸುಪರ್ವಣ ದೇವತೆಗಳನ್ನು. ದುಷ್ಪಂಥ ಕೆಟ್ಟ ಸ್ವಪ್ನಗಳಿಗೆ ಸುಪರ್ವಣ ದೈತ್ಯರನ್ನೂ, ಸ್ವಪ್ನ ಕಾಲಕ್ಕೆ ಪುಟ್ಟಿಸುವ ಇಂಥ ಮಹಾಸಮರ್ಥ ತೈಜಸನು. ಈತನ ನಿಯಮದಿಂದ ಸ್ವಪಚಾದಿ ಜನ್ಮ, ಸ್ವಶಿರಚ್ಛೇದಾದಿ ನಾನಾ ದುಃಖ, ಅನೇಕ ಸುಖಲಾಭ ಸಂತೋಷ ಸ್ವಪ್ನಾವಸ್ಥೆಯಲ್ಲಿ ಆಗುವದು ಇಲ್ಲಿ ಕಪಿಲಾದಿ ಭಗವದ್ರೂಪಗಳು ವಾಸನಾಮಯದಲ್ಲಿ ತೋರುವರು. ಇದು ಅಪರೋಕ್ಷ ದಶಾದಲ್ಲಿ ತಿಳಿಯುವದು. ಈ ಸ್ವಪ್ನದಲ್ಲಿ ಪ್ರಾಣದೇವರಿಗೆ ಮಹತ್ತತ್ವನಾದ ಮಹತ್ ತತ್ವಾತ್ಮ ಅತಿ ಸೂಕ್ಷ್ಮ ದೇಹ ತತ್ಕಾಲಕ್ಕೆ ಪುಟ್ಟುವುದು. ಈ ಪ್ರಾಣನ ಅಂತರ್ಗತ ತೈಜಸನು ಅನೇಕ ಅಂಶಗಳಿಂದ ಚಿನ್ಮಯ ರೂಪ ಧರಿಸಿ, ತ್ರಿಪುರಾರಿ ರುದ್ರನೇ ಮೊದಲಾದ ಸಾಂಶಜೀವರನ್ನು, ಸ್ವಪ್ನಗತ ವಸ್ತುಗಳಂತೆ ರೂಪ ಧಾರಣಮಾಡಿ ತೋರಿಸುವ, ಕನಸಿನಲ್ಲಿ ಗಜತುರಗ ಮನೆ ಸುತ ವಾಜಿ ಧನ ಕ್ಷೇತ್ರ, ವನ ಕಾಂಚನ ವಸ್ತ್ರ ಅಂದಣ ದೇಶ ಜನ ನದಿ ಪರ್ವತ ವನಧಿ–ಜನನಿ

ಜನಕ ಅನೇಕ ಬಂಧುಗಳು. ತೃಣ ಪಶು ಗುರು ಲಘು ವಸ್ತು, ಜನನ-ಸ್ಥಿತಿ-ನಾಶ, ಸುಗುಣ ದುರ್ಗುಣ ವೃತ್ತಿ ಕ್ಷಣಕ್ಷಣಕೆ ಈ ತನುವಿನಲ್ಲಿ ಸ್ವಪ್ನ ಕಾಲದಲ್ಲಿ ಜೀವನಿಗೆ ಭಿನ್ನವಾದ ಜನ ಜಡ ಚೇತನ ದಿನ ರಾತ್ರ್ಯಾದಿಗಳು ಈ ಎಲ್ಲ ರೂಪಗಳನ್ನು ಸುಪರ್ವಾಣ ದೇವತೆಗಳ ರೂಪಗಳಲ್ಲಿ ತಾನಿದ್ದು ಅನುಭವ ಮಾಡಿಸುವನು. ಮುಂದೆ ತ್ರಿವಿಡಿ ತಾಳದಲ್ಲಿ ಸ್ವಪ್ನದ ವಿವರಣೆ ಮಾಡುತ್ತ "ಶ್ರೀಧವನು ವಾಸನಮಯ ಸೃಷ್ಟಿಯಿಂದ ದಿವದ ವ್ಯಾಪಾರದ ಗತಿಯಂತೆ ಜೀವಕ್ಕೆ ಭವದಲ್ಲಿ ಇದ್ದದು ತತ್ ಸದೃಶ ಪ್ರವರ್ತಕ ಇದಕ್ಕೆಲ್ಲ ದೇವದೈತ್ಯರ ಗಾತ್ರವನು ನಿರ್ಮಾಣವಮಾಡಿ ನೋಳ್ಪ । ಪವಿತುರ ಲೀಲೆಗೆ ತ್ರಿದಶತತಿ; ಹೇಯಕ್ಕೆ ಅವಗುಣದವರಾದ ದೈತ್ಯರು ಎನ್ನಿ । ಇವರೆ ಸಪ್ತಗೋತ್ರ ಪಿತೃಮಾತೃ ಸಹಭವ (ಅಣ್ಣತಮ್ಮಂದಿರು) ನಾನಾ ಪರಿಯಾಗಿ ಕಾಣಿಪರಯ್ಯಾ । ಭವನಾಮುಕ ರುದ್ರ ಸತಿ ದ್ವಾರದಿಂದ ಉದ್ಭವ ರಾಗುವರು । ತೈಜಸ ಮುಖ್ಯ ಕರ್ತನೆಂದು ಪೇಳಿದ್ದಾರೆ. ಸ್ವಪ್ನಕಾಲ ದಲ್ಲಿಯೂ ಶ್ರೀ ಹರಿಯ ಸೃಷ್ಟ್ಯಾದಿ ಮಹದ್ವ್ಯಾಪಾರ ಅಘಟಿತ ಶಕ್ತಿ. ಮುಂದೆ ಆದಿತಾಳದಲ್ಲಿ "ಶ್ರೀಕಾಂತ ಮೂರುತಿ ಚಕ್ಷುಸ್ಥಾನವ ಬಿಟ್ಟು ಉಕಾರ ತೈಜಸನ್ನ ಕೂಡಲು ಸ್ವಪ್ನವೆನ್ನಿ; ಪಾಕಶಾಸನ ಉಳಿದ ಸಮಸ್ತ ಜೀವರಿಗೆ ವೈಕಾರಿಕ ದೇಹದ ವ್ಯಾಪಾರಗಳು ಇಲ್ಲ. (ಅಹಂಕಾರ ತತ್ವಪತಿ ರುದ್ರನ ಕಾರ್ಯ ಮಾತ್ರ ಸ್ವಪ್ನದಲ್ಲಿ ಉಂಟು) ಇನ್ನು ಕಾಗಿ-ಬಕ-ಗೃಧ್ರ-ಶ್ವಾನ-ನರಿಯು-ಕತ್ತೆ-ವಿಟ್‌ಕ್ರಿಮಿಕೀಟಾದಿಗಳು-ಗೂಗೆ ನಾನಾ ಪ್ರಕಾರ ಸ್ವಪ್ನದಲ್ಲಿ ತೋರುವ ದೇಹಗಳು—ನಾಕ ವೈರಿಗಳು ಒಂದಂಶದಿಂದ ಆಗುವರು (ಸುಪರ್ವಾಣ ದೈತ್ಯರು). ಶೋಕ ಭೇದ ಭೇದವಾಗುವವು । ಈ ಕಾಯಧಾರರಿಗೆ ಭೋಗಭೂಷಣ (ರುದ್ರ) ತನ್ನಾಕಾರ ದೇಹಕ್ಕೆ ಸುಖ ದುಃಖಾನುಭವ ಪ್ರಕಾಶಭೂತನು. ಭವ ವಾಸನಾಮಯದಿ ಪೊಕ್ಕು ಪ್ರಾಕು ಕರ್ಮಗಳಿಂದ ಸಂಚಾರಮಾಡುವ । ಶ್ರೀಕಾಂತ ಪ್ರಾಜ್ಞ ನಮ್ಮ ವಿಜಯ ವಿಠ್ಠಲರೇಯ ಏಕಮೇವನೋ ಸರ್ವ ಸ್ವಾತಂತ್ರ್ಯಪುರುಷನೆಂದು ಸವಿಸ್ತರ ಪ್ರಮೇಯ ಉಪದೇಶಿಸುವ ಶ್ರೀ ವಿಜಯರಾಯರ ಪಾದ ನಿಜವಾಗಿ ನಂಬಲು ಅಜನಪಿತ ತಾನೆ ಒಲಿವನು. ಸ್ವಪ್ನಗತ ಎಲ್ಲ ರೂಪಗಳು ರುದ್ರ ದೇವರ ಅಂಶಗಳು.

**ಭಾವಸೂಚನ :** ಚಿತ್ತೇತಿ ಅಹಂಕಾರೇತಿ ಓಂ ಪರಾಯ ಅಹಂಕಾರಾತ್ಮನೇ ಗುರುಡಶೇಷ ರುದ್ರೇಭ್ಯೋನಮಃ ಇತಿ ॥ ಹತ್ತೊಂಭತ್ತು ಮುಖ= ಏಕೋನವಿಂಶತಿ ಮುಖ ಸಪ್ತಾಂಗ ಇತ್ಯುಕ್ತೇಃ ಅಧ್ಯಾತ್ಮೇಚ ॥ ಕಂಠಗತ ತೈಜಸ (೧೯) ವದನವನು. ಮಧ್ಯದಲ್ಲಿ ಗಜಮುಖ ಮಧ್ಯ ಪಾರ್ಶ್ವದಲ್ಲಿ ನೃಮುಖ । ಸ್ವಭಾವಸ್ಥಾ ಅಂದರೆ ವಿಶ್ವನು ಜೀವನ ಪ್ರಕಾಶ ತೆಗೆದುಕೊಂಡು ತೈಜಸನ ಕೂಡಿದರೆ ಆಗ್ಗೆ ಜೀವ ದೃಷ್ಟಾನುಸರಿಸಿ ವಾಸನಾಮಯ ಪದಾರ್ಥ ಸೃಷ್ಟಿಮಾಡುವಾಯೆಂತ ಹೇಳಿದೆ ॥ ೧೩ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಚಿತ್ತಜ" ಇತಿ । ಕಾಮಃ । ನೆಲೆ=ಸ್ಥಳಮ್ । ಸ್ವಪ್ನಸ್ಥಾನೋ(ನಃ) ಅಂತಃ ಪ್ರಜ್ಞಃ ಸಪ್ತಾಂಗಃ ಏಕೋನವಿಂಶತಿ ಮುಖಃ ಪ್ರವಿವಿಕ್ತ ಭುಕ್ । ತೈಜಸೋ ದ್ವಿತಿಯಃ ಪಾದಃ" "ತೈಜಸಃ ಪ್ರವಿವಿಕ್ತಭುಕ್ ಜಾಗ್ರದ್ದರ್ಶನ ಸಂಸ್ಕಾರ ರೂಪತ್ವಾತ್ ಸ್ವಪ್ನಗಂ ತು ಯತ್ । ಪ್ರವಿವಿಕ್ತಂ ತುತಜ್ಞಾನ ಕರಣೋಂತರ್ಜ್ಞ ಉಚ್ಯತೇ । ಇತಿ ವಾರಾಹೇ । ೧೩ ।

## ಕನ್ನಡಾರ್ಥ

ಸ್ವಾಪ್ನ ವ್ಯಾಪಾರಗಳನ್ನು ಮಾಡಿಸುವ ತೈಜಸನ ಮಹಿಮೆಯನ್ನು ನಿರೂಪಿಸುತ್ತಾರೆ. ಸ್ವಪ್ನ ಸ್ಥಾನ ಅಂದರೆ ಕಂಠದಲ್ಲಿ ಇರುವವನು. ಮಾನಸ ವಾಸನಾ ಸಂಸ್ಕಾರಗಳಿಂದ ಹುಟ್ಟುವ ಸರ್ವ ಪ್ರವಿವಿಕ್ತ ವಸ್ತುಗಳನ್ನು ತಿಳಿಸಿ ಕೊಟ್ಟು ಅವುಗಳ ಸಾರಭಾಗವನ್ನು ಭುಂಜಿಸುವವನು. ವಿಶ್ವನಂತೆ ತೈಜಸನಿಗೆ ೧೯ ಮುಖಗಳೂ ಏಳು ಅಂಗಗಳೂ ಇರುತ್ತವೆ. ಈ ತೈಜಸನು ಎರಡನೆಯ ಪಾದ ಉಕಾರ ವಾಚ್ಯವಾದ ೨ನೆಯ ರೂಪ. ಜಾಗ್ರತ್ಕಾಲದ ವಸ್ತುಗಳ ಸಂದರ್ಶನದಿಂದ ಆಗಿರುವ ಸಂಸ್ಕಾರದಿಂದ ನಿರ್ಮಿತವಾಗಿ ಸ್ವಪ್ನದಲ್ಲಿ ತೋರುವ ವಿಷಯಗಳು ಪ್ರವಿವಿಕ್ತವೆನಿಸುತ್ತವೆ. ಮತ್ತು ತೈಜಸನು ಇವುಗಳನ್ನು ಸ್ವಪ್ನದ್ವಾರಾ ತೋರಿಸಿ ಇವುಗಳಲ್ಲಿಯ ಸಾರವನ್ನು ಸ್ವೀಕರಿಸುತ್ತಾನೆ ಎಂದು ವರಾಹ ಪುರಾಣದಲ್ಲಿ ನಿರೂಪಿಸಲಾಗಿರುತ್ತದೆ. । ೧೩ ।

**ಅವತರಣಿಕಾ :** ತೈಜಸನಾಮಕ ಪರಮಾತ್ಮನು, ಜೀವನನ್ನು-ಹೃದಯ ಸ್ಥಾನವನ್ನು ಹೊಂದಿಸಿ ಅಲ್ಲಿ ಹೃದಯದಲ್ಲಿರುವ ಪ್ರಾಜ್ಞನಾಮಕ ಹರಿಯ ವಶಮಾಡಲು ಪ್ರಾಜ್ಞನು ಜೀವನಿಗೆ ನಿದ್ರಾವಸ್ಥಾ ಐದಿಸಿ, ಚಿತ್ಸುಖವ್ಯಕ್ತಿ ಮಾಡುವನೆಂದು ಹೇಳುತ್ತಾರೆ.

ಮೂಲ :

ಜ್ಞಾನಮಯ ತೈಜಸನು ಹೃದಯ ।
ಸ್ಥಾನ ನೈದಿಸಿ ಪ್ರಾಜ್ಞನೆಂಬಭಿ ।
ಧಾನದಿಂ ಕರೆಸುತ್ತ ಚಿತ್ಸುಖ ವ್ಯಕ್ತಿಯನೆ ಕೊಡುತ ॥
ಆನತೇಷ್ಟ ಪ್ರದನು ಅನುಸಂ ।
ಧಾನವೀಯದೆ ಸುಪ್ತಿಯೈದಿಸಿ ।
ತಾನೆ ಪುನರಪಿ ಸ್ವಪ್ನ ಜಾಗ್ರತೆಯೀವ ಚೇತನಕೆ ॥ ೧೪ ॥

ಪದ್ಯಾರ್ಥ : ಜ್ಞಾನಮಯ=ಜ್ಞಾನ ಪ್ರಾಚುರ್ಯ, ಸಚ್ಚಿನ್ಮಯ ದೇಹವುಳ್ಳ=ತೈಜಸನಾಮಕ ಪರಮಾತ್ಮನು, ವಿಶ್ವನಿಂದ ಕೂಡಿಕೊಂಡು, ಹೃದಯ ಸ್ಥಾನವೈದಿಸಿ = ಜೀವನನ್ನು, ಹೃದಯ = ಎದೆಯ ಸ್ಥಳವನ್ನು ಹೊಂದಿಸಿ, ಹೃದಯಸ್ಥನಾದ ಪ್ರಾಜ್ಞನೆಂಬ ಪರಮಾತ್ಮನ ವಶಕ್ಕೆ ಕೊಡಲು, ಆ ಪ್ರಾಜ್ಞನು ಜೀವನಿಗೆ ನಿದ್ರಾವಸ್ಥಾ ಕೊಟ್ಟು, ಆನತೇಷ್ಟಪ್ರದನು=ಶರಣಾಗತರಿಗೆ ಇಷ್ಟವನ್ನು ಕೊಡುವ ಹರಿಯು, ಜಾಗ್ರತ್ಕಾಲೀನ-ದೇಹಲಾಸ್ಯ ಹೋಗಲಾಡಿಸಲು, ಜಾಗ್ರತ ಸ್ವಪ್ನಗಳಲ್ಲಿ ವ್ಯಾಪಾರಗಳ ಅನುಸಂಧಾನ ವೀಯದೇ=ತಿಳಿವಳಿಕೆ ಕೊಡದೇ, ಸುಪ್ತಿಐದಿಸಿ=ಗಾಢನಿದ್ರಾವನ್ನು ಕೊಟ್ಟು, ಚಿತ್ಸುಖ ವ್ಯಕ್ತಿಯನೆ ಕೊಡುತ=ಸ್ವರೂಪ ಸುಖವಾದ ಕಿಂಚಿತ್ ಮುಕ್ತಿ ಸುಖಕ್ಕೆ ಸಾಮ್ಯವಾದ ಸುಖವನ್ನು ಕೊಡುವನು. ಈ ಸುಖದ ಅನುಭವ ಜ್ಞಾನ, ನಿದ್ರಾಕಾಲ ಜೀವನಿಗಿಲ್ಲ. ಪ್ರಾಣದೇವರ ವ್ಯತಿರಿಕ್ತ, ಎಲ್ಲ ರುದ್ರಾದಿ ತಾತ್ವಿಕರು ತಮ್ಮ ವ್ಯಾಪಾರ ಜೀವನಲ್ಲಿ ಮಾಡದೇ ಶ್ರೀ ಹರಿಯ ಧ್ಯಾನಪರ ರಾಗಿ ಇರುವರು. (ಜೀವನಿಗೆ ನಿದ್ರಾಕಾಲ ಉಪರಮ ಮಾಡಿಸಿದ ಮೇಲೆ ನಾನು ಇಷ್ಟುಕಾಲ ಪರಿಯಂತ ಸುಖನಿದ್ರಾ ಮಾಡಿದೆನೆಂಬ ಜ್ಞಾನ ಮಾತ್ರ ಬರುತ್ತದೆ. ಹೀಗೆ ಪ್ರಾಜ್ಞನಾಮಕ ಹರಿಯು ನಿದ್ರಾಉಪರಮಗೈಸಿ ಪುನಃ ಜೀವನನ್ನು ತೈಜಸನ ವಶಕೊಡಲು, ಕಂಠದಲ್ಲಿ ಬಂದು ಸ್ವಪ್ನ, ವಿಶ್ವನ ಅಧೀನಮಾಡಲು ಜೀವನ ಅಂಶ ಕಣ್ಣಿನಲ್ಲಿ ಬರಲು ಜಾಗ್ರತೆ. ಹೀಗೆ ಪ್ರಾಜ್ಞನು ತಾನೆ, ಅಂದರೆ ಈ ಮೂರು ರೂಪಗಳು ಒಂದೆ ಆದ ಕಾರಣ ತಾನೇ ಶಬ್ದಪ್ರಯೋಗವು. ಹೀಗೆ ಚೇತನರಿಗೆ ಸ್ವಪ್ನ ಜಾಗ್ರತೆ ಕೊಡುವನು. ಇದು ಮಾಂಡೂಕ ಉಪನಿಷತ್ತಿನಲ್ಲಿ ಹೇಳಿದೆ. ಮತ್ತು ಮಾನಸ ಸ್ಮೃತಿಯಲ್ಲಿಯೂ

ಸವಿಸ್ತರ ವರ್ಣಿಸಿರುವರು. "ವಿಶ್ವೋ ಜಾಗ್ರಸ್ಥಿತಾ ನರ್ಥಾನ್ ಸ್ವೀಕರೋತಿ ಸೃಜನ್ ವಿಭುಃ । ಪ್ರಾಜ್ಞಃ ಸುಪ್ತಿಗಾನರ್ಥಾನ್ ಸ್ವೀಕರೋತಿ ಸೃಜನ್ ವಿಭುಃ ॥ ಜಾಗ್ರತಃ ಸ್ವಪ್ನ ಸುಷುಪ್ತ್ಯಾದಿ ಕ್ರಮೋಽಯ ಮವಗಮ್ಯತಾಂ ॥ ವಿಶ್ವೋಽಗೃಹೀತ್ವಾ ಜೀವಸ್ಯ ಸ್ವಪ್ರಕಾಶ ವಿಶೇಷ ಕಂ ॥ ಕಂಠದೇಶಂ ಸಮಾಗತ್ಯ ಸಂಶ್ಲಿಷ್ಟಂ ತೈಜಸೇನತ್ ॥ ತದಾದು ತೈಜಸಃ ಸಾಕ್ಷಾತ್ ಪದಾರ್ಥಾನ್ ವಾಸನಾಮಯಾನ್ ॥ ದರ್ಶಯಿಷ್ಯತಿ ಜೀವಾಯ ಸ್ವಪ್ನಾವಸ್ಥಾಂ ತದುಚ್ಯತೇ । ತೈಜಸಃ ಕಂಠ ದೇಶಸ್ಥ ವಿಶ್ವೇನ ಸಹ ಲೀಲಯಾ । ತತ್ಪ್ರಕಾಶಂ ಸಮಾದಾಯ ಪ್ರಾಜ್ಞೇನಾಶ್ಲಿಷ್ಯತೇ ಹೃದಿ ॥ ತದಾ ಹೃದ್ಗತ ಪ್ರಾಣೋ ಗಿಳಿತ್ವಾ ಜೀವ ಮಂದಿರಂ । ವಿಶೇತ್ತಮುದರೀ ಕೃತ್ಯ ಪ್ರಾಜ್ಞಮಾಲಿಂಗ್ಯತೇ ರಮಾ ॥ ಆವಿಷ್ಕರೋತಿ ಜೀವಸ್ಯ ಪ್ರಾಜ್ಞಃ ಸ್ವಾನಂದ ವಿಪ್ಲವಂ ॥ ಪುನರ್ವಿಶ್ವಂ ತೈಜಸೇನ ಸಾರ್ಧಂ ಜೀವಕಳಾವೃತಃ ॥ ಕಂಠಂ ಸಮಾಗತೇ ಸ್ವಪ್ನಃ ಪುನರ್ಭವತಿ ತತ್ರಹಿಃ ॥ ವಿಹಾಯ ತೈಜಸಂ ವಿಶ್ವ ಪುನಃಶ್ಚಕ್ಷುಸ್ಸಮಾಗತೇ । ತದಾ ಜಾಗ್ರದವಸ್ಥಾಸ್ಯಾ ದೇವಂ ವಿಜ್ಞೇಯ ಮಂಜಸಾ ॥ ೫೯ ॥ ಇತ್ಯಾದಿ ಪ್ರಮಾಣಗಳು ಇದೇ ಅರ್ಥಭಾವ ಸೂಚನೆಯಲ್ಲಿವೆ.

**ಭಾವಸೂಚನ:** ಜ್ಞಾನೇತಿ ಉಕ್ತಂ ಚ ॥ ತೈಜಸನು ಕಂಠಗತ ಜೀವನ ಪ್ರಕಾಶ ತೆಗೆದುಕೊಂಡು ವಿಶ್ವಸಹಿತನಾಗಿ ಪ್ರಾಜ್ಞಾಗಾರ ಪ್ರವೇಶಿಸಲು, ಸುಷುಪ್ತ್ಯವಸ್ಥಾ. ಆಗ್ಗೆ ಮುಖ್ಯ ಪ್ರಾಣನು ಜೀವನನ್ನು ನುಂಗಿ ತನ್ನ ಆಧೀನಪಡಿಸಿ ಶ್ರೀ ರಮಾದೇವಿಯರಲ್ಲಿ ಪ್ರವೇಶಿಸಲು, ಅವರು ಉಭಯತರನ್ನ ದೇಹದಲಿಟ್ಟು, ಶ್ರೀ ಪ್ರಾಜ್ಞಾಲಿಂಗನ ಮಾಡುತ್ತಾರೆ. ಆಗ್ಗೆ ಪ್ರಾಜ್ಞದೇವರು ಜೀವ ಸ್ವರೂಪ ಸುಖ ಕಿಂಚಿತ್ ವ್ಯಕ್ತೀಕರಿಸುವರು. ತಾಮಸರಿಗೆ ತತ್ ಸಂಬಂಧದಿಂದ ಅನಿತ್ಯ ಸುಖವನ್ನು ಹುಟ್ಟಿಸುವನು ಎಂತ ಹೇಳಿದೆ ॥ ೧೪ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಜ್ಞಾನಮಯ" ಇತಿ ॥ ಯತ್ರ ಸುಪ್ತಃ ನಕಂಚನ ಕಾಮಂ ಕಾಮಯತೇ ನ ಕಂಚನ ಸ್ವಪ್ನಂ ಪಶ್ಯತಿ ತತ್ ಸುಷುಪ್ತಮ್ ॥ ಸುಷುಪ್ತಸ್ಥಾನ ಏಕೀಭೂತಃ ಪ್ರಜ್ಞಾನಘನ ಏವ ಆನಂದಮಯಃ ಹ್ಯಾನಂದಭುಕ್ ಚೇತೋಮುಖಂ ಪ್ರಾಜ್ಞಃ ತೃತೀಯಃ ಪಾದಃ ॥ "ಆನಂದಭೂತ್ ತಥಾ ಪ್ರಾಜ್ಞಃ

ತ್ರಿಧಾ ಭೋಗಂ ನಿಬೋಧತ ॥ ಸುಷುಪ್ತಂ ತು ತಮೋಜ್ಞೇಯಂ ಹರಿಂ ಪ್ರಾಪ್ಯ ತದಾವೃತಃ ॥ ನ ಕಾಮಯೇತ್ ನೈವ ಪಶ್ಯೇತ್ ಜೀವಃ ಸ್ವಾತ್ಮ ತಮೋ ವಿನಾ ॥ ಕಾಲಂ ಚ ತಸ್ಯ ಸ್ಥಾನಸ್ಯ ಪತಿಃ ಪ್ರಾಜ್ಞೋ ಹರಿಃ ಸ್ವಯಮ್ ॥ ಸ್ವಪ್ನಕೃತ್ವಾ ಚ್ಚಿತ್ತಗತ್ವಾತ್ ತೈಜಸಃ ॥ ಬಾಹ್ಯಾ ಜ್ಞಾಪಕ ತ್ವಾತ್ ಪ್ರಾಜ್ಞಃ ॥ ೧೪ ॥

## ಕನ್ನಡಾರ್ಥ

ಪ್ರಾಜ್ಞನಾಮಕ ಹರಿಯ ಮಹಿಮೆಯನ್ನು ನಿರೂಪಿಸುತ್ತಾರೆ. ಜ್ಞಾನ ಮೂರುತಿಯಾದ ತೈಜಸನು ಕಂಠದಿಂದ ಹೃದಯಕ್ಕೆ ಬಂದು "ಪ್ರಾಜ್ಞ" ಮೂರುತಿಯಾಗುತ್ತಾನೆ. ಈ ಪ್ರಾಜ್ಞ ರೂಪವೇ ಸುಷುಪ್ತಿಯೆಂಬ ಅವಸ್ಥೆ ಯನ್ನು ತಂದುಕೊಡುತ್ತದೆ. ಯಾವ ಅವಸ್ಥೆಯಲ್ಲಿ ಎಲ್ಲಿ ಮಲಗಲು- ಮಲಗಿದವನು ಯಾವುದನ್ನೂ ಇಚ್ಛಿಸುವದಿಲ್ಲ, ಯಾವ ಕನಸನ್ನೂ ಕಾಣ ಲಾರ, ಆ ಅವಸ್ಥೆಯು "ಸುಷುಪ್ತಿ" ಎನಿಸುತ್ತದೆ. ಆಸ್ಥಾನವೆಂದರೆ, ಹೃದಯ. ಹೃದಯದಲ್ಲಿ ಬಂದು ಏಕೀಭೂತನಾದ ಪ್ರಜ್ಞಾನಘನನೇ ಆನಂದಮಯನು. ಅವನು ಆನಂದವನ್ನು ಭುಂಜಿಸುವವನು. ಜ್ಞಾನ ಮೂರುತಿಯಾದ ಅವನು ಪ್ರಾಜ್ಞನು-ಅವನು ಪ್ರಣವದ ಮೂರನೆಯ ಪಾದದಿಂದ ಪ್ರತಿಪಾದ್ಯನು.

ಆನಂದವನ್ನು ಭುಂಜಿಸುವವನು ಪ್ರಾಜ್ಞನು. ಹೀಗೆ ವಿಶ್ವ, ತೈಜಸ, ಪ್ರಾಜ್ಞರೆಂಬ ಮೂರು ರೂಪಗಳನ್ನೂ ಅವುಗಳನ್ನು ತಿಳಿಸುವ ಅ-ಉ-ಮ ಎಂಬುದಾಗಿರುವ ಪ್ರಣವದ ಪಾದಗಳನ್ನೂ ತಿಳಿದುಕೊಳ್ಳಬೇಕು. ಸುಷುಪ್ತ ವೆಂದರೆ ಗಾಢವಾದ ತಮ-ಅಜ್ಞಾನಾಂಧಕಾರ. ಆ ಅವಸ್ಥೆಯಲ್ಲಿ ಶ್ರೀಹರಿ ಯನ್ನು ಹೊಂದಿ ಜೀವನು (ಆಲಿಂಗಿಸಿ) ಆ ಅಂಧಕಾರ ಹಾಗೂ ಕಾಲವನ್ನು ಳಿದು ಯಾವುದನ್ನೂ ತಿಳಿಯಲಾರನು. ಆಸ್ಥಾನಪತಿಯು ಪ್ರಾಜ್ಞನಾಮಕ ಹರಿಯು. ಮನಸ್ಸಿನಲ್ಲಿದ್ದು ಸ್ವಪ್ನವನ್ನುಂಟುಮಾಡುವದರಿಂದ ತೈಜಸವೆನಿಸು ವನು. ಅವನೇ ಯಾವ ಬಾಹ್ಯವನ್ನೂ ತೋರಿಸದೆ ಹೃದಯಕ್ಕೆ ಬಂದು ನಿಂತರೆ-ಪ್ರಾಜ್ಞನು ॥ ೧೪ ॥

**ಅವತರಣಿಕಾ :** ಈ ಪದ್ಯದಿಂದ ನಾಲಿಗೆ ಅಣುನಾಲಿಗೆ, ತಾಲು, ಕಣ್ಣು, ಕಿವಿ, ಕಪೋಲ ಫಾಲಾದಿ ಅಂಗಗಳಲ್ಲಿರುವ ರೂಪ ವಿಶೇಷಗಳನ್ನೂ ತತ್ಕಾರ್ಯವನ್ನೂ ವಿಶದೀಕರಿಸುತ್ತಾರೆ.

**ಮೂಲ :**

**ನಾಲಿಗೆಯೊಳಿಹ ವರುಣ ಮತ್ಸ್ಯಣು ।**
**ನಾಲಿಗೆಯೊಳು ಉಪೇಂದ್ರ ಇಂದ್ರರು ।**
**ತಾಲು ಪರ್ಜನ್ಯಾಖ್ಯ ಸೂರ್ಯನು ಅರ್ಧ ಗರ್ಭನಿಹ ॥**
**ಆಲಿಯೊಳು ವಾಮನ ಸುಭಾಮನ ।**
**ಫಾಲದೊಳು ಶಿವ ಕೇಶವನು ಸುಕ ।**
**ಪೋಲದೊಳಗೆ ರತೀಶಕಾಮನು ಅಲ್ಲಿ ಪ್ರದ್ಯುಮ್ನ ॥ ೧೫ ॥**

**ಪದ್ಯಾರ್ಥ :** ನಾಲಿಗೆಯಲ್ಲಿ=ವರುಣದೇವರು. ಮತ್ಸ್ಯರೂಪಿ ಹರಿಯು ಇರುವರು. ಅಣು ನಾಲಿಗೆ=ಕಿರಿನಾಲಿಗೆಯಲ್ಲಿ ಇಂದ್ರನು, ಉಪೇಂದ್ರನಾಮಕ ಹರಿಯು, ಶಬ್ದವನ್ನು ನುಡಿಸುವನು. ತಾಲು=ಶಬ್ದ ಉಚ್ಚರಿಸುವ ಕಂಠ ದೇಶದಲ್ಲಿ ಪ್ರರ್ಜನ್ಯನಾಮಕ ಸೂರ್ಯ-ಅರ್ಧ ಗರ್ಭ ನೆಂಬೋ ನಾಮದಿಂದ ಶ್ರೀಹರಿಯು, ಆಲಿಯೊಳು=ಕಣ್ಣಿನಲ್ಲಿ-ವಾಮನ ಸುಭಾಮನ ಎರಡೂ ಕಣ್ಣಿನಲ್ಲಿ ಎರಡು ರೂಪಗಳು.

ಫಾಲ=ಹಣೆಯಲ್ಲಿ ಮಂಗಳಕರನಾದ ಶಿವರುದ್ರನು, ಕೇಶವನು ಇರುವರು. ಕಪೋಲದೊಳಗೆ=ಎರಡು ಗಲ್ಲಗಳಲ್ಲಿ ರತೀಶ ಕಾಮನು= ಸುಂದರ ಪ್ರದನಾದ ರತಿದೇವಿ ಪತಿಯಾದ ಕಾಮದೇವರು ಇರುವರು. ಇಲ್ಲಿ ಪ್ರದ್ಯುಮ್ನನಾಮಕ ಹರಿಯು ಇದ್ದು, ಆಯಾ ಅಂಗಗಳಿಗೆ ಕಾಂತಿಯನ್ನು ಕೊಡುತ್ತಾ ಆಯಾ ಅಂಗಗಳ ಕಾರ್ಯವನ್ನು ಮಾಡಿಸುವರು. ಈ ವಿಷಯ ಸಂಧಿಯ ಸಾರದಲ್ಲಿ ವಿಸ್ತರಿಸಿದೆ.

**ಭಾವಸೂಚನ :** ಇಲ್ಲ.

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಶಿಷ್ಯ ಮಾತೃಕಾನ್ಯಾಸಂ ಬ್ರೂಯತೇ "ನಾಲಿಗೆಯೊಳಿಹ" ಇತಿ ॥ ಉಪೇಂದ್ರಃ ವಾಮನಃ ॥ ತಾಲು=ತುಟಿ. ಆಲಿ=ಕಣ್ಣು ॥ ೧೫ ॥

## ಕನ್ನಡಾರ್ಥ

ಉಳಿದ ಮಾತೃಕೆಗಳ ಅಕ್ಷರಗಳ ನ್ಯಾಸವನ್ನು ನಿರೂಪಿಸುತ್ತಾರೆ– "ನಾಲಿಗೆಯೊಳಿಹ" ಎಂಬ ಪದ್ಯದಿಂದ.

ಉಪೇಂದ್ರ=ವಾಮನ. ತಾಲು=ಕಂಠಸ್ಥಾನ, ಆಲಿಯೆಂದರೆ "ಕಣ್ಣು" ಎಂದು ಅರ್ಥ.

ನಾಸಿಕದಿ ನಾಸತ್ಯ ಸದಸ್ರರು ಪದ್ಯ ೮. ಮತ್ತು ಪದ್ಯ ೧೫.



೧. ಮೂಗಿನ ತುದಿನಡುವೆ, ಚತುರ್ಮುಖ ವಾಸುದೇವ

| ಮೂಗಿನ ಬಲ ಮೇಲ್ ಹೊಳ್ಳೆ | ಮೂಗಿನ ಎಡ ಮೇಲ್ ಹೊಳ್ಳೆ |
|---|---|
| ೨. ಅಶ್ವಿನಿ-ನಾಸತ್ಯ | ೩. ದಸ್ರ ಅಶ್ವಿನಿಗಳು |
| ೪. ,, ಕೆಳಹೊಳ್ಳೆ ಸೂರ್ಯ | ೫. ,, ಕೆಳಹೊಳ್ಳೆ ಚಂದ್ರ |
| ೬. ನಾಸಿಕಾಸ್ಯ | ಗರುಡ |
| ೭. ಮೇಲ್ ತುಟಿ ಏಕಾತ್ಮ | ೮. ಕೆಳ ತುಟಿ ಐರಾಯು |
| ೯. ಮೇಲ್‌ದಂತ ಪಂಕ್ತಿ ಒರಸ | ೧೦. ಕೆಳದಂತ ಪಂಕ್ತಿ ಔಜೋಭೃತ್ |
| ಜಿಂಹಾದಲ್ಲಿ ೧೧, ವರುಣ | ೧೨, ಮತ್ಸ್ಯ |

**ಅವತರಣಿಕಾ:** ಈ ಪದ್ಯದಿಂದ ರೋಮಕೂಪ-ರೋಮಗಳಲ್ಲಿ ಮುಖ ಮಸ್ತಕ ಶಿಖಾದಿಗಳಲ್ಲಿಪ್ಪ ದೇವತೆಗಳು ತನ್ನಿಯಾಮಕ ಭಗವದ್ರೂಪಗಳೂ ತತ್ಕಾರ್ಯವನ್ನು ಪೇಳುತ್ತಾರೆ.

**ಮೂಲ :**

**ರೋಮಗಳಲಿ ವಸಂತ ತ್ರಿಕಕು |**
**ದ್ಧಾಮ ಮುಖದೊಳಗಗ್ನಿ ಭಾರ್ಗವ |**
**ತಾಮರಸ ಭವ ವಾಸುದೇವರು ಮಸ್ತಕದೊಳಿಹರು ||**
**ಈ ಮನದೊಳಿಹ ವಿಷ್ಣು ಶಿಖದೊಳು |**
**ಮಾಮಹೇಶ್ವರ ನಾರಸಿಂಹಃ |**
**ಸ್ವಾಮಿ ತನ್ನನುದಿನದಿ ನೆನೆವರ ಮೃತ್ಯು ಪರಿಹರಿಪ || ೧೬ ||**

**ಪದ್ಯಾರ್ಥ :** ರೋಮಗಳಲ್ಲಿ ವಸಂತ=ಸುಖದಿಂದ ಯಾರು ವಾಸ ಮಾಡಿ ಮಾಡಿಸುತ್ತಾರೋ ಆತನಿಗೆ ವಸಂತ, ಈ ವಸಂತ ಋತುವಿಗೆ ಅಭಿಮಾನಿ ಕಾಮದೇವರು. ತ್ರಿಕ್ ಕುದ್ಧಾಮನಾಮಕ ಹರಿ, (ಹಿಂಕಾರ ನಾಮಕ ಪ್ರದ್ಯುಮ್ನ ರೂಪದಿಂದ ಇರುವನೆಂದು ಮಾನಸಸ್ಮೃತಿ) ಮುಖದಲ್ಲಿ ಅಗ್ನಿದೇವರು, ಭಾರ್ಗವ=ಪರುಶುರಾಮ, ಮಸ್ತಕ=ತಲೆಯಲ್ಲಿ, ತಾಮರಸಭವ=ಕಮಲದಿಂದ ಪುಟ್ಟಿದ ಬ್ರಹ್ಮದೇವರು, ವಾಸುದೇವ ನಾಮಕ ಹರಿ ಇರುವರು. ಮನಸ್ಸಿನಲ್ಲಿ ವಿಷ್ಣುನಾಮಕ ಹರಿ.

ಶಿಖಾ=ತಲೆ ಗೂದಲುಗಳಲ್ಲಿ ಉಮಾಮಹೇಶ್ವರ=ಉಮಾಪತಿ ರುದ್ರ ನರಸಿಂಹ ದೇವರು ಇದ್ದು, ಸ್ವಾಮಿ=ಒಡೆಯನಾದ ನೃಸಿಂಹನು ತನ್ನನ್ನು ಅನುದಿನ=ನಿತ್ಯದಲ್ಲಿ ನೆನೆಯುವರ ಮೃತ್ಯು ಪರಿಹಾರ ಮಾಡುತ್ತಾನೆ.

**ಭಾವಸೂಚನ :** ರೋಮೇತಿ || ಪ್ರಭೂತಃ ತ್ರಿಕಕುದ್ಧಾಮಃ ಇತಿ ಪಾಠಾತ್ | ತಾಮರಸ ಪದ್ಮ " ಪಂಕೇರುಹಂ ತಾಮರಸ ಮಿತ್ಯಭಿಧಾನಾತ್ || ೧೬ ||

**ಸೂಚನೆ :** ಶ್ರೀ ದಾಸರಾಯರು, ಆರಂಭಮಾಡಿ, ಕಂಠಪರಿಯಂತ ಮಸ್ತಕವೆಂಬ ಶಬ್ದ ಪ್ರಯೋಗ ಮಾಡಿದ್ದಾರೆ; ಈ ಮಸ್ತಕದಲ್ಲಿ ಭ್ರೂಮಧ್ಯ ಫಾಲ-ಹಣೆ, ಶಿರಸ್ಸು, ಮೌಳಿ=ಶಿರದ ಮೇಲ್ಭಾಗ ಕಿರೀಟವು ಸಹ ಬರುತ್ತವೆ. ಕಾರಣ ಶ್ರೀ ಗೋಪಾಲದಾಸರು ಬರೆದ ಚಿತ್ರ, ಭ್ರೂಮಧ್ಯ ೪ ದಳ ಕಮಲ,




ಮೇಲ್ಭಾಗ ದಶಾವರಣ ಬಹಿಬ್ರಹ್ಮಾಂಡ. ೨. ಶಿರದಲ್ಲಿ ದ್ವಾದಶ ಕಮಲ ಗತ ಮೂರ್ತಿ. ೩. ಭ್ರೂಮಧ್ಯ ಚತುರ್ದಳ ಕಮಲ ಮೂರ್ತಿ

ಶಿರದಲ್ಲಿಪ್ಪ ದ್ವಾದಶ ಕಮಲ, ನಾಶಿಕಾದಿಂದ ದ್ವಾದಶಾಂಗುಲಿಯಲ್ಲಿರುವ ಮೌಳಿಯಲ್ಲಿ ವಾಸುದೇವ ಶುಭ್ರವರ್ಣ ದ್ವಾದಶ ದಳ ಕಮಲ ಮೂರ್ತಿ ಚಿತ್ರಗಳನ್ನು ಇಲ್ಲಿ ಕೊಟ್ಟಿದೆ.

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ರೋಮ" ಇತಿ ॥ ವಸಂತ ಮಾನೀ ॥ ತಾಮರಸ ಪದ್ಮ । "ವಸಂತೇ ತ್ರಿಕಕುದ್ಧಾಮಾ ವಾಸುದೇವೋಽಜನೋ ಹರಿಃ ॥ ಮಸ್ತೇ ಶಿಖಾಯಾಂ ಶಿವಗಃ ನೃಹರಿಃ ವೀರಪುಂಗವಃ ॥" ಇತಿ ಪ್ರಭಂಜನೇ ॥ ೧೬ ॥

**ಕನ್ನಡಾರ್ಥ**

ಈ ಪದ್ಯದಲ್ಲಿ ರೋಮಾಭಿಮಾನಿ ಮುಂತಾದವರಲ್ಲಿರುವ ಭಗವದ್ರೂಪ ಗಳನ್ನು ಪೇಳುತ್ತಾರೆ. ಈ ವಿಷಯದಲ್ಲಿ ಪ್ರಮಾಣವನ್ನು ಉದಾಹರಿಸಿರು ತ್ತಾರೆ. "ವಸಂತ=ವಸಂತನು ಅಭಿಮಾನಿ ಎಂದು ತಿಳಿಯತಕ್ಕದ್ದು. ವಸಂತ ನೆಂಬ (ಕಲಾ) ಅಭಿಮಾನಿ ದೇವತೆಯಲ್ಲಿ ತ್ರಿಕಕುದ್ಧಾಮ ಶಬ್ದ ವಾಚ್ಯನಾದ ಹರಿಯು ಇರುತ್ತಾನೆ ಅಜನಲ್ಲಿ–ಚತುರ್ಮುಖನಲ್ಲಿ ವಾಸುದೇವರೂಪೀ ಹರಿಯು ಇರುತ್ತಾನೆ. ತಲೆಯಲ್ಲಿ-ಶಿಖೆಯಲ್ಲಿ ರುದ್ರನೂ ಅವನಲ್ಲಿ ನಿಯಾ ಮಕನಾಗಿ ವೀರ್ಯನಿಧಿ ಮೃತ್ಯು ಮೃತ್ಯುವೆನಿಸಿರುವ ನರಸಿಂಹನೂ ಇರು ತ್ತಾನೆ." ಹೀಗೆ "ಪ್ರಭಂಜನ"ದಲ್ಲಿ ಹೇಳಲಾಗಿರುತ್ತದೆ.

ಬಹುಶಃ ವಾಯು ಪುರಾಣ ಅಥವಾ ವಾಯು ಪ್ರೋಕ್ತವು ಪ್ರಭಂಜನ ವಾಗಿರಬಹುದು ಅಂತಾ ತೋರುತ್ತದೆ ॥ ೧೬ ॥

**ಅವತರಣಿಕಾ :** ಹಿಂದೆ ಮೌಳಿಯಲ್ಲಿ ವಾಸುದೇವನಿರುವನೆಂದು ಹೇಳಿದ್ದಾರೆ. ಆ ವಾಸುದೇವನಲ್ಲದೆ, ಅಜಾದಿ ೧೬ ರೂಪಗಳು ಇರುವವು ಎಂದು ಈ ಪದ್ಯದಲ್ಲಿ ಹೇಳುತ್ತಾರೆ. ಹಿಂದೆ ಪದ್ಯ ೧-೨ರಲ್ಲಿ ೨೫ ಅಜಾದಿ ರೂಪಗಳನ್ನು ಹೇಳಿ, ಈಗ ಆ ಪಾದಮೌಳಿ ರೂಪ ಹೇಳುವಾಗ ಈ ಮೌಳಿಯಲ್ಲಿರುವ ರೂಪ ಹೇಳುತ್ತಾರೆ.

**ಮೂಲ :**

**ಮೌಳಿಯಲ್ಲಿಹ ವಾಸುದೇವನು ।**
**ಏಳಧಿಕ ನವಜಾದಿ ರೂಪವ ।**
**ತಾಳಿ ಮುಖದೊಳು ಶ್ರವಣ ನಯನಾದ್ಯವಯವಗಳೊಳಗೆ ॥**

**ಆಳರಸು ತಾನಾಗಿ ಸತತ ಸು ।**
**ಲೀಲೆಗೈವುತಲಿಪ್ಪ ಸುಖಮಯ ।**
**ಕೇಳಿ ಕೇಳಿಸಿ ನೋಡಿ ನೋಡಿಸಿ ನುಡಿದು ನುಡಿಸುವನು ॥೧೭॥**

**ಪದ್ಯಾರ್ಥ:** ಮೌಳಿಯಲ್ಲಿ=ವಾಸುದೇವನಾಮಕ ಹರಿ. ಮಸ್ತಕಾರಂಭಿಸಿ ಎಲ್ಲ ಮುಖದಲ್ಲಿಪ್ಪ ಅವಯವಗಳಲ್ಲಿರುವ ರೂಪ ಹೇಳುತ್ತಾರೆ. ಶಿರಸ್ಸಿನ ಮೇಲೆ ವಾಸುದೇವನಿಹನು. ಅಲ್ಲದೆ ಶಿರಸಿನಲ್ಲಿ-ಅಜ. ಮುಖದಲಿ-ಆನಂದ, ಬಲಗಣ್ಣಿನಲ್ಲಿ-ಇಂದ್ರ, ಎಡಗಣ್ಣಿನಲ್ಲಿ-ಈಶಾನ, ಬಲಕಿವಿ-ಉಗ್ರ, ಎಡಕಿವಿ-ಊರ್ಜ, ಬಲ ನಾಸಾಪುಟ-ಋತುಂಭರ, ಎಡ ನಾಸಾಪುಟದಿ-ಋೂಘ, ಬಲಕಪೋಲ-ಲಶ, ಎಡ ಕಪೋಲ-ಲೃಜ, ಮೇಲ್ತುಟಿಲಿ-ಏಕಾತ್ಮ, ಕೆಳದುಟಿ-ಐರ, ಮೇಲಿನ ದಂತಪಂಕ್ತಿ=ಓಜೋಭೃತ, ಕೆಳದಂತಪಂಕ್ತಿ, ಔರಸ, ತಾಲು, ಅನಂತಾಯ, ವಾಚಿ=ಅರ್ಧಗರ್ಭಾಯ. ಹೀಗೆ ಏಳಧಿಕನವ=೭+೯=೧೬, ಅಜಾದಿ ರೂಪವನ್ನು ಮುಖ, ಶ್ರವಣ, ನಯನವೇ ಮುಂತಾದ ಅವಯವಗಳಲ್ಲಿ ಇರುವನು. ಶ್ರೀ ಹರಿಯು ತನಗೆ ತಾನೆ, ಆಳರಸು=ಆಳು-ಅರಸು, ಸೇವ್ಯ-ಸೇವಕನಾಗಿದ್ದು, ಸುಖಮಯ, ಚಿತ್-ಸುಖಮಯ ಶರೀರ ಉಳ್ಳವನು, ಅನಂತ ಬಗೆಯಿಂದ ಆಯಾ ಅವಯವ ವ್ಯಾಪಾರ ಮಾಡಿಸುತ್ತಾನೆ. ಕಿವಿಯಿಂದ ತಾನು ಕೇಳಿ, ತತ್ವಾಧಿಪತಿಗಳ ದ್ವಾರಾ ಜೀವನಿಗೆ ಕೇಳಿಸುತ್ತಾನೆ. ತಾನು ಸ್ವರೂಪ ಚಕ್ಷುಸ್ಸಿನಿಂದ ಜೀವನ ಸ್ವರೂಪೇಂದ್ರಿಯದಲ್ಲಿದ್ದು ನೋಡಿ, ನೋಡಿಸುತ್ತಾನೆ. ತಾನು ನುಡಿದು ಶಬ್ದ ಉಚ್ಚಾರಮಾಡಿ, ತತ್ವಪತಿಗಳಿಂದ ಉಚ್ಚಾರಮಾಡಿಸಿ ಜೀವನಿಂದ ನುಡಿಸುತ್ತಾನೆ. ಇದೇ ಭಗವಂತನ ಅನಂತ ವ್ಯಾಪಾರ.

**ಭಾವ ಸೂಚನ:** ಮೌಳೀತಿ । ಕೇಳಿತಿ । ಯಥಾಹ ಭಗವಾನ್ ಶಾಂಡಿಲ್ಯ । ಶೃಣೋತಿ ಚಯದಾ ಬ್ರಹ್ಮ, ತದಾಜೀವ ಶೃಣೋತಿ ಚ । ಕಿಮತ್ರ ಬಹುನೋಕ್ತೇನ, ನಾಕೃತಂ ಕ್ರೀಯತೇಜನ್ಯೈರಿತಿ । ೧೭ ।

**ದ್ರೌಪದೀಶ ಪತಿವಿಠಲರು:** ತತ್ವಾಭಿಮಾನಿ ಅಂತರ್ಗತ (೨೪) ಜೀವರು. ತತ್ವಗತ ಜಡ ೨೪ ಅಜಾದಿ ೫೧.

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

"ಮೌಳಿ" ಇತಿ ॥ ಏಳಧಿಕನವ=ಷೋಡಶ.

### ಕನ್ನಡಾರ್ಥ

ಪದ್ಯಾರ್ಥವು ಸುಲಭವಿರುತ್ತದೆ; ಕಾರಣ ಅಧಿಕವಾಗಿ ವ್ಯಾಖ್ಯಾನಿಸಿರುವದಿಲ್ಲ. ಏಳಧಿಕನವವೆಂದರೆ ಹದಿನಾರು ಎಂದು ಅರ್ಥ. ಮೌಳಿ= ಕಿರೀಟ, ತಲೆಯ ಮೇಲಿನ ಶಿಖಾ. | ೧೭ |



ಶಿರೋರ್ಧ್ವ ವೈಕುಂಠ ದ್ವಾದಶ ಕಮಲಸ್ಥ ಶ್ವೇತವರ್ಣ
ಶ್ರೀ ವಾಸುದೇವ ಮೂರ್ತಿ
ಕೆಳಗಿನ ಹತ್ತು ಗೋಲಾಕೃತಿ ದಶಾವರ್ಣ ಬ್ರಹ್ಮಾಂಡ

**ಅವತರಣಿಕಾ :** ಹಿಂದೆ ೧೭ ಪದ್ಯದವರೆಗೆ ಪಾದಾರಂಭಿಸಿ ಮೌಳಿ ಪರಿಯಂತವಾಗಿ ಭಗವದ್ರೂಪಗಳಿರುವ ಬಗೆ ಚಿಂತಿಸುವ ವಿಧಾನ ಹೇಳಿ, ಈಗ ಹಿಂದೆ ಪೇಳಿದ ಎಪ್ಪತ್ತೆರಡು ಸಾವಿರದ ನಾಡಿಗಳಿಗೆ ನೂರಾ ಒಂದು ಮುಖ್ಯನಾಡಿ ವಿವರ ಅಲ್ಲಿಪ ರೂಪ ವಿವರಿಸುತ್ತಾರೆ.

ಮೂಲ :

ಎರಡಧಿಕ ಎಪ್ಪತ್ತೆನಿಪ ಸಾ ।
ವಿರದ ನಾಡಿಗೆ ಮುಖ್ಯ ಯೇಕೋ ।
ತ್ತರ ಶತಗಳಲ್ಲಿಹವು ನೂರಾವೊಂದು ಮೂರ್ತಿಗಳು ॥
ಅರಿದು ದೇಹದಿ ಕಲಶನಾಮುಕ ।
ಹರಿಗೆ ಕಳೆಗಳಿವೆಂದು ನೈರಂ ।
ತರದಿ ಪೂಜಿಸುತಿಹರು ಪರಮಾದರದಿ ಭೂಸುರರು ॥ ೧೮ ॥

ಪದ್ಯಾರ್ಥ : ಎರಡಧಿಕ ಎಪ್ಪತ್ತೆನಿಪ, ಸಾವಿರದ ನಾಡಿಗೆ=ಎರಡು ಹೆಚ್ಚಾಗಿರುವ ಎಪ್ಪತ್ತು ಅಂದರೆ ಎಪ್ಪತ್ತೆರಡು ಸಾವಿರ ನಾಡಿಗಳಿಗೆ, ಮುಖ್ಯ ಕಾರಣವಾಗಿರುವವು, ನೂರಾಒಂದು ನಾಡಿಗಳು (ಏಕೋತ್ತರ ಶತ) ಇವುಗಳಲ್ಲಿ ನೂರಾಒಂದು ಮೂರ್ತಿಗಳು ಇರುವವು. ನೂರಾಒಂದು ಮುಖ್ಯ ನಾಡಿ ಯಾವುವೆಂದರೆ, ಸುಷುಮ್ನಾ ಐದು ಪ್ರಭೇದವು ಕೂಡಿ ಒಂದೇ ನಾಡಿ ಎಂದು ಹೇಳಿದೆ. ಈ ಸುಷುಮ್ನಾಕ್ಕೆ ನಾಲ್ಕು ದಿಕ್ಕಿಗೆ ನಾಲ್ಕು ನಾಡಿಗಳು ತುಂದಿ ಗಡ್ಡೆಯಲ್ಲಿ-ಎಡಭಾಗಕ್ಕೆ ಇಡಾನಾಡಿ, ಬಲಕ್ಕೆ ಪಿಂಗಳಾನಾಡಿ, ಧಾರುಣಿನಾಡಿ ಪೂರ್ವಕ್ಕೆ, ವಜ್ರಿಕಾನಾಡಿ ಪಶ್ಚಿಮಕ್ಕೆ. ಇದರಲ್ಲಿ ಇಡಾನಾಡಿ ೫೦ ಅಂಶದಿಂದ, ಪಿಂಗಳಾನಾಡಿ ೫೦ ಅಂಶದಿಂದ ಹೊಕ್ಕಳ ಪರಿಯಂತವಾಗಿ ಬಂದು ಹೊಕ್ಕಳಿಂದ ಎಡಗಡೆ ಇದ್ದ ಇಡಾನಾಡಿ ಬಲಕ್ಕೆ, ಬಲಗಡೆ ಇದ್ದ ಪಿಂಗಳಾನಾಡಿ, ಎಡಕ್ಕೆ ಳ ಅಂಕಿ ಕತ್ತರಿಯೋಪಾದಿ ತಿರುಗಿ ಬಲಭಾಗ ಕಿವಿಗೆ ಇಡಾನಾಡಿ ೫೦ ಅಂಶಗಳು ಮುಟ್ಟವೆ. ಮತ್ತು ಪಿಂಗಳಾ ಎಡಭಾಗ ಪಸರಿಸಿ ಎಡಕಿವಿಗೆ ಮುಟ್ಟವೆ. ಹೀಗೆ ೫೦+೫೦=ನೂರು ಸುಷುಮಾ ೧ ಹೀಗೆ ನೂರಾಒಂದು ನಾಡಿಯಲ್ಲಿ ಕಲಶನಾಮುಕ ಹರಿಯ=ಅಂದರೆ ಬಾಹಿರದ ಕಲಶಾರ್ಚನೆಯಲ್ಲಿ, ಗಂಗಾದಿ ಸಕಲ ತೀರ್ಥಗಳನ್ನೂ ಚಿಂತಿಸಿ, "ಅಜಾದಿ (೧೦೧) ಮೂರ್ತಿಗಳನ್ನು ಚಿಂತಿಸಬೇಕು. (ಸಂಧಿಯ ಸಾರದಲ್ಲಿ ವಿಸ್ತರಿಸಿದೆ) ಇವು ಹರಿಗೆ ಸಾಂಶ ಕಲೆಗಳು ಎಂದು, ನೈರಂತರದಿ=ನಿರಂತರದಲ್ಲಿ, ಭೂಸುರರು=ಬ್ರಾಹ್ಮಣ ಶ್ರೇಷ್ಠರಾದ ಜ್ಞಾನಿಗಳು, ಪರಮಾದರದಿ=ಒಳ್ಳೇ ಧಾರಢ್ಯ ಭಕ್ತಿಯಿಂದ ಪೂಜಾ ಮಾಡುತ್ತಿರುವರು. ಇಡಾ "ಭಾಗೀರಥೀ ಪ್ರೋಕ್ತಾ ಪಿಂಗಳಾಯಮುನಾಸ್ಮೃತಾ ತಯೋರ್ಮಧ್ಯೇ ಗತಾನಾಡಿ ಸುಷುಮ್ನಾಖ್ಯಾ ಸರಸ್ವತೀ" ಎಂದು ಮಾನಸ ಸ್ಮೃತಿ ॥

**ದ್ರೌಪದೀಶ ಪತಿವಿಠಲರು :** ಎರಡಧಿಕ ಎಪ್ಪತ್ತೆನಿಪ ।

| | |
|---|---|
| ೫೧ | ಅಜಾದಿ ರೂಪ |
| ೨೪ | ಕೇಶವಾದಿ |
| ೪ | ಆತ್ಮಾದಿ |
| ೪ | ವಿಶ್ವಾದಿ |
| ೪ | ವಾಸುದೇವಾದಿ |
| ೧೦ | ಮತ್ಸ್ಯಾದಿ |
| ೧ | ಶಿಂಶುಮಾರ |
| ೧ | ವೇದವ್ಯಾಸ |
| ೧ | ದಧಿವಾಮನ |
| ೧ | ವರಾಹ |
| ೧೦೧ | ಹೀಗೆ ನೂರಾವಂದು ರೂಪ. |

**ಭಾವಸೂಚನ :** ಎರಡೇತಿ । ಶತಂ ಚೈಕಾಚ ಹೃದಯಸ್ಯ ನ ಡ್ಯಾ ಇತಿ ಶ್ರುತೇಃ । ದ್ವಾಸಪ್ತತಿ ಸಹಸ್ರಾಣಿ ನಾಡ್ಯೋನ್ಯಾಸ್ತು ಪ್ರಧಾನತಃ । ಇತಿ ಸಾರಸಂಗ್ರಹೇ । ನಾಡೀ ಕಲ್ಪಲತಾಯಾಂಚ । "ಉತ್ತರೋತ್ತರ ಶತಂ ನಾಡ್ಯಾ ಶರೀರೇಸ್ಮಿನ್ ಸಮಾಹಿತಾಃ । ತಾಸು ಪಂಚ ಪ್ರಭೇದಾಸ್ಯುಃ ಪಿಂಗಳೇಡಾಚ ನಂದಿನೀ ಸುಷುಮ್ನಾ ವಜ್ರಿಕಾ ಚೇತಿ ಚತುಸ್ರೋದಿಕ್ಷು ಸಂಸ್ಥಿತ ಇತಿ ।೧೮।

**ಸೂಚನೆ :** ಶ್ರೀ ಗೋಪಾಲದಾಸರಾಯರು ಬರೆದ ಚಿತ್ರ ಧ್ಯಾನೋಪಾಸನೆಯಲ್ಲಿ ಎಲ್ಲ ರೂಪಗಳು ಕಮಲಗಳು, ಅಲ್ಲದೆ ಸುಷುಮ್ನಾ ೫ ನಾಡಿಗಳು, ಇತರ ನಾಡಿಗಳನ್ನು ವಿವರಿಸಿ ಬರೆದುದು ನೋಡಬಹುದು.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಎರಡಧಿಕ" ಇತಿ । "ಶತಂ ಚ ಏಕಾ ಚ ಹೃದಯಸ್ಯ ನಾಡ್ಯಃ" ಇತಿ ಶ್ರುತೇಃ । ಕಲಶ "ಕಲಾಃ ಕಲಶ ನಾಮಕಾಃ" ಇತಿ ತಂತ್ರ ಸಾರೇ । ಕಲಾ ಅಂಶಃ ।೧೮।

## ಕನ್ನಡಾರ್ಥ

"ದೇಹದಲ್ಲಿರುವ ೭೨೦೦೦ ನಾಡಿಗಳಲ್ಲಿ ಹೃದಯದಲ್ಲಿರುವ ೧೦೧ ನಾಡಿಗಳು ಮುಖ್ಯವಾದವುಗಳು." ಎಂದು ಶ್ರುತಿಯು ಹೇಳುವದರಿಂದ "ನೂರೊಂದು ನಾಡಿಗಳು" ಎಂದು ದಾಸರು ಹೇಳಿರುತ್ತಾರೆ. ತಂತ್ರಸಾರದಲ್ಲಿ ಶ್ರೀಮದಾಚಾರ್ಯರು "ಮಾತೃಕಾ ಏಕಪಂಚಾಶತ್"ಎಂದು ಮುಂತಾಗಿ ಆರಂಭಿಸಿ "ಕಲಾಃಕಲಶದೇವತಾಃ" ಎಂದು ನೂರಾವೊಂದು ಕಲಶಗತ ಭಗವದ್ರೂಪಗಳನ್ನು ನಿರೂಪಿಸಿರುತ್ತಾರೆ. "ಕಲಾಃ ಅಂಶ" ಎಂದು ಅರ್ಥ. । ೧೮ ।

**ಅವತರಣಿಕಾ :** ಹಿಂದೆ ಹೇಳಿದ ೧೦೦ ನಾಡಿಗಳಿಗೆ ಮುಖ್ಯ ಕಾರಣವಾದ ೧೨ ನಾಡಿಗಳು. ಇದರಲ್ಲಿ ಗಂಗಾದಿ ದ್ವಾದಶ ನದಿಗಳು ಇರುವವು. ಇಲ್ಲಿ ಕೇಶವಾದಿ ೧೨ ದ್ವಾದಶ ಮೂರ್ತಿಗಳು ಇರುವುವು. ಸುಷುಮ್ನಾದಲ್ಲಿ ಏಕಾತ್ಮನಾದ ನಾರಾಯಣ ಇರುವ ಬಗೆಯನ್ನು ಈ ಪದ್ಯದಲ್ಲಿ ಹೇಳುತ್ತಾರೆ.

**ಮೂಲ :**

**ಇದಕ್ಕೆ ಕಾರಣವೆನಿಸುವವು ಎರ ।**
**ಡಧಿಕದಶ ನಾಡಿಗಳೊಳಗೆ ಸುರ ।**
**ನದಿಯೆ ಮೊದಲಾದಮಲ ತೀರ್ಥಗಳಿಹವು ಕರಣದಲಿ ॥**
**ಪದುಮನಾಭನು ಕೇಶವಾದಿ ।**
**ದ್ವಿದಶ ರೂಪದಲಿಪ್ಪ ನಲ್ಲ್ಮತಿ ।**
**ಮೃದುಳವಾದ ಸುಷುಮ್ನದೊಳಗೇಕಾತ್ಮನೆನಿಸುವನು ॥ ೧೯ ॥**

**ಪದ್ಯಾರ್ಥ :** ಇದಕ್ಕೆ ಕಾರಣವೆನಿಪವು = ಹಿಂದೆ ಹೇಳಿದ ೧೦೦ ನಾಡಿಗಳಿಗೆ ಕಾರಣ=ಮೂಲ ಉತ್ಪತ್ತಿ ಸ್ಥಾನಗಳು ಎನಿಸುವುವು. ಎರಡಧಿಕ ದಶನಾಡಿಗಳು=ಹನ್ನೆರಡು ನಾಡಿಗಳಲ್ಲಿ (ಈ ಹನ್ನೆರಡು ನಾಡಿಗಳು ಆಯಾ ಅಂಗಗಳಲ್ಲಿಪ್ಪ ವಿವರ ಸಂಧಿಯ ಸಾರದಲ್ಲಿ ಕೊಡಲಾಗಿದೆ). ಸುರ ನದಿಯೇ ಮೊದಲಾದ ಅಮಲ ತೀರ್ಥಗಳಿಹವು ಕರಣದಲಿ = ಗಂಗಾದಿ ನದಿಗಳೇ ಮೊದಲು ಮಾಡಿ ೧೨ ನದಿಗಳು ಆಯಾ ಇಂದ್ರಿಯಗಳಲ್ಲಿರುವವು. ಈ ನದಿಗಳೆಲ್ಲವೂ ಅಮಲ=ನಿರ್ಮಲವಾದವು. ಇಲ್ಲಿ ಒಂದೊಂದು ನಾಡಿ ನದಿಗಳಲ್ಲಿ ಒಂದೊಂದು ಕೇಶವಾದಿ ೧೨ ಭಗವದ್ರೂಪಗಳಿರುವವು. ಮೃದುಳ

ವಾದ=ಅತಿ ಸೂಕ್ಷ್ಮವಾದ ಸುಷುಮ್ನಾ ನಾಡಿಯೊಳಗೆ, ಶ್ರೀಹರಿಯು ಏಕಾತ್ಮ "ಏಕಾತ್ಮಾ ಹರಿರುದ್ದಿಷ್ಟಃ ಪ್ರಧಾನತ್ವಾತ್ ಸಮಸ್ತ ಶಃ ॥ ಇತಿ ವಚನಾ ದೇಕಾತ್ಮ ॥ ವಿ. ಸ. ನಾಮ. ವಿಧ್ಯಾಧಿರಾಜೀಯ । ಸಮಸ್ತ ಕ್ಷರಾಕ್ಷರ ಪುರುಷರಿಗೆಲ್ಲ ಪ್ರಧಾನ ಶ್ರೇಷ್ಠನಾಗಿರುವುದರಿಂದ, ಶ್ರೀಹರಿಯು ಏಕಾತ್ಮನೆನಿಸುತ್ತಾನೆ. ಸುಷುಮ್ನಾ ನಾಡಿಯಲ್ಲಿ ಏಕಾತ್ಮನಿರುವನು.

**ಸೂಚನೆ:** ಶ್ರೀ ಪುರಂದರ ದಾಸಾರ್ಯರು "ನಾಡಿ ನದಿಯೊಳಗೆ ಸ್ನಾನವ ಮಾಡಿರೋ" ಎಂಬ ಪದದಲ್ಲಿ ಯಾವಾವ ನಾಡಿಗಳಲ್ಲಿ ಯಾವಾವ ನದಿಗಳು ಇರುವವೆಂಬುದನ್ನು ಕರುಣಿಸಿ ಹೇಳಿದ್ದಾರೆ. ಸದಾಚಾರ ಕುಸುಮ (೧) ಪುಟ ೩೭ ನೋಡಿರಿ. ಪದ ಇಲ್ಲಿ ಕೊಟ್ಟಿದೆ.

ರಾಗ: ನಾಟಿ—ಝಂಪಿತಾಳ

ನಾಡಿ ನದಿಯಲ್ಲಿ ಸ್ನಾನವ ಮಾಡುವೇ । ನರನಾರಾಯಣರ ಪದ ಕೊಂಡಾಡುವೆ ॥ ಪಲ್ಲವಿ ॥ ಇಡಾ ಭಾಗೀರಥಿ ನೀಡೆಪಿ ಂಗಳಾ ದಕ್ಷಿಣೇಯ ಮುನೇ ನಮೋ ॥ ಸುಷುಮ್ನಾ ಸರಸ್ವತೀ ಗಂಡಿಕೇ ನಮೊ ॥ ವಾಮ ಕರ್ಣ ದಲಿ ಗಾಂಧಾರಿ ಕಾವೇರಿಗೆ ನಮೋ । ದಕ್ಷಿಣ ಕರ್ಣದಲಿ ಹಸ್ತಿನಿ ಸಿಂಧು ವಿಗೆ ನಮೋ ॥ ೧ ॥ ವಾಮ ನೇತ್ರವಲಿ ನಿಮಿಷ ತಾಮ್ರಪರ್ಣ್ಯಮ್ಮಗೆ ನಮೋ । ದಕ್ಷಿಣಾ ನಿಮಿಷದಲ್ಲಿ ಕೃಷ್ಣವೇಣ್ಯಮ್ಮಗೆ ನಮೋ । ಎನ್ನ ಹೃದಯ ಮಧ್ಯದಲಿ ಸರಸ್ವತಿಗೆ ನಮೋ । ಉಪನಾಡಿಯೊಳಗಿದ್ದ ನರ್ಮದಾ ಗೋದಾ ವರಿ ನಮೋ ॥ ೨ ॥ ಶಂಕರ ನಾಡಿಯೊಳಗಿದ್ದ ಗೋಮತಿಮ್ಮಗೆ ನಮೋ । ಪೂರ್ಣ ನಾಡಿಯೊಳಗಿದ್ದ ಪಯಶ್ವಿನಿಗೆ ನಮೋ । ಎನ್ನ ಹೃದಯದಲ್ಲಿದ್ದ ಪುರಂದರ ವಿಠಲಗೆ ನಮೋ ಈ ಪ್ರಣವ ತೀರ್ಥದಲ್ಲಿ ನಿತ್ಯ ಭಜಿಸಿ ಮಾಡುವೆ ॥ ೩ ॥ ಹೀಗೆ ಪ್ರಾರ್ಥಿಸಿ ಸ್ನಾನಮಾಡಬೇಕು. (ಈ ಪದ ಬಹುದಿನ ಮುಂಚೆ ಸಂಪ್ರದಾಯಜ್ಞ ಒಬ್ಬ ಬ್ರಾಹ್ಮಣರಿಂದ ದೊರತಿದೆ, ಕಾರಣ ಕೊಟ್ಟಿದೆ. ಈ ಪದದಲ್ಲಿ ಪ್ರಾಸ ಮುಂತಾದವುಗಳಿಲ್ಲ ಮತ್ತು ಶ್ರೀ ವಿಜಯದಾಸರ ಸುಳಾದಿಗೂ ಇದಕ್ಕೂ ಸ್ವಲ್ಪ ವ್ಯತ್ಯಾಸ ಕಂಡಂತೆ ತೋರಿದರೂ ಜ್ಞಾನಿಗಳ ವಚನ ಒಂದೇ ಸರಿಪಡಿಸಿಕೊಳ್ಳಬೇಕಾಗಿ ಬಿನ್ನೈಸುವೆ.)

**ದ್ರೌಪದೀಶಪತಿ ವಿಠಲರು:** ಇದಕೆ ಕಾರಣವೆನಿಸವು ॥ ಕೇಶವಾದಿ ಧಾಮೋದರ ೧೨ ಏಕಾತ್ಮನಾಗಿ ಅನಿರುದ್ಧ ಇದ್ದಾನೆ.

**ಭಾವಸೂಚನ :** ಇದಕೇತಿ ॥ ಎರಡೇತಿ ॥ ೧) ಇಡಾಯಾಂ ಮಂದಾಕಿನೀ, ೨) ಪಿಂಗಳಾಯಾಂ ಯಮುನಾ, ೩) ಗಾಂಧರ್ಯಾ ಕಾವೇರಿ, ೪) ಹಸ್ತಿನ್ಯಾಂ ಸಿಂಧು, ೫) ಲಂಬುನ್ಯಾಂ ತಾಮ್ರಪರ್ಣೀ, ೬) ಮಧ್ಯನಾಡ್ಯಾಂ ಗೋಮತಿ, ೭) ಸರಸ್ವತ್ಯಾಂ ಗಂಡಿಕಾ, ೮) ನಂದಾಯಾಂ ಕೃಷ್ಣವೇಣೀ, ೯) ಕುಹ್ವಿ, ಸೋಮನಂದಿನೀ, ೧೦) ಶಂಖಿನ್ಯಾಂ ತಪತೀ, ೧೧) ವಾರುಣ್ಯಾಂ ಗೋದಾ, ೧೨) ಪೂರ್ಣಾಯಾಂ ಪಯಶ್ವಿನೀ ವಿಜಯದಾಸ ಗ್ರಥಿತ ನಾಡೀ ಪ್ರಕರಣ ಸುಳಾದಿ ಮೂರನೇ ತಾಳಗತ ನಾಮಗಳು ॥ ಏಕಾತ್ಮಾನ್ಯೈಕ ಕರ್ಮಕೃದಿತಿ ವಚನಾತ್ ॥ ೧೯ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಇದಕೆ" ಇತಿ ॥ ಕರಣೇತಿ ॥ "ಮನೋ ಬುದ್ಧೀತಿ ದ್ವಾದಶ" ಇತ್ಯುಕ್ತೇಃ ॥

### ಕನ್ನಡಾರ್ಥ

೧೦೧ ನಾಡಿಗಳಿಗೆ ಕಾರಣ ೧೨ ನಾಡಿಗಳು "ಕರಣ"ಗಳು (೧೦) ಹನ್ನೆರಡು ಮನೋಬುದ್ಧಿಗಳನ್ನು ಸೇರಿಸಿದರೆ ೧೨ ಆಗುತ್ತವೆ ಎಂದು ವಚನವಿರುವದರಿಂದ ಹನ್ನೆರಡು ಇಂದ್ರಿಯಗಳಲ್ಲಿ ೧೨ ನಾಡಿಗಳು ಎಂದು ತಿಳಿಯಬೇಕು ॥ ೧೯ ॥

**ಅವತರಣಿಕಾ :** ವೇದ ಪ್ರತಿಪಾದ್ಯನಾದ ಶ್ರೀ ಪದ್ಮುಮ್ನನು. ಇಡಾಂಶ ೫೦೦ ಪಿಂಗಳಾಂಶ ೫೦೦ ನಾಡಿಗಳಲ್ಲಿ ವಿಶ್ವಾದಿ ಸಹಸ್ರ ರೂಪದಿಂದ ಇದ್ದು, ಬ್ರಹ್ಮ ವಾಯು ಸರಸ್ವತಿ ಭಾರತಿಯರ ದ್ವಾರಾ ಎಲ್ಲ ಜೀವರ ಸಕಲ ವ್ಯಾಪಾರ ಮಾಡಿಸುವನೆಂದು ಉಪದೇಶಿಸುತ್ತಾರೆ.

**ಮೂಲ :**

ಆಮ್ನಾಯಃ ಪ್ರತಿಪಾದ್ಯ ಶ್ರೀ ಪ್ರ ।
ದ್ಯುಮ್ನ ದೇವನು ದೇಹದೊಳಗೆ ಸು ।
ಷುಮ್ನ ದೀಡಾ ಪಿಂಗಳದಿ ವಿಶ್ವಾದಿ ರೂಪದಲಿ ॥
ನಿರ್ಮಲಾತ್ಮನು ವಾಣಿ ವಾಯು ಚ ।
ತುರ್ಮುಖರೊಳಿದ್ದಖಿಳ ಜೀವರ ।
ಕರ್ಮ ಗುಣವನುಸರಿಸಿ ನಡೆವನು ವಿಶ್ವ ವ್ಯಾಪಕನು ॥ ೨೦ ॥



**ಪದ್ಯಾರ್ಥ :** ಆಮ್ನಾಯಾಃ ಎಂಬುವ ಪದವಿರುವದು. ಇದಕ್ಕೆ ದಾಸಾರ್ಯರ ಛಂಧೋಬದ್ಧ ಮಾತ್ರಾಗಣ ಮೂರಕ್ಕೆ ಸರಿಹೋಗುವ ಮ್ನಾ ಆಕಾರವಿರುವದನ್ನು ಮ್ನ ಹ್ರಸ್ವದಲ್ಲಿ ಪ್ರಯೋಗಿಸಿದ್ದು ಕಾವ್ಯದಲ್ಲಿ ದೋಷ ವಲ್ಲ. ಹೀಗೆ ಆಮ್ನಾಯಾಃ=ವೇದಗಳಿಂದ ಸ್ತುತ್ಯನಾದ ಪ್ರದ್ಯುಮ್ನ ದೇವನು=ವೇದಾಭಿಮಾನಿಗಳಾದ ವಾಣಿ ಭಾರತಿಯರ ತಂದೆ-ಶ್ರೀ ಪ್ರದ್ಯುಮ್ನ ನಾಮಕ ಹರಿಯು, ದೇಹದೊಳಗೆ ಸುಷುಮ್ನ ದೀಡಾ ಪಿಂಗಳದಿ=ಸುಷುಮ್ನ ನಾಡಿಯಲ್ಲಿ ಏಕಾತ್ಮ ಮೂಲ ರೂಪ, ಪ್ರದ್ಯುಮ್ನ ಇಡಾ ೫೦೦ ಅಂಶ ಮತ್ತು ಪಿಂಗಳಾನಾಡಿ ೫೦೦ ಅಂಶ ಇವುಗಳಲ್ಲಿ, ವಿಶ್ವಾದಿ ರೂಪದಲಿ=ವಿಶ್ವನೇ ಮೊದಲು ಮಾಡಿ ಸಹಸ್ರನಾಮಗತ ವಿಶ್ವಾದಿ ಸಾವಿರ ರೂಪದಲ್ಲಿದ್ದು, ನಿರ್ಮಲಾತ್ಮ=ದೋಷದೂರ, ಸಚ್ಚಿನ್ಮಯ ಗಾತ್ರನು ವಾಣಿ ಸರಸ್ವತೀ ವಾಯು ಚತುರ್ಮುಖ-ಬ್ರಹ್ಮದೇವರೊಳಗಿದ್ದು, ಅವರ ದ್ವಾರಾ ಅಖಿಳ ಜೀವರ ಕರ್ಮ ಗುಣವನುಸರಿಸಿ ನಡೆವನು. ವಿಶ್ವವ್ಯಾಪಕನು=ಸಮಸ್ತ ಜೀವರ ಸ್ವಭಾವ ಗುಣ ಅವರ ಕರ್ಮಗಳಿಗೆ ಯೋಗ್ಯತಾನುಗುಣದಂತೆ ಅನುಸರಿಸಿ, ತಾನು ಒಳಗಿದ್ದು ನಿಯಾಮಕನಾಗಿ ಪ್ರೇರಿಸುತ್ತಾ ನಡೆಯು ವನು. ಈತನೇ ವಿಶ್ವವ್ಯಾಪಕನಾಗ=ಸಮಸ್ತ ಜಗತ್ತಿನಲ್ಲಿ ವ್ಯಾಪ್ತನಾಗಿ ಇರುವನು.

**ದ್ರೌಪದೀಶಪತಿ ವಿಠಲರು :** ಆಮ್ನಯ ಪ್ರತಿಪಾದ್ಯ ಸುಷುಮ್ನಾ ದೊಳಗೆ ಪ್ರದ್ಯುಮ್ನ, ಇಡಾ ಮಹತ್ತತ್ವ ವಾಸುದೇವ ೫೦೦ ಪಿಂಗಳಾ ಅಹಂ ಕಾರ ತತ್ವ ಸಂಕರ್ಷಣ ೫೦೦, ವಿಶ್ವಾದಿ ಸಹಸ್ರ ರೂಪದಿಂದ ಇರುತ್ತಾನೆ.

**ಭಾವಸೂಚನ :** ಆಮ್ನಾಯೇತಿ ॥ ಇಡೇತಿ ವಜ್ರಿಕಾರ್ಯಾ ಪ್ರಕಾ ಶಿನೀ ವೈದ್ಯುತೇಡಾ ಪಿಂಗಳಾ ಬ್ರಹ್ಮನಾಡೀ ಧರಣೀ ಎಂಬಷ್ಟ ನಾಡಿಷು, ವಿಶ್ವ, ತೈಜಸ, ಪ್ರಾಜ್ಞ, ತುರ್ಯಾತ್ಮಾಂತರಾತ್ಮಾ ಜ್ಞಾನಾತ್ಮ ಪರಮಾ ತ್ಮನಃ ಶ್ಚಿಂತನೀಯಾಃ ॥ ಇಡಾ ಚ ಪಿಂಗಳಾ ಚೈವ ವಜ್ರಿಕಾ ಧರಣೀ ತಥಾ ॥ ಸುಷುಮ್ನಾಯಾಶ್ಚತುರ್ದಿಕ್ಷು ವಜ್ರಿಕಾದ್ಯಾ ಸುತ ತತ್ರ ಚ ॥ ಚತುರ್ಮೂರ್ತಿಃ ಸ ಭಗವಾನ್ ಹೃದಯೇ ಸುವ್ಯವಸ್ಥಿತ. ಇತಿ ಸಾರ ಸಂಗ್ರಹೇ ಅಥವಾ ॥ ದಕ್ಷಣದ ಕೆಲವು ನಾಡಿಗಳಿಗೆ ಪಿಂಗಳಾ ಯಂತ ನಾಮ, ವಾಮ ಭಾಗ ನಾಡೀ ಇಡಾ ಶಬ್ದಿತಾಃ ॥ (ಇದು ಮೂಲ ತುಂದಿಯಲ್ಲಿರುವ ಕ್ರಮ)

ತದುಕ್ತಂ ಶಾಂಡಿಲ್ಯ ಮುನಿನಾ ॥ "ದೇಹೇ ತಿಸ್ರಸ್ತು ನಾಡ್ಯಸ್ಯುಃ ಪಿಂಗಳೇಡಾ ಸುಷುಮ್ನಕಾಃ || ದಕ್ಷಿಣಾ ಪಿಂಗಳಾಃ ಸರ್ವಾ ಇಡಾ ವಾಮ ಪ್ರಕೀರ್ತಿತಾ ಇತಿ ॥ ೨೦ ॥

**ಸೂಚನೆ:** ಈ ಟಿಪ್ಪಣಿಕಾರರು ಇಡಾ ಪಿಂಗಳಾಂಶ ವಿವರಣೆ ಪ್ರಮಾಣ ಕೊಡುವದಲ್ಲದೆ, ವಿಶ್ವಾದಿ ರೂಪಗಳಿಗೆ, ಮೂಲ ನಾರಾಯಣ ಮಾತೃಗತ ವಿಶ್ವಾದಿ ಅಷ್ಟ ರೂಪಗಳನ್ನು, ಸುಷುಮ್ನಾ ವಿಭಾಗವಾಗಿರುವ, ವಜ್ರಿಕಾ, ಆರ್ಯಾ, ಪ್ರಕಾಶಿನಿ, ವೈದ್ಯುತಾ ಈ ನಾಲ್ಕು ನಾಡಿಗಳಿಗೆ ವಿಶ್ವಾದಿ ನಾಲ್ಕು ರೂಪಗಳು. ಸುಷುಮ್ನಾಕ್ಕೆ ನಾಲ್ಕು ದಿಕ್ಕಿನಲ್ಲಿ ಇಡಾ, ಪಿಂಗಳಾ, ಬ್ರಹ್ಮ, ಧರಣೀ ಎಂಬ ನಾಲ್ಕು ನಾಡಿಗೆ ಆತ್ಮಾದಿ ನಾಲ್ಕು ರೂಪಗಳನ್ನು ಸಾರ ಸಂಗ್ರಹದಲ್ಲಿ ಹೇಳಿರುವರೆಂತ ಇದೊಂದು ಕ್ರಮ ಹೇಳಿದ್ದಾರೆ. ಇದು ಸಮಂಜಸ ಭಗವನ್ಮೂರ್ತಿಗಳು ಎಲ್ಲ ಒಂದೇ ಬೇಕಾದಲ್ಲಿ ಬೇಕಾದ ರೂಪಗಳನ್ನು ನೆನಪಿನಲ್ಲಿಟ್ಟು ಬಿಡದೇ ಚಿಂತಿಸಬೇಕು. ಇದೇ ಹರಿಯ ಸ್ಮರಣ ಮುಖ್ಯ, ವಿಸ್ಮರಿಣಿಯೇ ಪಾಪ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಆಮ್ನಾ(ಮ್ನ)ಯೇತಿ ॥" ॥ ೨೦ ॥

## ಕನ್ನಡಾರ್ಥ

ಸುಷುಮ್ನಾ ಮುಂತಾದ ನಾಡಿಗಳಲ್ಲಿರುವ ಭಗವದ್ರೂಪಗಳನ್ನು ನಿರೂಪಿಸುತ್ತಾರೆ "ಆಮ್ನಯ ಪ್ರತಿಪಾದ್ಯ" ಎಂಬ ಈ ಪದ್ಯದಿಂದ.

**ಅವತರಣಿಕಾ :** ಈ ಪರಿಯಂತರವಾಗಿ ದೇಹಗತ ನಾಡಿ ರೂಪಗಳ ವಿವರ ಹೇಳುತ್ತಾ ಈ ಪದ್ಯದಿಂದ ನಾಡಿಗತ ರೂಪಗಳನ್ನು; ಕಾಲ ನಾಮಕ ಹರಿಯು ರೂಪಗಳಲ್ಲಿ ಚಿಂತಿಸುವ ಕ್ರಮ ಒಂದು ಅಬ್ದಕ್ಕೆ ೩೬೦ ದಿವಸ. ಇದರಲ್ಲಿ ೫ ಪ್ರಭೇದ ವಿದೆ ಎಂಬುದನ್ನು ಅಲ್ಲಿಪ್ಪ ಅನಿರುದ್ಧಾದಿ ಪಂಚ ರೂಪಗಳನ್ನೂ ವಿವರಿಸುತ್ತಾರೆ.

**ಮೂಲ :**

ಅಬ್ದ್ಯಯನ ಋತು ಮಾಸ ಪಕ್ಷ ಸು ।
ಶಬ್ದದಿಂದಲಿ ಕರೆಸುತಲಿ ನೀ ।
ಲಾಬ್ದ ವರ್ಣನಿರುದ್ಧನೇ ಮೊದಲೈದು ರೂಪದಲಿ ॥

**ಹಬ್ಬಿನನು (ಹನು) ಸರ್ವತ್ರದಲಿ ಕರು।**
**ಣಾಬ್ಧಿ ನಾಲ್ವತ್ತೈದು ರೂಪದಿ।**
**ಲಭ್ಯನಾಗುವನೀ ಪರಿಯ ಧೇನಿಸುವ ಭಕತರಿಗೆ॥ ೨೧ ॥**

**ಪದ್ಯಾರ್ಥ:** ಅಬ್ದ್ಯಯನ=ಅಬ್ದ-ಅಯನ ಅಬ್ದ=ವರ್ಷ, ಅಯನ=ಒಂದು ವರ್ಷದಲ್ಲಿ ಉತ್ತರಾಯಣ-ದಕ್ಷಿಣಾಯಣವೆಂತಲೂ ೨ ಅಯನಗಳು. (ಇಡಾಂಶ-ಉತ್ತರಾಯಣ, ಪಿಂಗಳಾಂಶ-ದಕ್ಷಿಣಾಯನ ನಾಡಿಗಳು). ಋತುಗಳು=ಒಂದು ವರ್ಷದಲ್ಲಿ ವಸಂತಾದಿ ಆರು ಋತುಗಳು. ಮಾಸಗಳು=ಒಂದು ವರ್ಷದಲ್ಲಿ ಚೈತ್ರಾದಿ ೧೨ ತಿಂಗಳುಗಳು. ಒಂದು ತಿಂಗಳಲ್ಲಿ ಶುಕ್ಲ ಪಕ್ಷ-ಕೃಷ್ಣ ಪಕ್ಷವೆಂತ ೨ ಪಕ್ಷಗಳು. ೧೨ ತಿಂಗಳಿಗೆ ೨೪ ಪಕ್ಷಗಳು. ಹೀಗೆ ಒಂದು ವರ್ಷದಲ್ಲಿ ೫ ವಿಭಾಗಗಳು.

೧ ಅಬ್ದ, ೨ ಅಯನ, ೬ ಋತುಗಳು, ೧೨ ಮಾಸಗಳು, ೨೪ ಪಕ್ಷಗಳು. ಇವೆಲ್ಲ ಕೂಡಿಸಿದರೆ ೪೫ ಆಗುವವು. ಇವುಗಳಲ್ಲಿ ಅನಿರುದ್ಧನೆ ಮೊದಲಾಗಿ ಐದು ರೂಪಾಂಶಗಳಿಂದ, ನೀಲಾಬ್ದ=ನೀಲ ಮೇಘದಂತೆ ವರ್ಣವುಳ್ಳ ಅನಿರುದ್ಧಾದಿ ೫ ರೂಪಗಳಿಂದ ಹಬ್ಬಿಹನು=ವ್ಯಾಪಿಸಿರುವನು, ಈ ಕರುಣಾಳು ಆಯಾ ನಾಮಗಳಿಂದ ನಾಲ್ವತ್ತೈದು ರೂಪಗಳಿಂದ ಕಾಲ ಪ್ರವರ್ತಕ ಕಾಲ ನಿಯಾಮಕನಾಗಿರುವನೆಂದು ಈ ಪ್ರಕಾರ ಧೇನಿಸುವ-ಚಿಂತಿಸುವ ಭಕ್ತರಾದ ಜ್ಞಾನಿಗಳಿಗೆ ಲಭ್ಯನಾಗುವನು=ದೊರಕುವನು-ಸಿಗುವನು-ಸಿಕ್ಕು ಪೊಳೆಯುವನು.

**ಸೂಚನೆ:** ಈ ಅಬ್ದ-ಅಯನಾದಿ ಶಬ್ದಗಳ ನಿರ್ವಚನ ವ್ಯಾಸದಾಸ ಸಿದ್ಧಾಂತ ಕೌಮುದೀಕಾರರು ಬಹು ಸಮಂಜಸ ಉಪನಿಷತ್ ಆಧಾರದೊಂದಿಗೆ ಬರೆದಿರುವರು! ಅವರ ಪರಮೋಪಕಾರ.

ದ್ರೌಪದೀಶ ಪತಿವಿಠಲರು: ಅಬ್ದಯನ-ಋತುಮಾಸ ಪಕ್ಷಸು.

| | ವಸ್ತು | ರೂಪನಾಮ | ಅಂಶಗಳು | ರೂಪಗಳು |
|---|---|---|---|---|
| ೧-೧ | ಅಬ್ದ | ಅನಿರುದ್ಧ | ೫ ಅಂಶ | ೧ |
| ೨-೨ | ಅಯನ | ಪ್ರದ್ಯುಮ್ನ | ೫ ಅಂಶ | ೨ |
| ೩-೬ | ಋತು | ಸಂಕರ್ಷಣ | ೫ ಅಂಶ | ೬ |

| | | | | |
|---|---|---|---|---|
| ೪-೧೨ | ಮಾಸ | ವಾಸುದೇವ | ೫ ಅಂಶ | ೧೨ |
| ೫-೨೪ | ಪಕ್ಷಗಳು | ನಾರಾಯಣ | ೫ ಅಂಶ | ೨೪ |
| ೪೫ | | | ೨೫ ಅಂಶ | ೪೫ |

**ಭಾವಸೂಚನ : ಅಬ್ದೇತಿ ॥**

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಅಬ್ದಯನ" ಇತಿ ॥ ವತ್ಸರಃ । ಅಬ್ದಃ ಮೇಘಃ । ಉಭಯತ್ರ ಮಾಸಂ ತು-"ಮೇಘಸ್ಥೋ ಜಲದಾತೃತ್ವಾತ್ ಅಬ್ದಃ" । (ವಾಯುಗಃ) । ಸರ್ವಾಶ್ರಯತ್ವಾತ್ ಆಯನಮ್ । ಋತುಗತತ್ವಾತ್ ಋತುಃ । ಮಾಂ ಸುಶ್ರಿಯಂ ಯೋಗ್ಯೇಭ್ಯಃ (ಸ) ತನೋತಿ ಇತಿ ಮಾಸಃ । ಪಾತಿ ಇತಿ ಪಃ । ಕ್ಷಿಣೋತಿ ಪಾಪಂ ಪಕ್ಷಃ । ಋತು ಸಂಸ್ಥೋ ಜನಾರ್ದನಃ । ಮೋಕ್ಷಾದೀನ್ ಕಲ್ಪತೇ । ಅಮುಷ್ಯ ಹಿ । ಋತುನಾಮಾನಂ ಋತುಗಂ ಋತುತ್ವಾತ್ ಋತುನಾಮಕಮ್ । ಇತ್ಯುಪಾಸೀತ ಯೋ ವಿಷ್ಣುಂ ಪಂಚಾತ್ಮಾನಂ" ಇತ್ಯನಂತರಂ-"ವಾಸಸ್ಯ ಸುಖಕಾರಿತ್ವಾತ್ ವಸಂತಃ ಪುರುಷೋತ್ತಮಃ । ನೀರಾದೇಃ ಗಿರಣಾತ್ ಘೀಷ್ಮಃ ವರ್ಷಣಾತ್ ವರ್ಷ ಉಚ್ಯತೇ । ಶಂ ರಾತೀತಿ ಶರತ್ಪ್ರೋಕ್ತಃ ಹೇಮಂತಃ ಹಿಮಕಾರಣಾತ್ । ಇತಿ ಚ । ನೀಲೇತ್ಯತ್ರ ಶುಕ್ಲಂ ತು ವಾಸುದೇವಾಖ್ಯಂ ಅನಿರುದ್ಧಂ ತು ನೀಲಕಮ್ । ಸಂಕರ್ಷಣಂ ಪಿಂಗಲಂ ಚ ಪ್ರದ್ಯುಮ್ನಂ ಹರಿತರ ಸ್ಮೃತಮ್ । ನಾರಾಯಣಂ ಲೋಹಿತಂ ಸ್ಯಾತ್ ಪಂಚ ರೂಪಾಣ್ಯಜೇ ಹಕಾ" । ಇತಿ ಛಾಂದೋಗ್ಯ-ಬೃಹದ್ಭಾಷ್ಯೇ ॥ ೨೧ ॥

## ಕನ್ನಡಾರ್ಥ

"ಅಬ್ದ" ಎಂಬ ಪದಕ್ಕೆ ಸಂವತ್ಸರ (ವರ್ಷ) ಹಾಗು ಮೇಘವೆಂದು ಎರಡು ಅರ್ಥಗಳಾಗುತ್ತವೆ. ಎರಡೂ ಅರ್ಥಗಳಲ್ಲಿ ಲೋಕರೂಢಿ ಹಾಗೂ ಪ್ರಮಾಣಗಳಿರುತ್ತವೆ. ಎರಡರಲ್ಲಿಯೂ ಪರಮಾತ್ಮನೇ ಇರುತ್ತಾನೆ. ಆದುದರಿಂದ "ಅಬ್ದ" ಎಂದು ಹೇಳಿಸಿಕೊಳ್ಳುತ್ತಾನೆ. ಮೇಘದಲ್ಲಿದ್ದು ಜಲವನ್ನೀಯುವದರಿಂದ "ಅಬ್ದ" ಎಂದು ಶ್ರೀಹರಿಗೆ ಹೆಸರು ಬಂದಿರುತ್ತದೆ. ಸರ್ವವನ್ನು ತನ್ನಲ್ಲಿ ಇಟ್ಟುಕೊಂಡಿರುವದರಿಂದ "ಆಯನ"ವೆನಿಸಿಕೊಳ್ಳುತ್ತಾನೆ.

ಋತುಗಳಲ್ಲಿರುವದರಿಂದ ಋತುವೆನಿಸಿಕೊಳ್ಳುತ್ತಾನೆ. ಯೋಗ್ಯರಾದ ಭಕ್ತರಿಗೆ ಸುಶ್ರಿಯವನ್ನು ಕೊಡುವದರಿಂದ ಶ್ರೀ ಹರಿಗೆ "ಮಾಸ"ವೆಂದು ಕರೆಯುತ್ತಾರೆ. ಪಾಪಗಳನ್ನು ನಾಶಗೊಳಿಸಿ ಸಂರಕ್ಷಿಸುವದರಿಂದ ಶ್ರೀ ಹರಿಯು ಪಕ್ಷವೆಂದೆನಿಸಿಕೊಳುತ್ತಾನೆ. "ಋತು" ಋತುಗಳನ್ನು ಪ್ರವರ್ತಿಸಿ ಅವುಗಳಿಗೆ ಋತು ಧರ್ಮಗಳನ್ನಿತ್ತುದುದರಿಂದಲೂ ಸರ್ವ ಶಾಸ್ತ್ರಗಳಿಂದ ತಿಳಿಸಲ್ಪಡುವವನಾದುದರಿಂದಲೂ ಋತು ಶಬ್ದ ವಾಚ್ಯನಾದ ಪಂಚರೂಪೀ ಹರಿಯನ್ನು "ಪಂಚ ಋತು" ಎಂದು ಉಪಾಸಿಸಿದರೆ ಋತುಸ್ಥನಾದ ಶ್ರೀ ಹರಿಯು ಅವನಿಗೆ ಮೋಕ್ಷ ಮುಂತಾದ ಪುರುಷಾರ್ಥಗಳನ್ನು ದಯಪಾಲಿಸುತ್ತಾನೆ, ಎಂದು ಹೇಳಿ ಮುಂದೆ ವಾಸಕ್ಕೆ ಸೌಖ್ಯವನ್ನುಂಟುಮಾಡುವದರಿಂದ "ವಸಂತ"ನೆಂದೂ ಪುರುಷೋತ್ತಮ ಶ್ರೀ ಹರಿಗೆ ಕರೆಯುವರು. ನೀರು ಮುಂತಾದವುಗಳನ್ನುನುಂಗುವದರಿಂದ "ಗ್ರೀಷ್ಮ"ವೆಂದು ಕರೆಯುವರು.ಅದೇ ಮಳೆಯನ್ನು ಸುರಿಸುವದರಿಂದ "ವರ್ಷ"ವೆನ್ನುತ್ತಾರೆ. ಸುಖವನ್ನು ತಂದು ಕೊಡುವದರಿಂದ "ಶರತ್" ಎಂದು ಹೇಳುತ್ತಾರೆ, ಹಿಮವನ್ನು ಉಂಟು ಮಾಡುವದರಿಂದ "ಹೇಮಂತ"ವೆಂದು ಹರಿಯನ್ನು ಕರೆಯುತ್ತಾರೆ, ಎಂದು ಹೇಳಿರುತ್ತಾರೆ, ಛಾಂದೋಗ್ಯ ಭಾಷ್ಯದಲ್ಲಿ "ನೀಲಾಬ್ದ ವರ್ಣ"ವೆಂದು ಹೇಳಿರುತ್ತಾರೆ. ಇಲ್ಲಿ ತಿಳಿಯಬೇಕಾದ ವಿಶೇಷಾಂಶವೇನಂದರೆ "ವಾಸುದೇವ ರೂಪವು ಶುಕ್ಲ ವರ್ಣವುಳ್ಳದ್ದು-ಬಿಳಿಯ ಬಣ್ಣದ್ದು; ಅನಿರುದ್ಧ ರೂಪವು ನೀಲವರ್ಣ ವಿಶಿಷ್ಟವಾದುದು. ಸಂಕರ್ಷಣ ರೂಪವು ಪಿಂಗಲವರ್ಣ (ಕೆಂಪು ಮಿಶ್ರ ಹಸರು) ದಿಂದಲೂ ಪ್ರದ್ಯುಮ್ನ ರೂಪವು ಹರಿತ್ (ಹಳದಿ) ವರ್ಣ ದಿಂದಲೂ ಕೂಡಿರುವವು. ನಾರಾಯಣ ರೂಪವು ಅಚ್ಚುಗೆಂಪು-ಲೋಹಿತ ಬಣ್ಣವುಳ್ಳದ್ದು, ಎಂದು ಭಾಷ್ಯದಲ್ಲಿ ಹೇಳಿರುತ್ತಾರೆ. ಈ ವಿಶೇಷವನ್ನು ತಿಳಿದು, ಅನಿರುದ್ಧಾದಿ ಪಂಚ ರೂಪಗಳನ್ನು ಋತು ಮುಂತಾದವುಗಳಲ್ಲಿ ತಿಳಿಯಬೇಕು.

**ಅವತರಣಿಕಾ :** ಹಿಂದಿನ ಪದ್ಯದಲ್ಲಿ ಪೇಳಿದ ಅನಿರುದ್ಧಾದಿ ೨೫ ಅಂಶಗಳನ್ನು ತದ್ರೂಪ ವರ್ಣ, ಈ ೨೫ ರೂಪಗಳು ; ೧೫ ತಿಥಿಗಳನ್ನು ಇಪ್ಪತ್ತುನಾಲ್ಕು ಪಕ್ಷಗಳಿಂದ ಹೆಚ್ಚಿಸುವದರಿಂದ ೩೬೦ ದಿವಸಗಳಾಗುತ್ತವೆ. ಈ ೩೬೦ ರೂಪಗಳನ್ನು ಚಿಂತಿಸಿದವರಿಗೆ ಫಲ ಹೇಳುತ್ತಾರೆ.

ಮೂಲ :

ಐದು ರೂಪಾತ್ಮಕನು ಯಿಪ್ಪ ।
ತ್ತೈದು ರೂಪದಲಿಪ್ಪ ಮತ್ತಾದಿ ।
ನೈದು ತಿಥಿ ಯಿಪ್ಪತ್ತು ನಾಲಕರಿಂದ ಪೆಚ್ಚಿಸಲು ॥
ಐದುವದು ಅರವತ್ತಧಿಕ ಆ ।
ರೈದು ದಿವಸಾಹ್ವಯನೊಳಗೆ ಮನ ।
ತೋಯ್ದವಗೆ ತಾಪತ್ರಯದ ಮಹದೋಷವೆಲ್ಲಿಹದೊ ॥೨೨॥

**ಪದ್ಯಾರ್ಥ :** ಐದು ರೂಪಾತ್ಮಕನು. ಇಪ್ಪತ್ತೈದು ರೂಪದಲ್ಲಿರುವನು. ಒಂದರೊಳಗೊಂದು ಅನಿರುದ್ಧಾದಿ ೫×೫ ಅಂಶಗಳು ೨೫ ರೂಪವಿರುವವು. ಮತ್ತಾದಿನೈದು ತಿಥಿ ಇಪ್ಪತ್ತುನಾಲ್ಕರಿಂದ ಹೆಚ್ಚಿಸಲು, ಒಂದು ಪಕ್ಷಕ್ಕೆ ಪ್ರತಿ ಪದಾದಿ ೧೫ ತಿಥಿಗಳು, ಈ ಹದಿನೈದು ತಿಥಿಗಳಂತೆ ೧ ಪಕ್ಷಕ್ಕೆ ಆದರೆ ೨೪ ಪಕ್ಷಗಳಿಗೆ ೧೫×೨೪=(೩೬೦) ಅರುವತ್ತು ಅಧಿಕ ಆರೈದು ೬೦+೬=೬೬×೫=೩೩೦ ಮತ್ತೂ ಆರೈದು ಎಂಬುದು ಎರಡನೇ ಸಾರಿ ಗಣನಾ ಮಾಡಬೇಕು. ೬×೫=೩೦ ಮೇಲಿನದು ೩೩೦+೩೦=೩೬೦ ಹೀಗೆ ಲೆಕ್ಕ ಮಾಡಿದರೆ ದಾಸರಾಯರ ಮೂಲಪ್ರತಿ ಅರವತ್ತಧಿಕ ಆರೈದು ಎಂಬುದಕ್ಕೆ ಸರಿಹೋಗುತ್ತದೆ. ಇದು ಗಣಿತ ಸಂಖ್ಯಾಸಂಜ್ಞೆಯನ್ನರಿಯದೇ ಹಿಂದೆ ಅಚ್ಚಾದ ಪುಸ್ತಕಗಳಲ್ಲಿ ಲೆಕ್ಕ ಸರಿಪಡಿಸಲಿಕ್ಕೆ ಅರವತ್ತಧಿಕ ಮುನ್ನೂ। ರಾದ, ಎಂದು ತಿದ್ದಿರುವರು. ಇದು ಮಾತ್ರಾಗಣ ೧೪ ಮಾತ್ರಾಕ್ಕೆ ಹೆಚ್ಚಾಗುತ್ತದೆ (ಇನ್ನೊಂದು ಪ್ರತಿಯಲ್ಲಿ ಅರವತ್ತು ಮುನ್ನೂರಾದ ಎಂದು ತಿದ್ದಿರುವರು. ಅಧಿಕ ಎಂಬುದನ್ನು ತೆಗೆದುಹಾಕಿದ್ದಾರೆ) ಈ ಅಧಿಕ ಶಬ್ದವು ಬಹು ಮಹತ್ತಾದುದು. ಅರವತ್ತು ಅಧಿಕ ಆರೈದು, ೬೦+೬=೬೬×೩೩೦ ಮತ್ತು ಅಧಿಕ ಶಬ್ದವು ಹೆಚ್ಚಾದ್ದು ಎಂಬುದರಿಂದ, ಆರೈದು ೬×೩೦ ಹೀಗೆ ಅಧಿಕ ಎರಡು ಸಾರೆ ಪರಿಗಣನೆಗೆ ೩೬೦ ಸರಿಯಾಗುತ್ತದೆ. ಇಂತು ೩೬೦ ದಿವಸಾಹ್ವಯನೊಳಗೆ=ದಿವಸವೆಂಬ ನಾಮವುಳ್ಳ ಪರಮಾತ್ಮನ ಅಹಃ ಎಂಬುವ ನಾಮದಲ್ಲಿ, ಮನತೋಯ್ದವಗೆ=ಮನಸ್ಸು ನೆನಸಿದವಗೆ ಭಕ್ತಿಯಿಂದ ಚಿಂತಿಸಿದರೆ, ತಾಪತ್ರಯದ ಮಹದೋಷ=ಆಧ್ಯಾತ್ಮ ಅಧಿಭೂತಾಧಿ

ಮೂರು ತಾಪಗಳ ದುಃಖವೆಲ್ಲಿಹದೋ ? = ಎಲ್ಲಿ ಬರುತ್ತದೆ ? ಎಂದರೆ ಬರುವದೇ ಇಲ್ಲ.

ದ್ರೌಪದೀಶಪತಿ ವಿಠಲರು: ಐದು ರೂಪಾತ್ಮಕನು ಪದ್ಯ ॥ ಈ ಹದಿನೈದು ತಿಥಿಯಿಂದ ೨೪ ಪಕ್ಷ ಹೆಚ್ಚಿಸಿದರೆ ೩೬೦-ಅರವತ್ತು ದಿವಸ ಆಗುತ್ತವೆ. ಶ್ರೀಹರಿಯು ತಚ್ಛಬ್ದ ವಾಚ್ಯನಾಗಿ ಕರೆಸುತ್ತಾನೆ.

ಭಾವಸೂಚನ: ಐದೇತಿ ॥ ೨೨ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಐದು" ಇತಿ ॥ ೨೨ ॥

## ಕನ್ನಡಾರ್ಥ

ಸಂವತ್ಸರ ಅಯನ ಋತು ಮಾಸ ಪಕ್ಷಗಳಿಂದು ಪಂಚ ವಿಧ ಕಾಲ ನಿಯಾಮಕ ಭಗವದ್ರೂಪವನ್ನು ಹೇಳಿ, ಇದೇ ಕಾಲನಿಯಾಮಕ ಪರಮಾತ್ಮನ ತಿಥಿಗಳಿಂದಾರಂಭಿಸಿ ೩೬೦ ದಿವಸಗಳಲ್ಲಿರುವ ರೂಪಗಳ ಸಂಖ್ಯೆ ಮುಂತಾದವುಗಳನ್ನು ಈ ಪದ್ಯದಿಂದ ನಿರೂಪಿಸುತ್ತಾರೆ.

**ಅವತರಣಿಕಾ:** ಹಿಂದಿನ ಪದ್ಯದಲ್ಲಿ ಕಾಲನಾಮಕನ ರೂಪಗಳನ್ನು ಒಂದು ದಿವಸ ಪರಿಯಂತರ ಹೇಳಿದರು. ಈ ಪದ್ಯದಲ್ಲಿ ದಿವಸದಲ್ಲಿರುವ ಕಾಲ ವಿಭಾಗಗಳು ಯಾಮ, ಮುಹೂರ್ತ ಘಟಿಕಾ, ಪಳ, ಲವತೃಟ್ಯಾದಿಗಳಲ್ಲಿ ಶ್ರೀಹರಿಯು ಕಾಲ ಸಂಜ್ಞೆಯಿಂದ ಇದ್ದು ವಿಹಾರ ಮಾಡುತ್ತಲಿರುವದನ್ನು ಶ್ರೀ ರಮೆಯು ಅತ್ಯಾನಂದ ಭರಿತಳಾಗಿ ಹರಿಯ ಅನಂತ ವ್ಯಾಪಾರಾದಿಗಳಲ್ಲಿ ಮುಳಿಗ್ಯಾಡುತಿಹಳು. ಶ್ರೀಹರಿಯ ಅಪಾರ ಗುಣ ಕ್ರಿಯಾದಿಗಳು ಅನಂತವೆಂದು ಹೇಳುತ್ತಾರೆ.

**ಮೂಲ:**

**ದಿವಸಯಾಮ ಮುಹೂರ್ತ ಘಟಿಕಾ ।**
**ದ್ಯವಯವಗಳೊಳಗಿದ್ದು ಗಂಗಾ ।**
**ಪ್ರವಹದಂದದಿ ಕಾಲನಾಮಕ ಪ್ರವಹಿಸುತಲಿಪ್ಪ ॥**
**ಇವನ ಗುಣರೂಪ ಕ್ರಿಯಂಗಳ ।**
**ನಿವಹದೊಳು ಮುಳುಗಾಡುತಲಿ ಭಾ ।**
**ರ್ಗವಿ ಸದಾಸಂಪಾತ್ಮಳಾಗಿಹಳೆಲ್ಲ ಕಾಲದಲಿ ॥ ೨೩ ॥**

**ಪದ್ಯಾರ್ಥ :** ದಿವಸ=ಹಗಲು ರಾತ್ರಿ ಕೂಡಿದ ಒಂದು ದಿವಸ-ಎಂದರೇ "ದಿವ್ಯಂತಿ ದೇವಾ ಅತ್ರೇತಿ ದಿವಸಃ=ಯಾವ ಸ್ಥಳದಲ್ಲಿ ಪರಮಾತ್ಮ ಕ್ರೀಡಾದಿ ವ್ಯಾಪಾರ ಮಾಡುತ್ತಾನೋ ಅದಕ್ಕೆ ದಿವಸವೆಂದು ಈ ಹೆಸರು. ಪರಮಾತ್ಮನದೇ ಆಗಿದೆ, ಯಾಮಃ=ಯಾತೀತಿ ಯಾಮಃ ॥ ಯಾವದು ಕಾಲ ಶೀಘ್ರವಾಗಿ ಹೊರಟುಹೋಗುವದೋ ಅದು ಯಾಮುವು ಭಗವಂತನ ನಾಮ, ಯಾಮ ಎಂದರೆ ಒಂದು ಪ್ರಹರ ಮೂರು ತಾಸು. ಮುಹೂರ್ತ=ಮುಹು ರ್ಮುಹುರಯತೀತಿ-ಮುಹೂರ್ತಃ ವಾರಂ ವಾರಂಗಮನ ಮಾಡುವದು ಮುಹೂರ್ತಃನೆಂದು ಹರಿಯ ನಾಮ. ಎರಡು ಘಳಿಗೆಗೆ ಅಥವಾ ೧೨ ಕ್ಷಣಕ್ಕೆ ಒಂದು ಮುಹೂರ್ತ, ಘಟಿಕಾಃ ಘಟತೇ ಇತಿ ಘಟ=ಜಲ ಧಾರಾ ಪಾತ್ರ, ಕಾತತ್ಸಂಬಂಧ ಮಾಡುವದೆ, ಘಟಿಕಾ=ಗಳಿಗೆ (ಗಳಿಗೆ ಬಟ್ಟಲಿಗೆ ಘಟಿಕಾ ಪಾತ್ರೆ ಎಂದು ಹೆಸರು ಪ್ರಸಿದ್ಧ) ಇಂಥ ಘಟಿಕಾ-ಗಳಿಗೆ ಮುಂತಾದ ಅವಯುವಗಳಲ್ಲಿ ಕಾಲನಾಮಕ ಹರಿಯು ತಾನಿದ್ದು, ಗಂಗಾ ಪ್ರವಾಹದಂತೆ=ಗಂಗಾನದಿ ಪ್ರವಾಹವು ಬಹು ವೇಗವಾದುದ್ದು, ಇಂತಹ ವೇಗಗತಿ ಉಳ್ಳವನಾಗಿ ತಾನು ಪ್ರವಹಿಸುತಲಿಪ್ಪ=ಕಾಲಗತಿಯನ್ನು ಬಹು ತೀವ್ರವಾಗಿ ಓಡಿಸುತ್ತಾನೆ. ಇಂತಹ ಅತ್ಯದ್ಭುತ ವ್ಯಾಪಾರವುಳ್ಳ ಈತನ=ಶ್ರೀಹರಿಯ ಗುಣಕ್ರಿಯ ಮಂಗಳ ನಿವಹದೊಳು=ಗುಣಜ್ಞಾನಾನಂದಾದಿ ಗುಣಗಳು, ಕ್ರಿಯಗಳು ಸೃಷ್ಟಿ ಸ್ಥಿತಿ ಲಯಾದಿ ಅವತಾರಾದಿ ಕ್ರಿಯಗಳು ಬಹು ಮಂಗಳ-ಶುಭಪ್ರದವಾದವು. ಇಂಥ ಗುಣ ಕ್ರಿಯಗಳ ನಿವಹ ದೊಳು=ಸಮೂಹದಲ್ಲಿ, ಭಾರ್ಗವಿ=ಶ್ರೀ ಲಕ್ಷ್ಮೀದೇವಿ, ಮುಳುಗಾಡುತಲಿ, ಗುಣರೂಪಕ್ರಿಯಾ ಸಮುದ್ರದಲ್ಲಿ ಮುಳುಗಾಡುತ್ತ ಸದಾ ಮಗ್ನಳಾಗಿ, ಎಲ್ಲ ಕಾಲದಲ್ಲಿ, ಆನಂದಾತ್ಮಕಳಾಗಿಹಳು. ಅನಂದದಿಂದ ಪರಮಾತ್ಮನ ಅಚಿಂತ್ಯಾದ್ಭುತ ಗುಣಸ್ತೋತ್ರ ಮಾಡುತ್ತಲಿರುವಳು.

**ದ್ರೌಪದೀಶಪತಿ ವಿಠಲರು :** ೧) ದಿವಸ, ೨) ಯಾಮ, ೩) ಮುಹೂರ್ತ, ೪) ಘಟಿಕಾ ನಾಲ್ಕ ಅವಯುವ ನಾಲ್ಕ ನಾಮದಿಂದ ಕರೆಸು ತ್ತಾನೆ.

**ಭಾವಸೂಚನ :** ದಿವಸೇತಿ॥ ಭಾರ್ಗವಿ ರಮಾ ॥ ೨೩ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ದಿವಸೇತಿ" ॥ ಕಾಲನಾಮಕ* ಓಂ* ಪನ್ಯ ಇತ್ ಪನ್ಯ ಆದರ್ದಿರ ಚ್ಛತಾ ಸಹಸ್ರವಾಜ್ಯವೃತಃ ಇಂದ್ರೋಯೋ ಯಜ್ವನೋ ವೃಧಃ ವಿಷೂಚರಃ ಸ್ವಧಾ ಅನು* ಓಂ* ಅಭಕ್ತಾತ್ಶ್ವಾದಿ ಸಂಪದಂ ಛಿತ್ವಾ ಭಕ್ತೇಭ್ಯಃ ದದಾತಿ ಇತಿ ಕಾಲಃ॥ ಗೀತಾ ತಾತ್ಪರ್ಯೇ ಚ "ಕಾಲಃ ಕಲಿತ ಸಂಪೂರ್ಣ ಸದ್ಗುಣತ್ವಾತ್ ಜನಾರ್ದನಃ ॥ ಸಂಹಾರಾತ್ ಸರ್ವ ವಿತ್ವಾದ್ವಾ ಸರ್ವ ವಿದ್ರಾವಣೇನ ಚ ॥ ಇತಿ ಮಹಾ ವರಾಹೇ ॥ ಇತಿ ॥ ಭಾರ್ಗವೀ ರಮಾ ॥ ೨೩ ॥

## ಕನ್ನಡಾರ್ಥ

ಪರಮಾತ್ಮನಿಗೆ ಇರುವ "ಕಾಲ" ಎಂಬ ನಾಮುವನ್ನು ಬೃಹತೀ ಮಂತ್ರವು ವಿವರಿಸಿರುತ್ತದೆ. "ಅಭಕ್ತರ-ಭಕ್ತರಾಗದವರ ಅಶ್ವ ಧನ ಕನಕ ಮುಂತಾದ ಸಕಲ ಐಶ್ವರ್ಯವನ್ನೂ ಅವರಿಂದ ಕಸಿದು ಭಕ್ತ ಜನರುಗಳಿಗೆ ಕೊಡುವದರಿಂದ "ಕಾಲ" ಎಂದು ಪರಮಾತ್ಮನಿಗೆ ನಾಮುವು ಬಂದಿರುತ್ತದೆ. ಎಂದು ಮಂತ್ರದ ಅರ್ಥ ಸಾರ. ಗೀತಾ ತಾತ್ಪರ್ಯದಲ್ಲಿಯೂ ಸಹ ಶ್ರೀಮದಾಚಾರ್ಯರು "ಸಂಪೂರ್ಣ ಸದ್ಗುಣಗಳನ್ನು ಸದಾ ಸಂಕಲಿಸಿರುವದರಿಂದ "ಕಾಲ"ವೆಂದು ಹರಿಗೆ ಹೆಸರು; ಸರ್ವವನ್ನೂ ಸಂಹರಿಸುವದರಿಂದಲೂ ಚದುರಿಸುವದರಿಂದಲೂ ಸರ್ವಜ್ಞನಾದುದರಿಂದಲೂ ಸರ್ವವನ್ನೂ ಓಡಿಸುವದರಿಂದಲೂ "ಕಾಲ"ವೆಂದು ಪರಮಾತ್ಮನಿಗೆ ಕರೆಯುತ್ತಾರೆ" ಎಂಬುದಾಗಿ ನಿರೂಪಿಸಿರುತ್ತಾರೆ.

**ಅವತರಣಿಕಾ :** ಶ್ರೀ ಮಹಾ ಲಕ್ಷ್ಮೀದೇವಿಯರು ಭಗವಂತನ ಅನಂತ ಗುಣ ರೂಪ ಕ್ರಿಯಾದಿ ಆನಂದ ಸಮುದ್ರದಲ್ಲಿ ಮುಳುಗಿ ಈ ಮಹಾ ಮಹಿಮನ ಅನಂತ ಗುಣಗಳ ಕೊನೆಗಾಣದೇ ಅಹೋ ಏನಿದಚ್ಚರ ಈ ಮಹಾ ಮಹಿಮನು ಎನ್ನಲ್ಲಿ ಕೃಪೆಮಾಡಿ, ಎನ್ನನ್ನು ಸ್ವೀಕರಸಿದನೆಂಬ ಮಹಿಮೆ ಲೋಕ ದೃಷ್ಟಾಂತದಿಂದ ಹೇಳುತ್ತಾರೆ.

ಮೂಲ :

**ವೇದ ತತಿಗಳ ಮಾನಿ ಲಕ್ಷ್ಮಿ ಧ ।**
**ರಾಧರನ ಗುಣರೂಪ ಕ್ರಿಯೆಗ ।**
**ಗಳಾದಿ ಮಧ್ಯಾಂತವನು ಕಾಣದೆ ಮನದಿ ಯೋಚಿಸುತ ॥**

**ಆದಪೆನೆ ಈತನಿಗೆ ಪತ್ನಿ ಕೃ ।**
**ಪೋದಧಿಯು ಸ್ವೀಕರಿಸಿದನು ಲೋ ।**
**ಕಾಧಿಪನು ಭಿಕ್ಷುಕನ ಮನೆಯೌತುನವ ಕೊಂಬಂತೆ ॥ ೨೪ ॥**

**ಪದ್ಯಾರ್ಥ :** ವೇದ ತತಿಗಳಮಾನಿ=ಸಮಸ್ತ ವೇದಗಳ ಅನಂತಾನಂತ ವೇದ ಸಮೂಹಗಳಿಗೆ ಮುಖ್ಯಾಭಿಮಾನಿಗಳಾದ ಲಕ್ಷ್ಮೀ=ಲಕ್ಷ್ಮೀದೇವಿಯರು, ರಮಾಂಬಿಕೆಯು, ಧರಾಧರನ=ಭೂ ನಾಮಕಳಾದ ರಮಾದೇವಿ ಅಭಿಮಾನ್ಯ ಮಾನವಾದ, ಧರಾ=ಪೃಥಿವ್ಯಾದಿ ೧೪ ಲೋಕಗಳನ್ನು ತನ್ನ ಉದರದಲ್ಲಿ ಧರಿಸಿಹನಲ್ಲದೇ, ಬಹಿಃ ಬ್ರಹ್ಮಾಂಡ ೧೪ ಲೋಕಗಳಲ್ಲಿ ತಾನು ಇದ್ದು ವ್ಯಾಪಿಸಿ ಅನಂತ ವ್ಯಾಪಾರಗಳನ್ನು ಮಾಡುವ ಹರಿಯು, ಗುಣ= "ಉತ್ಕರ್ಷ ಪ್ರಯೋಜಕೋ ಧರ್ಮಃ ಗುಣಃ"ವೆಂದು ಶಾಸ್ತ್ರದ ನಿರ್ವಚನದಂತೆ ಅನಂತ ಜ್ಞಾನಾನಂದಾದಿ ಗುಣಗಳು, ರೂಪಗಳು, ವಾಸುದೇವಾದಿ, ವಿಶ್ವಾದಿ, ಕೇಶವಾದಿ, ಕಾಲಾದಿ, ಅಜಾದಿ, ನಾರಾಯಣಾದಿ, ಪರಾದಿ, ರಾಮಕೃಷ್ಣಾದಿ ಅನಂತ ರೂಪಗಳು. ಈ ರೂಪಗಳ ಕ್ರಿಯಗಳೂ ಅನಂತ ಈ ವ್ಯಾಪಾರಗಳ ಆದಿ ಮಧ್ಯ ಅಂತ್ಯ ಇದು ಮೊದಲು, ಇದು ನಡುವೆ, ಇದು ಕೊನೆಯದೆಂದು ಕಾಣದೇ ಚಕಿತಳಾಗಿ, ಮನದಲ್ಲಿ ಯೋಚಿಸುತ= ತನ್ನ ಮನಸ್ಸಿನಲ್ಲಿ ಯೋಚನೆ ಮಾಡಿದಳೇನಂದರೆ, ಈತನಿಗೆ ಇಂಥ ಮಹಾಮಹಿಮನಿಗೆ, ಆದಪೆನೆ ಪತ್ನಿ=ನಾನು ಹೆಂಡತಿಯಾದೆನೆ, ಏನಿದಾಶ್ಚರ್ಯ, ಕೃಪೋದಧಿಯು=ಕರುಣಾಳುವಾದ ಶ್ರೀಹರಿಯು, ಎನ್ನನು ಲೋಕಾಧಿಪನು=ರಾಜಾಧಿರಾಜನಾದ ಏಕ ಚಕ್ರಾಧಿಪತಿಯು (ಅಥವಾ ಸಮಸ್ತ ಲೋಕಗಳಿಗೆ ಅಧಿಪತಿ ಒಡೆಯನು) ಭಿಕ್ಷುಕನ ಮನೆಯೌತನವ ಕೊಂಬಂತೆ= ತಿರುಪೆ ಬೇಡಿ ಹೊಟ್ಟೆ ತುಂಬಿಕೊಳ್ಳುವ ಭಿಕ್ಷುಕ ಬಡವನಾದರೂ, ಬಹು ಭಕ್ತಿಯಿಂದ ಅಹೋ ರಾಜರು ನಮ್ಮಲ್ಲಿಗೆ ಬಂದಿರುವರು ಬಹು ಆದರದಿಂದ ಔತುನ ಹೇಳಿ ಮಹಾ ಪ್ರಭುಗಳೇ ಬಡವನ ಮನೆಗೆ ಊಟಕ್ಕೆ ಬರುವದೆಂದು ಬಿನ್ನೈಸಲು ರಾಜನು ಸ್ವೀಕರಿಸಿದಂತೆ ಎನ್ನ ಮೇಲೆ ಕೃಪೆಮಾಡಿ ಶ್ರೀ ರಾಜರಾಜೇಶ್ವರನಾದ ಹರಿಯು ಎನ್ನನ್ನು ಪತ್ನಿಯಾಗಿ ಸ್ವೀಕರಿಸಿದನೆಂದು ಮಹಾ ಆನಂದಚಿತ್ತಳಾಗಿರುವಳು.

**ದ್ರೌಪದೀಶಪತಿ ವಿಠಲರು :** ವೇದ ತತಿಗಳಮಾನಿ,

ಭಾವಸೂಚನ: ವೇದೇತಿ ॥ ೨೮ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ವೇದೇತಿ" ॥ ಆ(ದಿ)ದಪನೇ=ಆದೆ ॥ ೨೮ ॥

## ಕನ್ನಡಾರ್ಥ

* * * *

ಅವತರಣಿಕಾ : ಶ್ರೀಹರಿಯ ಗುಣಾನಂತ್ಯವನ್ನು ಶ್ರೀ ಲಕ್ಷ್ಮೀದೇವಿಯೇ ಅರಿಯಳೆಂದಮೇಲೆ, ನರರಾದವರು, ಹರಿಯ ಲೇಶ ಲೇಶಾಂಶ ಮಹಿಮೆಯನ್ನು ಅರಿಯರು ಎಂಬ ಪ್ರಮೇಯ ಸವಿಸ್ತರ ವರ್ಣಿಸುತ್ತಾರೆ.

ಮೂಲ :

**ಕೋವಿದರು ಚಿತ್ತೈಸುವದು ಶ್ರೀ ।**
**ದೇವಿಯೊಳಗಿಹ ನಿಖಿಳಗುಣ ತೃಣ ।**
**ಜೀವರಲಿ ಕಲ್ಪಿಸಿ ಯುಕುತಿಯಲಿ ಮತ್ತು ಕ್ರಮದಿಂದ ॥**
**ದೇವದೇವಕಿಯಿಪ್ಪಳೆಂದರಿ ।**
**ದಾ ವಿರಿಂಚನ ಜನನಿ ಈತನ ।**
**ಆವ ಕಾಲಕು ಅರಿಯಳಂತವ ನರರ ಪಾಡೇನು ॥ ೨೯ ॥**

ಪದಾರ್ಥ : ಕೋವಿದರು=ವಿದ್ವಾಂಸರಾದ ಜ್ಞಾನಿಗಳು, ಚಿತ್ತೈಸುವದು=ಮನಸ್ಸು ಕೊಟ್ಟು ಕೇಳಿ ಆಲಿಸುವದು, ಶ್ರೀದೇವಿಯೊಳಗಿಹ ನಿಖಿಳ ಗುಣ=ಶ್ರೀ ರಮಾದೇವಿಯರಲ್ಲಿರುವ ನಿಖಿಳ ಗುಣ=ಸಕಲ ಗುಣಗಳು, ಎಷ್ಟಿರುವವೋ-ಬ್ರಹ್ಮಾದಿಗಳಿಗಿಂತಲೂ ಕೋಟಿ ಗುಣ ಉತ್ತಮಳು, ವಿಜಾತಿ ಅನಂತ ಗುಣೋತ್ತಮಳು ಆದ ಲಕ್ಷ್ಮೀ ದೇವಿಯಿಂದ ನೀಚಕ್ರಮದಂತೆ ಬ್ರಹ್ಮಾದಿ ತೃಣಾಂತ ಜೀವರಲ್ಲಿ ಕಲ್ಪಿಸಿ ಯುಕುತಿಯಲ್ಲಿ ತಾರತಮ್ಯ ಕ್ರಮದಿಂದಲೂ ಮತ್ತು ಸಚ್ಛಾಸ್ತ್ರಾದಿ ಸದಾಗಮಗಳಿಂದ ಯುಕ್ತವಾದ ಯುಕ್ತಿ ನ್ಯಾಯೋಪಾಯಗಳಿಂದ ತಿಳಿಯುವದು. (ಅಂದರೆ ಕೋಟ್ಯಾಂಶದಲ್ಲಿ ಒಂದು ಲೇಶಾಂಶವಾದರೂ ತಿಳಿಯರು). ಇಂತು ದೇವದೇವಿಕಿ=ಲಕ್ಷ್ಮೀ ಎಂದು ಅರ್ಥ, ಹೇಗಂದರೆ, ದೇವತೆಗಳಿಗೆ ಸುಖವೀವುದರಿಂದ ಶ್ರೀಹರಿಗೆ ದೇವಕನೆಂತ ಪೆಸರು, ಇಂಥ ದೇವಕನಾದ ನಾರಾಯಣನ ಪತ್ನಿಯಾದುದ

ರಿಂದ ದೇವಕಿಯೆಂದು ರಮಾದೇವಿಗೆ ಪೆಸರು ಇಪ್ಪದು. ಈಕೆಯು, ಆ ವಿರಂಚನ ಜನನಿ=ಅಂದರೆ ದೂರದಲ್ಲಿಪ್ಪದಕ್ಕೆ ಸಂಜ್ಞಾ ಮಹತ್ತತ್ವವೆ ಬಹು ದೊಡ್ಡದು ಇದಕ್ಕೆ ಅಭಿಮಾನಿಯಾದ, ವಿರಂಚಿ=ಚತುರ್ಮುಖನ ಜನನಿ=ತಾಯಿಯು ಈ ದೇವಕನ, ಆವ ಕಾಲಕ್ಕೂ ಅರಿಯಳು, ಅಂತ ವನು=ದೇಶ ಕಾಲದಲ್ಲಿ ಸಮಳಾಗಿ ವ್ಯಾಪ್ತಳಾಗಿದ್ದರೂ, ಒಂದು ಕಾಲ ಕ್ಕಾದರೂ ಈತನ ಗುಣಗಳನ್ನು ಕೊನೆಗಾಣಳು. ಅಂದಮೇಲೆ, ನರರ ಪಾಡೇನು=ನರಗುರಿಗಳಾದ, ಮನುಜಾದಿಗಳ ಪಾಡೇನು? ಏನು ಹಾಡು ಇವರು ಎಷ್ಟು ತಿಳಿಯುವರು ?

**ದ್ರೌಪದೀಶಪತಿ ವಿಶಲರು : ಕೋವಿದರು ಚಿತ್ರೈಸುವುದು ॥** ಶ್ರೀದೇವಿಯೊಳಗಿಹ ನಿಖಿಳಗುಣ ಅಂದರೆ, ಜ್ಞಾನಾನಂದ ಭಕ್ತ್ಯಾದಿ ಗುಣ ಗಳು, ತೃಣ ಜೀವನಲ್ಲಿ ಯಥಾ ಯೋಗ್ಯವಾಗಿರುತ್ತವೆ. ತೃಣ ಜೀವರಿಂದ ಬ್ರಹ್ಮನ ತನಕಾ ಹೆಚ್ಚಿಸಿದರೆ, ಆ ಬ್ರಹ್ಮನಿಂದ ಶ್ರೀದೇವಿಗೆ ಕೋಟಿಗುಣ ಅಧಿಕತ್ವ ಹೇಳುತ್ತದೆ. ಆವಿರಿಂಚಿನ ಜನನಿಯೆಂದರೆ ಲಕ್ಷ್ಮೀ-ದೇವಕೀ ಶಬ್ದ ಲಕ್ಷ್ಮೀಗೆ ಅದೆ. ದೇವಾ ಪರಮಾತ್ಮನ ಸಂಗಾತ (ಸಂಗಡ) ದೇಶ ಕಾಲಗಳಲ್ಲಿ ವ್ಯಾಪ್ತಳಾಗಿದ್ದಾಳೆ. ಗುಣಗಳಿಂದ ಅಪೂರ್ಣರಾದ ರಮಾ ದೇವಿಯರು ಅನಂತಾನಂತ ಗುಣಗಳಿಂದ ಉಪಾಸನಾ ಮಾಡಿದ ಕಾಲಕ್ಕೂ, ಪಾರಗಂಡಿಲ್ಲ-ಮುಂದೆ ಅನಂತ ಕಲ್ಪಕ್ಕೂ ಪಾರ ಕಾಂಬೋದಿಲ್ಲ.

**ಭಾವಸೂಚನ : ಕೋವಿದೇತಿ ॥ ೨೫ ॥**

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಕೋವಿದೇತಿ ॥ ಏಕಸ್ಮಿಂಶ್ಚ ಕ್ಷಣಸ್ಯಾಂಶೇ ಪ್ಯನಂತಾನಂತ ಚಿಂತನೇ॥ ಸಮರ್ಥಾಶ್ಚ ಸಮಾಃ ಸರ್ವೇ ಪ್ಯದ್ಭುತ ಪ್ರಭಯಾ ಯುತಾಃ ॥ ಏತೇಷಾಂ ಸದೃಶಂ ಜ್ಞಾನಂ ತೃಣಸ್ಯೈವ ಭವೇತ್ ಯದಿ ॥ ತತ್ ಸ್ವೀಕೃತ್ಯ ರಮಾಂ ತಾಶ್ಚ ಭವೇಯುಃ ತಾದೃಶಾಃ ಪುನಃ ॥ "ಚಿತ್ರೈಸುವದು" ॥ ತಿಳಿಯುವದು ಮನಸ್ಸಿಡೋದು। ರಮಾ ಗುಣಾನ್ ತ್ವರ್ಣಾನ್ ವಿಚಿಂತ್ಯ ಪುನಃ ಯುಕ್ತ್ಯಾ ಗಣನೇ ಅಪರಿಮಿತಾಃ ಯಥಾ ಮದ್ಗುಣಾಃ ॥ ಹರಿಗುಣ ದರ್ಶನೇ ತೃಣವ ದೇವ ಮಾಲೋಚ್ಯೋತ್ತರಿತ ದರ್ಶನೇನಾಶ್ಚರ್ಯಮಾಪ ದೇವ । ದೇವಕೀ ರಮಾ ॥ ದೇವಾನಾಂತಂ ಯಸ್ಮಾತ್ ಸ ದೇವಕಃ ನಾರಾಯಣಃ । ತಸ್ಸ್ತ್ರೀ

ದೇವಕೀ ॥ "ವಿಷ್ಣೋ ರೇಕಗುಣಾಂಶಸ್ಯ, ನೈಕಾಂಶ ಲೇಶಲೇಶಂ ವಾ ಚಿಂತ ಯೇಯುಃ ಪ್ರಯತ್ನತಃ ॥" ಇತಿ ಪುನರೇವಂ ಅಪರ್ಯವಸಿತಾ ಉತ್ಪ್ರೇಕ್ಷಾ ಕಾರ್ಯಾ ಇತ್ಯವತಾರಿತಂ ಪ್ರಾಕ್ ॥ "ಪದ್ಯಂ ಸತ್ತತ್ವ ರತ್ನಮಾಲಾಯಾಂ ಶ್ರೀ ನಾರಾಯಣ ಪ್ರಕರಣೇ" ॥ ೨೫ ॥

### ಕನ್ನಡಾರ್ಥ

"ಕೋವಿದರು" ಎಂಬ ಪದ್ಯದಿಂದ ಪರಮಾತ್ಮನ ಗುಣಗಳಲ್ಲಿರುವ ಲೇಶ-ಲೇಶದ ಒಂದು ಅಂಶ ಲೇಶವನ್ನೂ ಸಹ ಸಂಪೂರ್ಣವಾಗಿ ಚಿಂತಿಸುವ ದಾಗುವದಿಲ್ಲ ಎಂಬುದನ್ನು ತಿಳಿಸುತ್ತಾರೆ. ನಾರಾಯಣನ ಒಂದು ಗುಣ ದಲ್ಲಿರುವ ಅಂಶದ ಲವದ ಲೇಶವನ್ನು ತಿಳಿಯುವದು ಸಾಧ್ಯವಿಲ್ಲ. ಇದನ್ನು ಸ್ಫುಟ ಪಡಿಸಲು ಒಂದು ಉತ್ಪ್ರೇಕ್ಷೆಯನ್ನು ಹೇಳುತ್ತಾರೆ. ಅನಂತಾನಂತ ವಸ್ತುಗಳಿಂದ ಕೂಡಿದ ಜಗತ್ತು ಬಹಳ ದೊಡ್ಡದು-ವಿಸ್ತಾರವಾದುದು. ಆದರಕ್ಕಿಂತಲೂ ಚತುರ್ಮುಖನ ಸ್ವರೂಪವು ಬಹಳೇ ದೊಡ್ಡದು. ಚತು ರ್ಮುಖನ ಸ್ವರೂಪಕ್ಕಿಂತಲೂ ರಮಾ ಸ್ವರೂಪವು ಬಹಳೇ ಅಧಿಕ ಅನಂತ ವಾದುದು. ಮುಗಿಯದಂತಿರುವ ಅಪೂರ್ವವಾದ (ಲೋಕ ವಿಚಿತ್ರವಾದ) ಉತ್ಪ್ರೇಕ್ಷೆಯಿಂದ ಭಗವಂತನ ಸ್ವರೂಪದಲ್ಲಿರುವ ಅನಂತ್ಯ (ಅನಂತತೆ)ಯನ್ನು ತಿಳಿದುಕೊಳ್ಳಬೇಕು. ಹೇಗಂದರೆ ರಮಾದೇವಿಯಲ್ಲಿರುವ ಸಮಸ್ತ ಜ್ಞಾನ ವನ್ನು ತೃಣ ಸಮಾನವೆಂದು ಕಲ್ಪಿಸಿ ಆ ತೃಣ ಜೀವರನ್ನಾರಂಭಿಸಿ ಶ್ರೀ ರಮಾ ದೇವಿಯ ಜ್ಞಾನದಲ್ಲಿಯ ಅನಂತ್ಯವನ್ನು ಊಹಿಸಬೇಕು. ಇಂಥ ಉತ್ಪ್ರೇಕ್ಷೆ ಯಿಂದ ಕಲ್ಪಿತವಾದ ತೃಣಾದಿ ರಮಾದೇವಿಯರಿಗೆ ಸಮಸ್ತ ಚೇತನ ರಾಶಿಗಳ ಮಿಳಿತ ಜ್ಞಾನವನ್ನು ತೃಣಪ್ರಾಯವಾಗಿ ಕಲ್ಪಿಸಿ ಇದಕ್ಕೂ ಅನಂತಪಟ್ಟು ಆಧಿಕ್ಯದ ತಾರತಮ್ಯವನ್ನನುಸರಿಸಿ ರಮಾ ಮುಂತಾದವರ ಜ್ಞಾನವನ್ನು ಕಲ್ಪಿಸಬೇಕು. ಹೀಗೆ ಎಷ್ಟು ಕಲ್ಪಿಸಿದರೂ ಮುಗಿಯದ ಉತ್ಪ್ರೇಕ್ಷೆಯಿಂದ ರಮಾದೇವಿಯವರ ಜ್ಞಾನ ಮುಂತಾದವುಗಳು ಪರಮಾತ್ಮನ ಅನಂತ ಗುಣ ಗಳಲ್ಲಿಯ ಒಂದು ಗುಣದ ಕೋಟಿ ಭಾಗಗಳ ಒಂದು ಭಾಗದ ಅನಂತ ವಿಭಾಗಗಳಲ್ಲಿ ಒಂದು ಅಂಶಲೇಶದ ಲೇಶವನ್ನೂ ಪ್ರಯತ್ನಿಸಿದರೂ ಸಂಪೂ ರ್ಣವಾಗಿ ವಿಷಯೀಕರಿಸಲಾರವು. ಈ ಉತ್ಪ್ರೇಕ್ಷೆಯನ್ನು ಕೋವಿದರೇ

ತಿಳಿಯಲರ್ಹರಾದುದರಿಂದ "ಕೋವಿದರು ಚಿತ್ತೈಸುವದು" ಎಂದು ಹೇಳಲಾಗಿರುತ್ತದೆ.

ರಮಾದೇವಿಯು ತೃಣಾದಿ ಜೀವರಾಶಿಗಳನ್ನಾರಂಭಿಸಿ ತನ್ನವರೆಗಿರುವ ಜೀವರಾಶಿಗಳ ಸಕಲ ಜ್ಞಾನವನ್ನೂ ಸಮ್ಮೇಳನಮಾಡಿ ಅವೆಲ್ಲವೂ ತೃಣಪ್ರಾಯವೆಂದು ತಿಳಿದು ಅದರ ಅನಂತ ಪಟ್ಟು ಮಿಗಿಲಾಗಿರುವ ತನ್ನ ಜ್ಞಾನವೂ ಕೂಡ ಹರಿಯ ಗುಣವನ್ನು ತೋರಿಸುವದರಲ್ಲಿ ತೃಣ (ಜೀವರ ಜ್ಞಾನ) ಪ್ರಾಯವೆಂದು ಆಲೋಚಿಸಿ ಅಚ್ಚರಿಗೊಂಡಳು.

ದೇವದೇವಕೀ=ರಮಾ ದೇವತೆಗಳಿಗೆ ಸುಖವೀಯುವದರಿಂದ ನಾರಾಯಣನು ದೇವಕನೆಂದೆನಿಸುತ್ತಾನೆ. ದೇವಕನಾದ ನಾರಾಯಣನ ಪತ್ನಿಯು "ದೇವಕೀ" ಎನಿಸುವಳು.

"ವಿಷ್ಣೋ ರೇಕ ಗುಣಾಂಶಸ್ಯ" ಎಂಬ ಪದ್ಯವನ್ನು ಅವತರಿಸಿ ವಿವರಿಸುವಾಗ ಸತ್ತತ್ವ ರತ್ನಮಾಲಾ ಪರಮಾತ್ಮ ಪ್ರಕರಣದಲ್ಲಿ ನಿರೂಪಿಸಿರುತ್ತಾರೆ ॥ ೨೫ ॥

**ಅವತರಣಿಕಾ :** ಶ್ರೀಹರಿಯು ತನ್ನ ಸ್ವರೂಪ ಶಕ್ತಿ, ಜ್ಞಾನೇಚ್ಛಾ ಪ್ರಯತ್ನ ಎಂಬ ಮೂರು ಶಕ್ತಿಯಿಂದ ಭಗವದ್ವ್ಯಾಪಾರ, ಜೀವರ ಸ್ವರೂಪಗತ ಜ್ಞಾನೇಚ್ಛಾಗಳಲ್ಲಿಟ್ಟು ಕಾರ್ಯ ನಡೆಸುತ್ತಾನೆ. "ಗೃಹೀತ ಶಕ್ತಿ ತ್ರಿತಯಾಯ ದೇಹಿನಾಂ" ಎಂಬಂತೆ ಭಗವಂತನ ಮೂಲ ಶಕ್ತಿಗಳನ್ನು ಆ ಶಕ್ತಿಗಳ ದ್ವಾರಾ ಸಕಲ ವ್ಯಾಪಾರ ದೃಷ್ಟಾಂತದಿಂದ ವರ್ಣಿಸುತ್ತಾರೆ.

**ಮೂಲ :**

**ಕ್ಷೀರ ದಧಿ ನವನೀತ ಘೃತದೊಳು ।**
**ಸೌರಭರ ಸಾಹ್ವಯನೆನಿಸಿ ಶಾಂ ।**
**ತೀರಮಣ ಜ್ಞಾನೇಚ್ಛಾ ಕ್ರಿಯಾ ಶಕ್ತಿ ಎಂದೆಂಬ ॥**
**ಈರೆರಡು ನಾಮದಲಿ ಕರೆಸುವ ।**
**ಭಾರತೀ ವಾಗ್ದೇವಿ ವಾಯು ಸ ।**
**ರೋರುಹಾಸನರಲ್ಲಿ ನೆಲೆಸಿಹರೆಲ್ಲ ಕಾಲದಲಿ ॥ ೨೬ ॥**

**ಪದ್ಯಾರ್ಥ :** ಕ್ಷೀರ=ಹಾಲು, ದಧಿ=ಮೊಸರು, ನವನೀತ=ಬೆಣ್ಣೆ,

ಘೃತ=ತುಪ್ಪದಲ್ಲಿ ಶ್ರೀಹರಿಯು, ಸೌರಭ ರಸಾಹ್ವಯನೆನಿಸಿ=ಉತ್ಕೃಷ್ಟ ರಸ ಸುಗಂಧೋಪೇತರಸ, ಬ್ರಹ್ಮಾದಿ ರಸಕ್ಕಿಂತಲೂ, ಉತ್ತಮವಾದ ಶುಭ ಸಾರ ರಸ, ಸೌರಭ=ರಸೋಽಯೋಽಸ್ಮವಃ ಎನ್ನುವಂತೆ ಶುಭ ರಸಮಯನು, ಕ್ಷೀರಾದಿಗಳಲ್ಲಿರುವನು. ಕ್ಷೀರ ಜಡ ಪದಾರ್ಥದಲ್ಲಿರುವ ರಸ ಬೇರೆ ಇದಕ್ಕೆ ಕಾಸಿ ಹೆಪ್ಪುಗೊಟ್ಟರೆ, ಮೊಸರು ಆಗುವದು ನಿಜ, ಆದರೆ ಮೊಸರು ಮಾಡು ವನು ಯಾವನು, ಮೊಸರಿನಲ್ಲಿಪ್ಪ ಒಂದು ಬಗೆ ರುಚಿ ರಸ–ಈ ಮೊಸರು ಕಡೆದರೆ=ಅಲ್ಲಿ ಬೆಣ್ಣೆ ಹುಟ್ಟುವದು, ಮೊಸರು ಕಡೆದು ಬೆಣ್ಣೆ ತೆಗೆಯುವ ನಾರು? ಬೆಣ್ಣೆ ಕಾಸಿದರೆ ಘೃತವಾಗುವದು. ಬೆಣ್ಣೆ ಕಾಸಿ ಘೃತ ಮಾಡು ವನಾರು ? ಈ ನಾಲ್ಕೂ ಪದಾರ್ಥಗಳಲ್ಲಿ ನಾಲ್ಕೂ ಬೇರೆ ಬೇರೆ ರಸಗಳಿಂದ ಇದ್ದು, ತಾನೇ ಶ್ರೀಹರಿಯು ತನ್ನ ಸ್ವರೂಪ ಶಕ್ತಿಯಿಂದ ಈ ಎಲ್ಲ ಕಾರ್ಯ ಮಾಡುವನು. ಶಾಂತೀ ರಮಣನಾದ ಅನಿರುದ್ಧನು. ಜ್ಞಾನ=ತಿಳು ವಳಿಕೆ, ಇಚ್ಛಾ=ಅಪೇಕ್ಷೆ ನಂತರ ಕ್ರಿಯಾ=ಮಾಡುವ ಕೆಲಸ ಈ ಮೂರು, ಜ್ಞಾನ-ಇಚ್ಛಾ, ಪ್ರಯತ್ನ=ಕ್ರಿಯಾ, ಆಗುವದು ಪರಮಾತ್ಮನ ಶಕ್ತಿ ಯಿಂದಲೇ! ಈರೆರಡು ನಾಮದಲಿ ಕರೆಸುವ=ಹೀಗೆ ನಾಲ್ಕು ನಾಮಗಳಿಂದ ಕರೆಸುತ್ತಾನೆ ಮತ್ತು ಭಾರತೀದೇವಿ–ವಾಗ್ದೇವಿ=ವಾಣಿ ಸರಸ್ವತೀದೇವಿ, ವಾಯುದೇವರು, ಸರೋರುಹಾಸನ=ಬ್ರಹ್ಮದೇವರಲ್ಲಿ ಎಲ್ಲ ಕಾಲದಲ್ಲಿ ನೆಲಸಿ, ಸ್ವರೂಪಸತ್ತಾ, ಪ್ರಮಿತಿಸತ್ತಾ, ಪ್ರವರ್ತಿಸುತ್ತಾ ನಡೆಸುತ್ತಾನೆ. ಎಲ್ಲ ವ್ಯಾಪಾರವು ಶ್ರೀಹರಿಯ ಅಧೀನ. ಜೀವನಲ್ಲಿ ಜ್ಞಾನೇಚ್ಛಾ ಕ್ರಿಯಾ ಶಕ್ತಿ ಮೂರು ಉಂಟು. ಜಡದಲ್ಲಿ ಮಾತ್ರ ಪರಿಣಮಿಸುವ ಕ್ರಿಯಾ ಶಕ್ತಿ ಒಂದೇ ಇಟ್ಟು ಇವುಗಳನ್ನೆಲ್ಲ ಶ್ರೀಹರಿಯು ತನ್ನ ಸ್ವರೂಪ ಶಕ್ತಿಗಳಿಂದ ಪ್ರಚೋದಿಸುವನು.

**ದ್ರೌಪದೀಶಪತಿ ವಿಠಲರು :** ಕ್ಷೀರದಧಿನವನೀತ ಘೃತದೊಳು॥ ಸೌರ ಭರ ಸಾಹ್ವಯನೆಂದರೆ ತೇಜೋಮಯ ರಸ, ೧) ಜ್ಞಾನ, ೨) ಇಚ್ಛಾ, ೩) ಕ್ರಿಯಾ, ೪) ಶಕ್ತಿ ಎಂಬೋ ನಾಮದಿ ಕರೆಸುತ್ತಾನೆ. ಭಾರತಿ, ವಾಗ್ದೇವಿ, ವಾಯು, ಸರೋರುಹಾಸನ ಈ ಪದಾರ್ಥದಲ್ಲಿ ಇರುತ್ತಾರೆ.

**ಭಾವಸೂಚನ :** ಕ್ಷೀರೇತಿ ॥ ೨೬ ॥

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಕ್ಷೀರ ದಧಿ" ಇತಿ ॥ "ಸೌರಭೋ ಹರಿರೇತೇಷು ಕ್ಷೀರಾದಿಷು ಜನಾರ್ದನಃ ॥ ಅನಿರುದ್ಧೇನ ಸಹ ಚತುಷ್ಟಯಮ್॥ ಗೃಹೀತ ಶಕ್ತಿ ತ್ರಿತಯಾಯ ದೇಹೀನಾಮ್" ಇತಿ ಭಾಗವತೇ ॥ "ಇಚ್ಛಾ ಶಕ್ತಿಃ ಕ್ರಿಯಾಶಕ್ತಿಃ ಜ್ಞಾನ ಶಕ್ತಿಃ ಇತಿ ತ್ರಿಧಾ ॥" ಇತಿ ಚ ತಾತ್ಪರ್ಯೇ ॥ ೨೬ ॥

### ಕನ್ನಡಾರ್ಥ

ಕ್ಷೀರ-ದಧಿ ಮುಂತಾದವುಗಳಲ್ಲಿ ಇರುವ ಭಗವದ್ರೂಪಗಳನ್ನು ಈ ಪದ್ಯದಿಂದ ತಿಳಿಸುತ್ತಾರೆ. ಹರಿಯು ಸೌರಭ ರಸಗಳ ನಾಮಗಳಿಂಥ ಕ್ಷೀರ ಮುಂತಾದವುಗಳಲ್ಲಿ ನಿಯಾಮಕನಾಗಿರುತ್ತಾನೆ. ಅನಿರುದ್ಧನನ್ನು ಸೇರಿಸಿದರೆ ನಾಲ್ಕು ರೂಪಗಳಾಗುತ್ತವೆ ಎಂದು ತಿಳಿಯಬೇಕು. ಪರಮಾತ್ಮನಿಗೆ ಜ್ಞಾನ ಇಚ್ಛಾ ಕ್ರಿಯಾ ಶಕ್ತಿಗಳು ರೂಪಗಳು ಇರುತ್ತವೆ" ಎಂಬಲ್ಲಿ "ಶಕ್ತಿ ತ್ರಯಗಳನ್ನು ಸ್ವೇಚ್ಛೆಯಿಂದ ಸೃಷ್ಟಿಮಾಡಲು ಸ್ವೀಕರಿಸಿದವನಿಗೆ ನಮಸ್ಕಾರವು" ಎಂದು ಶ್ರೀಮದ್ಭಾಗವತವು ಆಧಾರವಾಗಿರುತ್ತದೆ. ಅದಕ್ಕೆ ತಾತ್ಪರ್ಯದಲ್ಲಿ ಆ ಮೂರು ಶಕ್ತಿ (ಶಕ್ತಿತ್ರಯ)ಗಳು ಯಾವವೆಂದು ಪ್ರಶ್ನಿಸಿ "ಜ್ಞಾನಶಕ್ತಿ ಇಚ್ಛಾಶಕ್ತಿ ಕ್ರಿಯಾಶಕ್ತಿ"ಗಳೆಂದು ಶ್ರೀಮದಾಚಾರ್ಯರು ಉತ್ತರಿಸಿರುತ್ತಾರೆ. ಈ ಮೂರು ಹಾಗೂ ಅನಿರುದ್ಧ ಹೀಗೆ ನಾಲ್ಕು ರೂಪಗಳು ॥ ೨೬ ॥

**ಅವತರಣಿಕಾ :** ಶ್ರೀ ಹರಿಯು ವ್ಯಾಪಾರ-ಯಾರಾರಲ್ಲಿದ್ದು ಯಾವ ಪ್ರಕಾರ ಮಾಡುತ್ತಾನೆ. ಇದೊಂದು ಮಹಾಯಜ್ಞ. ಬ್ರಹ್ಮಾದಿ ಸಕಲ ತತ್ವೇಶರ ದ್ವಾರಾ ಕಾರ್ಯಮಾಡಿ ಅವರವರಿಗೆ ಅವರ ಯಜ್ಞ ಹವಿಸ್ಸುಕೊಡುತ್ತಾನೆ. ಇಂತಹ ಮಹಾಯಜ್ಞದಲ್ಲಿ ಸೋಮರಸ ಪಾನಕ್ಕೆ ಅರ್ಹರಾದ ದೇವತೆಗಳು ಆರು? ಅವರು ಜಗತ್ತಿನ ವ್ಯಾಪಾರಕ್ಕೆ ಹೇಗೆ ಕಾರಣರಾಗಿರುವರೆಂದು ಸೂಚಿಸುತ್ತಾರೆ.

ಮೂಲ :

**ವಸುಗಳೆಂಟು ನವಪ್ರಜೇಶರು ।**
**ಶ್ವಸನಗಣದೈವತ್ತು ಏಕಾ ।**
**ದಶ ದಿವಾಕರರಿನಿತೆ ರುದ್ರರು ಅಶ್ವಿನಿಗಳೊಂದು ॥**

**ದಶವಿಹೀನ ಶತಾಖ್ಯ ಈ ಸುಮ ।**
**ನಸರೊಳಗೆ ಚತುರಾತ್ಮ ನೀಯಾ ।**
**ಮಿಸುವ ಬ್ರಹ್ಮ ಸಮೀರ ಖಗಪ ಫಣೀಂದ್ರರೊಳಗಿದ್ದು ॥೨೮॥**

**ಪದ್ಯಾರ್ಥ :** ವಸುಗಳೆಂಟು=ವಸುಗಳು ಎಂಟು ಜನರು, ನವ ಪ್ರಜೇಶ್ವರರು=೯ ಮಂದಿ ಬ್ರಹ್ಮಪುತ್ರರು. ಮರೀಚ್ಯಾದಿ ಋಷಿಗಳು, ಶ್ವಸನ ಗಣ ಐವತ್ತು=ಮರುತ್ ಗಣಗಳು ೪೯ ಅಹಂಕಾರಿಕ ಪ್ರಾಣನ ಕೂಡಿ ೫೦ ಜನ, ಏಕಾದಶ ದಿವಾಕರರು=ವಿವಸ್ವಾನ್ನಾಮಕ ಸೂರ್ಯ ಬಿಟ್ಟು ಉಳಿದ ಹನ್ನೊಂದು ಜನ ಸೂರ್ಯರು, ಇನಿತೆ ರುದ್ರರು=ಇಷ್ಟೇ ೧೧ ಜನರು ರುದ್ರಗಣದವರು. ಅಶ್ವಿನಿ ದೇವತೆಗಳಿಬ್ಬರಿದ್ದರೂ ಅವರ ಉತ್ಪತ್ತಿ ಕಾರ್ಯ ಒಂದೇ ಕಾರಣ ಒಂದೇ ಎಂದು ಹೇಳಿದ್ದಾರೆ. ಹೀಗೆ ದಶವಿಹೀನ ಶತಾಖ್ಯರು ಇವರು ಹತ್ತುಕಡಿಮೆ ಶತಾಖ್ಯರು=ನವತಿ ನಾಮವುಳ್ಳ ದೇವತೆಗಳು, ಈ ಸುಮನಸರೊಳಗೆ=ದೇವತೆಗಳೊಳಗೆ, ಬ್ರಹ್ಮ-ಸಮೀರ-ಖಗಪ=ಗರುಡ, ಫಣೀಂದ್ರ ಶೇಷ ಇವರಲ್ಲಿ-ಈ ನಾಲ್ವರಲ್ಲಿ ನಾಲ್ಕು ರೂಪಗಳಿಂದ ಇದ್ದು ನಿಯಾಮಿಸುವ=ನಿಯಮನ ಮಾಡುವನು. ಈ ವಿಚಾರ ಬೃಹದಾರಣ್ಯದಲ್ಲಿಯೂ ಹೇಳಿದೆ. ಸಂಧಿಯ ಸಾರ ನೋಡುವದು.

**ದ್ರೌಪದೀಶ ಪತಿವಿಠಲರು :** ವಸುಗಳೆಂಟು ನವಪ್ರಜೇಶರು ॥

| | | |
|---|---|---|
| ವಸುಗಳು | ೮ | ಇವರಿಗೆ, ದಶವಿಹೀನ ಶತಾಖ್ಯರು |
| ಪ್ರಜೇಶ್ವರರು | ೯ | ಇವರೊಳಗೆ ಚತುರಾತ್ಮ |
| ಮರುತಗಳು | ೫೦ | ಬ್ರಹ್ಮಾ=ವಾಸುದೇವ |
| ರುದ್ರರು | ೧೧ | ವಾಯು=ಸಂಕರ್ಷಣ |
| ಸೂರ್ಯರು | ೧೧ | ಗರುಡ=ಪ್ರದ್ಯುಮ್ನ |
| ಅಶ್ವಿನಿ | ೧ | ಶೇಷ=ಅನಿರುದ್ಧ. |
| | ೯೦ | |

**ಭಾವಸೂಚನ :** ವಸುಗಳೇತಿ ॥ ತದುಕ್ತಂ ವಿಷ್ಣು ರಹಸ್ಯೇ ಧ್ರುವ-ಪ್ರಾಣೋ-ದ್ಯುನಾಮ-ಅರ್ಕ-ವಹ್ನಿ-ದೋಷವಸು-ರ್ಧರಃ ॥ ವಸವೋಷ್ಟಾ ಇಮೇಪ್ರೋಕ್ತಾ ಸಹಾಯಾ ಜಾತವೇದಸ ಇತಿ ॥ ಏಕಾದಶೇತಿ ॥ ಇಂದ್ರ

ವಿಷ್ಣು ರವಿಧಾತೃಪೂಷಾ ತ್ವಷ್ಟಾರ್ಯಮಭಣ ಮಿತ್ರವರುಣೈಕಾದಶ, ಸವಿತೃ ವರ್ಜಿತಾಃ ॥ ಚತುರಾತ್ಮೇತಿ ॥ ಚತುರಾತ್ಮಾ ಚತುರ್ಭಾವ ಇತ್ಯುಕ್ತೇ ॥ ಮುಂದೆ ತಾರತಮ್ಯ ಸಂಧಿಯಲ್ಲಿ ಇವರೆಲ್ಲರ ನಾಮ ಹೇಳಿದ್ದಾರೆ. ಆಧ್ಯಾತ್ಮ ಮಾಲಾದಲ್ಲಿ ನೋಡುವದು.

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ವಸ್ವತಿ" ॥ "ಚತುರ್ಭಿಃ ಸಾಕಂ ನವತಿಂ ಚ" ಇತಿ ಶ್ರುತೇಃ ॥ "ಬ್ರಹ್ಮಾದಿ (ದ) ದಶೈವಂ ಶತಾತ್ಮಾ" ಇತಿ ತಾತ್ಪರ್ಯೇ ॥

### ಕನ್ನಡಾರ್ಥ

ವಸು ಮುಂತಾದ ತೊಂಭತ್ತು ದೇವತೆಗಳಲ್ಲಿರುವ ಶ್ರೀ ಹರಿಯ ರೂಪಗಳ ಬಗ್ಗೆ "ಚತುರ್ಭಿಃ" ಎಂಬ ಶ್ರುತಿಯು ಆಧಾರವಾಗಿದೆ. ವಸು ೮, ಆದಿತ್ಯ ೧೧, ರುದ್ರ ೧೧, ಪ್ರಜಾಪತಿ ೯, ಮರುತ್ತರು ಹಾಗು ವಾಯು ೫೦, ಅಶ್ವಿನೀ ದೇವತೆಗಳು ೧. ಹೀಗೆ ೯೦ ದೇವತೆಗಳನ್ನು ಬ್ರಹ್ಮ-ವಾಯು-ಗರುಡ-ಶೇಷರಲ್ಲಿ ನಿಂತು, ತನ್ನ ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧ ರೂಪಗಳಿಂದ ನಿಯಮಿಸುತ್ತಾನೆ. ॥ ೨೭ ॥

**ಅವತರಣಿಕಾ :** ಹಿಂದಿನ ಪದ್ಯ ೨೩ರಲ್ಲಿ ಶ್ರೀ ಹರಿಯ ಶಕ್ತಿರೂಪಗಳನ್ನು ಹೇಳಿದರು. ಆ ಹರಿಯು, ತನ್ನ ಸ್ವರೂಪಾಯುಧಗಳಿಂದ ಶೋಭಿತನಾದ ಚಕ್ರ, ಶಂಖ, ಗದಾ, ಪದ್ಮಾದಿಗಳಲ್ಲಿ ಹಿಂಕಾರಾದಿ ಭಗವದ್ರೂಪಗಳಿಂದ ಇರುತ್ತಾನೆ. ಈ ರೂಪಗಳ ಕಾರ್ಯವರಿತು ದೇಹ ಶುದ್ಧ್ಯರ್ಥವಾಗಿ ಪಂಚ ಮುದ್ರಾಗಳನ್ನು ಧರಿಸಲು ಉಪದೇಶಿಸುತ್ತಾರೆ.




ಮೂಲ :

ತೋರುತಿಪ್ಪನು ಚಕ್ರದಲಿ ಹಿಂ।
ಕಾರನಾಮಕ ಶಂಖದಲಿ ಪ್ರತಿ।
ಹಾರ ಗದೆಯಲಿ ನಿಧನ ಪದ್ಮದಲಿಪ್ಪ ಪ್ರಸ್ತಾವ ॥
ಕಾರುಣಿಕ ನುದ್ಗೀಥ ನಾಮದಿ।
ಮಾರಮಣನೈರೂಪಗಳ ಶಂ।
ಖಾರಿ ಮೊದಲಾದಾಯುಧಗಳೊಳು ಸ್ಮರಿಸಿ ಧರಿಸುತಿರು ॥೨೮॥

**ಪದ್ಯಾರ್ಥ :** ತೋರುತಿಪ್ಪನು ಚಕ್ರದಲಿ=ಹಿಂಕಾರ ನಾಮಕನು, ಶಂಖ ಮುದ್ರೆಯಲ್ಲಿ=ಪ್ರತಿಹಾರ ನಾಮಕನು, ಗದೆಯಲಿ=ನಿಧನ ನಾಮಕನು, ಪದ್ಮದಲ್ಲಿ=ಪ್ರಸ್ಥಾವ, ಉದ್ಗೀಥ ನಾಮದಿಂದ ಹರಿಯ ಸ್ವರೂಪಾಯುಧ ರೂಪಗಳು. ಈ ನಾಮಗಳಿಂದ, ಮಾರಮಣನ=ಲಕ್ಷ್ಮೀಪತಿಯ ಐದು ರೂಪಗಳನ್ನು ಚಿಂತಿಸಿ, ಪರಮಾತ್ಮನ ಸ್ವರೂಪಾಯುಧ ಶಕ್ತಿಯಿಂದ ಶೋಭಿಸುತ್ತಾ ಈ ಪಿಂಡಾಂಡ ಕಾರ್ಯ ಜರುಗುತ್ತದೆ. ಈ ಪರಮಾತ್ಮನ ಮುದ್ರಾ ಚಿನ್ಹೆಗಳಿಂದ ಬಾಹ್ಯ ದೇಹಾಲಂಕಾರವೂ ಶುಚಿಯೂ ಆಗುತ್ತದೆ. ಇವು ಕೇವಲ ವೈಷ್ಣವ ಚಿನ್ಹೆಗಳು ಬಹಿರಂಗ ಶುಚಿಗೆ ಕಾರಣವೆಂದು ಭಾವಿಸುತ್ತ ಶಂಖ ಅರಿ ಚಕ್ರ ಮೊದಲಾದಾಯುಧಗಳನ್ನು (ಮುದ್ರೆಗಳನ್ನು) ಧರಿಸುತ್ತಲಿರಬೇಕು. ನಾರಾಯಣ ಮುದ್ರಾದಲ್ಲಿ ಉದ್ಗೀಥನೆಂದು ಬೇರೆ ಪ್ರಮಾಣ ಇವೆ. ಉದ್ಗೀಥನು ಶ್ರೀವತ್ಸ ಚಿನ್ಹೆಯಲ್ಲಿ ಸ್ಮರಿಸಬೇಕೆಂದು ಸಂಪ್ರದಾಯಜ್ಞರು ಹೇಳುತ್ತಾರೆ. (ಹಿಂಕಾರಾದಿ ಶಬ್ದಾರ್ಥ ಹಿಂದಿನ ಸಂಧಿಗಳಲ್ಲಿ ಕೊಟ್ಟಿದೆ.)

**ದ್ರೌಪದೀಶಪತಿವಿಠಲರು :** ತೋರುತಿಪ್ಪನು ಚಕ್ರದಲಿ ॥ ಚಕ್ರ= ಹಿಂಕಾರ, ಶಂಖ=ಪ್ರತಿಹಾರ, ಗದಾ=ನಿಧನ, ಪದ್ಮ=ಪ್ರಸ್ಥಾವಾ, ನಾರಾಯಣಾ=ಉದ್ಗೀಥ.

**ಭಾವಸೂಚನ :** ತೋರುತಿಪ್ಪೇತಿ ॥ ಅರಿ ಚಕ್ರ.

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ತೋರುತಿಪ್ಪನು" ಇತಿ ॥ "ಹಿಂಕಾರಃ ಚಕ್ರಗಃ ಶಂಖೇ ಪ್ರತಿಹಾರಃ ಗದಾಗತಃ ನಿಧನಂ ಪದ್ಮಗಃ ಪ್ರಸ್ತಾವಾಖ್ಯಃ ಲಕ್ಷ್ಮೀ ನಿಕೇತನಃ ॥ ಉದ್ಗೀಥಃ ಮುದ್ರಿಕಾ ಸಂಸ್ಥಃ ನಾರಾಯಣ ಇತೀರಿತಃ" ॥ ಇತಿ ಗಾರುಡೇ ಚ ॥

## ಕನ್ನಡಾರ್ಥ

"ತೋರುತಿಪ್ಪನು" ಎಂಬ ಈ ಪದ್ಯದಿಂದ ಪಂಚಮುದ್ರಾಗಳಲ್ಲಿರುವ ಪಂಚ ಮೂರ್ತಿಗಳನ್ನು ತಿಳಿಸುತ್ತಾರೆ. ಚಕ್ರ-ಶಂಖ-ಗದಾ-ಪದ್ಮ-ನಾರಾಯಣ ಮುದ್ರಾ ಇವುಗಳಲ್ಲಿ ಕ್ರಮವಾಗಿ ಪ್ರದ್ಯುಮ್ನ ಮುಂತಾದ ರೂಪಗಳಿರುತ್ತವೆ. ಚಕ್ರದಲ್ಲಿ ಹಿಂಕಾರ=ಸೃಷ್ಟಿಕರ್ತನಾದ ಪ್ರದ್ಯುಮ್ನನು; ಶಂಖದಲ್ಲಿ ಪ್ರತಿಹಾರ=ಜಗತ್ತನ್ನು ಕಾರ್ಯದಲ್ಲಿ ಪ್ರತಿಹರಿಸುವ-ಅನಿರುದ್ಧನು;

ಗದಾದಲ್ಲಿ ನಿಧನ=ಸಂಹಾರಕನಾದ ಸಂಕರ್ಷಣನು; ಪದ್ಮದಲ್ಲಿ ಪ್ರಸ್ತಾವ=ಪ್ರಥಮಾವತಾರನಾದ ವಾಸುದೇವನು; ನಾರಾಯಣ ಮುದ್ರಿಕೆಯಲ್ಲಿ ಉದ್ಗೀಥ=ಉಚ್ಚನೆಂದು ಗಾನ ಮಾಡಿಸಿಕೊಳ್ಳುವ ಉದ್ಗೀಥನಾಮಕ-ನಾರಾಯಣನು. ಹೀಗೆ ಪಂಚ ಮುದ್ರಾಗಳಲ್ಲಿ ಇರುವರು ಎಂದು ಗರುಡ ಪುರಾಣದಲ್ಲಿ ಉಕ್ತವಾಗಿರುತ್ತದೆ. । ೨೮ ।

**ಅವತರಣಿಕಾ :** ಹಿಂದಿನ ಪದ್ಯದಲ್ಲಿ ಪರಮಾತ್ಮನ ಶಕ್ತಿಯುತವಾದ ಸ್ವರೂಪಾಯುಧ ಚಿನ್ಹೆಗಳನ್ನು ಚಕ್ರಶಂಖಾದಿ ಮುದ್ರೆಗಳನ್ನು ದೇಹಕ್ಕೆ ಧರಿಸಿರಿ. ಇದರಿಂದ ಬಹಿರಂಗ ಶುಚಿಯಾಗುತ್ತಲ್ಲವೆ ಈ ದೇಹ ಅಂತರಂಗ ಶುಚಿಯಾಗುತ್ತದೆ. ಇಂದ್ರಿಯ ವಿಷಯಾದಿಗಳಿಂದ ದೂರವಾಡಿ, ಪರಮಾತ್ಮನಿಗೆ ಈ ದೇಹವೇ ರಥವೆಂದು ಇದನ್ನು ಸಮರ್ಪಿಸುವ ರೀತಿ ಐತರೇಯ ಉಪನಿಷತ್ತಿನಂತೆ ವಿವರಿಸುತ್ತಾರೆ.

**ಮೂಲ :**

**ತನುವೆ ರಥ ವಾಗಾಭಿಮಾನಿಯೆ ।**
**ಗುಣವೆನಿಸುವಳು ಶ್ರೋತ್ರದೊಳು ರೋ ।**
**ಹಿಣಿ ಶಶಾಂಕರು ಪಾಶ ಪಾಣಿಗಳಶ್ವವೆಂದೆನಿಸಿ ॥**
**ಇನನು ಸಂಜ್ಞಾದೇವಿಯರು ಇಹ ।**
**ರನಳಲೋಚನ ಸೂತನೆನಿಸುವ ।**
**ಪ್ರಣವಪಾದ್ಯ ಪ್ರಾಣನಾಮಕ ರಥಿಕನೆನಿಸುವನು ॥೨೯॥**

**ಪದ್ಯಾರ್ಥ :** ತನುವೆ ರಥ=ಈ ಪ್ರಸಿದ್ಧ ದೇಹವೇ ದೇವರಿಗೆ ದೇವ ರಥ, ವಾಗಭಿಮಾನಿಯೆ ಗುಣವೆನಿಸುವಳು ವಾಕ್ಕಿಗೆ ಅಭಿಮಾನಿಯಾದ ಉಮಾದೇವಿಯರು, ಗುಣ ರಜ್ಜು=ಹಗ್ಗದ ರೂಪಳಾಗಿರುವರು. ಶ್ರೋತ್ರದೊಳು ರೋಹಿಣಿ ಶಶಾಂಕರು=ಬಲ-ಎಡಗಡೆಯ ಕಿವಿಗಳಲ್ಲಿ ಶಶಾಂಕ=ಮೊಲದ ಚಿನ್ಹೆವುಳ್ಳ ಚಂದ್ರದೇವರು, ತತ್ಪತ್ನಿ ರೋಹಿಣಿ ದೇವಿಯರು, ಪಾರ್ಶ್ವದಲ್ಲಿರತಕ್ಕ ಕುದುರೆಗಳು, ಇನನು=ಸೂರ್ಯದೇವನು, ತತ್ಪತ್ನಿ ಸಂಜ್ಞಾದೇವಿಯರು, ಚಕ್ಷುಸ್ಸಿನಲ್ಲಿದ್ದು, ಮುಂದಿನ ಎರಡು ಕುದುರೆಗಳು, ಈ ನಾಲ್ವರು ಕುದುರೆಗಳು, ಅಂದರೆ ನಾಲ್ಕು ಜನ, ಶ್ರೋತ್ರ, ಚಕ್ಷುರಿಂದ್ರಿಯ ದೇವತೆಗಳು, ವಿಷಯ- ಕಿವಿಯಿಂದ ಒಳ್ಳೆಯ ಸ್ವರ ಕೇಳುವದು ಗಾನಾದಿ

**ಗಳು:** ಕಣ್ಣಿನಿಂದ ಸುಂದರ ರೂಪ ನೋಡಿ ಮೋಹಿಸುವದು ಇತ್ಯಾದಿ ವಿಷಯಗಳಿಂದ ದೂರಗೈಸಲು, ತೈಜಸ ಬುದ್ಧ್ಯಾಭಿಮಾನಿ ಉಮಾದೇವಿಯರು ವಿಷಯ ದೂರಗೈಸಿ, ತನ್ನ ವಶದಲ್ಲಿ ಇರಿಸುವಳು. ಪಾಶಪಾಣಿಗಳಾದ ಉಮೆಯ ಅಧೀನದಲ್ಲಿದ್ದು, ಇಂದ್ರಿಯ ರೂಪರಾದ ೪ ಕುದುರೆ ೪ ಜನ ದೇವತೆಗಳು, ಉಮೆಯ ರೂಪ ಹಗ್ಗದಿಂದ ಬದ್ಧತರಾಗಿರುವರು. ಈ ಉಮಾದೇವಿಯರು, ಹಗ್ಗವು ಲಗಾಮು ಸಾರಥಿ ಕೈಲಿ ಇರುವಂತೆ ಉಮಾಪತಿಯಾದ ವೈಕಾರಿಕ ರುದ್ರದೇವರು ಈ ರಥಕ್ಕೆ ಸಾರಥಿಯಾಗಿರುವರು. ಅನಳ ಲೋಚನ ಸೂತನೆನಿಸುವ=ಅಗ್ನಿಯೇ ಕಣ್ಣಾಗಿ ಉಳ್ಳವರಾದ ಮಹರುದ್ರದೇವರು ಸಾರಥಿ ಎನಿಸುವರು, ದೇವರ ರಥದಲ್ಲಿ ಪ್ರಣವಪಾದ್ಯ ಓಂಕಾರ ಪ್ರತಿಪಾದ್ಯ ಪ್ರಾಣಾಂತರ್ಯಾಮಿ, ಪ್ರಾಣನಾಮಕ ಹರಿಯು=ಜೀವಾಂತರ್ಯಾಮಿ ಹರಿಯು, ರಥಿಕನು=ರಥದಲ್ಲಿ ಕೂಡತಕ್ಕ ಸ್ವತಂತ್ರ ಪುರುಷನು. ರಥಿಕನ ಆಜ್ಞಾನುಸಾರ ಸಾರಥಿಯು ರಥವನ್ನು ನಡೆಸುವನು.

**ದ್ರೌಪದೀಶ ಪತಿವಿಠಲರು:** ತನುವೆ ರಥ.

**ಭಾವಸೂಚನ:** ತನುವೇತಿ । ಅಥದೇಹ ರಥಸ್ಯತಸ್ಯವಾಗುದ್ಧಿರಿತಿ ಶ್ರುತೇಃ । ಗುಣ-ಹಗ್ಗಾ:

**ವಿಶೇಷ ಸೂಚನೆ:** ಐತರೇಯೋಪನಿಷದ್ ದ್ವಿತೀಯಾರಣ್ಯಕ, ತೃತೀಯಾಧ್ಯಾಯದಲ್ಲಿ "ಅಥದೇವರಥಸ್ಯ ತಸ್ಯವಾಗುದ್ಧಿಃ ಶ್ರೋತ್ರೇ ಪಕ್ಷಸೀ ಚಕ್ಷುಷೀ ಯುಕ್ತೇಮನಃ ಸಂಗ್ರಹೀತಾತದಯಂ ಪ್ರಾಣೋಧಿತಿಷ್ಠತಿ ತದುಕ್ತ ಮೃಷೀಣಾಽಽತೇನಯಾ ತಂ ಮನಸೋಜವೀಯಸಾ ನಿಮಿಷಶ್ಚಜ್ಞವೀಯಸೇತಿ ಜವೀಯಸೇತಿ । ೮ । ಎನೇ ಮಂತ್ರ.

ಇದಕ್ಕೆ ಶ್ರೀ ಮಂತ್ರಾಲಯ ಪ್ರಭುಗಳ **ಖಂಡಾರ್ಥ:** ದೇವಸ್ಯ ವಿಷ್ಣೋರ್ವಾಯೋಃ ರಥ ಇತ್ಯರ್ಥಃ । ದೇವೈರ್ನಿರ್ಮಿತೋ ರಥ ಇತಿ ವಾ । ಉಚ್ಯತ ಇತಿ ಶೇಷಃ । **ಸಚಾಧ್ಯಾತ್ಮಂ ದೇಹಾಖ್ಯಃ** । **ಅಧಿ ದೈವಂ ರಥ ರೂಪ ಏವ** । **ತತ್ರಾಧ್ಯಾತ್ಮಂ ದೇಹಾಖ್ಯ ರಥಸ್ಯ** । ವಾಕ್ ವಾಗಭಿಮಾನ್ಯುಮಾ । ಉದ್ಧಿರುದ್ಧಾರಣ ರಜ್ಜು ರೂಪಾ । ಚಕ್ಷುರಾದಿ ದೇವಾನಾಮುದ್ಧರಣ ಹೇತುತ್ವಾತ್ । ಶ್ರೋತ್ರೇ-ದಕ್ಷವಾಮ ಶ್ರೋತೃಗತ ಚಂದ್ರ

ತದ್ಭಾರ್ಯೆ । ಪಕ್ಷಸಿ ಪಕ್ಷಯೋರ್ದಕ್ಷ ವಾಮ ಪಾರ್ಶ್ವಯೋಃ ಅಶ್ವರೂಪೇಣ ಸ್ಥಿತೇ । ಚಕ್ಷುಷೀ ದಕ್ಷವಾಮ ಚಕ್ಷುರ್ಗತ ಸೂರ್ಯ ತದ್ಭಾರ್ಯೇಯುಕ್ತೇ। ಪುರುತೋಯೋಜಿತಾಶ್ವರೂಪೇ । ಮನಃ ಮನೋಭಿಮಾನೀ ರುದ್ರೋ ಮನೋಗತ ಸಂಗ್ರಹೀತಾ ಸಾರಥಿಃ । ಅಥಾದಿ ದೈವೇಪಿ । ತಸ್ಯ ರಥಸ್ಯ ವಾಂಓಂನಾಮ್ನಾ ಉಮಾ ಉದ್ಧಿನಾಗಾಕಾರಾ ಅಶ್ವೋದ್ಧಾರಣ ರಜ್ಜುಃ । ಶ್ರೋತ್ರೇ ಚಂದ್ರರೋಹಿಣ್ಯೋ ಚಕ್ಷುಷೀ ಸೂರ್ಯ ಸಂಜ್ಞೇಚ ಪಕ್ಷಸೀ ಯುಕ್ತೇ ಪಾರ್ಶ್ವತಃ ಪುರುತಶ್ಚಯೋಜಿತೇ ಅಶ್ವರೂಪೇ ಮನೋರುದ್ರಃ ಸಾರಥಿ ರಿತೀಮಾ ಏವ ದೇವತಾಬೋಧ್ಯಾಃ । ಸಚಾಸಾವಯಂ ಚೇತಿ ತದಯಂ ಪ್ರಾಣೋ ವಿಷ್ಣುರ್ವಾಯುಶ್ಚಾಧಿ ತಿಷ್ಟತಿ ಉಭಯ ವಿಧಂ ರಥ ಮಿತಿಶೇಷಃ ॥೨೦॥

ಇದೇ ವಿಷಯವನ್ನೇ ಮಾನಸ ಸ್ಮೃತಿಯಲ್ಲಿಯೂ ಹೇಳಿದ್ದಾರೆ. "ವಿಷ್ಣೋರಾಯತನಂ ದಿವ್ಯಂ ದೇಹಾಖ್ಯಂ ವೈಷ್ಣವಂ ರಥಂ । ಇತ್ಯಾದಿ. ಸಂಧಿ ೫ ಪದ್ಯ ೨೫ರಲ್ಲಿ ದೇಹಾಖ್ಯರಥ ವರ್ಣನ ಹೇಳಿದ್ದಾರೆ. ಅದು ಅಧಿ ಭೂತಾದಿ ಬಾಹಿರ ಸಾಧನ ವಿಷಯವಿದೆ. ಇಲ್ಲಿ ಪ್ರಸಂಗಾನುಕೂಲ- ಅಧ್ಯಾತ್ಮ ಅಧಿದೈವ ರಥಚಿಂತನಾಕ್ರಮ ಹೇಳಿದ್ದಾರೆ. ವಿಷಯ ಬೇರೆ ಬೇರೆ ಇವೆ. ವಿರೋಧ ಭಾವಿಸಬಾರದು.

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ತನುವೆ" ಇತಿ । ವಾಜ್ಮಾನೀ ಉಮಾ । ಪಾಶಪಾಣಿಃ ಯಮಃ । ಇನಃ ಸೂರ್ಯಃ । ಅನಳ ಲೋಚನಃ ರುದ್ರಃ । ಪ್ರಾಣಃ ತರ್ಗ್ಗೋ ಹರಿಶ್ಚೇತಿ ಜ್ಞೇಯಮ್ "ಅಥ ದೇಹರಥಃ ಸತ್ಯ ವಾಗುದ್ಧಿಃ । ಶ್ರೋತ್ರೇ ಪಕ್ಷಸೀ । ಚಕ್ಷುಷೀ ಸಂಯುಕ್ತೇ । ಮನಃ ಸಂಗೃಹೀತಾ" । ಇತ್ಯುಕ್ತೇಶ್ಚ । ಐಂ ಉಂ। ಯುಜೋ ಯುಕ್ತಾ ಅಭಿಯತ್ ಸಂವಹಂತಿ । ಇತಿ । ತದ್ಭಾಷ್ಯೇ "ಯತ್ ಸ್ಯಂದನಂ ವಹಂತ್ಯೇತೇ ದೇವಾಭಾರ್ಯಾ ಸಮನ್ವಿತಾಃ । ಅಧಿದೈವೇ ತಥಾ ಧ್ಯಾತ್ಮೇ ಜೀವದೇಹಾತ್ಮಕಂ ರಥಮ್ । ನ ಸೂರ್ಯಃ ಸೂರ್ಯಭಾರ್ಯಾ ಚ ಚಕ್ಷುರ್ದ್ವಯ ಸಮಾಶ್ರಿತಾ। ವಹತೋಽಶ್ವಾತ್ಮಕಂ। ದೇಹಂ ನಾರಾಯಣ ರಥಾತ್ಮಕಮ್ ॥ ಸೋಮಶ್ಚ ರೋಹಿಣಿ ಚೈವ ದಕ್ಷವಾಮಶ್ರುತಿಸ್ಥಿತೌ ಉಭಯೋಃ ಪಕ್ಷಯೋಃ ವಹತೋಽಶ್ವಾತ್ಮಕಂ ತಯೋಃ । ಉದ್ಧಿ



ಸ್ಥೂಲ ಹೃದಯ.

ಶತಸ್ತಂಭ-ರಥ ಮಂಟಪ
ಮಾನವಿಯ ರಥದ ಮೇಲ್ಭಾಗ ಚಿತ್ರ

ರಣಾರ್ಥಂ ಏತೇಷಾಂ ಉಮಾ ವಾಚಿ ಸಮುಸ್ಥಿತಾ। ನಾಗಾ ಕಾರ್ಶ್ಯೈವ ರಶ್ಮಿತ್ವಂ ಆಗಮತ್ ವೈಷ್ಣವೇ ರಥೇ। ಮನಃಸ್ಥಿತಃ ಶಿವಶ್ಚಾಪಿ ಮನೋ ನಾಮಾ ಮಹಾಬಲಃ। ಅಭವತ್ ಸಾರಥಿಃ ವಿಷ್ಣೋಃ ವಿಷ್ಣುರ್ವಾಯುಶ್ಚ ತಂ ರಥಮ್। ಪ್ರಕೃಷ್ಟಾನಂದ ರೂಪತ್ವಾತ್ ಪ್ರಾಣಾಖ್ಯಾವಧಿ ತಿಷ್ಠತಃ" ಇತಿ। ೨೯।

## ಕನ್ನಡಾರ್ಥ

ಶರೀರ ರಥವನ್ನು ನಿರೂಪಿಸುತ್ತಾರೆ– "ತನುವೆ" ಎಂಬ ಪದ್ಯದಿಂದ ವಾಕ್=ವಾಗಭಿಮಾನಿಯಾದವಳು ಉಮಾ (ಪಾರ್ವತೀ) ದೇವಿಯು. ಇನ ಅಂದರೆ ಸೂರ್ಯ; ಅನಳಲೋಚನ ಅಂದರೆ ರುದ್ರ. ಪ್ರಾಣ ಎಂಬ ಶಬ್ದಕ್ಕೆ ಮುಖ್ಯ ಪ್ರಾಣ ಹಾಗೂ ಅವನಲ್ಲಿರುವ ಪರಮಾತ್ಮ ಎಂದು ಎರಡೂ ಅರ್ಥಗಳನ್ನು ತಿಳಿಯಬೇಕು. ಐತರೇಯ ಉಪನಿಷತ್ತಿನಲ್ಲಿ ಈ ದೇಹರಥ ವಿಷಯವಾಗಿ ವಿವರಣೆಯಿರುತ್ತದೆ.

"ದೇಹವೇ ರಥ. ಅದಕ್ಕೆ ವಾಕ್ ಅಭಿಮಾನಿಯಾದ ಉಮಾ ದೇವಿಯು ಉದ್ಧಾರಣ ರಜ್ಜುರೂಪಳು. (ಅಶ್ವವನ್ನೆಬ್ಬಿಸಲು ಬೇಕಾಗುವ ಹಗ್ಗ). ಬಲ ಎಡಗಿವಿಗಳಲ್ಲಿ ಇರುವ ಚಂದ್ರ ರೋಹಿಣೀ=ಚಂದ್ರ ಪತ್ನಿ ಇವರಿಬ್ಬರು ಬಲಎಡದ ಅಶ್ವಗಳು. ಎರಡೂ ಕಣ್ಣಿನಲ್ಲಿ ಇರುವ ಸೂರ್ಯ ಹಾಗೂ ಸೂರ್ಯಪತ್ನಿ ಸಂಜ್ಞೆ, ಇವರು ಮುಂದೆ ಹೂಡಿರುವ ಅಶ್ವ (ರೂಪ) ಗಳು. ಮನೋಭಿಮಾನಿಯಾದ ರುದ್ರದೇವನು ಸಾರಥಿಯು. ಇಂಥ "ಅಧ್ಯಾತ್ಮ"–"ಅಧಿದೈವ"ವೆಂದು ಎರಡು ವಿಧವಾದ ಶರೀರ ರಥವನ್ನು ಮುಖ್ಯ ಪ್ರಾಣ ಹಾಗೂ ಪ್ರಾಣಪತಿ ಪರಮಾತ್ಮ ಇವರಿಬ್ಬರೂ ಆರೋಹಿಸಿ ರುತ್ತಾರೆ. ಭಾಷ್ಯದಲ್ಲಿಯೂ ಇದೇ ಅರ್ಥವನ್ನು ಉಪಪಾದಿಸಿರುತ್ತಾರೆ.

**ಅವತರಣಿಕಾ:** ಶ್ರೀಹರಿಯ ಅಪಾರ ಗುಣಗಳು ಶ್ರುತಿಸ್ಮೃತಿಗಳು ತಿಳಿಯ ಲಾರವು (ಪೊಳಗಳಲರಿಯುವು) ಬ್ರಹ್ಮಾದಿ ದೇವತೆಗಳು ಸಹ ಪೂರ್ಣ ತಿಳಿಯರು. ತನ್ನ ಮಹಿಮೆ ತಾನೇ ಪೂರ್ಣ ತಿಳಿಯುದವನೆಂದು ಶ್ರೀಹರಿಯ ಸರ್ವಜ್ಞತೆ ಮಹಿಮೆ ಪೊಗಳುತ್ತಾರೆ.

**ಮೂಲ :**

**ಅಮಿತ ಮಹಿಮನಪಾರ ಗುಣಗಳ।**
**ಅಮಿತ ವರ್ಣಾತ್ಮಕ ಶ್ರುತಿಸ್ಮೃತಿ।**
**ಗಮಿಸಲಾಪವೆ ತದಭಿಮಾನಿಗಳೆಂದೆನಿಸಿಕೊಂಬ॥**

ಕಮಲಸಂಭವ ಭವ ಸುರೇಂದ್ರಾ |
ದ್ಯಮರರನುದಿನ ತಿಳಿಯಲರಿಯರು |
ಸ್ವಮಹಿಮಗಳಾದ್ಯಂತ ಮಧ್ಯಗಳರಿವ ಸರ್ವಜ್ಞ ॥ ೩೦ ॥

**ಪದ್ಯಾರ್ಥ :** ಅಮಿತ=ಮಿತಿ ಇಲ್ಲದೆ ಇರುವ ಅನಂತ ಗಣನೆಗೆ ತಿಳಿಯದ ಮಹಿಮನ=ಮಹಾತ್ಮನ ಶ್ರೇಷ್ಠನಾದ ಸರ್ವರಿಂದಲೂ ಪೂಜ್ಯನಾದ, ಅಪಾರ ಗುಣಗಳ ಶ್ರೀ ರಮೆಯಿಂದಲೂ ಪೂರ್ಣ ತಿಳಿಯದ, ಅಪಾರ=ಮೇರೆ ಇಲ್ಲದ-ಲೆಕ್ಕಕ್ಕೆ ನಿಲುಕದ ಅನಂತ ಗುಣಗಳನ್ನು, ಸಮಿತ ವರ್ಣಾತ್ಮಕ ಶ್ರುತಿಸ್ಮೃತಿ=ಅಜಾದಿ ಪಂಚಾಶದ್ವರಣಗಳಿಂದ ನಿತ್ಯ ಒಂದೇ ರೀತಿಯಾಗಿ ಸಮಿತ=ಕೂಡಿರುವ-ಮಿಳಿತವಾದ ಶ್ರುತಿ=ವೇದಗಳು (ವೇದಗಳು ವರ್ಣಾತ್ಮಕವಾಗಿಯೂ, ಅರ್ಥಾತ್ಮಕವಾಗಿಯೂ ನಿತ್ಯವಾದವು) ಸ್ಮೃತಿಗಳು (ವರ್ಣಾತ್ಮಕವಾಗಿ ಅನಿತ್ಯ, ಸ್ಮೃತಿಗಳು ಪುರಾಣಾದಿಗಳು) ಗಮಿಸಲಾಪವೇ=ಹೊಂದಲಾಗುವವೇ ? ಪೊಗಳಲು ಶಕ್ಯವೆ-ಎಂದಿಗೂ ಪೂರ್ಣ ತಿಳಿಯಲು ಶಕ್ಯವಿಲ್ಲ. ತದಭಿಮಾನಿಗಳೆಂದೆನಿಸಿಕೊಂಬ=ಈ ವೇದ ಸ್ಮೃತಿ ಅಭಿಮಾನಿಗಳಾದ ಕಮಲ ಸಂಭವ ಬ್ರಹ್ಮ, ಭವ=ರುದ್ರ, ಸುರೇಂದ್ರಾದ್ಯಮರರು, ಅನುದಿನ=ನಿತ್ಯದಲ್ಲಿ ಯಾವ ಕಾಲಕ್ಕೂ ತಿಳಿಯಲರಿಯರು=ಪೂರ್ಣ ತಿಳಿಯಲು ಶಕ್ಯರಲ್ಲ. ಸ್ವಮಹಿಮೆಗಳಾದ್ಯಂತ ಮಧ್ಯಗಳರಿವ ಸರ್ವಜ್ಞ=ಶ್ರೀಹರಿಯು ಎಲ್ಲವನ್ನೂ ಬಲ್ಲವನಾದ್ದರಿಂದ, ತನ್ನ ಮಹಿಮೆಗಳ ಆದಿ-ಮಧ್ಯ-ಅಂತ=ಕೊನೆಗಳು ತಾನೆ ತಿಳಿಯುವನು. ಶ್ರೀಹರಿಯು ಅನಂತ ಕಾಲದಲ್ಲಿ ಶಶ್ವದೇಕ ಪ್ರಕಾರನಾಗಿ ಇರುವ ಈತನಿಗೆ ಆದಿ-ಹುಟ್ಟು ಸ್ಥಿತಿ ಕೊನೆಗಳೇ ಇಲ್ಲ ಕಾರಣ-ಅನಂತನು ತನ್ನ ಅನಂತ ಮಹಿಮೆಗಳನ್ನು ತಾನೇ ಬಲ್ಲನು.

ದ್ರೌಪದೀಶಪತಿ ವಿಠಲರು : ಅಮಿತ ಮಹಿಮನ ॥

ಭಾವಸೂಚನ : ಅಮಿತೇತಿ ॥ ಗಮಿಸಲಾಪವೆ ॥ ವರ್ಣಿಸಲಾಪವೇ ॥ ೩೦ ॥

### ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

"ಅಮಿತ" ಇತಿ ॥ "ಅಸಮಿತ"=ಅಪರಿಮಿತಃ । "ಗಮಿಸಲಾಪವೆ ?" ತಿಳಿದಾವೇ ? "ಸ್ವಮಹಿಮ" ಇತಿ ॥ ಸ್ವಸ್ವಮಾಹಾತ್ಮ್ಯಮ್ ॥ ಅರಿವ=

ರಷಾದ್ಯುದ್ದೇಶ್ಯಕೋಪ ದಿಶ್ಯಮಾನ ಗುಣಾನಾಂ ಚ ಇತಿ ॥ "ಅನಂತ ತ್ವಾತ್ ಮಯಾಽಪಿ ಹಿ ॥ ನ ಶಕ್ಯಂತೇ ॥" ಇತಿ ವಿರೋಧಃ ಅನ್ಯಥಾ ॥ ಮಯಾ ಅಸಂಖ್ಯತ್ವಾತ್ ತಥಾ ನ ಕ್ರಿಯತೇ ನ ಅವಿಜ್ಞಾನಾತ್ ॥ ಅನಂತ ಮಪಿ ವೇತ್ತೀಶಃ ಅನಂತತ್ವಂ ತಥೈವ ಚ ॥ ಅನಂತಸ್ಯ ತು ಸಂಖ್ಯಾನೇನ ತು ಸರ್ವಜ್ಞತಾ ಭವೇತ್ ॥ ಅನಂತಮಪಿ ವೇತ್ತೀಶಃ ಪ್ರತ್ಯೇಕಂ ಚ ವಿಶೇಷತಃ ॥ ಸರ್ವಜ್ಞತ್ವಾನ್ನ ಸಂಖ್ಯಾನಂ ಅಸಂಖ್ಯಸ್ಯ ಕುತೋ ಮಸಾ ॥" ಇತಿ ಏಕಾದಶ ತಾತ್ಪರ್ಯೇ ॥ ಫಲಿತೋಕ್ತಿರೇಷಾ ॥ ೩೦ ॥

## ಕನ್ನಡಾರ್ಥ

"ಅಮಿತ ಮಹಿಮನ" ಎಂಬ ಪದ್ಯದಿಂದ ಪರಮಾತ್ಮನ ಗುಣಗಳ ಅನಂತತೆಯನ್ನು ತಿಳಿಸುತ್ತಾರೆ. ಅಸಮ=ಅಪರಿಮಿತ. ಗಮಿಸಲಾಪವೇ? ತಿಳಿಯುತ್ತವೆಯೋ? ಇಲ್ಲ ಎಂದು ಅರ್ಥ. ಸ್ವಮಹಿಮ=ಎಂದರೆ ರಮಾ ಮುಂತಾದವರನ್ನುದ್ದೇಶಿಸಿ ತೋರಿದ ತನ್ನ "ಮಾಹಾತ್ಮ್ಯ" ಎಂದು ಅರ್ಥ ಮಾಡಿಕೊಳ್ಳಬೇಕು. ಇಲ್ಲದಿದ್ದರೆ "ಅನಂತವಾಗಿರುವದರಿಂದ ಸಂಖ್ಯೆಯಿಲ್ಲ ದಿರುವದರಿಂದ ನಾನು ಅವುಗಳ ಸಂಖ್ಯಾ ಪರಿಗಣನೆಯನ್ನು ಮಾಡುವದಿಲ್ಲ" ಎಂದು ಮುಂತಾಗಿರುವ ಪ್ರಮಾಣ ವಚನಗಳಿಂದ ವಿರೋಧ ಬರುತ್ತದೆ. ಶ್ರೀಮದ್ಭಾಗವತ ತಾತ್ಪರ್ಯದಲ್ಲಿ (ಸ್ಕ. ೧೧, ಅ. ೧೬-೧೭) "ಕಾಲೇನ ಪರಮಾಣೂನಾಂ" ಎಂಬ ಶ್ಲೋಕವನ್ನು ವ್ಯಾಖ್ಯಾನಿಸುವಾಗ ಈ ಸಂಗತಿ ಯನ್ನು ನಿರೂಪಿಸಿರುತ್ತಾರೆ. "ಕಾಲೇನ-ಸರ್ವಗುಣಾತ್ಮಕನಾದ ನನ್ನಿಂದ ಅಸಂಖ್ಯತ್ವಾತ್=ಸಂಖ್ಯೆಯಿಲ್ಲದಿರುವದರಿಂದ, ತಥಾ ಪರಮಾಣುಗಳನ್ನಂತೆ ಅನಂತಾನಂತ ಕೋಟಿ ಬ್ರಹ್ಮಾಂಡಗಳನ್ನು ಸೃಷ್ಟಿಸುವ ನನ್ನ ವಿಭೂತಿಗಳ ಸಂಖ್ಯಾ ಪರಿಗಣನೆಯನ್ನು ಮಾಡುವದಿಲ್ಲ" (ಎಂದು ಶ್ರೀಕೃಷ್ಣನು ಉದ್ಧವ ನಿಗುಪದೇಶಿಸಿದ ಶ್ಲೋಕದ ತಾತ್ಪರ್ಯಾರ್ಥ) ಹೊರತಾಗಿ ಅಲ್ಲಿರುವ ಸಂಖ್ಯೆಗಳನ್ನು ಅರಿತವನಲ್ಲವೆಂದಲ್ಲ." ಯಾಕಂದರೆ ಅನಂತವಾದವುಗಳನ್ನು ಅನಂತವೆಂದೇ ಹರಿಯು ತಿಳಿಯುತ್ತಾನೆ. ಅನಂತವನ್ನು ಅಂತಯುಕ್ತ ವಾಗಿ ತಿಳಿಯುವದು ಈಶ್ವರನಿಗೆ ಭ್ರಮವನ್ನು ತಂದು ಕೊಡುತ್ತದೆ. ಇದ ರಿಂದ ಪರಮಾತ್ಮನ ಸರ್ವಜ್ಞತ್ವವು ತಪ್ಪಿಹೋಗುತ್ತದೆ-ಬಾಧಿತವಾಗುತ್ತದೆ. ಆದುದರಿಂದ ಅನಂತವಾದುದನ್ನು ಸಂಖ್ಯಾಯುಕ್ತವಾಗಿ ಈಶ್ವರನು ತಿಳಿಯು

ನೆಂದೇ ಅರ್ಥ ಹೇಳಬೇಕು. ಹಾಗಾದರೆ ಪರಮಾತ್ಮನು ಅನಂತವಾದು ದನ್ನು ತಿಳಿಯನೆಂದಮೇಲೆ ಜ್ಞಾನದಿಂದ ಅಪೂರ್ಣನಾಗುವನು! ಎಂದು ಆಕ್ಷೇಪಿಸಬಹುದು. ಇದು ಸರಿಯಲ್ಲ. ಯಾಕಂದರೆ ಸರ್ವಜ್ಞನಾದುದ ರಿಂದ ಹರಿಯು ಅನಂತವನ್ನು ಪ್ರತ್ಯೇಕವಾಗಿಯೂ ವಿಶೇಷವಾಗಿ ತಿಳಿಯು ತ್ತಾನೆ. ವಿಭೂತಿ ರೂಪಗಳಲ್ಲಿ ಸಂಖ್ಯೆಯೇ ಇಲ್ಲದಿರುವಾಗ-ಆ ಸಂಖ್ಯೆ ಯನ್ನು ತಿಳಿಯುವದಿಲ್ಲವೆಂದರೆ ಹರಿಯ ಸರ್ವಜ್ಞತ್ವಕ್ಕೆ ಹಾನಿಯು ತಟ್ಟು ವದಿಲ್ಲ" ಎಂದು ವಿಶಿಷ್ಟ ಪ್ರಕರಣದ ಫಲಿತಾರ್ಥ ॥ ೩೦ ॥

**ಅವತರಣಿಕಾ :** ಇಂತಹ ಅಪಾರ ಮಹಿಮನು, ಧನ-ದೇಹ ಮನೆ ದಾರಾ ಪುತ್ರಾದಿಗಳಲ್ಲಿ ಅಂತರಾತ್ಮನಾಗಿ ನೆಲಸಿರುವ ಕಾರಣ ಎಲ್ಲರಲ್ಲಿ ಭಗವಂತನಿಹನೆಂಬ ಜ್ಞಾನ ದಾರಢ್ಯ ಬರಲು, ಸಕಲರ ಬಿಂಬನೇ ಎನ್ನ ಬಿಂಬನೆಂದು, ಸಕಲ ಸದ್ಭಕ್ತರನ್ನು ತೃಪ್ತಿ ಪಡಿಸಬೇಕು. ತ್ರಿವಿಧ ಅಧಿಕಾರಿ ಜೀವರಲ್ಲಿ ಅನುಸಂಧಾನ ಕ್ರಮ ಉಪದೇಶಿ ಸುತ್ತಾರೆ.

**ಮೂಲ :**

> **ವಿತ್ತ ದೇಹಾಗಾರ ದಾರಾ ।**
> **ಪತ್ಯ ಮಿತ್ರಾದಿಗಳೊಳಗೆ ಹರಿ ।**
> **ಪ್ರತ್ಯಗಾತ್ಮನು ಯೆಂದೆನಿಸಿ ನೆಲೆಸಿಪ್ಪನೆಂದರಿದು ॥**
> **ನಿತ್ಯದಲಿ ಸಂತೃಪ್ತಿ ಬಡಿಸುತ ।**
> **ಉತ್ತಮಾಧಮ ಮಧ್ಯಮರ ಕೃತ ।**
> **ಕೃತ್ಯನಾಗುನ್ಮತ್ತನಾಗದೆ ಭೃತ್ಯ ನಾನೆಂದು ॥ ೩೧ ॥**

**ಪದ್ಯಾರ್ಥ :** ವಿತ್ತ=ಧನ, ದೇಹ=ತನ್ನ ದೇಹ, ಆಗಾರ=ಮನೆ ಇವು ಜಡ ಪದಾರ್ಥಗಳಲ್ಲಿ, ದಾರಾ=ಹೆಂಡತಿ, ಅಪತ್ಯ=ಪುತ್ರರು, ಮಿತ್ರರಾದಿ=ಸ್ನೇಹಿತರು ಮುಂತಾದ ಭಗವದ್‌ಭಕ್ತರಾದ "ಬಾಂಧವಾ ವಿಷ್ಣು ಭಕ್ತಾಶ್ಚ" ಎಂಬುವಂತೆ, ಇವರೊಳಗೆ ಶ್ರೀಹರಿ=ತನ್ನ ಬಿಂಬರೂಪಿ ಯಾದ ಹರಿಯು ಪ್ರತ್ಯಗಾತ್ಮ-ಪ್ರತ್ಯಕ್+ಆತ್ಮ, ಜೀವನಿಂದ ಭಿನ್ನನಾಗಿ ಸಚ್ಚಿದಾನಂದ ಹರಿಯು, ಅಂತರ್ಯಾಮಿ=ಅಂತರ್ನಿಯಾಮಕನು, ನೆಲ ಸಿಪ್ಪನೆಂದರಿದು ಅಂತರಂಗ ನಿಯಾಮಕನೆಂದು ತಿಳಿದು, ನಿತ್ಯದಲಿ ಅವರನ್ನು ಸಂತೃಪ್ತಿಬಡಿಸುತ=ಪ್ರತಿಕಾಲ ಕಾಲಕ್ಕೆ ಅವರ ಮನಸ್ಸಿಗೆ ಪ್ರೀತಿಯಾಗು ವಂತೆ ಸಮಾಧಾನಮಾಡುತ್ತ ತೃಪ್ತಿಗೊಳಿಸಬೇಕು. ಉತ್ತಮ-ಶ್ರೇಷ್ಠರು,

ಮಧ್ಯಮರು, ಅಧಮರು ಎಂದು ಭಗವದ್ಭಕ್ತರಲ್ಲಿ ಮೂರು ಜನ ಅಧಿಕಾರಿಗಳ ಯೋಗ್ಯತಾನುಸರಿಸಿ ತೃಪ್ತಿಬಡಿಸಿ ಪ್ರೀತಿ ಸಂಪಾದಿಸು. ಇವರ ಪ್ರೀತಿಯೆ ಶ್ರೀಹರಿಯ ಪ್ರೀತಿ ಎಂಬ ಭಾವನೆ ಇರಬೇಕು. ಹೀಗೆ ಶಾಸ್ತ್ರೋಕ್ತವಾಗಿ ಪೇಳಿದಂತೆ ಮಾಡುವ ಕಾರ್ಯ ಮಾಡಿ, ಕೃತಕೃತ್ಯ=ಪುಣ್ಯವಂತನಾಗು, ಸದಾ ಸರ್ವರ ಭೃತ್ಯ ನಾನೆಂದು ನಾನು ದಾಸರ ದಾಸರ ದಾಸನೆಂದು ಸ್ಮರಿಸು. ಉನ್ಮತ್ತನಾಗದೆ=ನಾನೇ ಶ್ರೇಷ್ಠ ನಾನೇ ಕರ್ತನೆಂಬ ಅಹಂಕಾರ ತುಂಬಿದ ಸೊಕ್ಕಿನವನಾಗಬೇಡವೆಂದು ದಾಸರಾಯರು ಉಪದೇಶಿಸುತ್ತಾರೆ.

**ಭಾವಸೂಚನ :** ವಿತ್ತೇತಿ ದೇವೇತಿ ||

## ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ

ಉಪಸಂಹರತಿ "ವಿತ್ತ" ಇತಿ || "ಆತ್ಮಾ ನಾರಾಯಣಃ ||" ತಸ್ಯೈವ ಹಿ ಕಾಮೇನ" ಪತ್ಯಾದಿಃ ಪ್ರಿಯೋ ಭವೇತ್ || ನ ಹಿ ಪತ್ಯಾದೀನಾಂ ಜಾಯಾದೀನಾಂ ಅಹಂ ಪ್ರಿಯಃ ಸ್ಯಾಮ್ ಇತಿ ಕಾಮನಾಮಾತ್ರೇಣ ಪ್ರಿಯತ್ವಂ ಭವತಿ || ಭಗವದಿಚ್ಛಯೈವ ತದ್ ಭವತಿ" ಇತಿ ಬೃಹದ್ ಭಾಷ್ಯೇ || ೩೧ ||

## ಕನ್ನಡಾರ್ಥ

"ವಿತ್ತ ದೇಹಾಗಾರ" ಎಂಬ ಪದ್ಯದಿಂದ ಪರಮಾತ್ಮನು ಸರ್ವತ್ರ ನೆಲೆಸಿರುವದರಿಂದ ಅವುಗಳಲ್ಲಿ ಪರಸ್ಪರ ಪ್ರೀತಿಯು ಹುಟ್ಟುತ್ತದೆ ಮತ್ತು ಅವುಗಳಿಗೆ ತಕ್ಕಂತೆ ತೃಪ್ತಿಪಡಿಸಬೇಕು ಎಂದು ಹೇಳುತ್ತಾರೆ. ಬೃಹದಾರಣ್ಯಕೋಪನಿಷತ್ತಿನಲ್ಲಿ "ಪತಿ ಪುತ್ರ ಮುಂತಾದವರು ಕಾಮ ಮುಂತಾದ ಇಚ್ಛೆಯಿಂದ ಪರಸ್ಪರ ಪ್ರಿಯರಾಗಲಾರರು. ಪರಮಾತ್ಮನ ಇಚ್ಛೆಯಿಂದ ಪ್ರೀತಿಯು ಹುಟ್ಟಿ ಪರಸ್ಪರ ಪ್ರಿಯರಾಗುತ್ತಾರೆ. ಪರಮಾತ್ಮನ ಇಚ್ಛೆಯಿಲ್ಲದಿದ್ದರೆ ಯಾರು ಯಾರಿಗೂ ಪ್ರಿಯರಾಗಲಾರರು ಎಂದು ಹೇಳಿರುತ್ತದೆ. ಶ್ರೀಮದಾಚಾರ್ಯರು ಭಾಷ್ಯದಲ್ಲಿ "ಆತ್ಮ ಎಂದರೆ ನಾರಾಯಣ. ಅವನ ಇಚ್ಛೆಯಿಂದಲೇ ಪತಿ ಮುಂತಾದವರು ಹೆಂಡತಿ ಮುಂತಾದವರಿಗೆ ಪರಸ್ಪರ ಪ್ರಿಯರಾಗುತ್ತಾರೆ. ಯಾಕಂದರೆ ಹೆಂಡತಿ ಮುಂತಾದವರಿಗೆ ನಾನು ಪ್ರಿಯನಾಗಬೇಕು; ಗಂಡ ಮುಂತಾದವರಿಗೆ ನಾನು ಪ್ರಿಯಳಾಗಬೇಕು ಎಂದು ಗಂಡ-ಹೆಂಡತಿ ಮುಂತಾದವರ ಕೇವಲ ಇಚ್ಛೆಯಿಂದಲೇ ಪರಸ್ಪರ ಪ್ರೇಮವು

ಉತ್ಪನ್ನವಾಗುವದಿಲ್ಲ-ಪರಸ್ಪರ ಪ್ರಿಯರಾಗಲಾರರು; ಶ್ರೀಹರಿಯು ಇಚ್ಛೆಯಿಂದಲೇ ಅವರು ಪರಸ್ಪರ ಪ್ರೀತಿಬದ್ಧರಾಗುತ್ತಾರೆ" ಎಂದು ನಿರೂಪಿಸಿರುತ್ತಾರೆ ॥ ೩೧ ॥

**ಅವತರಣಿಕಾ :** ಭಗವನ್ಮಹಿಮೆ ಸ್ತೋತ್ರಗೈಯುತ್ತ ಹಿಂದೆ ಹೇಳಿದಂತೆ ದೇಹದಲ್ಲಿ ಸಕಲ ರೂಪಗಳನ್ನು ಚಿಂತಿಸುತ್ತ ಆನಂದ ಪಡಬೇಕು. ಈ ಸಾಧನದಿಂದ ಶ್ರೀಹರಿ ಧ್ಯಾನೋಪಾಸನೆಗೆ ಒಲಿಯುವದೆಂದು ಮಾತೃಕಾ ಸಂಧಿ ಮುಗಿಸುತ್ತಾರೆ.

**ಮೂಲ :**

**ದೇವ ದೇವೇಶನ ಸುಮೂರ್ತಿ ಕ ।**
**ಳೇವರಗಳೊಳಗನವರತ ಸಂ ।**
**ಭಾವಿಸುತ ಪೂಜಿಸುತ ನೋಡುತ ಸುಖಿಸುತಿರು ಬಿಡದೆ ॥**
**ಶ್ರೀವರ ಜಗನ್ನಾಥ ವಿಠ್ಠಲ ।**
**ತಾ ಒಲಿದು ಕಾರುಣ್ಯದಲಿ ಭವ ।**
**ನೋವು ಪರಿಹರಿಸುವನು ಪ್ರವಿತತ ಪತಿತ ಪಾವನನು ॥ ೩೨ ॥**

ಅಂತು ಸಂಧಿ ೮ಕ್ಕೆ ಪದ್ಯ ೨೬೪ಕ್ಕೆ ಮಾತೃಕಾ ಸಂಧಿ ಸಮಾಪ್ತ
॥ ಮಂಗಳಮಾಹ ॥
॥ ಶ್ರೀ ಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು ॥

**ಪದ್ಯಾರ್ಥ :** ದೇವ=ಕ್ರೀಡಾದಿಗುಣ ವಿಶಿಷ್ಟನಾದ ದೇವೇಶ ಬ್ರಹ್ಮಾದಿಗಳಿಗೆ ಈಶನಾದ ಹರಿಯು ಸುಮೂರ್ತಿ=ಸಮೀಚೀನವಾದ ಸಚ್ಚಿದಾನಂದ ಮೂರ್ತಿ=ರೂಪಗಳನ್ನು ತನ್ನ ಬಿಂಬನಿಗೆ ಅಭಿನ್ನವಾದವೆಂದು, ಕಳೇವರದೊಳಗನವರತ=ದೇಹದಲ್ಲಿ ಯಾವ ಯಾವ ಸ್ಥಾನದಲ್ಲಿ ಯಾವ ಮೂರ್ತಿಗಳನ್ನು ಧ್ಯಾನೋಪಾಸನೆ ಕ್ರಮವಾಗಿ, ಅನವರತ=ಪ್ರತಿನಿತ್ಯ ಬಿಡದೆ, ಸಂಭಾವಿಸುತ=ಒಳ್ಳೇ ಗೌರವದಿಂದ ತಿಳಿಯುತ್ತ, ಮನ್ನಿಸುತ್ತಾ ಚಿಂತನೆ ಮಾಡುವದು, ನೋಡುತ=ಈ ಎಲ್ಲ ರೂಪಗಳನ್ನು ಗುರುವನುಗ್ರಹದಿಂದ ಕಾಣುತ್ತ, ಪೂಜಿಸುತ್ತ=ಧ್ಯಾನೋಪಾಸನೆಯಿಂದ ಸಕಲ ಪೂಜಾ ವಿಧಾನ ತಿಳಿದು ಪೂಜಾ ಮಾಡುವದು, ಸುಖಿಸತಿರು ಬಿಡದೇ=ನಿತ್ಯ ಬಿಡದೇ ಪೂಜಿಸಿ ಆನಂದಪಡಬೇಕು. ಹೀಗೆ ಧ್ಯಾನೋಪಾಸನಾರತನಾಗಿ ಪೂಜಿಸಿದರೆ, ಶ್ರೀವರ=ಶ್ರೀ ಲಕ್ಷ್ಮೀ ಪತಿಯಾದ ಜಗನ್ನಾಥ ವಿಠಲ=ಜಗತ್ತಿಗೆ ಸ್ವಾಮಿಯಾದ, ವಿಠಲ=ಅಜ್ಞಾನಿಗಳ ಅಜ್ಞಾನವನ್ನು ದೂರಮಾಡಿ, ಸುಜ್ಞಾನ

ಪ್ರದನಾದ ಹರಿಯಿಂದ ಅಭಿನ್ನನಾದ ವಿಠಲನಾಮಕ ಪರಮಾತ್ಮನು, ಕಾರುಣ್ಯ ದಲಿ ಪೊಲಿದು=ಏನಂ ಮೋಚಯಾಮಿ ಎಂಬ ಕರುಣೆಯಿಂದ ಪ್ರಸನ್ನನಾಗಿ ಅಂತರಂಗದಿ ಪೊಳೆದು, ಭವನೋವು ಪರಿಹರಿಸುವನು. ಭವ=ಸಂಸಾರಕ್ಕೆ ಕಾರಣವಾದ ಲಿಂಗದೇಹವನ್ನು ಬಿಡಿಸಿ, ಸ್ವರೂಪ ಸುಖವೀವನು. ಪ್ರವಿ ತತ=ಸಕಲ ಜಡ ಜಂಗಮರಲ್ಲಿ ವ್ಯಾಪ್ತನು. ಪತಿತಪಾವನ=ಶರಣಾಗತ ರಾದವರ ಪಾಪವನ್ನು ಕಳೆಯುವನಾದ ಹರಿಯು ಕರುಣಾಳು ಎಂದು ಸ್ತೋತ್ರ ಮಾಡಿದ್ದಾರೆ. ಇತಿ ಮಾತೃಕಾ ಸಂಧಿ ಪದ್ಯಾರ್ಥ ಸಂಪೂರ್ಣಂ

॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

**ಭಾವಸೂಚನ** : ದೇವ ದೇವೇಶೇತಿ ॥ ಶ್ರೀ ಹರಿಕಥಾಮೃತಸಾರ ಭಾವಸೂಚನ ಮಾತೃಕಾ ಸಂಧಿ ಸಮಾಪ್ತ.

॥ ಶ್ರೀ ಕೃಷ್ಣಾರ್ಪಣಮಸ್ತು ॥

**ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದೀ**

ಉಪಸಂಹರತಿ "ದೇವ" ಇತಿ ॥ ಪ್ರವಿತತ=ವ್ಯಾಪ್ತ ॥ ೩೨ ॥

ಇತಿ ಶ್ರೀಮದ್ ಹರಿಕಥಾಮೃತಸಾರ ಟೀಕಾಯಾಂ ಶ್ರೀ ವ್ಯಾಸದಾಸ ಸಿದ್ಧಾಂತ ಕೌಮುದ್ಯಾಂ ಶ್ರೀ ಸೋದಾಪುರೇಶಾನುಗ್ರಹಿ ಜಂಬುಖಂಡಿ ಶ್ರೀನಿವಾಸಾಚಾರ್ಯ ಸುತ ವಾದಿರಾಜ ವಿರಚಿತಾಯಾಂ ಮಾತೃಕಾ ಸಂಧಿಃ ಸಂಪೂರ್ಣಂ।

॥ ಶ್ರೀ ಕೃಷ್ಣಾರ್ಪಣಮಸ್ತು ॥

**ಕನ್ನಡಾರ್ಥ**

ಸಂಧಿಯನ್ನು ಮುಗಿಸುತ್ತಾರೆ "ದೇವದೇವೇಶನ" ಎಂಬ ಪದ್ಯದಿಂದ. ದೇಹದಲ್ಲಿ ಮಾತೃಕಾಗಳಲ್ಲಿರುವ ಭಗವದ್ರೂಪಗಳನ್ನು ತಿಳಿದುಕೊಂಡು ಅದರಂತೆ ಹಿಂದೆ ಹೇಳಲ್ಪಟ್ಟ ಮೂರ್ತಿಗಳನ್ನು ಪೂಜಿಸುತ್ತ ಉಪಾಸಿಸಿದವ ರಿಗೆ ಶ್ರೀ ಜಗನ್ನಾಥ ವಿಠ್ಠಲ ಮೂರುತಿಯು ಒಲಿದು ಕರುಣಾಮಯ ಪ್ರಸಾದದಿಂದ ಸಂಸಾರ ಬಂಧನವನ್ನು ತಪ್ಪಿಸುವನು." ಪ್ರವಿತತ=ವ್ಯಾಪ್ತ.

ಶ್ರೀ ಹರಿಕಥಾಮೃತಸಾರ ಟೀಕಾ—ವ್ಯಾಸದಾಸ ಸಿದ್ಧಾಂತ ಕೌಮುದಿಯ ಮಾತೃಕಾ ಸಂಧಿಯು ಕನ್ನಡಾರ್ಥಾನುವಾದವು ಮುಗಿದುದು.

॥ ಶ್ರೀ ಮಧ್ವೇಶ ಕೃಷ್ಣಾರ್ಪಿತವಾಗಲಿ ॥

॥ ಶ್ರೀ ಗುರುರಾಜೋ ವಿಜಯತೇ ॥

# ೯ನೇ ವರ್ಣಪ್ರಕ್ರಿಯಾ ಸಂಧಿಯ ಸಾರ

ಬಹು ಪ್ರಮೇಯಭರಿತವಾದ ಕಾರಣ ಇಲ್ಲಿ ಸಂಕ್ಷಿಪ್ತವಾಗಿ ಬರೆದಿದೆ. ಮುಂದೆ ಪದ್ಯಗಳಲ್ಲಿ ವಿಸ್ತರಿಸುತ್ತದೆ.

ಶ್ರೀ ಗುರುಭ್ಯೋನಮಃ ಹರಿಃ ಓಂ. ಹಿಂದೆ ಮಾತೃಕಾ ಸಂಧಿಯಲ್ಲಿ ಅಜಾದಿ ೫೧ ರೂಪಗಳು, ದೇಹದಲ್ಲಿರುವ ವಿವರ ಮತ್ತು ಸ್ಥೂಲದೇಹ ಅವಯವಗಳಲ್ಲಿದ್ದ ಭಗವದ್ರೂಪಗಳು, ನಾಡಿ ವಿವರ, ಸುಷುಮ್ನಾ ನಾಡಿಗತ ಕಮಲಗಳು, ಅಲ್ಲಿಪ್ಪ ಭಗವನ್ಮೂರ್ತಿಗಳನ್ನು ಚಿಂತಿಸುವ ಕ್ರಮ, ದೇಹಾಖ್ಯ ರಥ ವಿಚಾರ ಮುಂತಾದವುಗಳನ್ನು ಹೇಳಿದರು. ಇದು ದೇಹ ಅಂತರಶುದ್ಧಿ ಬಾಹ್ಯಶುದ್ಧಿಯಾಯಿತು. ಇನ್ನು ಈಗ ಈ ಒಂಭತ್ತನೇ ಸಂಧಿಯಲ್ಲಿ ಅಜಾದಿ ಪಂಚಾಶದ್ವರ್ಣಗಳೇ ನಿತ್ಯವಾಗಿ ವೇದಗಳಲ್ಲಿ ಕ್ರಮವಾಗಿ ನಿತ್ಯ ಇರುವವೆಂದು ಹಿಂದೆ ಸೂಚಿಸಲಾಗಿದೆ. ಆ ಶ್ರುತಿಗಳಲ್ಲಿಪ್ಪ ವರ್ಣಗಳ ಕ್ರಮ, ವೇದಗಳಲ್ಲಿಪ್ಪ ಸ್ವರಾದಿ ಭೇದಗಳು, ಆ ಸ್ವರಭೇದದಿಂದ ಆಗುವ ಅರ್ಥಾನುಸಂಧಾನವೂ, ಸ್ವರವರ್ಣನಾಮದಿಂದ ಶ್ರೀ ಹರಿಯೇ ಪ್ರತಿಪಾದ್ಯನೆಂದು ಈ ವರ್ಣ ಪ್ರತಿಪಾದ್ಯ ಭಗವನ್ಮೂರ್ತಿಗಳನ್ನು ಅರಿತು ಉಪಾಸನೆ ಮಾಡುವವನು ವಿಜ್ಞಾನಿಯೆಂದೂ, ಆ ವಿಜ್ಞಾನಿಯ ಲಕ್ಷಣ, ಜ್ಞಾನಿಯಾದಾಗ್ಯೂ ಆ ಜ್ಞಾನಿಯ ಅನುಭೋಕ್ತವ್ಯ ಕರ್ಮಗಳನ್ನು ಈ ಸಂಧಿಯಲ್ಲಿ ವಿವರಿಸಿದ್ದಾರೆ. ಇಂಥ ಕರ್ಮಯೋಗಿ ಜ್ಞಾನಿಯೋಗಿ ವಿಜ್ಞಾನಿಗಳೇ ಭಗವದುಪಾಸನಾ ಮಾಡಲಿಕ್ಕೆ ಯೋಗ್ಯಾಧಿಕಾರಿಗಳು ಎಂದು ಉಪದೇಶಿಸಿದ್ದಾರೆ. ಹಿಂದೆ ಸ್ಥೂಲ ದೇಹದಲ್ಲಿಪ್ಪ ಎಲ್ಲ ಭಗವದ್ರೂಪ ಚಿಂತನಾಕ್ರಮದಲ್ಲಿ ವಿಸ್ತರಿಸದೇ ಇದ್ದ ಭಗವದ್ರೂಪ, ನಾಡಿಗತ ರೂಪಗಳು, ಧ್ಯಾನ ಕ್ರಮ, ಪಾಪಪುರುಷನ ದಹನಕ್ರಮದಿಂದ ದೇಹ ಶುದ್ಧಗೊಳಿಸಿ ಬಿಂಬೋಪಾಸನಾಮಾಡಲು, ಬಿಂಬತ್ರಯ ಅಗ್ರೇಶ ಮೂಲೇಶ ಪ್ರಾದೇಶ ಈ ಬಿಂಬತ್ರಯಗಳ ವಿವರ ಈ ಮೂರ್ತಿಗಳ ಲಕ್ಷಣ, ಮೂಲೇಶನ ಪಾದಾಶ್ರಿತ ಮುಖ್ಯಪ್ರಾಣನ ಇರುವಿಕೆ, ಈ ಮುಖ್ಯಪ್ರಾಣನ ಪಾದವಲ್ಲಿ ಜೀವನು ಇರುವಿಕೆ, ಜೀವ ಪರಮಾಣುತ್ವ, ಜೀವನ ಸ್ವರೂಪ ದೇಹದಲ್ಲಿ ಪ್ರಾಣದೇವರ ಇರುವಿಕೆ, ಸ್ವರೂಪದಲ್ಲಿರತಕ್ಕ

ಪ್ರಾಣದೇವರು ಪವನ ನಾಮದಿಂದ ಇರುವದು, ಈ ಪವನನೇ ಗರುಡ ಶೇಷ ರುದ್ರಾದಿ ನಾಮಗಳನ್ನು ಧರಿಸಿ ಸ್ವರೂಪ ದೇಹದಲ್ಲಿ ಕರಣ ನಿಯಾಮಕನು ಆಗಿ ಹರಿಯಂತೆ ಶ್ರೀ ಬಿಂಬರೂಪಿ ಹರಿಯ ಅಧೀನನಾಗಿ ಇರುವನು. ಸ್ವರೂಪ ದೇಹದ ಮೇಲೆ, ಅಕ್ಕಿಯ ಮೇಲಿನ ಹೊಟ್ಟು ಆವರಕವಾಗಿ ಇರುವಂತೆ ಲಿಂಗದೇಹವು ಸ್ವರೂಪಕ್ಕೆ ತಗಲದೇ ಅವಕಾಶವಾಗಿ ಇರುವುದು, ಈ ಲಿಂಗವು ಅನಾದಿಯಾಗಿರುವದು. ಸೃಷ್ಟಿ ಪ್ರಾರಂಭದಲ್ಲಿ, ಸ್ವರೂಪಕ್ಕೂ ದೇಹಕ್ಕೂ ವಾಸುದೇವನು ತನ್ನ ಸ್ವೇದದಿಂದ ಸಂಬಂಧಮಾಡಿ ಲಿಂಗ ಉಪಚಯ ದ್ವಾರಾ ಅನಿರುದ್ಧ ಸ್ಥೂಲಾದಿ ದೇಹಕೊಟ್ಟು ಸಾಧನಮಾಡಿಸುವನು. ಮತ್ತು ಇದು ವಿರಜಾ ನದಿ ಸ್ನಾನ ಪರಿಯಂತರವಾಗಿ ಹತ್ತಿರುವುದು. ಇದಕ್ಕೆ ಜಡಪ್ರಕೃತಿ ಅಧಿದೇವತೆಯಾಗಿದ್ದಾಳೆ. ಈ ಲಿಂಗದಲ್ಲಿ ಬ್ರಹ್ಮ, ವಾಯು, ವಾಣಿ, ಭಾರತಿದೇವಿ ಈ ನಾಲ್ವರ ದ್ವಾರಾ ಸಕಲ ಕಾರ್ಯಗಳನ್ನೂ ಮಾಡಿಸುವನು. ಮಿಕ್ಕ ದೇವತೆಗಳಿಗೆ ಈ ಲಿಂಗ ದೇಹದಲ್ಲಿ ಸ್ಥಾನವಿಲ್ಲ. ಈ ಲಿಂಗ ದೇಹವು ಅನಾದಿಯಾದರೂ, ವಿರಜಾನದೀ ಸ್ನಾನದಿಂದ (ಲಿಂಗ ಬಂಧಕ) ಪೋಗುವದು. ಕಾರಣ ಇದು ಅನಿತ್ಯವೆಂದು ಕರೆಸುವದು ಈ ಲಿಂಗ ದೇಹದಲ್ಲಿ ಮೂರು ಆವರಣಗಳಿರುವವು. **ಸತ್ವ ಜೀವರಿಗೆ** ಮೊದಲು, ಸತ್ವಾವರಣ, ಮಧ್ಯ ರಜೋ ಆವರಣ, ಕೊನೆಗೆ ತಮೋ ಆವರಣ. **ರಜೋ ಜೀವರಿಗೆ** ಮೊದಲಿಗೆ ರಜೋ ಪರಿಚ್ಛೇದ, ಎರಡನೇದು ತಮೋ ಪರಿಚ್ಛೇದ, ಕೊನೆಯದು ಸತ್ವ ಪರಿಚ್ಛೇದ. **ತಮೋ ಜೀವರಿಗೆ** ಮೊದಲಿಗೆ ತಮೋ ಆವರಣ, ೨ನೇದು ರಜೋ ಆವರಣ, ೩ನೇದು ಸತ್ವಾವರಣ-ಹೀಗೆ ಇರುವದೆಂದು ಶ್ರೀ ವಿಜಯದಾಸರ ಸುಳಾದಿ ಇದೆ. ಸತ್ವಾವರಣದಲ್ಲಿ, ಮನ-ಜ್ಞಾನೇಂದ್ರಿಯಾದಿ ಪಂಚ, ರಜೋ ಆವರಣದಲ್ಲಿ ಪಂಚ ಕರ್ಮೇಂದ್ರಿಯ, ತಮೋ ಆವರಣದಲ್ಲಿ ಪಂಚ ತನ್ಮಾತ್ರಾ ಹೀಗೆ ಲಿಂಗದೇಹವು ೧೬ ಕಳೆಗಳು ಉಳ್ಳದೆಂದು ಕರೆಸುತ್ತದೆ. ಈ ಎಲ್ಲ ಕಲೆಗಳಿಗೆ ಶ್ರೀ ಹರಿ ಇಂದಿರೆಯರು, ಬ್ರಹ್ಮ, ವಾಯು, ವಾಣಿ, ಭಾರತೀ ನಾಲ್ವರ ದ್ವಾರವೇ ಉಪಚಯವನ್ನು ಕೊಟ್ಟು, ಅವ್ಯಕ್ತ ಶರೀರವನ್ನು ನಿರ್ಮಾಣ ಮಾಡುತ್ತಾರೆ. ಈ ಅವ್ಯಕ್ತ ಶರೀರ ಬೇರೆ ಇದ್ದರೂ ಲಿಂಗ ದೇಹ ಪ್ರಭೇದವೆಂದು ಕೆಲವರ ಮತ. ಈ ವಿವರ, ಸೃಷ್ಟಿ ಪ್ರಕರಣ ಸುಳಾದಿ, ಅಧ್ಯಾತ್ಮ ಮಾಲಾಕಾರರು ಸವಿಸ್ತರ

ನಿರೂಪಿಸಿದ್ದಾರೆ. ಇಂತಹ ಅವ್ಯಕ್ತ ಅನಿರುದ್ಧ ಶರೀರ ಮಧ್ಯದಿ, ಶ್ರೀ ಭಗವಂತನು ತನ್ನ ಇಚ್ಛಾಧಿಂದ, ಜೀವಾಚ್ಛಾದಿಕಾ, ಪರಮಾಚ್ಛಾದಿಕಾ ಎಂಬ ಎರಡು ಪಟಲಗಳನ್ನು ನಿರ್ಮಾಣಮಾಡಿರುವದು. ಇಲ್ಲಿ ದುಷ್ಟಗುಣ ಗಳ ಪ್ರವರ್ತನಕ್ಕೆ ಕಾರಣಳಾದ ಇಂದಿರೆಯು ದುರ್ಗಾರೂಪದಿಂದ ಪ್ರೇರಕ ಳಾಗಿರುವಳು. ಇಲ್ಲಿ ಇಂದಿರೆಗೆ ಬಲಪ್ರದನಾದ ಜನಾರ್ದನರೂಪಿ ಹರಿಯು, ದೈತ್ಯ ದಾನವರನ್ನು ಒಳಪೊಗಗೊಡದೇ ದೂರಮಾಡುತ್ತ, ಸತ್ವ ರಜ ತಮೋ ಗುಣದೊಳಗೆ ಇದ್ದು ತ್ರಿವೃತು (ಮೂರು ಗುಣಗಳಲ್ಲಿ ನಿಂತು ಕಾರ್ಯ ಮಾಡಿಸುವನೆಂದು) ಎಂಬ ಹೆಸರಿಂದ ಕರೆಯಲ್ಪಡುತ್ತಾನೆ. ("ಜಡ ಕೇವಲ ತರ ಸೂಕ್ಷ್ಮ ಪ್ರಕೃತಿಯಿಂದ ಬಿಡದೆ" ಎಂಬ ಸುಳಾದಿ ೩೦ ಸೃಷ್ಟಿ ಪ್ರಕರಣ ಪುಟ ೧೪೫ರಲ್ಲಿ ಇದರ ವಿವರ ಶ್ರೀ ವಿಜಯದಾಸರು ಚೆನ್ನಾಗಿ ಬಣ್ಣಿಸಿದ್ದಾರೆ, ನೋಡುವದು.) ಅವ್ಯಕ್ತ ದೇಹದ ಮೇಲೆ ಅನಿರುದ್ಧ ದೇಹ. ಇಲ್ಲಿ ರುದ್ರ ಮೊದಲಾದ ತತ್ವಾಭಿಮಾನಿ ದೇವತೆಗಳೂ, ತತ್ವಾಭಿಮಾನಿ ಅಸುರರೂ ಇರುವರು. ಇಲ್ಲಿ ಆಯಾ ತತ್ವಗಳ ಗುಣಕಾರ್ಯವಿಲ್ಲ, ಕೇವಲ ತತ್ವಾಭಿ ಮಾನಿಗಳಾದ ದೇವ ದೈತ್ಯರಿಗೆ ಇರುವ ಸ್ಥಾನವು ಅಲ್ಲಿದ್ದು ಇತ್ತ ಸ್ಥೂಲ ದೇಹದಲ್ಲಿ ಕಾರ್ಯ ನಡೆಸುವರು. ಈ ಅನಿರುದ್ಧ ದೇಹದಲ್ಲಿ ಜೀವ ಪರಮಾ ಚ್ಛಾದಿಕ ಪಟಲ ದ್ವಯದಿ, ಒಂದು ನಿತ್ಯ ಸಂಸಾರಿ, ಒಂದು ತಮೋ ಯೋಗ್ಯ ಜೀವರುಗಳು ದುಷ್ಟ ಕಾರ್ಯ ಪ್ರವೃತ್ತಿ ಕಾರಣರಾಗಿಹರು. ಈ ಎರಡೂ ದುಷ್ಟ ಪ್ರಕೃತಿಗೆ ದುರ್ಗಾದೇವಿಯೇ ಪ್ರಚೋದಕಳೆಂದು ತಿಳಿಯಬೇಕು. ಹೀಗೆ ಅನಿರುದ್ಧ ದೇಹಸ್ಥಿತಿ ಹೇಳಿ, ಮುಂದೆ ಸ್ಥೂಲ ದೇಹದಲ್ಲಿ ಸಮಸ್ತ ತತ್ವಾಭಿಮಾನಿ ದೇವ ದೈತ್ಯರು, ಪರಸ್ಪರ ಸ್ಪರ್ಧೆಯಿಂದ ಪುಣ್ಯ ಪಾಪಗಳ ಕರ್ಮಗಳನ್ನಾಚರಿಸುವರು. ತತ್ವಾಭಿಮಾನಿ ದೈತ್ಯರಿಗೆ, ಸಮಸ್ತ ತತ್ವಾಭಿ ಮಾನಿ ದೇವತೆಗಳೂ ಪ್ರೇರಕರೂ ಪ್ರಚೋದಕರೂ ಆಗಿರುತ್ತಾರೆ. ಈ ಸೂಕ್ಷ್ಮವಿಚಾರ ಪ್ರಕಾಶ ಸಂಹಿತೆ ಶ್ರೀ ವಿಜಯದಾಸರ ಸುಳಾದಿಯಿಂದ ತಿಳಿ ಯುವದು. ಈ ದೇವ ದೈತ್ಯ ತತ್ವಾಭಿಮಾನಿಗಳಿಗೆ ಶ್ರೀ ಪ್ರಾಣೇಶನ ಆಜ್ಞೆಯೇ ಮುಖ್ಯವಾಗಿರುವದೆಂದು ಹೇಳಿದ್ದಾರೆ. ಸೂಕ್ಷ್ಮವಾಗಿ ಜೀವ, ಲಿಂಗ, ಅವ್ಯಕ್ತ, ಅನಿರುದ್ಧ, ಸ್ಥೂಲ ದೇಹದ ವಿಚಾರ, ಜೀವಾಚ್ಛಾದಿಕ, ಪರಮಾಚ್ಛಾದಿಕ, ಬಂಧಕಶಕ್ತಿ ಇವನ್ನೆಲ್ಲಾ ವಿವರಿಸಿ ಕರುಣಾಳುಗಳಾದ

ದಾಸರಾಯರು, ಮಹಿಯೊಳಗಿರುವ ಸಕಲ ತೀರ್ಥಕ್ಷೇತ್ರಾದಿಗಳ ದೇಶಗಳ ಲ್ಲಿಯೂ, ತುಹಿನ-ಹಿಮ ಕಾಲ, ವರ್ಷಾಕಾಲ, ವಸಂತಾದಿ ಕಾಲಗಳಲ್ಲಿಯೂ ದೇಹದಿಂದ ಆಗುವ ಕರ್ಮಗಳು, ದೇಶನಿಮಿತ್ಯ ಆಚರಿಸುವ ಕರ್ಮಗಳು, ಕಾಲ ನಿಮಿತ್ಯ ಸಂಭವಿಸುವ ಕರ್ಮಗಳು ಹೀಗೆ ದೈಹಿಕ-ದೈಶಿಕ ಕಾಲಿಕ, ತ್ರಯ-ಮೂರು ವಿಧ ಕರ್ಮ, ಜೀವರ ಸ್ವಭಾವ ಧರ್ಮವನ್ನನುಸರಿಸಿ, ಬ್ರಹ್ಮಾದಿ ದೇವತೆಗಳೆಲ್ಲರೂ ಅವರವರ ಗುಣಧರ್ಮಗಳ ಅನುಸಾರವಾಗಿ, ಎಲ್ಲ ಜೀವರಲ್ಲಿ ಸನ್ನಿಹಿತರಾಗಿದ್ದು, ನಿರ್ಭಯದಿ ವ್ಯಾಪಾರ ಮಾಡುವರು. ಎಂದರೆ, "ಇಂದ್ರಿಯಾಣಾಂ ನತುಸ್ವಾಪಂ" ಎಂಬುವ ಶ್ರೀಮದಾಚಾರ್ಯ ಉಕ್ತ್ಯನುಸಾರ ಇಂದ್ರಿಯಾಭಿಮಾನಿ ದೇವತೆಗಳಿಗೆ ಅಜ್ಞಾನಾದಿಗಳಿಲ್ಲ, ದೈತ್ಯರ ಭಯವಿಲ್ಲ. ನಿರ್ಭಯದಿ ಇತರ ದೈತ್ಯಾದಿಗಳ ಭಯವಿಲ್ಲದೇ, ಸಕಲ ಕರ್ಮಗಳನ್ನೂ ಮಾಡುವರು.

ಈ ಪ್ರಕಾರ ದೇಹಗಳ ವಿಚಾರ, ತತ್ವಾಭಿಮಾನಿ ದೇವದೈತ್ಯರ ವಿಚಾರ ಹೇಳಿ, ಇಂತಹ ಜೀವಾಚ್ಛಾದಿಕ ಪರಮಾಚ್ಛಾದಿಕ ಬಂಧಕ ತೊಲಗಿಸಲು, ಹಿಂದಿನ ೬-೭-೮ ಈ ಮೂರು ಸಂಧಿಗಳಲ್ಲಿ ಭಗವದ್ರೂಪ, ತತ್ವಪತಿಗಳ ರೂಪಗಳನ್ನು ಚಿಂತಿಸುವ ಕ್ರಮ ಸ್ಥೂಲಾದಿ ದೇಹಗಳಲ್ಲಿ ವಿವರಿಸಿ, ಬಂಧ ನಿವೃತ್ತಿ ಪರಿಹರಿಸಲು, ಬಿಂಬೋಪಾಸನೆ ಮುಖ್ಯವಾದುದೆಂದು ಹೇಳಲು, ಬಿಂಬತ್ರಯ ಇರುವ ಸ್ಥಳ "ಬಿಂಬ ಚಲಿಸಿದರೆ ಪ್ರತಿಬಿಂಬ ಚಲಿಸುವ" ಎಂಬ ದಾಸಾರ್ಯರ ವಾಕ್ಯದಂತೆ ವಿವರಿಸುತ್ತಾರೆ. ಹಿಂದಿನ ಸಂಧಿಗಳಲ್ಲಿ ಪೇಳಿದ್ದೇ ವಿಸ್ತರಿಸುತ್ತಾರೆ. ಮೊದಲಿಗೆ ಬಿಂಬನಿರುವ ಸ್ಥಾನವನ್ನು ಹೇಳುತ್ತಾರೆ. ದೇಹಮಧ್ಯದಿ, ಒಂದು ಕೂದಲು ಸಾವಿರ ವಿಭಾಗವನ್ನು, ಮಾಡಿದರೆ ಎಷ್ಟು ಸೂಕ್ಷ್ಮವಾಗುವುದೋ ಅಷ್ಟು ಸೂಕ್ಷ್ಮತರವಾದುದು. ಸುಷುಮ್ನಾ ನಾಡಿಯು, ತುಂದಿ ಮೂಲಾರಭ್ಯವಾಗಿ, ಶಿರಾಂತದಲ್ಲಿ ವ್ಯಾಪಿಸಿದೆ. ಈ ಸುಷುಮ್ನಕ್ಕೆ, ವಜ್ರಿಕಾ, ಪಶ್ಚಿಮಕ್ಕೆ-ಇಲ್ಲಿ ಪ್ರದ್ಯುಮ್ನ, ಆರ್ಯಾ, ಉತ್ತ ರಕ್ಕೆ-ಅನಿರುದ್ಧ, ಪ್ರಕಾಶಿನೀ, ಪೂರ್ವಕ್ಕೆ-ವಾಸುದೇವ, ವೈದ್ಯುತಿ, ದಕ್ಷಿ ಣಕ್ಕೆ-ಸಂಕರ್ಷಣ, ಮಧ್ಯ-ಬ್ರಹ್ಮನಾಡಿ, ನಾರಾಯಣ ಹೀಗೆ ಐದು ಪ್ರಭೇದಗಳುಂಟೆಂದು ತಂತ್ರಸಾರ ಪ್ರಮೇಯವನ್ನು ನಿರೂಪಿಸಿ, ಮುಂದೆ

ಆ ನಳಿನ ಭವ=ಬ್ರಹ್ಮ ನಾಡಿಗಳಲ್ಲಿ, ಸುಷುಮ್ನಾ ನಾಡಿಯಲ್ಲಿ ತ್ರಿಕೋಣ ಚಕ್ರ ಮಂಡಲ ಇರುವದು. ವಹ್ನಿಮಂಡಲ, ಮಧ್ಯದಲ್ಲಿ, ಸಂಕರ್ಷಣ ರೂಪಿ ಪರಮಾತ್ಮ, ಹೀನನಾದ ಪಾಪ ಪುರುಷನನ್ನು ದಹನಮಾಡುತ್ತಾ ಈ ನಾಡಿಗಳಲ್ಲಿ ಪ್ರವೇಶ ಮಾಡಗೊಡದಂತೆ ಉದಾನ ನಾಮಕನಾದ ವಾಯುದೇವರ ದ್ವಾರಾ, ದಿನದಿನದಿ ದಹಿಸಿ=ಪಾಪ ಪುರುಷನ ಅನೇಕ ಅಂಶಗಳನ್ನು, ನಿತ್ಯನಿತ್ಯದಲ್ಲಿ ದಹಿಸುತ್ತಾ, ವಿಜ್ಞಾನಮಯನಾದ ವಾಸು ದೇವನನ್ನು ಐದಿಸುತ್ತಾನೆ. ಈ ವಿಷಯ ಲನೇ ಸಂಧಿಯಲ್ಲಿ ಸವಿಸ್ತರ ವಿವರಿಸಿದೆ.

ಇಂತಹ ಸೂಕ್ಷ್ಮತರವಾದ ಮಧ್ಯನಾಡಿಯಲ್ಲಿ ಹೃದಯಾಷ್ಟದಳ ಕಮಲ ದಲ್ಲಿ ಜೀವನ ಇರುವಿಕೆಯನ್ನು ಹೇಳುತ್ತಾರೆ. ಈ ಹೃತ್ಕಮಲ ಎಂಟು ದಳ ದಿಂದ ಶೋಭಿಸುತ್ತದೆ. ಈ ಕಮಲದ ಕೊನೆಯ ಶ್ರೀ ಭಾಗದಲ್ಲಿ, ಅಗ್ರೇಶ-ಜೀವನಂಗುಷ್ಠಾಗ್ರ ಮೂರುತಿ ಇದ್ದಾನೆ. ಕಮಲ ಮಧ್ಯ-ಭೂದೇವಿ=ಇಲ್ಲಿ ಪ್ರಾದೇಶ ನಾಮಕ ಪರಮಾತ್ಮ, ಜೀವನ ಪ್ರಾದೇಶಮೂರ್ತಿ, ಕಮಲನಾಳ ದುರ್ಗಾಭಾಗದಲ್ಲಿ ಮೂಲೇಶನಾಮಕ ಹರಿಯು, ಅಷ್ಟಭುಜಯುಕ್ತನಾಗಿರು ವನು. ಪದ್ಮಾಸನನಾಗಿ ಕುಳಿತ ಮೂರ್ತಿ=೧ ಸುದರ್ಶನ, ೨ ಶಂಖ, ೩ ಖಡ್ಗ, ೪ ಚರ್ಮ, ೫ ಗದಾ, ೬ ಪದ್ಮ, ೭ ಕಾರ್ಮುಕ, ಬಿಲ್ಲು ೮ ಬಾಣ ಈ ಪ್ರಕಾರ ಅಷ್ಟಬಾಹು ಯುಕ್ತನಾಗಿರುವನು. ಈತನಿಗೆ ಹಂಸನಾಮಕ ನೆಂದು ಹೆಸರು. ಈ ಮೂಲೇಶನ ಪಾದಕಮಲ ಮೂಲದಲ್ಲಿ, ಪವನ ನಾಮಕ ವಾಯುದೇವರು ಇರುವರು. ಈ ವಾಯು ದೇವರಲ್ಲಿ ಚಾಳೂಕ ನಾಮಕ ಹರಿಯು ಇರುವನು. ಈ ಪ್ರಾಣದೇವರ ಪಾದ ಮೂಲದಲ್ಲಿ, ಜೀವನು ಲಿಂಗ ಅನಿರುದ್ಧ ದೇಹವಿಶಿಷ್ಟನಾಗಿ ಇರುವನು. ಕಪರ್ದಿ ಮೊದ ಲಾದವುರರೆಲ್ಲರೂ ತಮ್ಮ ವ್ಯಾಪಾರವಿಲ್ಲದೇ ಹರಿಸ್ಮರಣರತರಾಗಿ ಜೀವನನ್ನು ಕಾದುಕೊಂಡಿಹರು. ಅಗ್ರೇಶ-ಮೂಲೇಶ-ಪ್ರಾದೇಶ ಬಿಂಬತ್ರಯರ ವರ್ಣನೆ ಹಿಂದೆ ಪದ್ಯ ೮, ೯ರಲ್ಲಿ ಬಂದಿದೆ.

ಈ ಪ್ರಕಾರ ಕಮಲನಾಳ ಮಧ್ಯದಲ್ಲಿರುವ, ಹೃದಯಾಷ್ಟ ದಳದಲ್ಲಿ ಕುಲಾಲ ಚಕ್ರದ ತೆರದಿ=ಕುಂಬಾರನ ತಿಗುರಿಯ ಗಾಲಿಯಂತೆ ಮೂಲೇಶ ನಾದ ಹಂಸನಾಮಕನು ಕಾಲಕಾಲಗಳಲ್ಲಿ ಬಿಡದೇ ಅಷ್ಟದಳಗಳಲ್ಲಿಪ್ಪ ಅಷ್ಟ

ದಿಕ್ಪಾಲಕರಾದ ಇಂದ್ರಾದಿ ದೇವತೆಗಳ ಅಧಿಷ್ಠಾನಗತ ಅಷ್ಟ ದಿಕ್ಪಾಲಕರ ದಳಗಳಲ್ಲಿ ಸಂಚರಿಸುತ್ತಾ, ದಿಕ್ಪತಿಗಳ ಸೇವೆ ಕೈಕೊಳ್ಳುತ್ತ ಅವರು ಮಾಡ ತಕ್ಕ ಕಾರ್ಯಗಳಿಗೆ ಪ್ರೇರಕನಾಗಿ ಅವರ ಅಭಿಲಾಷೆಗಳನ್ನು ಪೂರೈಸಿ ಕೊಡುವನು.

ಇನ್ನು ಅಷ್ಟದಳ ಕಮಲಗತ ಅಷ್ಟ ದಿಕ್ಪಾಲಕರಲ್ಲಿಪ್ಪ ರೂಪಗಳನ್ನು ನಿರೂಪಿಸುತ್ತಾರೆ. ದಳಗಳಲ್ಲಿ ಸಂಚರಿಸಿದರೆ ಆ ಯಾವ ಬುದ್ಧಿ ಪುಟ್ಟುವ ಕ್ರಮ :

೧ ಪೂರ್ವ ದಳ=ವಾಸವ ಇಂದ್ರ=ಉಪೇಂದ್ರ=ಸತ್ಪುಣ್ಯ, ಮನಸ್ಸು
೨ ಆಗ್ನೇಯ ದಳ=ಅಗ್ನಿ=ಪರಶುರಾಮ=ನಿದ್ರ ಆಲಸ್ಯ ಹಸಿವೆತೃಷಿ
೩ ದಕ್ಷಿಣ ದಳ=ಯಮ=ರಾಮ=ಸಂಭರಿತ ಕೋಪಾಟೋಪ
೪ ನಿಋುರುತಿ ದಿಕ್ಕಿನಲ್ಲಿ=ನಿಋುರುತಿ=ಜನಾರ್ದನ=ಪಾಪಕೃತ್ಯದಿ ಮನವೆರಗುವದು
೫ ಪಶ್ಚಿಮ ದಳ=ವರುಣ=ಮತ್ಸ್ಯ=ವಿನೋದ ಹಾಸ್ಯ
೬ ವಾಯುವ್ಯ ದಳ=ಪ್ರವಾಹ ವಾಯು=ಹಯವದನ=ಗಮನಾಗಮನ
೭ ಉತ್ತರ ದಳ=ಕುಬೇರ=ಕಪಿಲ=ಧರ್ಮದ ಬುದ್ಧಿ
೮ ಈಶಾನ್ಯ ದಳ=ಭವರುದ್ರ=ನರಸಿಂಹ=ಗೋಧರಣ ಧನಾದಿ ದಾನ ಬುದ್ಧಿ

ಈ ಪ್ರಕಾರ ಹಂಸನಾಮಕ ಮೂಲೇಶನು ೮ ದಳಗಳಲ್ಲಿ ಸಂಚರಿಸುತ್ತ, ಜೀವನಿಗೆ, ಆಯಾ ಬುದ್ಧಿಗಳನ್ನು ಪ್ರೇರಿಸುತ್ತಾನೆ. ಇನ್ನು ಮೂಲೇಶನು, ಮಧ್ಯದಲ್ಲಿ ಬರಲು, ವಿರಕ್ತಿ ಪುಟ್ಟುವದು. ಕಮಲದಲ್ಲಿರತಕ್ಕ ಕೇಸರ= ಕಮಲ ನಡುವೆ (ಸಣ್ಣ ದಾರದಂತೆ ಉದ್ದಾಗಿರುವುದು) ಬರಲು, ಸ್ವಪ್ನವು ಲಿಂಗದಿ, ಸುಷುಪ್ತಿ. ಮಧುಹ ಕರ್ಣಿಕೆಯಲ್ಲಿ ಬರೆ ಜಾಗ್ರತೆ ಪುಟ್ಟುವದು. (ಮಧು=ಶ್ರೀ ಹರಿಯು ಸುಖಪೂರ್ಣನಾದ ಕಾರಣ ಮಧು ಎಂದು ಕರೆಸು ತ್ತಾನೆ. ಇಂಥ ಸುಖಪೂರ್ಣನಾದ ಹರಿಯು, ಹ, ನಿತ್ಯ ತಮೋಯೋಗ್ಯ ರಾದ ದೈತ್ಯರಿಗೆ ಸುಖವನ್ನು ಕೊಡದೇ ಅವರ ಸ್ವರೂಪದಂತೆ ನಿತ್ಯ ದುಃಖ ವನ್ನು ಕೊಡುವನಾದುದರಿಂದ ಮಧುಹನೆಂದು ಕರೆಸುವನು) ಮೇಲೆ ಹೇಳಿ ದಂತೆ ಸುದರ್ಶನ ಚಕ್ರಾದಿ ಅಷ್ಟಾಯುಧಗಳನ್ನು ಧರಿಸಿ ದಿಶಾಧಿಪತಿಗಳ

ಲ ದಳಗಳಲ್ಲಿ ಸಂಚರಿಸುತ್ತಾ, ಈ ಪ್ರಕಾರವಾದ ಬುದ್ಧಿಗಳನ್ನು ಕೊಡು ವನು ಎಂಬುದಾಗಿ ಮೂಲೇಶನಾದ ಹರಿಯ ವ್ಯಾಪಾರ ಹೇಳಿರುತ್ತಾರೆ.

ಈ ಪ್ರಕಾರ ಸೂತ್ರನಾಮಕ ಪ್ರಾಣದೇವರಿಗೆ ಪತಿಯಾದ ಶ್ರೀ ಹರಿಯು ಈ ದೇಹದಲ್ಲಿ ಇದ್ದು ಪ್ರಾಣದೇವರ ದ್ವಾರಾ ಸಕಲ ಕಾರ್ಯ ಗಳನ್ನೂ ಮಾಡಿಸುವನೆಂದು ಅರಿಯದೇ ಇಂತಹ ಗಾಯತ್ರಿ ಮಂತ್ರ ಪ್ರತಿ ಪಾದ್ಯನಾದ ಹರಿಯ ರೂಪಗಳನ್ನೂ, ತದ್ಗುಣ ಕಾರ್ಯಗಳನ್ನೂ ತಿಳಿಯದೇ, ಭೂಮಿಯಲ್ಲಿ ಕಂಡಕಂಡಲ್ಲಿ ಸಂಚಾರಮಾಡುತ್ತ, ಪತ್ನೀಪುತ್ರ ಬಾಂಧವ ರಿಂದ ಒಡಗೂಡಿ, ನಾನು ಧನಿಕ ಇಷ್ಟು ತೀರ್ಥಯಾತ್ರಾದಿಗಳನ್ನು ಮಾಡಿದೆ, ನನ್ನ ಸಮಾನನ್ಯಾರು ಎಂದು ತನ್ನ ಪ್ರಸಿದ್ಧಿಗೋಸುಗ ಹೇಳುತ್ತಾ, ಸಂತೋ ಷದಿಂದ ಹಿಗ್ಗಿದರೆ ಏನೂ ಫಲವಿಲ್ಲ. ತೀರ್ಥ, ತೀರ್ಥಾಭಿಮಾನಿಗಳು ಗಂಗಾದಿ ನದಿಗಳಲ್ಲಿ ಇರುವಂತೆಯೇ ಶ್ರೀಹರಿಯು ತನ್ನ ದೇಹದಲ್ಲಿದ್ದಾನೆಂದು ಮನವನ್ನು ಹರಿಗೊಪ್ಪಿಸಿ ನಿತ್ಯ ಒಂದರಗಳಿಗೆಯಾದರೂ ಚಿಂತಿಸಿ, ಸ್ನಾನ- ಧ್ಯಾನ-ಉಪಾಸನ ಇವುಗಳನ್ನು ಶ್ರೀವಿಜಯದಾಸರ ಉಪಾಸನಾ ಭಾಗ ಸುಳಾದಿಯಲ್ಲಿ ಹೇಳಿದಂತೆ ಮನವರಿತು ಸದ್ಗುರುಗಳಿಂದ ತಿಳಿದು ಆಚರಿಸಿ ದರೆ ಬಹು ಪುಣ್ಯ. ಗಂಗಾದಿ ತೀರ್ಥಸ್ನಾನ ಮಾಡಿದ್ದಕ್ಕಿಂತಲೂ ಕೋಟ್ಯಾ ಧಿಕ ಫಲವೆಂದು ಶಾಸ್ತ್ರ ಸಮ್ಮತ. "ಗಂಗೆ ಮಿಂದರೆ ಮಲವು ಹಿಂಗಿತಲ್ಲದೇ ರಂಗವೊಲಿಯನೋ ಭಕುತ ಸಂಗದೊರೆಯದೇ" ಎಂಬ ದಾಸರ ವಚನ ನೆರೆ ನಂಬಿರಿ. ಕೇವಲ ಡಂಭಾಚಾರದಿಂದ, ಅನುಸಂಧಾನ ರಹಿತರಾಗಿ ಮಾಡಿ ದರೆ ತೀರ್ಥ ಯಾತ್ರಾದಿಗಳು ಲೇಶಪುಣ್ಯವೂ ಇಲ್ಲ.

ಇನ್ನು ಸಂಕ್ಷಿಪ್ತವಾಗಿ, ನಾಲ್ಕು ದೇಹಗಳಲ್ಲಿರುವ ಭಗವದ್ರೂಪಗಳನ್ನು ವಿವರಿಸುತ್ತಾರೆ. ಸ್ವರೂಪ ದೇಹದಿ ನಾರಸಿಂಹನು ಶರೀರ ನಾಮದಿಂದ ಕರೆಸುವನು. ಷೋಡಶ ಕಲಾತ್ಮಕವಾದ ಲಿಂಗದೇಹದಲ್ಲಿ ಪುರುಷ ನಾಮ ಕನು. ಅನಿರುದ್ಧ ದೇಹದೊಳಗೆ ಅನಿರುದ್ಧ ನಾಮಕನು ಶಾಂತಿ ದ್ವಾರಾ ಪ್ರೇರಿಸುವನು. ಇನ್ನು ಸ್ಥೂಲ ದೇಹದಲ್ಲಿ ಪ್ರದ್ಯುಮ್ನನಾಮಕ ಹರಿಯು ಪ್ರೇರಿಸುವನು. ಈ ಪ್ರಕಾರ ಸ್ಥೂಲವಾಗಿ ಚಿಂತನೆಗೆ ಭಗವದ್ರೂಪಗಳನ್ನು ನಿರೂಪಿಸಿದ್ದಾರೆ.

ಹಿಂದೆ ಸ್ಥೂಲದೇಹದಲ್ಲಿಪ್ಪ ಪಂಚಕೋಶ ೨೪ ತತ್ವ, ತತ್ವಾಭಿಮಾನಿ, ದೇವತೆ, ಹರಿರೂಪ, ನಾಡಿ, ನಾಡಿಗತ ಕಮಲ, ಕಮಲದಲ್ಲಿಪ್ಪ ಭಗವದ್ರೂಪ ಕಾರ್ಯ ಚಿಂತಿಸುವದು ಮನದಟ್ಟವಾಗಿ ಹೇಳಿ ಹಿಂದೆ ವಿವರಿಸದಿದ್ದ ಸ್ಥೂಲ ಶರೀರದಲ್ಲಿ ಮೇಲೆ ತೋರುವ ಸಪ್ತಧಾತುಗಳು ಅಲ್ಲಿಪ್ಪ ಹರಿಯ ರೂಪಗಳು ವಿವರಿಸುತ್ತಾರೆ.

ದೇಹದಲ್ಲಿ ಮೇಲೆ ಕಾಣಿಸುವ ೧ ತ್ವಕ್ಕು, ೨ ಚರ್ಮ, ೩ ಮಾಂಸ, ೪ ರುಧಿರ, ೫ ಮೇದೋ, ೬ ಮಜ್ಜಾ, ೭ ಅಸ್ಥಿ, ಈ ಏಳು ಸಪ್ತಧಾತುಗಳಲ್ಲಿ ೪೯ ಜನ ಮರುದ್ಗಣಗಳು. ಒಂದೊಂದರಲ್ಲಿ ೭ ಜನ ಗಣದಂತೆ ೭ ಗಣ ಮರುತ್ತುಗಳು ಇರುವರು.

೧. ತ್ವಕ್ಕಿನಲ್ಲಿ ಅನಿರುದ್ಧ ನಾಮಕ-ಪ್ರಸ್ತಾವರೂಪ=ಲಾವಣ್ಯಪ್ರದ ರಾಮರೂಪ.
೨. ಚರ್ಮದಲ್ಲಿ ಪ್ರದ್ಯುಮ್ನನಾಮಕ-ಉದ್ಗೀಥ=ವ್ರಣನಿವಾರಕ ಲಕ್ಷ್ಮೀಪತಿ.
೩. ಮಾಂಸದಲ್ಲಿ ಸಂಕರ್ಷಣಾಖ್ಯ-ಪ್ರತಿಹಾರ= ಪುಷ್ಟಿವರ್ಧನ, ವರರೂಪ.
೪. ರುಧಿರ (ರಕ್ತದಿ) ವಾಸುದೇವಾಖ್ಯ-ಉಪದ್ರವ=ಶರೀರ ಬಲಪ್ರದ, ಶಾಂತ ಸಂವಿದರೂಪ.
೫. ಮೇಧವಲ್ಲಿ ನಾರಾಯಣಾಭಿದ-ನಿಧನ=ಐಶ್ವರ್ಯಪ್ರದ, ಷಾಡ್ಗುಣ.
೬. ಮಜ್ಜಾದಲ್ಲಿ ವಷಟ್ಕಾರ-ಆದಿಸಾಮಗ ಮದವನ್ನು ಪುಟ್ಟಿಪ=ಸಾರಾತ್ಮಾ.
೭. ಅಸ್ಥಿಗಳಲ್ಲಿ ನರಸಿಂಹ-ಉಪದ್ರವ=ಅತಿ ಸ್ಥಿರತ್ವ, ಹಂಸನಾಮಕ.

ಹೀಗೆ ಸಪ್ತಸಾಮಗರೂಪಗಳಿಂದ ಸಪ್ತ ಧಾತುಗಳಲ್ಲಿ ಇರುವನು. ಈ ಸಪ್ತಸಾಮಗನು ೪೯ ಮರುತ್ತಗಳಲ್ಲಿ ೪೯ ರೂಪದಿಂದ ಇದ್ದು ಕಾರ್ಯ ಮಾಡಿಸುವನು. ಈ ಸಪ್ತ ಧಾತುಗಳಲ್ಲಿ ಅನ್ನಮಯಾದಿ ೫ ಕೋಶ ಗಳಿರುವವು.

| | | |
|---|---|---|
| ೧. ತ್ವಕ್ ಚರ್ಮ ಮಾಂಸದ ಮಧ್ಯ | .... | ೧. ಅನ್ನಮಯ ಕೋಶ |
| ೨. ಮಾಂಸ ರಕ್ತದ ನಡುವೆ | .... | ೨. ಪ್ರಾಣಮಯ ಕೋಶ |
| ೩. ರಕ್ತ ಮೇದಸ್ಸಿನ ನಡುವೆ | .... | ೩. ಮನೋಮಯ ಕೋಶ |
| ೪. ಮೇದಸ್ಸು ಮಜ್ಜಾ ನಡುವೆ | .... | ೪. ವಿಜ್ಞಾನಮಯ ಕೋಶ |
| ೫. ಮಜ್ಜಾ ಅಸ್ಥಿಯ ನಡುವೆ | .... | ೫. ಆನಂದಮಯ ಕೋಶ |

ಈ ಪ್ರಕಾರ ಪಂಚಕೋಶಗಳು ಸಪ್ತ ಧಾತುಗಳಲ್ಲಿರುವವೆಂದು ಶ್ರೀ ವಿಜಯದಾಸರ ವಚನ. ಕೋಶಗತವಾದ ರೂಪಗಳು, ಕೋಶಗಳೆಂದರೇನು ಹಿಂದೆ ವಿಸ್ತರಿಸಿದೆ. ಹೀಗೆ ಸಪ್ತ ಧಾತುಗಳ ಒಳಗೂ ಹೊರಗೂ, ತಪ್ತ ಲೋಹ=ಕೆಂಪಾಗಿ ಕಾದ ಕಬ್ಬಿಣದಲ್ಲಿ ಅಗ್ನಿಯು ಪ್ರಕಾಶಿಸಿದಂತೆ ಒಳ್ಳೇ ತೇಜೋಮಯ ರೂಪಗಳಿಂದ ಮೇಲೆ ವಿವರಿಸಿದಂತೆ ಸಪ್ತಸಾಮರೂಪಗಳಿಂದ ಇದ್ದು ಅನ್ನಮಯಾದಿ ಕೋಶಗಳಲ್ಲಿಯೂ, ಇದೇ ಸಪ್ತಸಾಮಗರೂಪನಿದ್ದು, ತಾನು ಕಾರ್ಯದಿಂದ ಲಿಪ್ತನಾಗದೇ ಜೀವರಿಗೆ ಕ್ಲುಪ್ತ ಭೋಗವನ್ನು ಕೊಡುತ್ತಾ, ಜೀವರಿಗೆ ಸ್ವಪ್ನವನ್ನು-ತೈಜಸನು,ಸುಷುಪ್ತಿಯನ್ನು-ಪ್ರಾಜ್ಞನು, ಜಾಗ್ರತೆಯನ್ನು-ವಿಶ್ವನಾಮಕ ಹರಿಯು ಕೊಡುವನು. ಹೀಗೆ ಛಾಂದೋಗ್ಯ ಶ್ರುತಿಯಲ್ಲಿ ಹೇಳಿದೆ.

ಇನ್ನು ಮಜ್ಜಾದಲ್ಲಿ ೩೬೦ ರೂಪ-ಸಂಧ್ಯಾ ದೇವತೆಗಳು.

ಅಂಗುಲಿ ಪರ್ವಗಳಲ್ಲಿ ೩೬೦ ರೂಪ-ದಿವಸಾಭಿಮಾನಿ ದೇವತೆಗಳು.

ಅಸ್ಥಿಗಳಲ್ಲಿ ೩೬೦ ರೂಪ-ರಾತ್ರಿ ದೇವತೆಗಳಿಗೆ ನಿಯಾಮಕ.

ಹೀಗೆ ಮೂರು ಸ್ಥಳಗಳಲ್ಲಿ ೧೦೮೦ ರೂಪಗಳಿಂದ ಈ ಸಪ್ತ ಧಾತುಗನಾಗಿ ಈ ದೇವತೆಗಳಿಂದ ಒಡಗೂಡಿಕೊಂಡು, ರಮಾವಲ್ಲಭನು ಕ್ರೀಡಿಸುವನೆಂದು ನಿತ್ಯ ಚಿಂತಿಸಬೇಕು. ಹೀಗೆ ಚಿಂತನಮಾಡಿದರೆ, ಆಯುಸ್ಸು ಅಭಿವೃದ್ಧಿ ಯಾಗುತ್ತದೆಂದು ಮಾನಸ ಸ್ಮೃತಿಯಲ್ಲಿ ಹೇಳಿದ್ದಾರೆ. ಈ ಪ್ರಕಾರನಾಗಿ ನಿರಂತರ ಭಗವದ್ರೂಪಗಳನ್ನು ಚಿಂತಿಸುವವರಿಗೆ ಆಗುವ ಫಲ ದೃಷ್ಟಾಂತ ದಿಂದ ಹೇಳುತ್ತಾರೆ.

ಲೋಕದಲ್ಲಿ ಕುರಡಿಕುಠಾರ ಹುಳವೆಂತ ಪ್ರಸಿದ್ಧಿಯುಂಟು. ಇದಕ್ಕೆ ಪೇಶಸ್ಕಾರಿ ಎಂದು ಹೆಸರು. ಈ ಕುರಡಿಕುಠಾರ ಹುಳುವು ತನ್ನ ಬಾಯಿಂದ ಮಣ್ಣು ತಂದು ಒಂದು ಮನೆಮಾಡಿ, ಆ ಸಣ್ಣ ತೂತಿನಲ್ಲಿ ಒಂದು ಹಸರು ಹುಳವನ್ನು ತಂದಿಟ್ಟು, ಹೊರಗೆ ಹೋಗದಂತೆ ನಿರ್ಬಂಧಿಸಿ, ಪುನಃ ಅದಕ್ಕೆ ಆಹಾರಾದಿಗಳನ್ನು ತಕ್ಕುದಾಗಿ ಕೊಡುತ್ತಾ ಇರುತ್ತದೆ. ಆ ಒಳಗಿರತಕ್ಕ ಕೀಟ ಹಸಿರು ಹುಳವು, ರೆಕ್ಕೆಯುಳ್ಳ ಕುರಡಿಕುಠಾರ, ಹುಳುವಿನ ಭೀತಿ, ಆಹಾರ ತಂದುಕೊಡುವದರಿಂದ ಸ್ನೇಹ, ಹೀಗೆ ಭಯಯುಕ್ತವಾದ ಸ್ನೇಹ ದಿಂದ ನೆನೆಸುತ್ತಾ, ಆ ಕೀಟಭಾವವನ್ನು ಬಿಟ್ಟು ಖೇಟ ರೂಪ-ರೆಕ್ಕೆಯುಳ್ಳ

ದ್ದಾಗಿ ಕೆಂಪು ಕಪ್ಪು ಬಣ್ಣದ್ದಾಗಿ ಆಕಾಶದಿ ಸಂಚರಿಸುವ ಪೇಶಸ್ಕಾರಿಯಂತೆ ರೂಪವನ್ನು ಹೊಂದುತ್ತದೆ. ಇಂಥ ಮಹಾಶಕ್ತಿ ಶ್ರೀ ಹರಿಯು ಪೇಶಸ್ಕಾರಿಯಲ್ಲಿ ಇಟ್ಟಿರುವನು. ಆದರೆ ಕೀಟ ರೂಪವೇ ಪೇಶಸ್ಕಾರಿ ರೂಪದಂತೆ ಆಯಿತೆಂದರೆ ಜೀವ ಪರಮಾತ್ಮ ಒಂದೇ ರೂಪರಾಗಿ ಐಕ್ಯಹೊಂದುತ್ತಾರೆಂಬ ವಾದಿಗಳ ಸಂದೇಹವನ್ನು ಪರಿಹರಿಸಲು, ರೂಪ ಒಂದೇ ಆದರೂ, ಆ ಪೇಶಸ್ಕಾರಿ ರೂಪ ಹೊಂದಿದ ಹುಳದ ಜೀವನವೇ ಬೇರೆ. ಆದರೆ ಪೇಶಸ್ಕಾರಿ ರೂಪಾಂತರವಾದ ಕೀಟ ರೂಪದ ಹುಳದಲ್ಲಿ ಆ ಪೇಶಸ್ಕಾರಿ ಶಕ್ತಿ ಬರುವದಿಲ್ಲವೆಂದು ಶತಸ್ಸಿದ್ಧ. ಇದು ಲೋಕದಲ್ಲಿ ಪ್ರಸಿದ್ಧ ಅನುಭವ. ಇಂತು ಕೀಟವು, ಪೇಶಸ್ಕಾರಿ ನೆನವಿನಲ್ಲೇ ಕೀಟರೂಪ ಹೊಂದುವಂತೆ, ಅಲ್ಪ ಜೀವಿಗಳು, ಭಕ್ತಿಯಿಂದ ಇದ್ದರೆ ಕೈಟಭ+ಅರಿ=ಕೈಟಭ ನಾಮಕ ದೈತ್ಯನನ್ನು ಸಂಹಾರಮಾಡಿದ ಶ್ರೀ ಹರಿಯನ್ನು ಭಜಿಸುತ್ತ ಧ್ಯಾನಮಾಡುತ್ತ ಭವವೆಂಬ ಸಂಸಾರಾರಣ್ಯವನ್ನು ಅತಿ ತ್ವರೆಯಿಂದ ದಾಟಿ, ಶ್ರೀ ಹರಿಗೆ ಸಮಾನವಾದ ಶಂಖ-ಚಕ್ರ-ಗದಾ-ಪದ್ಮ-ಪೀತಾಂಬರಾಲಂಕಾರವನ್ನು ಧರಿಸಿ **ಸಾರೂಪ್ಯ ಮುಕ್ತಿ** ಎಂಬುದು-ಮುಕ್ತಿಯಲ್ಲಿ ಪ್ರಭೇದವಾದುದು. ಇಂಥ ಮುಕ್ತಿಯನ್ನು ಹೊಂದುವರು. ಇವರಿಗೆ ಜೀವ ಬ್ರಹ್ಮೈಕ್ಯವಾಗುವದಿಲ್ಲ. ಸಾರೂಪ್ಯ ಮುಕ್ತಿಯನ್ನು ಹೊಂದಿದಂಥಾ ಮುಕ್ತಜೀವರು ಸೃಷ್ಟ್ಯಾದಿ ವ್ಯಾಪಾರಗಳು ಮಾಡಲಿಕ್ಕೆ ಶಕ್ತಿಹೀನರು. ಕೇವಲ ಸಾರೂಪ್ಯ ಶ್ರೀವತ್ಸ ಚಿನ್ಹರಹಿತ ಹರಿಯ ಸಮಾನ ರೂಪವಾದರೂ, ಶ್ರೀ ಹರಿಯ ಅಧೀನರು. ಸ್ವಾತಂತ್ರ್ಯಾದಿ ಗುಣರಹಿತರು. ಸದಾ ಹರಿಯ ಭೃತ್ಯರು-ದಾಸರು.

ಈ ಪ್ರಕಾರ ದೇಹದೊಳಗೆ ಇರುವ ಭಗವದ್ರೂಪಗಳನ್ನು ಮರೆಯದಲೇ ಪ್ರತಿ ಕಾಲಕಾಲಕ್ಕೆ ಭಕ್ತಿಯಿಂದ ಸ್ಮರಿಸುವ ಭಕ್ತರನ್ನು, ಗೋಪತಿ= ವೇದಪತಿ ಮುಕ್ತಿಗೆ ಒಡೆಯನೂ ಮುಕ್ತಿಯನ್ನು ಕೊಡತಕ್ಕವನೂ ಆದ ಬಿಂಬರೂಪನಾದ ಹರಿಯು, ಜಗನ್ನಾಥ ವಿಠಲನು, ಜಗತ್ತಿಗೆ ಸ್ವಾಮಿ, ಜಗದ್ವ್ಯಾಪಕನಾದ ಹರಿಯು ಅಜ್ಞರ ಅಜ್ಞಾನವನ್ನು ಕಳೆದು ಸುಜ್ಞಾನವನ್ನು ಕೊಡುವ ವಿಠ್ಠಲನಾಮಕ ಹರಿಯು, ತಾನು ಬಿಂಬನಾಗಿ ಒಳಗಿದ್ದರೂ ದೂರನಾಗಿ ಕಾಣದೇ ಇರುವನಂತೆ ತೋರನು. ಆದರೆ ಸಂತತ ಧ್ಯಾನೋಪಾಸನಾರೂಪ ನೆನೆವ ಭಕ್ತರಿಗೆ ಸಮೀಪಗ = ಮನವೆಂಬ ಮಂದಿರದಲ್ಲಿ

ಹೊಳೆದು, ಸಾಪರೋಕ್ಷಿಯ=ತನ್ನ ರೂಪವನ್ನು ತೋರಿಸಿ ಭಕ್ತರ ಹೃದಯುದಲ್ಲಿ ಹೊಳೆದು, ಸಾಪರೋಕ್ಷಿಯ=ತನ್ನ ರೂಪವನ್ನು ತೋರಿಸಿ ಭಕ್ತರ ಹೃದಯುದಲ್ಲಿ ಪೊಳೆದು ಅಪರೋಕ್ಷವಿತ್ತು ಎಲ್ಲ ಕಾಲದಲ್ಲಿ ಪೊರೆಯುುವನೆಂದು ದಾಸಾರ್ಯರು ವರ್ಣಪ್ರಕ್ರಿಯೆ ಸಂಧಿಯನ್ನು ಮುಗಿಸುತ್ತಾರೆ. ಸಂಧಿ ೬-೭-೮-೯ ಈ ನಾಲ್ಕು ಸಂಧಿ ಅರ್ಥವಾಗಬೇಕಾದರೆ ಮಾನಸ ಸ್ಮೃತಿ ಬೃಹದಾರಣ್ಯ, ಛಾಂದೋಗ್ಯ, ತೈತ್ತರೀಯ, ಮಾಂಡೂಕಾದಿ ಉಪನಿಷತ್ತುಗಳು, ಶ್ರೀ ವಿಜಯದಾಸರ ಸೃಷ್ಟಿ—ಉಪಾಸನಾ ಪ್ರಕರಣ ಸುಳಾದಿಗಳನ್ನು ಚನ್ನಾಗಿ ಮನನಮಾಡಿದರೆ ಸರಿಯಾದ ಮಾರ್ಗ ತಿಳಿಸುತ್ತಾರೆಂದು ಬಿನ್ನಹವು.

ಶ್ರೀ ಗುರು ಮಧ್ವೇಶನಿಗೆ ಅರ್ಪಿತವಾಗಲಿ.

# — ಒಪ್ಪೋಲೆ —

[ ದೃಷ್ಟಿದೋಷದಿಂದ ತಪ್ಪು ಉಳಿದಿವೆ. ತಿದ್ದಿಕೊಂಡು ಓದಲು ವಿನಂತಿ. ]

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೪೯೦ | ೪ | ಉದ್ಬೋಕ್ತ | ಉದ್ಬೋಧಕ |
| ೪೯೧ | ೧೫ | ಶಂಕ | ಶಂಕಾ |
| ೪೯೨ | ೨೩ | ಜ್ಞಾನಿಗೆ | ಅಜ್ಞಾನಿಗೆ |
| ೪೯೩ | ೫ | ಪಕ್ವ | ಪಕ್ವ |
| ೪೯೫ | ೯ | ಕರ್ಮಡೊಳು | ಕರ್ಮದೊಳು |
| ೪೯೬ | ೫ | ಯೋಗಗಳ | ಯೋಗಿಗಳ |
| ೪೯೬ | ೮ | ಹರಿಯು | ಹರಿಯ |
| ೪೯೭ | ೧೧ | ಆಗುವವ | ಆಗುವ |
| ೫೦೧ | ೧ | ಗಾಳಿಗೂಟವಾಗಿ | ಗಾಳಿಗುಂಟವಾಗಿ |
| ೫೦೩ | ೨೧ | ಜಗದಂತಃಪ್ರತಿ | ಜಗಂತಃಪಾತಿ |
| ೫೦೫ | ೧೦ | ಆನಂಡ | ಆನಂದ |
| ೫೦೭ | ೧೨ | ೧೫ | ೧೦ |
| ೫೧೨ | ೨೪ | ಸಮ್ಯುತ್ | ಸಮ್ಯಕ್ |
| ೫೨೧ | ೧೯ | ಸ್ವಲ್ಪ | ಬಹು |
| ೫೨೫ | ೬ | .... .... | ವಾ.ದಾ.ಸಿ.ಕಾ |
| ೫೩೧ | ೨ | ನಿತ್ಯಸ್ಯ | ನಿತ್ಯಾ |
| ೫೩೨ | ೮ | ಉತ್ತಾನಾಂ | ಉಕ್ತಾನಾಂ |
| ೫೩೬ | ೧೨ | ವಾಪ್ತಿರೂಪ | ವ್ಯಾಪ್ತಿರೂಪ |
| ೫೩೮ | ೧೨ | ಕದುಪಚಾಯಕ | ತದುಪಚಾಯಕ |
| ೫೩೮ | ೧೯ | ಸತ್ಯುತನಾಗದೆ | ಚ್ಯುತನಾಗದೇ |
| ೫೪೧ | ೨೭ | ನಾರಾಯ ರೂಪಗಳು | ನಾರಾಯಣನ ರೂಪಗಳು |
| ೫೪೫ | ೧೨ | ಯೋಕಪ ಷಷ್ಠಿ | ಯೋಕಪಷಷ್ಠಿ |
| ೫೫೧ | ೧ | ಚಿತ್ತ | ವಿತ್ತ |
| ೫೫೯ | ೩ | ಕರವರ | ಕರಿವರ |

| | | | |
|---|---|---|---|
| ೫೬೦ | ೧ | ವಸ್ತೈವಲತ್ಯೈ | ವಸ್ತೈವಲಕ್ಶೈ |
| ೫೭೨ | ೭ | ತೇವಾಂ | ತೇಷಾಂ |
| ೫೭೮ | ೨೧ | ಅವಧಾನ | ಅವದಾನ |
| ೫೮೨ | ೧೩ | ಪಲಿಖ್ಯೈ | ಪರಿಖ್ಯೈ |
| ೫೯೯ | ೧೦ | ಅವಧಾನ | ಆವದಾನ |
| ೫೯೯ | ೧೪ | ಛಕ್ರಾದಿಪತಿ | ಛತ್ರಾಧಿಪತಿ |
| ೬೦೯ | ೩ | ವೈಶ್ವವರ್ಣಾಃ | ವೈಶ್ಯವರ್ಣಾಃ |
| ೬೧೧ | ೧ | ವಿತಭಯ | ವೀತಭಯ |
| ೬೧೯ | ೨೩ | ಮಾಡಿಸಿದಂತೆ ಸಕಲ | ಮಾಡುವೆನು ಸಕಲ |
| ೬೨೧ | ೧೬ | ಸ್ಮರಿತುಕಾಲ | ಸರಿತುಕಾಲ |
| ೬೨೯ | ೧೧ | ಸೂರ್ಯಾದಿಗಳಲ್ಲಿ | ಸೂರ್ಯಾದಿಗಳೆಲ್ಲ |
| ೬೩೪ | ೪ | ತೃಪ್ಪ | ತೃಪ್ತ |
| ೬೩೭ | ೯ | ವಾಸುದೇವಾ | ವಾಸುದೇವ |
| ೬೩೮ | ೨೪ | ಪುರುಷಾನ್ನಿ | ಪುರುಷಾಗ್ನಿ |
| ೬೪೬ | ೨೦ | ತತ್ವದಾರಾ | ತತ್ವ ದ್ವಾರಾ |
| ೬೫೦ | ೮ | ಅಷ್ಟಾದರಣ | ಅಷ್ಟಾವರಣ |
| ೬೫೦ | ೧೪ | ಸ್ವರಪತಿಪಾದ್ಯ | ಸ್ವರಪ್ರ‌ತಿಪಾದ್ಯ |
| ೬೫೫ | ೧ | ವಿಠಲಾಂತರ್ಯಾಮಿ | ವಿಠ್ಠಲನು ಅಂತರ್ಯಾಮಿ |
| ೬೬೦ | ೨೫ | ಉಪನಂಬಿಗೆ | ಅಪನಂಬಿಗೆ |
| ೬೬೨ | ೮ | ವಜೋಮಂತ್ರಾಃ | ವಚೋಮಂತ್ರಾಃ |
| ೬೭೧ | ೨೧ | ಪೃಥವಿವಾಮ | ಪೃಥವೀವಾವ |
| ೬೭೨ | ೨೨ | ಸಮೋಜಃ | ಸಮೋನಃ |
| ೬೭೨ | ೨೪ | ಭಾಷ್ಯಾ | ಭಾಷ್ಯ |
| ೬೭೯ | ೧೨ | ಸಾಮಸಂಹಿತೆ | ಸಾಮಸಂಹಿತೆ |
| ೬೮೨ | ೧೨ | ತೂತುಜಾನೋ | ತೂ (ಸ್ತೂ) ತು. |
| ೭೦೦ | ೫ | ಇಪ್ಪತುಸಾವಿರ | ಎಂಟಧಿಕ ಇಪ್ಪತ್ತುಸಾವಿರ |
| ೭೦೧ | ೨೧ | ಹೃಷ್ಟಧಿಕ | ಹೃಷ್ಟಧಿಕ |

| | | | |
|---|---|---|---|
| ೭೦೨ | ೨೫ | ಉತ್ತರೂಪಾಣಿ | ಉಕ್ತರೂಪಾಣಿ |
| ೭೦೮ | ೧೮ | ವಾರುಗಂತೃತ್ವಾತ್ | ವಾತ್‌ಗಂತೃತ್ವಾತ್ |
| ೭೧೨ | ೨೨ | ಆದಿಃಭೋತ್ತಾ | ಆದಿಭೋಕ್ತಾ |
| ೭೧೨ | ೧ | ಗ್ರೇರಕನಾಗಿ | ಪ್ರೇರಕನಾಗಿ |
| ೭೧೨ | ೨೩ | ಭೋತ್ತಾ | ಭೋಕ್ತಾ |
| ೭೧೩ | ೧೬ | ಮತ್ದೊ | ಮತ್ತೊ |
| ೭೧೭ | ೯ | ಶ್ಲೋಕದ | ಶ್ಲೋಕದಿ |
| ೭೩೦ | ೩ | ವಾದೇವ | ವಾಸುದೇವ |
| ೭೩೨ | ೨೪ | ತೃಣಕ್ಷಣ | ತೃಟಿಕ್ಷಣ |
| ೭೩೩ | ೮ | ಪ್ರತಷ್ಠಾ | ಪ್ರತಿಷ್ಠಾ |
| ೭೩೩ | ೨೩ | ಅಜಾನಿ | ಅಜಾದಿ |
| ೭೩೪ | ೬ | ಕರದೊಳು | ಕರಣದೊಳು |
| ೭೩೭ | ೧೬ | ಶ್ಚಾಂತ್ಯೋರ್ಥಾ | ಶ್ಚಾಂತೋರ್ಥಾ |
| ೭೩೭ | ೨೩ | ರಲತಃ | ಠಲಕಃ |
| ೭೩೮ | ೬ | ಲಾಲುಕ | ಲಾಳುಕ |
| ೭೪೨ | ೫ | ಕೋಶಗಳಿ | ತತ್ವಗಳಿ |
| ೭೪೨ | ೨೬ | ಬಲಪಾದಾ | ಬಲಪಾದ |
| ೭೪೪ | ೧೯ | ಮಾತೃನುಂತ್ರಾಣಾಂ | ತತ್ವಮಂತ್ರಾಣಾಂ |
| ೭೫೦ | ೨೨ | ತ್ರಿದಿನಸ | ತ್ರಿಂಶತಿದಿನಸ |
| ೭೫೦ | ೨೩ | ೩ ದಿನಸಗಳಲ್ಲಿ | ೩೦ ದಿನಸಗಳಲ್ಲಿ |
| ೭೫೦ | ೧೪ | ದ್ವಾದಶನಾನು | ದ್ವಾದಶನಾಮ |
| ೭೫೪ | ೨೨ | ಜಾಪಾಸನ | ಔಪಾಸನ |
| ೮೧೧ | ೧೦ | ಮಿಳನ | ಮೇಳನ |
| ೮೧೨ | ೭ | ನಹಿಸಬೇಕು | ವಹಿಸಬೇಕು |
| ೮೧೫ | ೨೦ | ಶರೀರಾದಿತ್ರೃತಂ | ಶರೀರಾದಿಕಂ |
| ೮೪೨ | ೨೦ | ಜೀವಾಜೀವ | ಜೀವಜೀವರ |
| *೮೫೧ | ೨ | ಪ್ರಾಣಜದಗನ್ನಾಥ | ಪ್ರಾಣದಜಗನ್ನಾಥ |

| | | | |
|---|---|---|---|
| ೮೫೭ | ೬ | ಮಂತ್ರಾಲಯೆ | ಮಂತ್ರಾಲಯ |
| ೮೫೭ | | ಓಂ ಓಂ ಸಾರಾಯ | ಓಂ ಜಸಾರಾಯ |
| ೮೫೮ | ೮ | ಮಕಾರಾದಿ | ಯಕಾರಾದಿ |
| ೮೫೮ | ೧೬ | ನಾಡಾರಂಭಿಸಿ | ಪಾದಾರಂಭಿಸಿ |
| ೮೫೯ | ೧೩ | ಮೂಲೇಸನ | ಮೂಲೇಶನ |
| ೮೬೦ | ೧೫ | ನೈವ | ಸೈವ |
| ೮೬೨ | ೫ | ಮುಕ್ತಾಭಿ | ಮುಕ್ತಾಭ |
| ೮೬೩ | ೪ | ತದಗ್ಧಂ | ತಂತದ್ಧಂ |
| ೮೬೪ | ೨೧ | ವೃಂದೇತು | ವೃತ್ರೇಂದು |
| ೮೭೨ | ೧೪ | ವಿಶನಂತೆ | ವಿಶ್ವನಂತೆ |
| ೮೭೨ | ೧೬ | ಪ್ರವಿಕ್ತಭಕು | ಪ್ರವಿವಿಕ್ತಭುಕು |
| ೮೭೩ | ೧೪ | ಅಲಕಣ್ಣಿನಲ್ಲಿ | ಬಲಕಣ್ಣಿನಲ್ಲಿ |
| ೮೭೮ | ೨೧ | ಭಕ್ತಾದಿಗಳು | ಭಕ್ತ್ಯಾದಿಗಳು |
| ೮೭೯ | ೨೬ | ಸ್ವರೂಪದತ್ತ | ಸ್ವರೂಪಸತ್ತಾ |
| ೮೭೯ | ೨೬ | ಪ್ರಮಿತಿಸುತ್ತಾ | ಪ್ರಮಿತಿಸತ್ತಾ |
| ೮೭೯ | ೨೬ | ಪ್ರವೃತ್ತಿಸುತ್ತಾ | ಪ್ರವೃತ್ತಿಸತ್ತಾ |
| ೮೮೧ | ೫ | ಶ್ರುತ್ಯರ್ಥವೇವ್ಯಾಸ | ಶ್ರುತ್ಯರ್ಥವೇ ದಾಸಾರ್ಯರು |
| ೮೮೨ | ೧೨ | ತತ್ಪತಿ | ತತ್ಪತ್ನಿ |
| ೮೮೨ | ೨೭ | ಚಕ್ಷುದ್ವಿಯ | ಚಕ್ಷುದ್ವಯ |
| ೮೯೨ | ೫ | ತೇಜಮೇಷಾ | ತೇ ಅಜಮೇಷಾ |
| *೮೯೫ | ೭ | ಮುಕ್ತಾಭಿ | ಮುಕ್ತಾಭಿ |
| ೮೯೬ | ೧೧ | ವಾರುಣಬೀಜ | ವರುಣಬೀಜ |
| ೯೦೭ | ೧೪ | ದಾಮಾತ್ನಕಂ | ದಾಮಾತ್ಮಕಂ |
| ೯೦೭ | ೨೫ | ಪತ್ರತಯಾ | ಪುತ್ರತಯಾ |
| ೯೧೦ | ೨೨ | ಧ್ಯಾರಾತ್ರಿ | ದ್ಯಾರಾತ್ರಿ |
| ೯೧೦ | ೨೩ | ದಾ | ದ್ಯಾ |
| ೯೧೨ | ೧೦ | ಚತುರ್ಭುಜನ | ಚತುರ್ಭುಜನು |

## ೬೭ನೆ ಪ್ರಕಟನೆಯಿಂದ ಮುಂದೆ

### ಪೋಷಕ ಮಹಾಶಯರ ಮಹದುಪಕಾರ

೧೦೧ ಶ್ರೀಮನ್ನಿರಂಜನ, ಮೃತ್ಯುಂಜಯ ಮಹಾಸ್ವಾಮಿಗಳವರು, ಕಿರೀಟಮಠ, ಭವಾನಿಪೇಟೆ, ಸೊಲ್ಲಾಪುರ.

೧೦೧ ಶ್ರೀ ಆನರೆರಿ ಸೆಕ್ರಟರಿ, ಸಿದ್ಧೇಶ್ವರ ವಾಚನಾಲಯ, ಅಥಣಿ. ಹಿಂದೆ ೫೦ ರೂ. ಕೊಟ್ಟು ಈಗ ೫೧ ರೂ. ಕೊಟ್ಟವರ ಉಪಕಾರ.

೧೦೧ ಶ್ರೀ ಕೆ. ವಿ. ರಾಮಚಂದ್ರರಾಯರು, ಬಿ.ಇ., ಸಿವಿಲ್ ಇಂಜನಿಯರ್, ೩೦೮, ೩ನೆ ಕ್ರಾಸ್, ಎಸ್.ಆರ್. ಕಾಲೊನಿ, ಬೆಂಗಳೂರು.

೧೦೧ ಶ್ರೀ ಸಿ. ಆರ್. ವ್ಯಾಸರಾಯರು, ಸೆಕ್ರಟರಿ, ರಾಯಲ್‌ಸೀಮಾ ಮಿಲ್, ಅದವಾನಿ. (ಈ ಮಹನೀಯರು ೨೦ ರೂ. ಚಂದಾ ಮೊದಲಿಗೆ ಕಳಿಸಿ, ಹಿಂದಿನಿಂದ ೧೦೦ ರೂ.ಕೊಟ್ಟು ಸಹಾಯ ನೀಡಿದವರ ಮಹದುಪಕಾರ.

೧೦೧ ಶ್ರೀ ಎಂ. ಟಿ. ಪ್ರಲ್ಹಾದರಾವ್, ೬೮, ಅಣ್ಣಪ್ಪಯ್ಯಾ ಬ್ಲಾಕ್, ಶೇಷಾದ್ರಿಪುರಂ, ಬೆಂಗಳೂರು-(೨೦) ಈ ಐದು ಜನರು ಪರಮ ಆದರದಿಂದ ಎಲ್ಲ ಪುಸ್ತಕಗಳನ್ನು ಸ್ವೀಕರಿಸಿ ಸಹಾಯ ನೀಡಿದವರಲ್ಲಿ ಮಂಡಲವು ಚಿರಋಣಿಯಾಗಿದೆ.

೫ ರೂ. ಶ್ರೀ ಬಿ. ಪಿ. ನಾರಾಯಣರಾಯರು, ಪಿ. ಡಬ್ಲ್ಯು. ಡಿ. ಕಂಟ್ರಾಕ್ಟರ್ ತುಮಕೂರು. ಚಂದಾದಾರರು.

೧೫ ರೂ. ಪೋಷಕರು. ಹುಚ್ಚರಾಯರು, ಎಂ ಎ. ಬೆಂಗೇರಿ, ಹಾವೇರಿ.

೧೦ ರೂ. ಸಹಾಯ-ವೈ. ಭೀಮಸೇನರಾವ್, ಕೋಲಾರ ಇವರ ಸ್ಮರಣಾರ್ಥ ಶ್ರೀ ಕೋಲಾರ ರಾಮರಾಯರು ಮತ್ತು ಅವರ ಧರ್ಮಪತ್ನಿಯವರಿಂದ.

ಮಂಡಲದ ಆಜ್ಞೆಯಂತೆ ೨ನೇ ಭಾಗ ಅಚ್ಚಾಗುವ ಕಾಲ ೨೫ ರೂ. ಪೂರ್ತಿ ಚಂದಾಕೊಟ್ಟವರ ಹೆಸರು ಕೊಟ್ಟು ಉಪಕಾರ ಸ್ಮರಿಸುತ್ತದೆ.

೧೨೯ ಶ್ರೀ ಹನುಮಂತ ಪಾಂಡುರಂಗ ದೇಶಪಾಂಡೆ ಉರಫ ಪಾಟೀಲ ಪೊ|| ಆಲಮೇಲ, ಜಿ. ವಿಜಾಪುರ.

ಚಂದಾ ನಂಬರ

೧೩೨ ಶ್ರೀ ಸ್ವಾಮಿರಾವ ಗುರುರಾವ ನಾಡಿಗೇರ, ಚಿಕ್ಕೇರೂರು ತಾ॥ ಹಿರೇಕೆರೂರು, ಜಿ. ಧಾರವಾಡ.

೧೩೪ ಶ್ರೀ ಸಿ. ಕೆ. ವಿ. ರಾವ, ಡೈರೆಕ್ಟರ್ ವಾಟರ್ಸ್ ಅಂಡ್ ಪವರ್ ಕಮಿಶನ್, ಕ್ಲರೆಮೊಂಟ್, ಸಿಮ್ಲಾ.

೧೩೯ ಶ್ರೀ ಸಿ. ಹೆಚ್. ಸಿ. ಪೂರ್ಣಯ್ಯ, ವಿಜಯನಗರಂ.

೧೪೨ ಶ್ರೀ ರಾಮರಾವ ಸಂಪ್ರತಿ, ಮಾನ್ವಿ, ಜಿ. ರಾಯಚೂರು.

೧೪೪ ಶ್ರೀ ಕಂದಿ ಕೃಷ್ಣಮೂರ್ತಿರಾವ,೨/೪ ಡೈರೆಕ್ಟರ್ಸ್‌ಲೈನ್, ನ್ಯೂಡೆಲ್ಲಿ.

೧೪೭ ಶ್ರೀ ಟಿ.ಕೆ.ವೇಣುಗೋಪಾಲದಾಸರು, ವಿಶ್ವೇಶ್ವರಪುರ,ಬೆಂಗಳೂರು.

೧೪೮ ಶ್ರೀ ತಂಜಾವುರ ಹನುಮಂತರಾವ, ಇಂಕಮ್ ಟ್ಯಾಕ್ಸ ಆಡಿಟರ್, ಲಂಗರಭಾವಿ ಸ್ಟ್ರೀಟ್, ಆದವಾನಿ.

೧೪೯ ಶ್ರೀ ದೇಶಿಕಾಚಾರ್ಯರು (ಅಕ್ಷೋಭ್ಯಾಚಾರ್ಯರು) ಬಿ. ಎ., ೨೩, IIನೇ ಮೇನ್ ರೋಡ, ಚಾಮರಾಜಪೇಟೆ, ಬೆಂಗಳೂರು.

೧೫೦ ಶ್ರೀ ಬಿ. ಎಸ್. ಪ್ರಾಣೇಶರಾವ್, ಬಿ ಎಸ್ ಸಿ ಎಲೆಲ್.ಬಿ. ಅಡ್ವೋಕೇಟ್, ೪೪೬ ಚಿಕ್ಕಪೇಟೆ, ಬೆಂಗಳೂರು.

೧೫೧ ಶ್ರೀ ಮಾನ್ವಿ ನರಸಿಂಗರಾಯರು, ಎಂ.ಎ.ಪಿ.ಒಎಲ್.ಎಲೆಲ್.ಬಿ. ಡೈರೆಕ್ಟರ್ ಆಫ್ ಇಂಫರ್‌ಮೇಷನ್, ಗೌ॥ ಆಂಧ್ರ, ಹೈದರಾಬಾದ್.

೧೫೨ ಶ್ರೀ ಡಿ. ತಿರಮಲರಾಯರು, ಜಾಯಿಂಟ್ ರೆಜಿಸ್ಟ್ರಾರ್, ಕರ್ನೂಲ್.

೧೫೩ ಶ್ರೀ ಡಿ. ವಿ. ಸರೋವರರು, ಇಂಕಮ್ ಟ್ಯಾಕ್ಸ ಆಡಿಟರ್, ಗಾಂಧಿನಗರ, ಬಳ್ಳಾರಿ.

೧೫೪ ಶ್ರೀ ಎಸ್. ನಾರಾಯಣರಾಯರು, ವಕೀಲ ಬಿ.ಎ.ಬಿ.ಎಲ್., ಸ್ಟೇಶನ್ ರೋಡ್, ಹೊಸಪೇಟೆ.

೧೫೫ ಶ್ರೀ ಎ. ಆರ್. ಕೃಷ್ಣರಾವ್, ಬಿ.ಎ.ಬಿ.ಎಲ್. ಅಡ್ವೊಕೇಟ್, ಹೊಸಪೇಟೆ.

೧೫೬ ಶ್ರೀ ಡಾ॥ ಎನ್.ಎಸ್. ಮುತಾಲೀಕ, ಅಯನಾಪುರ ತಾ॥ ಅಥಣಿ.

೧೫೭ ಶ್ರೀ ಎನ್. ನರಸಿಂಹಮೂರ್ತಿಗಳು, ಶ್ರೀ ಎನ್.ಎನ್.ಜಯರಾವ್, ಜಯರಾವ್, ಪ್ಲೀಡರ್ಸ್, ದಾವಣಗೆರೆ.

೧೫೮ ಶ್ರೀ ಪಿ. ಆರ್. ಎಸ್. ಪೈಗಳು, ೨೪೧/೧, ಕೆ. ಬಿ. ಮೇನ್ ರೋಡ್, ದಾವಣಗೆರೆ.

೧೫೯ ಶ್ರೀ ಎಂ. ಆರ್. ಪಾಟೀಲರು, ಪ್ರಾಸಿಕ್ಯೂಟರ್, ಸೆಷನ್ಸ್ ಕೋರ್ಟ್, ಬೆಳಗಾಂವ.

೧೬೦ ಶ್ರೀ ಡಾ|| ಕೃಷ್ಣರಾವ್ ಗುರುರಾವ್, ಮೆಡಿಕಲ್ ಆಫೀಸರ್, ರಾಣಿಬೆನ್ನೂರು.

೧೬೧ ಶ್ರೀ ಬಿ. ಎಸ್. ಗುರುರಾವ್, ಬಿ.ಎ.ಬಿ.ಟಿ., ರಿ|| ಹೆಡ್‌ಮಾಸ್ಟರ್, ೮ನೇ ಕ್ರಾಸ್ ರೋಡ್, ಎನ್. ಆರ್. ಕಾಲೋನಿ, ಬೆಂಗಳೂರು.

೧೬೪ ಶ್ರೀ ವಿ. ಆರ್. ದಾಸ್ (ಲಿಂಗಸೂಗೂರು) ೨೯೪, ಸೋಮವಾರ ಪೇಟೆ, ಪೂನಾ ೨.

೧೬೫ ಶ್ರೀ ಕಿಶನರಾವ್ ದರೂರು, ಮೇನ್ ಬಜಾರ್, ಕರ್ನೂಲ್.

೧೬೬ ಶ್ರೀ ಆನಂದರಾವ್ ಪಟವಾರಿ, ಜಠರವ್‌ಬುಜರಗ ಜಿ. ಮಹಬೂಬ ನಗರ್.

೧೬೭ ಎಸ್. ರಾಮಚಂದ್ರರಾವ್, ಬಿ.ಇ. ಎಕ್ಸೆಕ್ಯೂಟಿವ್ ಇಂಜನಿಯರ್, ಪಿ.ಡಬ್ಲ್ಯು.ಡಿ., ಚಿಕ್ಕಬಳ್ಳಾಪುರ.

೧೬೮ ಶ್ರೀ ಬಾಳಾಚಾರ್ಯರು ಹರಿಹರ, ಪೋಲೀಸ್ ಸಬ್ ಇನ್ಸ್‌ಪೆಕ್ಟರ್, ಕಿತ್ತೂರು ಜಿ. ಬೆಳಗಾವ.

೧೮೦ ಶ್ರೀ ವೆಂಕಟರಮಣರಾವ್, ಟೆಲಿಫೋನ್ ಇನ್ಸ್‌ಪೆಕ್ಟರ್, ೨೪ ನೀಲ ಕಂಠ ಮೇಥಾ ಸ್ಟ್ರೀಟ್, ಟಿ. ನಗರ, ಮದ್ರಾಸ್.

೧೮೪ ಶ್ರೀ ಬಿ. ಎಸ್. ಪಾಂಡುರಂಗರಾವ್, ಶ್ರೀಮತಿ ಶಕುಂತಲಾಬಾಯಿ, ಮಕ್ಕಳ ಮಂಟಪ, ನೆಹರು ನಗರ, ಬೆಂಗಳೂರು.

೧೮೫ ಶ್ರೀ ಎಸ್. ಆರ್. ದೇಶಪಾಂಡೆಯವರು, ಡಿ|| ಮುನ್ಸಿಫ್, ಪುತ್ತೂರು

೧೮೬ ಶ್ರೀ ವಿಠ್ಠಲರಾವ್, ಬಿ.ಎ.ಬಿ.ಡಿ.ಓ. ಬೀದರ್.

೧೮೮ ಶ್ರೀ ಹೆಚ್. ಪ್ರಲ್ಹಾದರಾವ್, ಹೆಡ್ ಅಕೌಂಟೆಂಟ್, ಬ್ಯಾಂಕ್ ಆಫ್ ಮೈಸೂರು, ಚಿತ್ರದುರ್ಗ.

೧೮೯ ಶ್ರೀ ಜಿ. ವಿ. ಗೋಪಾಲ ಶ್ರೇಷ್ಠಿ, ಅಸಿಸ್ಟೆಂಟ್ ಇಂಜನಿಯರ್, ಕರಗಲ್ ಡಿ|| ಶಿವಮೊಗ್ಗಾ.

೧೯೦ ಶ್ರೀ ರಾಘವೇಂದ್ರಾಚಾರ್ಯ, ಮುರಹರಾಚಾರ್, ಹಳ್ಳೂರು, ಸಬ್ ಇನ್ಸ್ಪೆಕ್ಟರ್ ಪೋಲಿಸ್, ಬೈಲಹೊಂಗಲ ಜಿ. ಬೆಳಗಾಂವ.

೧೯೪ ಶ್ರೀ ಆರ್. ಗಣೇಶರಾವ್, ಅಡ್ವೋಕೇಟ್, ಸತ್ಯನಾರಾಯಣಪೇಟೆ, ಬಳ್ಳಾರಿ.

೧೯೫ ಶ್ರೀ ಕಂದಿ ಕೇಶವರಾಯರು, ಅಡ್ವೋಕೇಟ್, ಸತ್ಯನಾರಾಯಣ ಪೇಟೆ, ಬಳ್ಳಾರಿ.

೨೦೫ ಶ್ರೀ ಕೆ. ವಿಠಲನಾಯಕ್, ನಾಯ್ಕ್ಸ್ ರೆಸ್ಟೋರೆಂಟ್, ಕುಂದಾಪುರ.

೨೦೭ ಶ್ರೀ ಕೆ. ಆರ್. ವಿ. ಆಚಾರ್ಯ, ಕೇರಾಫ್ ಹುಕುಂಚಂದ್, ಐ.ಎ.ಎಸ್. ಲಿಮಿಟೆಡ್, ನೇತಾಜಿ ಶಾಲಾ ರೋಡ್, ಕಲಕತ್ತಾ.

೬೧೦ ಶ್ರೀ ಹೆಚ್. ಎನ್. ಸತ್ಯನಾರಾಯಣ್, ಡೆ|| ಡೈರೆಕ್ಟರ್, ಸೇಮನ್ ಎಂಪ್ಲಾಯ್‌ಮೆಂಟ್ ಆಫೀಸ್, ಮರಿಯ್ರ ಹೌಸ್, ಕಲಕತ್ತಾ ೨೨.

೨೧೧ ಶ್ರೀ ಎಂ. ಜಿ. ಮುಂಡರಗಿ, ಓವರ್ಸಿಯರ್, ಬಿ. ಸಿ. ಸಬ್ ಡಿವಿಜನ್, ಪೋ. ಮುಂಡರಗಿ, ಡಿ|| ವಿಜಾಪುರ.

೧೬೭ ಶ್ರೀ ನರಸಿಂಗರಾವ್ ಕರಣಮ್, ರವಡೂರು ತಾ|| ಆದವಾನಿ.

೨೧೪ ಶ್ರೀ ಕೇಶವರಾವ್, ಆರ್. ಪಿ ಬ್ಲಾಕ್ ೬, ಪ್ಲಾಟ್ ೨೮, ಮಾತುಂಗಾ, ಮುಂಬಯಿ.

೧೪೩ ಶ್ರೀ ರಾಘವೇಂದ್ರರಾಯರು, ದೆ|| ಹಾಲವಿ, ತಾ|| ಆದವಾನಿ.

೧೬೪ ಶ್ರೀ ರಾಮಾಚಾರ್ಯರು, ಮಾನವಿ, ಹಿರೆಗೊಣ್ಣಾಗರ ತಾ|| ಕುಷ್ಟಿಗಿ.

ಹಿಂದೆ ೧ನೇ ಭಾಗದಲ್ಲಿ ೧೨೨ ಚಂದಾದಾರರ ಹೆಸರು ಕೊಟ್ಟಿದೆ. ಆದರೆ ಅದರಲ್ಲಿ ಅರ್ಧ ಜನರು ಚಂದಾ ಕೊಟ್ಟಿಲ್ಲ. ಲೆಕ್ಕದಲ್ಲಿ ತೊಂದರೆಯಾದ ಕಾರಣ ಈಚೆಗೆ ೯೫-೯೬ ಜನರು ಚಂದಾದಾರರಾದರೂ ೪೨ ಜನರ ಪೂರ್ತಿ ೬೫ ರೂ. ಕಳಿಸಿದವರ ಹೆಸರು ಪ್ರಕಟಿಸಿದೆ. ಬಾಕಿ ಉಳಿದ ಚಂದಾದಾರರು ಬೇಗ ( ) ರೂ. ಕಳುಹಿ ಕೆಲಸ ಸಾಗಿಸಲು ವಿನಂತಿ. ಮುಂದೆ ಹೆಸರು ಕೊಡುತ್ತದೆ. ಈ ವರ್ಷದ್ದು ೩ ಸಹಸ್ರ ರೂ. ಬಾಕಿ ನಿಂತಿದೆ. ೧-೧ ಭಾಗಕ್ಕೆ ೩ ಸಾವಿರ ರೂ. ಒಟ್ಟಿಗೆ ಖರ್ಚು ಬರುತ್ತದೆ. ಇದೆಲ್ಲ ಗಮನಿಸಿ ಬೇಗ ಕಳಿಸಿರಿ.

**ಸಂಚಾಲಕ ಮಂಡಲಿ.**

